# ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು

## (ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ)

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು

ಶಾಂತಲಾ ಚಿದಂಬರ ಹೆಗಡೆ

ಮಾರ್ಗದರ್ಶಕರು

ಡಾ. ಹಿ.ಚಿ. ಬೋರಲಿಂಗಯ್ಯ

ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೦೧೧

# ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು

## (ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ)

**ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ**


ಸಂಶೋಧಕರು

**ಶಾಂತಲಾ ಚಿದಂಬರ ಹೆಗಡೆ**

ಮಾರ್ಗದರ್ಶಕರು

**ಡಾ. ಹಿ.ಚಿ. ಬೋರಲಿಂಗಯ್ಯ**

ಪ್ರಾಧ್ಯಾಪಕರು






ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

**ಕನ್ನಡ ವಿಶ್ವವಿದ್ಯಾಲಯ**

ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

**ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು** (ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಶಾಂತಲಾ ಚಿದಂಬರ ಹೆಗಡೆ** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಎಚ್.ಡಿ. ಪದವಿಗಾಗಿ ಸಮಾಜಶಾಸ್ತ್ರ ವಿಷಯದಲ್ಲಿ ಸಿದ್ಧಪಡಿಸಿದ್ದಾರೆ. ಇದು ಅವರು ಸ್ವತಃ ಕ್ಷೇತ್ರಕಾರ್ಯ ಕೈಗೊಂಡು ಸಂಗ್ರಹಿಸಿದ ಸಂಶೋಧನಾ ಸಾಮಗ್ರಿಯ ಆಧಾರದ ಮೇಲೆ ರಚಿತವಾಗಿದೆ. ಇದನ್ನು ಭಾಗಶಃ ಅಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಡಿಪ್ಲೊಮಾ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೮-೦೪-೨೦೧೧
ಸ್ಥಳ : ವಿದ್ಯಾರಣ್ಯ

**(ಡಾ. ಹಿ.ಚಿ. ಬೋರಲಿಂಗಯ್ಯ)**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪ್ರಮಾಣ ಪತ್ರ

**ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು** (ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಹಿ.ಚಿ. ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೮-೦೪-೨೦೧೧
ಸ್ಥಳ : ವಿದ್ಯಾರಣ್ಯ

(ಶಾಂತಲಾ ಚಿದಂಬರ ಹೆಗಡೆ)
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಕೃತಜ್ಞತೆಗಳು.............

ಸಂಸ್ಕೃತಿ ಒಂದು ಸಮರೂಪವಾದ ವ್ಯವಸ್ಥೆಯಲ್ಲ, ಸಂಸ್ಕೃತಿ ಎನ್ನುವುದು ಆಯಾ ಸಮಾಜದ ಒಟ್ಟು ಜನಜೀವನ ಕ್ರಮವನ್ನು, ಮೌಲ್ಯವನ್ನು, ಆಚರಣೆಯನ್ನು ಬಿಂಬಿಸುವಂಥ ಒಂದು ವ್ಯವಸ್ಥೆ. ಸಂಸ್ಕೃತಿಯಲ್ಲಿ ನಿರಂತರೆಯೂ, ಬದಲಾವಣೆಯೂ ಇದೆ. ನಾಗರಿಕತೆಯ ಪ್ರಭಾವಕ್ಕೆ ಒಂದು ಸಂಸ್ಕೃತಿ ತೆರೆದುಕೊಳ್ಳತ್ತಾ ಹೋದ ಹಾಗೆಲ್ಲ ಆ ಸಂಸ್ಕೃತಿಯ ಕೆಲವು ಅಂಶಗಳಲ್ಲಿ ಬದಲಾವಣೆಗಳು ಆಗುತ್ತಾ ಹೋಗುತ್ತದೆ. ಸಮಾಜ ವ್ಯವಸ್ಥೆಯಲ್ಲಿಯ ಅನ್ಯಸಂಸ್ಕೃತಿಯನ್ನು ಆಧರಿಸಿ, ಒಪ್ಪಿ ಅವರ ನಡೆ–ನಡಾವಳಿಗಳನ್ನು ತಮ್ಮಲ್ಲಿ ಅಳವಡಿಸಿಕೊಂಡು ತಮ್ಮ ಬುಡಕಟ್ಟು ಲಕ್ಷಣಗಳನ್ನು ಒಂದೊಂದಾಗಿ ಕಳಚಿಕೊಂಡು ಬದಲಾವಣೆಯ ಹಾದಿಯಲ್ಲಿ ಹೊಸ ಸಾಂಸ್ಕೃತಿಕ ಬದುಕಿನತ್ತ ಮಹಿಳೆಯರು ಮುಖಮಾಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ **'ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು'** ಕುರಿತು ಸಂಶೋಧಿಸಿದ ಮಹಾಪ್ರಬಂಧ ಇದಾಗಿದೆ.

ಕನ್ನಡ ವಿಶ್ವವಿದ್ಯಾಲಯವು ಸಂಶೋಧನೆ ಕುರಿತಂತೆ ವಿಭಿನ್ನ ಆಲೋಚನಾಕ್ರಮಗಳನ್ನು ಹೊಂದಿದೆ. ಸಂಶೋಧನೆಯಲ್ಲಿ ತನ್ನದೇ ಆದ ಅನನ್ಯತೆಯ ಗಟ್ಟಿತನವನ್ನು ಇಟ್ಟುಕೊಂಡಿರುವ ಕನ್ನಡ ವಿಶ್ವವಿದ್ಯಾಲಯ ನನ್ನಂತಹ ಗ್ರಾಮೀಣ ಪ್ರದೇಶದ ವಿದ್ಯಾರ್ಥಿನಿಗೆ ಸಂಶೋಧನೆ ಕುರಿತಂತೆ ಹೊಸಬಗೆಯ ಆಲೋಚನೆಗಳನ್ನು ಕಲಿಸಿದೆ. ಇದರಿಂದ **'ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು'** ಎಂಬ ಮಹಾಪ್ರಬಂಧ ರಚಿಸಲು ಸಾಧ್ಯವಾಯಿತು. ಈ ಕಾರಣಕ್ಕಾಗಿ ಕನ್ನಡವಿಶ್ವವಿದ್ಯಾಲಯಕ್ಕೆ ಚಿರಋಣಿಯಾಗಿರುವೆ.

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ಬಿ.ಎ. ವಿವೇಕ ರೈ ಅವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಇಂದಿನ ಕುಲಪತಿಗಳಾದ ಡಾ. ಎ. ಮುರಿಗೆಪ್ಪ ಅವರಿಗೂ ಮತ್ತು ಕುಲಸಚಿವರಾದ ಪ್ರೊ. ಮಂಜುನಾಥ ಬೇವಿನಕಟ್ಟಿ ಅವರಿಗೂ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ವೀರೇಶ ಬಡಿಗೇರ ಅವರಿಗೂ, ಪ್ರಸಾರಾಂಗದ ನಿರ್ದೇಶಕರಾದ ಡಾ. ಎ ಸುಬ್ಬಣ್ಣ ರೈ ಅವರಿಗೂ ಹಾಗೂ ಮಾರ್ಗದರ್ಶಕರಾಗಿ ಮಹಾಪ್ರಬಂಧದ ರಚನೆಯ ಪ್ರತಿ ಹಂತದಲ್ಲೂ ನನ್ನನ್ನು ಅಧ್ಯಯನಕ್ಕೆ ಪೂರಕವಾಗುವಂತೆ ಚಿಂತನೆಗೆ ಹಚ್ಚಿ ಬರವಣಿಗೆಯನ್ನು ಸಹನೆಯಿಂದ ತಿದ್ದಿ ನಿರಂತರ ಉತ್ತೇಜನ ಮತ್ತು ಸ್ಫೂರ್ತಿ ನೀಡುವುದರೊಂದಿಗೆ ಮಾರ್ಗದರ್ಶನ ಮಾಡಿದ ಪ್ರೊ, ಹಿ. ಚಿ. ಬೋರಲಿಂಗಯ್ಯ ಅವರಿಗೂ ತುಂಬು ಹೃದಯದ ಗೌರವಪೂರ್ವಕನಮನಗಳನ್ನು ಸಲ್ಲಿಸುತ್ತೇನೆ.

ನನಗೆ ಸೂಕ್ತ ಸಲಹೆಗಳನ್ನು ನೀಡಿ ನನ್ನ ಅಧ್ಯಯನಕ್ಕೆ ಪ್ರೋತ್ಸಾಹಿಸುತ್ತಿದ್ದ ಮುಖ್ಯಸ್ಥರಾದ ಡಾ. ಎ.ಎಸ್. ಪ್ರಭಾಕರ, ಪ್ರಧ್ಯಾಪಕರುಗಳಾದ ಪ್ರೊ. ಕೆ.ಎಂ. ಮೇತ್ರಿ, ಡಾ. ಕೇಶವನ್ ಪ್ರಸಾದ, ಡಾ. ಚೆಲುವರಾಜು ಅವರಿಗೂ ಮತ್ತು ಹಿರಿಯಶ್ರೇಣಿ ಅಧ್ಯಾಪಕರುಗಳಾದ ಡಾ. ಗಂಗಾಧರ ದೈವಜ್ಞ ಅವರಿಗೂ ಆಭಾರಿಯಾಗಿದ್ದೇನೆ.

ವಿಭಾಗದ ಸಿಬ್ಬಂದಿ ಸದಸ್ಯರಾದ ಶ್ರೀ ರಾಮನಾಯಕ್, ಶ್ರೀ ಬಂಗಾರಪ್ಪ ಅವರಗಳನ್ನು ಸ್ಮರಿಸುತ್ತೇನೆ.

ಸದಾ ಜೀವನದ್ದುದಕ್ಕೂ ನನ್ನನ್ನು ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಿಸಿ ಬೆನ್ನುತಟ್ಟಿರುವ ನನ್ನ ತಂದೆ ಶ್ರೀ ಚಿದಂಬರ ತಾಯಿ ಶ್ರೀಮತಿ ಸರಸ್ವತಿ ಇವರಿಗೆ ಅನಂತ ನಮನಗಳನ್ನು ಸಲ್ಲಿಸುವೆ. ನನ್ನ ಅಧ್ಯಯನಕ್ಕೆ ಆಸಕ್ತಿಯ ಜೀವ ತುಂಬಿದ ನನ್ನ ಹಿರಿಯ ಸಹೋದರನಾದ ಕುಮಾರ ಸುಬ್ರಹ್ಮಣ್ಯ, ಅಕ್ಕ ಪ್ರೇಮ, ವಿಜಯಲಕ್ಷ್ಮಿ,

ಭಾವ ಶ್ರೀಧರ, ಶ್ರೀಪಾದ, ಅಕ್ಕನ ಮಕ್ಕಳಾದ ಸಮರ್ಥ, ಗಗನ, ದೀಪಸಾಗರ್ ಇವರಿಗೆಲ್ಲರಿಗೂ ಪ್ರೀತಿಯ ಬಂಧನದಲ್ಲಿ ಬಂಧಿಸಿಕೊಳ್ಳುವೆ.

ಅಧ್ಯಯನದ ಕ್ಷೇತ್ರಕಾರ್ಯಕ್ಕೆ ಹೋದಾಗಲೆಲ್ಲಾ ತಮ್ಮ ಸಮುದಾಯದ ಮಗಳಂತೆ ಕಂಡು ಸ್ವಾಗತಿಸುತ್ತಿದ್ದ ಮತ್ತು ತಮ್ಮ ಸಮುದಾಯದ ಮಾಹಿತಿಗಳನ್ನು ನೀಡುತ್ತಿದ್ದ ಗೌಳಿಗರ ಎಲ್ಲ ಮಾಹಿತಿದಾರರಿಗೂ ಹಾಗೂ ಸಮುದಾಯದ ಕುಟುಂಬದವರಿಗೆಲ್ಲಾ ನನ್ನ ಪ್ರೀತಿಯ ನಮಸ್ಕಾರಗಳನ್ನು ಸಲ್ಲಿಸುತ್ತೇನೆ ಹಾಗೂ ಅಂಗನವಾಡಿ ಕಾರ್ಯಕರ್ತೆಯರಿಗೂ, ಸ್ತ್ರೀ-ಶಕ್ತಿ ಸಂಘದ ಸದಸ್ಯೆಯರಿಗೂ ವಂದನೆಗಳು.

ನನ್ನ ಅಧ್ಯಯನಕ್ಕೆ ಸಹಕರಿಸಿದ ಹಾಗೂ ಮಾಹಿತಿಯನ್ನು ನೀಡಿದ ಗ್ರೀನ್ ಇಂಡಿಯಾ ಸಂಸ್ಥೆಯ ಶ್ರೀ ಮಹೇಂದ್ರಕುಮಾರ, ಡೀಡ್ ಸಂಸ್ಥೆಯ ಶ್ರೀಮತಿ ಮೋಹಿನಿ ಪೂಜಾರಿ, ಕರ್ನಾಟಕ ವಿಶ್ವವಿದ್ಯಾಲಯದ ಸಮಾಜಶಾಸ್ತ್ರ ವಿಭಾಗದ ಡಾ. ಶೌಕತ್ ಅಜೀಮ್. ಕನ್ನಡ ವಿಶ್ವವಿದ್ಯಾಲಯದ ಪ್ರಕಟಣೆ ಸಹಾಯಕ ನಿರ್ದೇಶಕರಾದ ಶ್ರೀ ಸುಜ್ಞಾನಮೂರ್ತಿ, ಕಾವೆಂಶ್ರೀ ಗದಗ ಅವರಿಗೆ ತುಂಬು ಹೃದಯದ ಕೃತಜ್ಞತೆಗಳು.

ಅಧ್ಯಯನದ ಅವಧಿಯಲ್ಲಿ ವಿವಿಧ ರೀತಿಯಲ್ಲಿ ಸಹಕರಿಸಿ ಪ್ರೋತ್ಸಾಹಿಸಿದ ಅಸ್ಮಿತ ವಸತಿನಿಲಯದ ಮೇಲ್ವಿಚಾರಕರಾದ ಡಾ. ಸಿದ್ಧಲಿಂಗಮ್ಮ ಅವರಿಗೂ, ಸ್ನೇಹಿತರಾದ ಚಂದ್ರಕಾಂತ, ಅಕ್ಕಮ್ಮ, ಭಾನುಮತಿ, ಅಮೃತಾ ಟಿ., ರಾಜೇಶ್ವರಿ, ನೀಲಲಕ್ಷ್ಮಿ, ಪ್ರಶಾಂತ ಹೆಗಡೆ, ಆದಿತ್ಯ ಇವರನ್ನು ನೆನೆಯುವೆ. ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಸುಮಂಗಲಾ ಅಳವಳ್ಳಿ, ವಿನಯ ದಾಂಡೇಲಿ, ಸುಪ್ರಿಯಾ ಗಿಳಸೆ, ಪ್ರಭು, ರಾಮಚಂದ್ರ ಭಟ್ಟ ಆಸವಳ್ಳಿ, ವಿಶು, ರಮೇಶ ಇವರುಗಳಿಗೆ ತುಂಬು ಹೃದಯದ ಧನ್ಯವಾದಗಳು.

ನಾನು ಕೆಲಸ ಮಾಡುತ್ತಿದ್ದ ಎಂ.ಜಿ.ಸಿ ಕಾಲೇಜು ಸಿದ್ದಾಪುರ ಇದರ ಆಡಳಿತ ಮಂಡಳಿಯನ್ನು ಮತ್ತು ಪ್ರಾಚಾರ್ಯರನ್ನು ಹಾಗೂ ಎಲ್ಲಾ ಬೋಧಕ, ಬೋಧಕೇತರ ವರ್ಗದವರನ್ನು, ಗ್ರಂಥಪಾಲಕರಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಅಧ್ಯಯನಕ್ಕ ಸಹಾಯ ಮಾಡಿದ ಕನ್ನಡ ವಿಶ್ವವಿದ್ಯಾಲಯದ ಅಕ್ಷರ ಗ್ರಂಥಾಲಯ ಹಾಗೂ ಸಿರಿಗನ್ನಡ ಗ್ರಂಥಾಲಯಗಳ ಸಿಬ್ಬಂದಿಯವರಿಗೆ ಪ್ರೀತಿಪೂರ್ವಕ ನೆನಕೆಗಳು.

ನನ್ನ ಬರವಣಿಗೆಯನ್ನು ಅಂದವಾದ ಅಕ್ಷರರೂಪದಲ್ಲಿ ಸಂಯೋಜಿಸಿದ ನಾಗರಾಜ, ಅನೂಪ ಸಿದ್ದಾಪೂರ, ಬಸವರಾಜ ಜೆ., ಶ್ರೀಮತಿ ಪುಷ್ಪಲತಾ ಶ್ರೀನಿವಾಸ ಕೆ. ಕಲಾಲ್, ಭಾವನಾ ಗ್ರಾಫಿಕ್ಸ್, ಕಮಲಾಪುರ ಹಾಗೂ ಅಂದವಾದ ಛಾಯಾಚಿತ್ರಗಳನ್ನು ಸಂಯೋಜಿಸಿದ ಮಯೂರ ಮಂಚೀಕೇರಿ, ಸ್ವಾತಿ ಅಂಚಿಕಾನಗರ ಹಾಗೂ ಶ್ರೀ ಮಹಾಗಣಪತಿ ಕಂಪ್ಯೂಟರ್ಸ್ ಧಾರವಾಡ ಇವರಿಗೆಲ್ಲರಿಗೂ ಹಾಗೂ ಪರೋಕ್ಷ-ಅಪರೋಕ್ಷವಾಗಿ ಸಹಕರಿಸಿದ ಎಲ್ಲ ಆತ್ಮೀಯರಿಗೂ ನನ್ನ ಕೃತಜ್ಞತೆಗಳು.

-ಶಾಂತಲಾ ಚಿದಂಬರ ಹೆಗಡೆ.

# ಪರಿಶಿಷ್ಟಗಳು

**ಪರಿಶಿಷ್ಟ I : ಕೋಷ್ಟಕಗಳು**

# ಪರಿವಿಡಿ

- ಪ್ರಮಾಣ ಪತ್ರ
- ದೃಢೀಕರಣ ಪತ್ರ
- ಪರಿಶಿಷ್ಟಗಳು

# ಅಧ್ಯಾಯ ೧

## ಅಧ್ಯಯನದ ಸ್ವರೂಪ, ಉದ್ದೇಶ, ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ

೧.೧ ಭೌಗೋಳಿಕ ಹಿನ್ನೆಲೆ

೧.೨ ವಲಸೆಯ ದಾರಿ

೧.೩ ವಲಸೆಗೆ ಕಾರಣಗಳು

೧.೪ ಸ್ವಾತಂತ್ರ್ಯಪೂರ್ವದ ಚಿತ್ರಣ

೧.೫ ಸ್ವಾತಂತ್ರ್ಯ ನಂತರದ ಚಿತ್ರಣ

ಅಧ್ಯಾಯ – ಒಂದು

# ಅಧ್ಯಯನದ ಸ್ವರೂಪ, ಉದ್ದೇಶ, ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ

**ಪ್ರಸ್ತಾವನೆ**

ಸಮಾಜವನ್ನು ಮಾನವರೊಳಗಣ ಪರಸ್ಪರ ಸಂಬಂಧಗಳ ಒಂದು ವ್ಯವಸ್ಥೆ ಎಂದು ವಿವರಿಸಬಹುದು. ಪರಸ್ಪರ ಸಂಬಂಧಗಳು ಮಾನವ ಸಮಾಜದ ನಿರ್ಮಾಣಕ್ಕೂ, ಪೋಷಣೆಗೂ, ಅತ್ಯಾವಶ್ಯಕ ಸಂಬಂಧಗಳು, ವ್ಯಕ್ತಿ-ವ್ಯಕ್ತಿಗಳ ನಡುವೆ, ವ್ಯಕ್ತಿ-ಗುಂಪಿನ ನಡುವೆ, ಗುಂಪು-ಗುಂಪಿನ ನಡುವೆ ಏರ್ಪಡುತ್ತವೆ. ವ್ಯಕ್ತಿ-ವ್ಯಕ್ತಿಯೊಳಗೂ ಪರಸ್ಪರ ಸಂಬಂಧಗಳು ಅವರವರು ಕೈಗೊಳ್ಳುವ ಕ್ರಿಯೆಗಳಿಗೆ ಅನುಗುಣವಾಗಿ ನಿರ್ಮಾಣವಾಗುತ್ತವೆ. ಜನರು ಹಲವಾರು ರೂಢಿ ಮೂಲಗಳ ಪ್ರಕಾರ ತಮ್ಮ-ತಮ್ಮ ನಡುವಳಿಕೆಗಳನ್ನು ಅಳವಡಿಸಿಕೊಂಡು ಜೀವಿಸುತ್ತಾರೆ.

ಸಮಾಜದ ವ್ಯವಸ್ಥೆಯು ಜನರ ಸ್ವಾತಂತ್ರ್ಯ ರಕ್ಷಣೆ ಮಾಡಿದಂತೆ ಅವರ ಸ್ವೇಚ್ಛಾಚಾರಕ್ಕೆ ತಡೆಯನ್ನೂ ಒಡ್ಡುತ್ತದೆ. ಹಲವಾರು ವಿಧಿ-ನಿಷೇಧಗಳ ಸಂಬಂಧಗಳಿಂದ ಕೂಡಿದ ಜೀವನವು ಒಂದು ಸಮಾಜ ಎನ್ನುವುದನ್ನು ಅರಿಯಬಹುದು. ಆದರೆ ಸಮಾಜವು ಸದಾ ಬದಲಾಗುತ್ತಿರುವ ಒಂದು ವ್ಯವಸ್ಥೆ. ಬದಲಾವಣೆಯು ಅಸ್ಪಷ್ಟವಾಗಿಯೂ ಸಾಗುತ್ತದೆ. ಸುಸ್ಪಷ್ಟವಾಗಿಯೂ ಪ್ರಕಟವಾಗುತ್ತದೆ. ಪರಂಪರೆಯೂ ಹಿನ್ನೆಲೆಯಾಗಿದ್ದರೂ ನೂತನ ರೂಪವನ್ನು ಪಡೆಯುವಂಥ ಚಿರನೂತನ ವ್ಯವಸ್ಥೆಯಾದ ಸಮಾಜವು ಒಂದು ಪ್ರಕ್ರಿಯೆ ಎನ್ನಬಹುದು.

ಸಮಾಜವು ನಿತ್ಯ ಪರಿವರ್ತನಾಶೀಲವಾದುದು. ಪರಿವರ್ತನೆ ಅದರಲ್ಲಿ ಅಂತರ್ಗತವಾಗಿದೆ. ಪರಿವರ್ತನೆ ಎನ್ನುವುದು ನಿಸರ್ಗ ನಿಯಮ. ಅಂತೆಯೇ ಮಾನವ ಸಮಾಜ ಪೂರಕವಾದ ಈ ನಿಯಮಕ್ಕೆ ಬದ್ಧವಾಗಿದೆ. ಮಾನವ ಸಮಾಜವು ಆದಿಯಿಂದಲೂ ಅವ್ಯಾಹತವಾಗಿ ಬದಲಾಗುತ್ತಲೇ

ಇದೆ. ಪರಿವರ್ತನೆಯ ಅಗಾಧತೆಯನ್ನು ಊಹಿಸುವುದು ಮತ್ತು ಅಳೆಯುವುದು ಕಷ್ಟ. ಪರಿವರ್ತನೆ ಎನ್ನುವುದು ವಿವಿಧ ರೂಪಗಳಲ್ಲಿ ವಿವಿಧ ವಿಧಾನಗಳಲ್ಲಿಸಂಭವಿಸಬಹುದು. ಮಾನವನ ಸಾಮಾಜಿಕ ಸಂಬಂಧಗಳ ವ್ಯವಸ್ಥೆಯಲ್ಲಿ ಕಂಡುಬರುವ ವ್ಯತ್ಯಾಸಗಳು ಅಥವಾ ಮಾರ್ಪಾಡುಗಳು ಹಾಗೂ ರಚನೆ ಮತ್ತು ಕಾರ್ಯಗಳಲ್ಲಿ ಕಂಡುಬರುವ ಸೂಚಕವಾಗಿದೆ.

ಸಾಮಾಜಿಕ ಚಿಂತನೆಯಲ್ಲಿ ಸ್ಥಿತ್ಯಂತರ ಅಥವಾ ರೂಪಾಂತರಗಳಿಗೆ ಬಹಳಮಹತ್ವವಿದೆ. ಬಹುಕಾಲದಿಂದಲೂ ಸಾಮಾಜಿಕ ಸ್ಥಿತ್ಯಂತರಕ್ಕೆ ಸಂಬಂಧಿಸಿದಂತೆ ಪ್ರಶ್ನೆಗಳು ತತ್ವಜ್ಞಾನಿಗಳನ್ನು ಮತ್ತು ಸಾಮಾಜಿಕ ಚಿಂತಕರನ್ನು ಗೊಂದಲಕ್ಕೀಡು ಮಾಡಿವೆ. ಸ್ಥಿತ್ಯಂತರಗಳಿಗೆ ಕಾರಣಗಳಾವುವು ಅವುಗಳ ಆದಿ ಅಂತ್ಯ ಯಾವುದು ಎಂಬ ಪ್ರಶ್ನೆಗಳಂತೂ ಸಮಾಜ ವಿಜ್ಞಾನಿಗಳಿಗೆ ಇಂದಿಗೂ ಬಗೆಹರಿಯದ ಸವಾಲುಗಳೇ ಆಗಿವೆ. ಸ್ಥಿತ್ಯಂತರದ ಪ್ರಕ್ರಿಯೆಯು ಸರಳವಾದುದಲ್ಲ. ಅದು ಸಂಕೀರ್ಣವಾದುದು. ಈ ಪ್ರಕ್ರಿಯೆಯ ಒಳ ಹೊರಗನ್ನು ಆದಿ ಅಂತ್ಯವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳುವುದು ಸುಲಭವಾದುದಲ್ಲ. ಅದು ವಿವಿಧ ರೂಪಗಳಲ್ಲಿ ವಿವಿಧ ಕಾರಣಗಳಿಂದಾಗಿ ವಿವಿಧ ವಿದ್ಯಮಾನಗಳಲ್ಲಿ ಸಂಭವಿಸಬಹುದಾದ ಸ್ಥಿತ್ಯಂತರವು ಪ್ರಗತಿಶೀಲವಾಗಿರುವಂತೆ ಪ್ರತಿಗಾಮಿಯೂ ಆಗಿರಬಹುದು. ಶಾಶ್ವತ ಸ್ವರೂಪದ್ದಾಗಿರುವಂತೆ ಅಲ್ಪಕಾಲಿಕವಾಗಿರಬಹುದು. ನಿಯೋಜಿತವಿದ್ದಂತೆ ಅನಿಯೋಜಿತವಾಗಿರಲೂ ಬಹುದು. ಹೀಗೆ ಸ್ಥಿತ್ಯಂತರವು ವಿವಿಧ ಮಾದರಿಗಳಲ್ಲಿ ಉಂಟಾಗುವ ಸಾಧ್ಯತೆ ಪ್ರತಿಯೊಂದು ಸಮಾಜಗಳಲ್ಲಿದೆ.

ಎಲ್ಲಾ ಸಮಾಜಗಳೂ ಸ್ಥಿತ್ಯಂತರವನ್ನು ಆಹ್ವಾನಿಸುತ್ತವೆ. ಅದಿವಾಸಿ, ಅಲೆಮಾರಿ, ಗ್ರಾಮೀಣ ಹಾಗೂ ನಗರ ಆಧುನಿಕ ಹೀಗೆ ಪ್ರತಿಯೊಂದು ಸಮಾಜದಲ್ಲಿಯೂ ಬದಲಾವಣೆ ಉಂಟಾಗುತ್ತಿರುತ್ತವೆ. ಆದರೆ ಸ್ಥಿತ್ಯಂತರದ ಗತಿಶೀಲತೆ ಮಾತ್ರ ಸಮಾಜದಿಂದ ಸಮಾಜಕ್ಕೆ ಸಮುದಾಯದಿಂದ ಸಮುದಾಯಕ್ಕೆ ವ್ಯತ್ಯಾಸಗೊಳ್ಳುತ್ತಲೇ ಇರುತ್ತವೆ. ಹಾಗೆಯೇ ಒಂದೇ ಸಮುದಾಯದ ಜನರು ವಿವಿಧ ಪ್ರದೇಶಗಳಲ್ಲಿ ವಾಸಿಸುವ ಬದಲಾವಣೆಯ ಗತೀಶೀಲತೆಯು ವ್ಯತ್ಯಾಸಗೊಳ್ಳುತ್ತವೆ. ಅಂತೆಯೇ ಒಂದೇ ಸಮಾಜದ ವಿವಿಧ ಭಾಗಗಳಲ್ಲಿ ವ್ಯತ್ಯಾಸಗಳಾಗುತ್ತಾ ಆದಿವಾಸಿ, ಅಲೆಮಾರಿ, ಸಮಾಜಗಳಲ್ಲಿ ಸ್ಥಿತ್ಯಂತರವು ನಿಧಾನಗತಿಯಲ್ಲಿದ್ದರೆ, ಗ್ರಾಮೀಣ ಸಮಾಜದಲ್ಲಿ ಸ್ವಲ್ಪ ಸಾಧಾರಣ ಗತಿಯಾಗಿದ್ದು ನಗರ ಸಮಾಜದಲ್ಲಿ ತೀವ್ರಗತಿಯಾಗಿದ್ದಿರಬಹುದು. ಹೀಗೆ ಸ್ಥಿತ್ಯಂತರ ಪ್ರತಿಮೆಯು ವಿವಿಧ ಮಾದರಿಗಳಲ್ಲಿ ಕಂಡುಬರುವುದು. ಸ್ವಾಭಾವಿಕವಾಗಿದ್ದರೂ ಸಾಮಾಜಿಕ ಚಿಂತಕರಿಗೆ ಇದು ಸಹ ಅರ್ಥಮಾಡಿಕೊಳ್ಳಲಾಗದ ಪ್ರಕ್ರಿಯೆ ಯಾಗಿದೆ.

ಸ್ಥಿತ್ಯಂತರ ಎನ್ನುವುದನ್ನು ಅರ್ಥೈಸುವುದು ಇಲ್ಲವೇ ವ್ಯಾಖ್ಯಾನಿಸುವುದು ಒಂದು ಸಂಕೀರ್ಣವಾದ ವಿಷಯವಾಗಿದೆ. ಸ್ಥಿತ್ಯಂತರವನ್ನು ಒಂದೇ ಚಲಕದಿಂದ ಅಳೆಯುವುದು ಅಸಾಧ್ಯ. ಸ್ಥಿತ್ಯಂತರ ಎನ್ನುವುದು ಜಡಾತ್ಮಕವಾಗಿರುವುದಿಲ್ಲ. ಪರಿವರ್ತನಶೀಲವಾದುದು. ಈ ಪರಿವರ್ತನೆ ಕೆಲವೆಡೆ ತೀವ್ರ ಮತ್ತೆ ಕೆಲವೆಡೆ ಮಂದ. ಒಟ್ಟಿನಲ್ಲಿ ಪರಿವರ್ತನೆ ಸಹಜವಾದುದು, ಅದು ಜೀವಂತಿಕೆಯ ಲಕ್ಷಣವೂ

ಹೌದು. ಸ್ಥಿತ್ಯಂತರ ಅಥವಾ ರೂಪಾಂತರ ಘಟಿಸಲು ಸಾಮಾಜಿಕ, ರಾಜಕೀಯ, ಆರ್ಥಿಕ, ವೈಜ್ಞಾನಿಕವಾದ ಹಲವಾರು ಕಾರಣಗಳಿರುತ್ತವೆ.

ಜನರ ಸಾಮಾಜಿಕ ರಚನೆಯಲ್ಲಿ ಬರುವ ಸಂಸ್ಥೆಗಳ ಸಮಷ್ಟಿಯಲ್ಲಿ ಉಂಟಾಗುತ್ತಿರುವ ಪರಿವರ್ತನೆಯನ್ನು ಅಧ್ಯಯನ ಮಾಡುವುದು ಅವಶ್ಯವಾಗಿದೆ. ಗೌಳಿಗ ಮಹಿಳೆಯರ ಬದಲಾವಣೆಗೊಂಡ ಸಮಾಜದ ಬಗ್ಗೆ ಅವರ ಸ್ಥಿತಿಗತಿಗಳನ್ನು ಅರ್ಥೈಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಗೌಳಿಗ ಸಮುದಾಯದಲ್ಲಿ ಇಂದಿಗೂ ಮಹಿಳೆಯು ಪ್ರಧಾನ ಸ್ಥಾನಮಾನವನ್ನು ಹಕ್ಕು, ಗೌರವನ್ನು ಕುಟುಂಬದಲ್ಲಿ ಹೊಂದಿದ್ದಾಳೆ. ಇವತ್ತಿನ ಸಮಾಜ ದಿನನಿತ್ಯ ಪರಿವರ್ತನೆ ಹೊಂದುತ್ತಿದೆ. ಆ ಪರಿವರ್ತನೆಗೆ ಅನುಗುಣವಾಗಿ ಅನಿವಾರ್ಯವೋ ಅವಶ್ಯಕತೆಯೋ ಒಟ್ಟಾರೆಯಾಗಿ ಸ್ಥಿತ್ಯಂತರವನ್ನು ಕಾಣುತ್ತಿದ್ದೇವೆ. ಬದಲಾವಣೆಯ ಜೊತೆಗೆ ಸಮಸ್ಯೆಗಳು ಕೂಡ ಇದೆ. ಈ ಸಮಸ್ಯೆಗಳು ಇತರ ಸಮುದಾಯದ ಸಮಸ್ಯೆಗಳಾದ ಆರ್ಥಿಕ ಅಸಮಾನತೆ, ಅನಕ್ಷರತೆ, ಸಾಮಾಜಿಕ, ರಾಜಕೀಯ, ಹಿನ್ನೆಡೆ ಮುಂತಾದವುಗಳಿಗೆ ಸಂಬಂಧಿಸಿರುತ್ತದೆ. ಸರ್ಕಾರ ಈ ನಿಟ್ಟಿನಲ್ಲಿ ಕೈಗೊಂಡಿರುವ ಅಭಿವೃದ್ಧಿ ನೀತಿಗಳು, ಯೋಜನೆಗಳು, ಇಡೀ ರಾಷ್ಟ್ರದ ಜನಸಮೂಹಗಳಿಗೂ ಅನ್ವಯಿಸುತ್ತವೆ. ಇವುಗಳೆಲ್ಲ ಏಕ ರೀತಿಯಾಗಿದ್ದು ದ್ವಂದ್ವತೆಯುಳ್ಳದಾಗಿದೆ. ಸ್ಪಷ್ಟತೆ ಇಲ್ಲ, ಬೆರಳೆಣಿಕೆಯ ಜನ ಮಾತ್ರ ಅಭಿವೃದ್ಧಿಯನ್ನು ಹೊಂದಿದ್ದಾರೆ. ಪ್ರಸ್ತುತ ಅಧ್ಯಯನವು ಗೌಳಿಗ ಸಮುದಾಯದ್ದಾಗಿದರೂ ಇಡೀ ಸಮಸ್ಯೆಗಳನ್ನು ಉಳಿದ ಕೆಳ ಸಮುದಾಯಗಳಿಗೆ ಅನ್ವಯಿಸುವುದರಿಂದ ಒಂದಕ್ಕೊಂದು ಸಂಬಂಧವನ್ನು ಹೊಂದಿವೆ. ಹೀಗಾಗಿ ಗೌಳಿಗ ಮಹಿಳೆಯರನ್ನು ಕುರಿತು ಮುಖ್ಯವಾಗಿ ಸಮಾಜಶಾಸ್ತ್ರೀಯ ನೆಲೆಯಲ್ಲಿ ಅಧ್ಯಯನ ನಡೆಸುವುದು ಅಗತ್ಯ ಮತ್ತು ಅವಶ್ಯವಾಗಿವೆ.

ಮಹಿಳೆಯರನ್ನು ಕುರಿತು ಚಿಂತನೆ, ವಿಶ್ಲೇಷಣೆ ಮತ್ತು ಬರಹಗಳು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿರುವುದು ಲಿಂಗವ್ಯವಸ್ಥೆಯ ಸಮಾನತೆಯ ಬಗ್ಗೆ ಕಾಳಜಿಗಳನ್ನು ಹೊಂದಿರುವವರಿಗೆ ಸಂತೋಷ ಮತ್ತು ಸಮಾಧಾನಗಳೆರಡನ್ನೂ ತಂದು ಕೊಟ್ಟಿರುವಂಥ ವಿಷಯ. ಸಮಾಜದ ವಿವಿಧ ಸಂಸ್ಥೆಗಳಲ್ಲಿ ಹಾಸುಹೊಕ್ಕಾಗಿರುವ ಲಿಂಗ ಪೂರ್ವಗ್ರಹಗಳು ಹಾಗೂ ಆಚರಣೆಗಳನ್ನು ಬೇರು ಸಮೇತ ಕಿತ್ತೊಗೆಯಬೇಕಾದರೆ ಮಹಿಳಾ ವಿಚಾರಗಳಿಗೆ ಸ್ಪಂದಿಸುವಂಥ ಮನಸ್ಸನ್ನು ಬೆಳೆಸಿಕೊಳ್ಳುವುದು ಅಗತ್ಯ. ಕಳೆದ ಮೂರು ದಶಕಗಳಲ್ಲಿ ಮಹಿಳೆಯರ ಸ್ಥಾನದಲ್ಲಿ ಬದಲಾವಣೆಗಳಾಗಿದ್ದರೂ ನಿರೀಕ್ಷಿತ ಮಟ್ಟದಲ್ಲಿ ಮಹಿಳಾ ಸಶಕ್ತೀಕರಣದ ಕನಸು ನನಸಾಗದೇ ಉಳಿದಿರುವುದು ಸಮಕಾಲೀನ ಸತ್ಯಗಳಲ್ಲಿ ಒಂದು. ಮಹಿಳೆಯರನ್ನು ಕುರಿತ ಸಾಮಾಜಿಕ ಚಿತ್ರಗಳು, ಸಾಂಸ್ಕೃತಿಕ ವ್ಯವಸ್ಥೆಯ ನಿರ್ಮಾಣ ಎಂದರೆ ತಪ್ಪಾಗಲಾರದು. ಸ್ತ್ರೀ-ಪುರುಷರ ನಡುವೆ ಇರುವಂಥ ಜೈವಿಕ ವ್ಯತ್ಯಾಸಗಳಿಂದ ಆಕೆಯನ್ನು ಸಕ್ರಿಯ ಸಾಮಾಜಿಕ ಜೀವನದಿಂದಲೇ ದೂರವಿಡುವುದು ಸಂಸ್ಕೃತಿ ನಿರ್ಮಿತ ಒಂದು ಪರಿಸ್ಥಿತಿ. ಸಮಾಜದ ಎಳೆ ಎಳೆಗಳಲ್ಲಿ ಹಾಸುಹೊಕ್ಕಾಗಿರುವ ಲಿಂಗಸಂಬಂಧಿ ಮೌಲ್ಯಗಳು ಹಾಗೂ ಆಚರಣೆಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುವುದ ಸಂಸ್ಕೃತಿಯೇ ಆಗಿರುವುದರಿಂದ

ಮಹಿಳೆಯರ ಬದುಕನ್ನು ಆಯಾ ಸಮಾಜದ ಸಾಂಸ್ಕೃತಿಕ ಪರಿಸ್ಥಿತಿಗಳು ಬಹಳ ಮಟ್ಟಿಗೆ ಪ್ರಭಾವಿಸುತ್ತವೆ. ಸಮಾಜದಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆಗಳು ಉಂಟಾದರೂ ಹಲವು ಸಾಂಪ್ರದಾಯಿಕ ಪರಿಸ್ಥಿತಿಗಳು ಸುಲಭದಲ್ಲಿ ಮಾರ್ಪಡಾಗುವುದಿಲ್ಲ. ಲಿಂಗವ್ಯವಸ್ಥೆಗೆ ಸಂಬಂಧಿಸಿದ ಪೂರ್ವಾಗ್ರಹಗಳು ಹಾಗೂ ಆಚರಣೆಗಳು ಇದಕ್ಕೆ ಪ್ರಮುಖವಾದ ಉದಾಹರಣೆಯಾಗಿವೆ. ಲಿಂಗ ತಾರತಮ್ಯ, ಕಾಲ, ದೇಶ, ಜಾತಿ, ಜನಾಂಗಗಳ ಎಲ್ಲೆಯನ್ನು ಮೆಟ್ಟಿ ನಿಂತಂಥ ಪ್ರವೃತ್ತಿಯಾಗಿರುವುದರಿಂದ ಪ್ರತಿಯೊಂದು ಸಮಾಜದಲ್ಲೂ ಅದರ ಇರುವಿಕೆಯನ್ನು ನಾವು ಕಾಣಬಹುದು. ಈ ತಾರತಮ್ಯಗಳ ಅತ್ಯಂತ ಪ್ರಬಲ ಉದಾಹರಣೆಯೆಂದರೆ ಪುರುಷ ಪ್ರಧಾನ ಸಂಸ್ಕೃತಿ. ಈ ಪುರುಷ ಪ್ರಧಾನ ಸಂಸ್ಕೃತಿಯ ಚಿಹ್ನೆಗಳನ್ನು ನಾವು ಎಲ್ಲ ಸಾಮಾಜಿಕ ಸಂಸ್ಥೆಗಳಲ್ಲೂ ಗುರುತಿಸಬಹುದು. ಸಂಸ್ಕೃತಿಯ ಬೆಂಬಲವನ್ನು ಪಡೆದ ಪುರುಷ ಪ್ರಧಾನ ಮೌಲ್ಯಗಳು ಹಾಗೂ ಆಚರಣೆಗಳು ಪ್ರಮುಖವಾಗಿ ವ್ಯಕ್ತವಾಗುವುದು ಎಲ್ಲಾ ಸಾಮಾಜಿಕ ಸಂಸ್ಥೆಗಳಲ್ಲಿ ಕಂಡುಬರುವ ಅಸಮಾನ ಅಧಿಕಾರದ ಹಂಚಿಕೆಯ ಮೂಲಕ. ಸಾಮಾಜಿಕ ಸಂಬಂಧಗಳ ಸ್ವರೂಪ ಔಪಚಾರಿಕವಾಗಿದ್ದಾಗಿರಲಿ ಅಥವಾ ಅನೌಪಚಾರಿಕವಾಗಿದ್ದಾಗಿರಲಿ ಆ ಸಂಬಂಧಗಳಲ್ಲಿ ಪುರುಷ ಪ್ರಾಧಾನ್ಯತೆಯನ್ನು ಸ್ತ್ರೀಯ ಪರಾಧೀನತೆಯನ್ನು ಎತ್ತಿ ಹಿಡಿಯುವ ಪ್ರತ್ಯಕ್ಷ ಅಥವಾ ಪರೋಕ್ಷ ಪ್ರಯತ್ನಗಳು ನಡೆಯುತ್ತಲೇ ಬಂದಿವೆ.

ಸಾಮಾಜಿಕ ವ್ಯವಸ್ಥೆ ಮತ್ತು ಆ ವ್ಯವಸ್ಥೆ ನಿರ್ಮಾಣಗೊಂಡಿರುವ ಸಂಸ್ಕೃತಿ ಇವೆರಡೂ ಮಹಿಳೆಯರ ಜೀವನವನ್ನು ಪ್ರಭಾವಿಸುವಂತಹ ಪ್ರಮುಖ ವ್ಯವಸ್ಥೆಗಳು. ಈ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಗಳು ಉಂಟಾಗುವವರೆಗೂ ಸಮಾಜದಲ್ಲಿ ಮಹಿಳೆಯರ ಪರಿಸ್ಥಿತಿಯಲ್ಲಿ ಗಮನಾರ್ಹವಾದ ಮಾರ್ಪಾಡುಗಳು ತಲೆದೋರುವುದಿಲ್ಲ. ಮಹಿಳೆಯರ ಪಾತ್ರಗಳು ಮತ್ತು ಸಾಮರ್ಥ್ಯಗಳನ್ನು ಕುರಿತಂತೆ ಗೊಂದಲಮಯವಾದ ದ್ವಿಮುಖ ಮೌಲ್ಯಗಳನ್ನು ಪ್ರತಿಪಾದಿಸುವ ವ್ಯವಸ್ಥೆ ಇಂದು ಸಮಾಜದ ಎಲ್ಲೆಡೆ ಕಂಡುಬರುತ್ತಿದೆ. ಒಂದೆಡೆ ಮಹಿಳಾ ಸಶಕ್ತೀಕರಣಕ್ಕಾಗಿ ಹೊಸ ಹೊಸ ಯೋಜನೆಗಳನ್ನು ಘೋಷಿಸುತ್ತಾ ಮಹಿಳಾ ಸಮಾನತೆಯ ಬಗ್ಗೆ ತೋರಿಕೆಯ ಕಾಳಜಿಗಳನ್ನು ಪ್ರಕಟಿಸುತ್ತಿರುವ ಈ ಸಾಮಾಜಿಕ ವ್ಯವಸ್ಥೆ ಮತ್ತೊಂದೆಡೆ ಸಮಾಜದಲ್ಲೆಡೆ ತುಂಬಿ ತುಳುಕಾಡುತ್ತಿರುವ ಲಿಂಗ ಪೂರ್ವಾಗ್ರಹ ಗಳನ್ನು, ಆಚರಣೆಗಳನ್ನು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಪೋಷಿಸುತ್ತಿದೆ. ಮಹಿಳೆಯರನ್ನು ಕುರಿತಂತೆ ನವಜನಾಂಗಕ್ಕೆ ಕ್ರಿಯಾತ್ಮಕವಾದ ಪಾತ್ರ ಮಾದರಿಗಳಿಗಿಂತ ನಕಾರಾತ್ಮಕವಾದ ಮಾದರಿಗಳೇ ಹೆಚ್ಚಾಗಿ ಕಂಡುಬರುತ್ತದೆ.

ನಾಗರೀಕ ಪ್ರಪಂಚದ ಜನರ ಬದುಕೇ ಇರಲಿ, ಬುಡಕಟ್ಟು ಸಮುದಾಯಗಳ ಬದುಕೇ ಇರಲಿ, ಜಡಾತ್ಮಕವಾಗಿರುವುದಿಲ್ಲ, ಪರಿವರ್ತನಶೀಲವಾದುದು. ಈ ಪರಿವರ್ತನೆ ಕೆಲವೆಡೆ ತೀವ್ರ, ಮತ್ತೆ ಕೆಲವೆಡೆ ಮಂದ, ಒಟ್ಟಿನಲ್ಲಿ ಪರಿವರ್ತನೆ ಸಹಜ. ಅದು ಜೀವಂತಿಕೆಯ ಲಕ್ಷಣವೂ ಹೌದು. ಪರಿವರ್ತನೆಯ ಘಟಿಸಲು ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ವೈಜ್ಞಾನಿಕವಾದ ಹಲವಾರು ಕಾರಣಗಳಿರುತ್ತವೆ. ಭಾರತ ದೇಶದ ಸ್ವಾತಂತ್ರ್ಯೋತ್ತರದ ತಾಂತ್ರಿಕ ನಗರ ನಾಗರೀಕತೆಯಿಂದ

ಆವರಿಸಿದ ಆಧುನಿಕತೆಯಲ್ಲಿ ಬುಡಕಟ್ಟುಗಳ ಬದುಕು, ಅತಂತ್ರವಾಗಿ ತೀರಾ ಶೋಚನೀಯ ಸ್ಥಿತಿಗೊಳಗಾದರೆ ಮತ್ತೆ ಕೆಲವರ ಬದುಕು ಆಧುನಿಕತೆಯಿಂದ ಚೇತರಿಸಿಕೊಂಡು ಕಣ್ಣು ಬಿಡುತ್ತಲಿದೆ. ಹಾಗೇ ಕೊಂಚಮಟ್ಟಿಗೆ ಕಣ್ಣು ಬಿಡುತ್ತಿರುವ ಬುಡಕಟ್ಟುಗಳಲ್ಲಿ ಗೌಳಿಗ ಸಮುದಾಯವು ಒಂದಾಗಿದೆ. ಆಧುನಿಕತೆಗೆ ಸ್ಪಂದಿಸಿ ತಮ್ಮನ್ನು ಬದಲಾವಣೆಗೆ ಒಡ್ಡಿಕೊಳ್ಳುವ ಅನಿವಾರ್ಯತೆ ಅವರಲ್ಲಿ ಕಂಡುಬರುತ್ತಿದೆ. ಅವರಲ್ಲಿಯ ಬದಲಾವಣೆಯ ಹೆಜ್ಜೆ ಗುರುತನ್ನು ನಿಚ್ಚಳವಾಗಿ ಗುರುತಿಸಬಹುದಾಗಿದೆ.

ಗೌಳಿಗ ಸಮುದಾಯವು ತಮ್ಮದೇ ಆದ ನಿರ್ಧಿಷ್ಟ ವಾಸಸ್ಥಾನ, ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ರಚನೆಯನ್ನು, ಭಾಷೆ, ವೇಷಭೂಷಣಗಳನ್ನು, ರೀತಿ ನೀತಿ, ಆಚಾರ ವಿಚಾರ, ನ್ಯಾಯ ವ್ಯವಸ್ಥೆಯನ್ನು ಹೊಂದಿದೆ. ಪಶುಪಾಲನೆಯು ಇವರ ಮೂಲ ವೃತ್ತಿಯಾಗಿದೆ. ಇದು ಪಿತೃಪ್ರಧಾನ ಸಮಾಜವಾಗಿದ್ದರೂ ಕೂಡ ಮಹಿಳೆಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಈ ಅಧ್ಯಯನದಲ್ಲಿ ಪಿತೃಪ್ರಧಾನ ವ್ಯವಸ್ಥೆ ಯಾವ ಸ್ವರೂಪದಲ್ಲಿ ಇದೆ, ವರ್ತಮಾನದಲ್ಲಿ ಗೌಳಿಗ ಮಹಿಳೆಯರು ಹೊಂದಿರುವ ಸ್ಥಾನಮಾನಗಳೇನು ಅವರ ಸ್ಥಿತಿಗತಿಗಳೇನು ಎಂಬುದನ್ನು ಕಂಡುಕೊಳ್ಳುವುದರ ಜೊತೆಗೆ ಆಧುನಿಕ ಸಂದರ್ಭದ ಸ್ಥಿತ್ಯಂತರಗಳು ಈ ಸಮುದಾಯದಲ್ಲಿ ಹೇಗೆ ಸಂಭವಿಸಿವೆ ಮತ್ತು ಅವುಗಳ ಸ್ವರೂಪವೇನು ಎಂಬುದನ್ನು ಚರ್ಚಿಸಿದ್ದೇನೆ. ಮೇವಿನ ಕೊರತೆಯಿಂದ ಪಶುಪಾಲನೆಗೆ ತೊಂದರೆಯಾಗಿ ಬೇರೆ ಆರ್ಥಿಕ ಮೂಲವನ್ನು ಹುಡುಕುತ್ತಿದ್ದಾರೆ. ಇದರಿಂದ ಅವರಿಗೆ ಶ್ರಮಕ್ಕೆ ತಕ್ಕ ಫಲ ದೊರಕುವುದಿಲ್ಲ. ಶೈಕ್ಷಣಿಕವಾಗಿ ಹಿಂದುಳಿದ ಇವರು ಹಲವು ಬಗೆಯಲ್ಲಿ ಸಾಮಾಜಿಕ ಹಿನ್ನಡೆಯನ್ನು ಅನುಭವಿಸುತ್ತಿದ್ದಾರೆ. ಈ ಕಾರಣಕ್ಕಾಗಿ ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಮಹಿಳೆಯರ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿರುತ್ತೇನೆ.

ಜಾಗತೀಕರಣದ ಸಂದರ್ಭದಲ್ಲಿ ಮಾನವಶಕ್ತಿಯ ಬದಲು ಯಂತ್ರಗಳು ಹೆಚ್ಚು ಪ್ರಾಮುಖ್ಯತೆ ಯನ್ನು ಪಡೆದು ನಿರುದ್ಯೋಗ ಎನ್ನುವುದು ಸಾಮಾಜಿಕ ಸಮಸ್ಯೆಯಾಗಿದೆ. ಅದರ ಜೊತೆಯಲ್ಲಿ ಆರ್ಥಿಕ, ರಾಜಕೀಯ, ಶೈಕ್ಷಣಿಕ, ಅಸಮಾನತೆ, ಜಾತೀಯತೆ, ಲಿಂಗತಾರತಾಮ್ಯ ಇರುವುದನ್ನು ನಾವು ಕಾಣುತ್ತೇವೆ. ಹಾಗೆಯೇ ಇದರ ಜೊತೆ ಜೊತೆಯಲ್ಲಿ ಈ ಸಮುದಾಯಕ್ಕೆ ದೊರೆಯಬೇಕಾದ ಮೂಲ ಸೌಲಭ್ಯಗಳು, ಉದ್ಯೋಗ, ಭೂಮಿ, ದೊರೆಯದೆ ಆರ್ಥಿಕ ಹಿನ್ನಡೆಯಿಂದ ಅಸಮಾನತೆಯು ಹೆಚ್ಚಾಗಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನ ಗೌಳಿಗ ಸಮುದಾಯದ ಮಹಿಳೆ ಇತರ ಸಮುದಾಯಕ್ಕೆ ಮಾದರಿಯಾಗಿ ಇದ್ದಾರೆ. ಮಹಿಳೆಯರು ಸ್ವಾವಲಂಬಿ, ಸ್ವಾತಂತ್ರ್ಯ ಪರವಾಗಿ ಸಾಮಾಜಿಕ, ಆರ್ಥಿಕವಾಗಿ ಎತ್ತರವಿದ್ದಾರೆ. ಶೈಕ್ಷಣಿಕವಾಗಿ ಬದಲಾವಣೆಯಾದರೆ ಅದು ಆ ಸಮೂಹದ ಅಭಿವೃದ್ಧಿಯ ಸೂಚಕವಾಗಿರುತ್ತದೆ ಎಂದು ನನ್ನ ಭಾವನೆ. ಜಾಗತೀಕರಣದ ಹೊತ್ತಿನಲ್ಲಿ ಕೆಳಸಮುದಾಯಗಳು ತೊಂದರೆಗಳಿಗೆ ಈಡಾಗುತ್ತಿರುವ ಹಿನ್ನೆಲೆಯಲ್ಲಿ ಈ ಅಧ್ಯಯನ ಹೆಚ್ಚು ಸಮಕಾಲೀನವಾಗಿದೆಯೆಂದು ಭಾವಿಸುತ್ತೇನೆ.

**ಅಧ್ಯಯನದ ಸ್ವರೂಪ**

ಇದು ಆದಿವಾಸಿ ಸಮುದಾಯದ ಮಹಿಳೆಯ ವರ್ತಮಾನದ ಸ್ಥಿತಿಗತಿಗಳ ಕುರಿತ ಅಧ್ಯಯನ ಇದಾಗಿದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಅಷ್ಟೇ ಅಲ್ಲ, ಮಲೆನಾಡು ಪ್ರದೇಶಗಳಿಗೆ ಮಹಾರಾಷ್ಟ್ರದಿಂದ ವಲಸೆ ಬಂದಿರುವ ಗೌಳಿಗ ಮಹಿಳೆಯರನ್ನು ಈ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಕರ್ನಾಟಕದಲ್ಲಿ ಉತ್ತರ ಕನ್ನಡ ಅತ್ಯಂತ ವಿಶಿಷ್ಟವಾದ ಭೂಪ್ರದೇಶ, ಸಂಪದ್ಭರಿತ ಅರಣ್ಯ, ತುಂಬಿ ಹರಿಯುವ ನದಿಗಳು, ದುಮ್ಮಿಕ್ಕುವ ಜಲಪಾತಗಳು, ಮೋಹಕ ಕಣಿವೆಗಳು ಮತ್ತು ಅಪಾರ ಸಮುದಾಯ ವೈಶಿಷ್ಟ್ಯವಿರುವ ಜಿಲ್ಲೆ ಪ್ರಾಯಶಃ ಉತ್ತರಕನ್ನಡ ಜಿಲ್ಲೆಯಲ್ಲಿ ಅತ್ಯಂತ ಹೆಚ್ಚು ವೈವಿಧ್ಯಮಯ ಸಮುದಾಯಗಳು ಬದುಕುತ್ತಿರುವುದು. ಗೌಳಿಗರು, ಕುಣಬಿಯರು, ಸಿದ್ಧಿಯರು, ಹಸಲರು, ಅಗೇರರು, ಮುಕ್ರಿಯರು, ಹಾಲಕ್ಕಿಗಳು, ಕರೆ ಒಕ್ಕಲಿಗರು, ಗೊಂಡರು, ಹಳ್ಳೇರು, ಮುಂತಾದ ವಿಶಿಷ್ಟ ಸಮುದಾಯಗಳು ಉತ್ತರ ಕನ್ನಡ ಜಿಲ್ಲೆಯಲ್ಲಿವೆ. ಮೇಲೆ ಉಲ್ಲೇಖಿಸಿದ ಎಲ್ಲಾ ಸಮುದಾಯಗಳಿಗೆ ಬುಡಕಟ್ಟು ಲಕ್ಷಣಗಳಿದ್ದು ಅವರಲ್ಲಿ ಮೇದ, ಗೊಂಡ, ಹಸಲರು, ಸಿದ್ದಿ, ಮಾತ್ರ ಸರ್ಕಾರ ಘೋಷಿತ ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿದ್ದಾರೆ. ಉಳಿದ ಯಾವ ಸಮುದಾಯಗಳು ಪರಿಶಿಷ್ಟ ಪಂಗಡಗಳೆಂದು ಪರಿಗಣಿಸಲ್ಪಟ್ಟಿಲ್ಲ. ಬುಡಕಟ್ಟುಗಳೆಂದು ಪರಿಗಣಿಸಲ್ಪಡುವಷ್ಟು ಪಟ್ಟಿ ಬುಡಕಟ್ಟು ಲಕ್ಷಣಗಳನ್ನು ಹೊಂದಿವೆ. ಜೊತೆಗೆ ಮಾನವಶಾಸ್ತ್ರೀಯ ಮಾನದಂಡಗಳ ಮೂಲಕ ಅಧ್ಯಯನಕ್ಕೊಳಪಡಿಸಿದರೂ ಸಹ ಈ ಸಮುದಾಯಗಳು ಆದಿವಾಸಿ ಸಮುದಾಯಗಳೆಂದು ಸುಲಭವಾಗಿ ಪರಿಗಣಿಸಲ್ಪಡಬಹುದು. ಪರಿಶಿಷ್ಟ ಪಂಗಡ, ಬುಡಕಟ್ಟು ಅಥವಾ ಟ್ರೈಬ್ಸ್ ಎಂದು ಪರಿಗಮಿಸಲು ಇರುವ ಶೈಕ್ಷಣಿಕ ಅಥವಾ ಸರ್ಕಾರಿ ಮಾನದಂಡಗಳೇನೇ ಇದ್ದರೂ ಸಹ ಗೌಳಿ, ಕುಣಬಿ, ಕರೆಒಕ್ಕಲ ಮತ್ತು ಒಕ್ಕಲಿಗರು ಈ ದೇಶದ ಆದಿವಾಸಿ ಸಮುದಾಯಗಳಿಗೆ ಇರಬಹುದಾದ ಆದಿಮ ಲಕ್ಷಣಗಳನ್ನು ಸಾಂಕೇತಿಕವಾಗಿ ಮಾತ್ರವಲ್ಲದೆ ಆಚರಣೆಗಳಲ್ಲಿ ಮತ್ತು ನಿತ್ಯದ ಲೌಕಿಕ ವ್ಯವಹಾರದಲ್ಲಿ ಇನ್ನೂ ಜೀವಂತವಾಗಿಟ್ಟು ಕೊಂಡಿದ್ದಾರೆ. ಈ ಕಾರಣದಿಂದ ಸರ್ಕಾರದ ಘೋಷಿತ ಪರಿಶಿಷ್ಟ ಪಂಗಡ ಪಟ್ಟಿಯನ್ನು ಪಕ್ಕಕ್ಕಿಟ್ಟು ಆದಿವಾಸಿ ಲಕ್ಷಣಗಳಿರುವ ಮೇಲ್ಕಾಣಿಸಿದ ಸಮುದಾಯಗಳನ್ನು ಬುಡಕಟ್ಟುಗಳೆಂದು ಪರಿಗಣಿಸ ಬಹುದಾಗಿದೆ.

ಪ್ರಸ್ತುತ ಗೌಳಿಯರನ್ನು ಮತ್ತು ಸಮುದಾಯದ ಮಹಿಳೆಯರ ಸ್ಥಿತ್ಯಂತರಗಳನ್ನು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಗೌಳಿಗರು ಕಳೆದ ಒಂದು ಶತಮಾನದಿಂದೀಚೆಗೆ ಎಮ್ಮೆ, ದನಕರುಗಳನ್ನು ಸಾಕಾಣಿಕೆಯಿಂದಾಗಿ ಮಹಾರಾಷ್ಟ್ರ ಮತ್ತು ಗೋವಾ ಪ್ರಾಂತ್ಯಗಳಿಂದ ಇಲ್ಲಿಗೆ ವಲಸೆ ಬಂದವರು. ಅರೆ ಅಲೆಮಾರಿಗಳಾದ ಇವರು ಇಲ್ಲಿಗೆ ಹೇಗೆ, ಏಕೆ, ಎಲ್ಲಿಂದ ಬಂದರು ಎಂಬ ಪ್ರಶ್ನೆಗಳಿಗೆ ಸ್ಪಷ್ಟ ಲಿಖಿತ ಆಧಾರಗಳಿಲ್ಲದಿದ್ದರೂ ಇವರು ಅವಲಂಬಿಸಿರುವ ವೃತ್ತಿ ಮತ್ತು ಹವ್ಯಾಸಗಳಿಂದ ಇವರು ಇಲ್ಲಿಗೆ ಬಂದ ನಿಜವಾದ ಕಾರಣಗಳನ್ನು ಊಹಿಸಬಹುದು. ತಮ್ಮದೇ ಆದ ಅನನ್ಯವಾದ ಸಂಸ್ಕೃತಿ ಮತ್ತು ಪರಂಪರೆಯನ್ನು ಹೊಂದಿರುವ ಈ ಗೌಳಿಗರು, ಧಂಗರ್ ಮರಾಠರು, ಕಚ್ಚೆಮರಾಠರು, ಕಚ್ಚೆ ಧಂಗರರು ಮುಂತಾದ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಾರೆ. ಕಚ್ಚೆಗೌಳಿಗರು ತಮ್ಮ ನೆಲೆಯನ್ನು ದೊಡ್ಡಿ ಅಥವಾ ವಾಡೆ ಎಂದು ಗುರುತಿಸುವರು. ಮಹಾರಾಷ್ಟ್ರದಲ್ಲಿ

ವಾಡೆ ಪ್ರಯೋಗ ಹೆಚ್ಚು ಜನಪ್ರಿಯ. ಅಲ್ಲಿ ಗೌಳಿಗರನ್ನು ಧಂಗರ್ ಎಂದು ಕರೆಯುವುದು ವಾಡಿಕೆ. ಧನಗರ್ ಎನ್ನುವ ಪದ ಧೇನು ಎನ್ನುವ ಎಂಬ ಸಂಸ್ಕೃತ ಶಬ್ದದಿಂದ ಬಂದಿದೆ. ಧೇನು ಎಂದರೆ ಗೋವು ಎಂದರ್ಥ.

ಗೌಳಿಗರ ಮೂಲದ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ ಅದರೂ ಅವರ ಮೂಲವನ್ನು ಗುರುತಿಸುವಲ್ಲಿ ಅವರ ವಂಶ, ಕುಲಪರಂಪರೆ, ವಿಚಾರಗಳು ಮತ್ತು ಆಚರಣೆಗಳು ನೆರವಿಗೆ ಬರುತ್ತವೆ. ಮಹಾರಾಷ್ಟ್ರದ ಧನಗರ್‌ರಲ್ಲಿ ಸರ್ವೆಸಾಮಾನ್ಯವಾಗಿ ಕಂಡುಬರುವ ನಂಬಿಕೆ, ಸಂಪ್ರದಾಯಗಳು, ರೀತಿ ನೀತಿಗಳು, ಹಬ್ಬ-ಹರಿದಿನಗಳು ಕರ್ನಾಟಕಕ್ಕೆ ವಲಸೆ ಬಂದಿರುವ ಗೌಳಿಗರಲ್ಲೂ ಕಂಡು ಬರುವುದರಿಂದ ಅವರು ಕಚ್ಚೆ ಗೌಳಿಗರು ಮಹಾರಾಷ್ಟ್ರ ಮೂಲದವರು ಎಂಬುದು ಸ್ಪಷ್ಟ. ಮಾತನಾಡುವ ಭಾಷೆ, ರೂಢಿಸಿಕೊಂಡಿರುವ ಸಂಸ್ಕೃತಿಯ ದೃಷ್ಟಿಯಿಂದಲೂ ಇವರು ಅದೇ ಮೂಲದವರು ಎಂದು ಹೇಳಬಹುದು.

ಗೌಳಿಗರ ಮನೆ ಮಾದರಿ, ಆಹಾರಪದ್ಧತಿ, ವೈದ್ಯಪದ್ಧತಿ, ಆಡಳಿತ ವ್ಯವಸ್ಥೆ, ಸಾಮಾಜಿಕ ಜೀವನ, ಇವುಗಳೆಲ್ಲ ಕೂಡ ವಿಶೇಷಗಳಾವೆ. ಅರೆ ಅಲೆಮಾರಿಗಳಾದ ಇವರು ಎಲ್ಲೆಲ್ಲಿ ನೆಲೆಸಿರುವರೋ ಅಲ್ಲಲ್ಲಿನ ಪರಿಸರದ ಪ್ರಭಾವದಿಂದ ಬದಲಾವಣೆಗಳು ಉಂಟಾಗುವುದು ಸಹಜ. ಗೌಳಿಗರು ಮೂಲತಃ ಮರಾಠಿ ಮಾತನಾಡುವ ಜನರಾಗಿದ್ದು ಕನ್ನಡದ ಆಡುನುಡಿ ಅವರ ಭಾಷೆಯ ಮೇಲೆ ಎಷ್ಟರಮಟ್ಟಿಗೆ ಪ್ರಭಾವ ಬೀರಿದೆ ಎನ್ನುವುದನ್ನು ತಿಳಿಯಬಹುದು. ಅರೆಅಲೆಮಾರಿಗಳಾದ ಇವರು ಪ್ರದೇಶದಿಂದ ಪ್ರದೇಶಕ್ಕೆ ಸಂಚಾರಿಸುವಾಗ ಅನ್ಯರ ಸಂಪರ್ಕ ಅನಿವಾರ್ಯವಾಗಿರುತ್ತವೆ. ಉತ್ತರದಿಂದ ಬಂದ ಇವರು ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡ ಬಗೆ, ಹಾಗೂ ಜನರ ಜೊತೆಗೆ ಬೆರೆತ ಬಗೆಗೆ ಇವರು ಹೀಗೆ ಅನ್ಯ ಸಂಸ್ಕೃತಿಯ ಪ್ರಭಾವಕ್ಕೆ ಗುರಿಯಾಗಿ ತಮ್ಮ ಸಂಸ್ಕೃತಿಯನ್ನು ಕಡೆಗಣಿಸಿದ್ದಾರೆಯೇ ಅಥವಾ ತಮ್ಮ ಮತ್ತು ಪರಿಸರದ ಸಂಸ್ಕೃತಿಯ ಕೆಲವು ಅಂಶಗಳನ್ನು ಹೊಂದಿ ಬದುಕಿನ ಸಾಂಗತ್ಯಕ್ಕೆ ಹೆಚ್ಚು ಒತ್ತು ಕೊಟ್ಟಿದ್ದಾರೆಯೇ ಎನ್ನುವುದನ್ನು ಪರಿಶೀಲಿಸಿದ್ದು ಹೊರಗಿನಿಂದ ಬಂದು ಇಲ್ಲಿಯ ಜೀವನಕ್ರಮಕ್ಕೆ ಹೊಂದಿಕೊಂಡು ಬದುಕು ನಡೆಸುತ್ತಿರುವ ಇವರ ಜೀವನಕ್ರಮವೂ ಬೇರೆಯವರಿಗಿಂತ ತುಸು ಭಿನ್ನವಾಗಿದೆ ಎಂದು ಹೇಳಬಹುದು.

ಗೌಳಿಗರಲ್ಲಿ ಅವಿಭಕ್ತ ಕುಟುಂಬವಿದ್ದು ಪಿತೃಪ್ರಧಾನತೆಯನ್ನು ಕಾಣಬಹುದು. ತಮ್ಮದೇ ಆದ ಸಂಪ್ರದಾಯ ಆಚರಣೆಗಳನ್ನು ಇವರು ರೂಢಿಸಿಕೊಂಡಿದ್ದಾರೆ. ಇವರ ಸಮಾಜದಲ್ಲಿ ಸ್ತ್ರೀಯರಿಗಿಂತ ಪುರುಷರ ಸ್ಥಾನಮಾನಗಳು ಗೌರವಯುತವಾಗಿರುತ್ತವೆ. ಇವರ ಸಮುದಾಯದಲ್ಲಿ ಸ್ತ್ರೀಯರಿಗೂ ಸ್ವಾತಂತ್ರ್ಯವಿದೆ. ಇವರ ಮೂಲ ವೃತ್ತಿ ಎಂದು ಹೇಳುವ ಪಶುಪಾಲನೆಯನ್ನು ಮಾಡುವರು ಸ್ತ್ರೀಯರೇ. ಇಂದಿಗೂ ದಟ್ಟ ಅಡವಿಗಳಲ್ಲೇ ನೆಲೆಸಿರುವ ಈ ಗೌಳಿಗರು ವ್ಯವಸ್ಥಿತವಲ್ಲದ ಬದುಕನ್ನು ಸಾಗಿಸುತ್ತಿದ್ದಾರೆ. ಗ್ರಾಮಾಂತರ ಪ್ರದೇಶಗಳಿಂದ ದೂರದಲ್ಲಿ ಬೆಟ್ಟ, ಅಡವಿಗಳಲ್ಲಿ ವಾಸಿಸುವುದರಿಂದ ಗೌಳಿಗರ ನೆಲೆಗಳು ನಾಗರಿಕ ಸಂಪರ್ಕದಿಂದ ದೂರ ಇದೆ. ಈ ಅಲೆಮಾರಿ ಜನರ ಆರ್ಥಿಕ,

ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳು ಶೋಚನೀಯವಾಗಿವೆ. ಗೌಳಿಗ ಮಹಿಳೆಯರು ಕಪಟವರಿಯದ ಮುಗ್ಧರು, ತಮ್ಮದೇ ಆದ ಸಾಂಸ್ಕೃತಿಕ ಆವರಣದಲ್ಲಿ ಸಾಂಪ್ರದಾಯಿಕ ರೀತಿಯಲ್ಲಿ ಬದುಕು ನಡೆಸುವ ಇವರು ನಾಗರೀಕ ಪ್ರಭಾವದಿಂದ ಮುಕ್ತರಾದವರಂತೆ ಕಾಣುತ್ತಾರೆ. ತಮ್ಮದೇ ಆಚಾರ, ವಿಚಾರ, ವೇಷಭೂಷಣ, ಆಹಾರ ಪದ್ಧತಿ, ಮನೆ ನಿರ್ಮಾಣ, ಇವೇ ಮುಂತಾದವುಗಳಲ್ಲಿ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬಂದಿರುವ ಇವರು ಅಡವಿಗಳಲ್ಲಿ ನೆಲೆಸಿ ಇತರ ಸಮಾಜಗಳ ಜನರ ಗಮನ ಸೆಳೆದದ್ದು ಕಡಿಮೆಯೇ. ರಾಜಕೀಯವಾಗಿ, ಸಾಮಾಜಿಕವಾಗಿ, ಸಂಘಟಿತವಾಗಿಲ್ಲದ ಈ ಜನರ ಆರ್ಥಿಕಾಭಿವೃದ್ಧಿ ಕುಂಠಿತಗೊಂಡಿರುವುದು ಸ್ವಾಭಾವಿಕ. ಪ್ರಭುತ್ವದ ತೀರ ನಿರ್ಲಕ್ಷತೆಗೆ ಗುರಿಯಾಗಿರುವ ಇವರು ಇತ್ತೀಚಿನ ದಿನಗಳಲ್ಲಿ ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣಗಳಿಗಾಗಿ ಬದಲಾವಣೆ ಹೊಂದುತ್ತಿದ್ದಾರೆ. ಈ ಬದಲಾವಣೆಗೆ ಮುಖ್ಯ ಪ್ರೇರಣೆಯೆಂದರೆ ಸಾಂಸ್ಕೃತಿಕ ಪರಿವರ್ತನೆ ಮತ್ತು ಆರ್ಥಿಕ ಪರಿವರ್ತನೆಗಳೇ ಎನ್ನಬಹುದು.

ಬದಲಾವಣೆಯ ಹಾದಿಯಲ್ಲಿ ಸಾಗುತ್ತಿರುವ ಗೌಳಿಗ ಸಮುದಾಯದ ಮಹಿಳೆಯರು ಹೊಸ ಸಾಂಸ್ಕೃತಿಕ ಬದುಕಿನತ್ತ ಮುಖಮಾಡುತ್ತಿದ್ದಾರೆ. ಇವರ ಗೃಹವಿನ್ಯಾಸ, ತಿಂಡಿತಿನಿಸು, ಉಡುಗೆ ತೊಡುಗೆಗಳಲ್ಲಿ ಆಧುನೀಕತೆಯ ಅಬ್ಬರ ಜಾಸ್ತಿ. ಇವರು ಹುಲ್ಲಿನ ಮನೆಗಳನ್ನು ತೊರೆದು ವಿದ್ಯುತ್ತೀರಣಗೊಂಡ ಹಂಚಿನ ಮನೆಗಳಲ್ಲಿ, ಇವರ ಬತ್ತ ಮೆರೆಯುವುದನ್ನು, ಹಿಟ್ಟು ಬೀಸುವುದನ್ನು ಮರೆತಿದ್ದಾರೆ. ಇವರ ಮನೆಗಳಲ್ಲಿ ಮಣ್ಣಿನ ಮಡಿಕೆಗಳ ಸ್ಥಾನವನ್ನು ಸ್ಟೀಲ್, ಪ್ಲಾಸ್ಟಿಕ್ ಪಾತ್ರೆಗಳು ತುಂಬಿವೆ. ಕುಗ್ರಾಮಗಳಿಗೂ ಸಾರಿಗೆ ಸೌಕರ್ಯ ಏರ್ಪಟ್ಟು ಹೊಳೆ ಹಳ್ಳಗಳಿಗೆ ಸೇತುವೆಯಾಗಿ, ಹಳ್ಳಿ ಹಳ್ಳಿಗೆ ಶಾಲೆಯಾಗಿರುವುದರಿಂದ ಗೌಳಿಗರ ಹೆಣ್ಣುಮಕ್ಕಳಲ್ಲಿ ಕಲಿಯುವ ಆಸಕ್ತಿ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಲಿದೆ. ಉನ್ನತ ಮಟ್ಟದ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದವರಾದರೂ ಶ್ರೇಣಿಕೃತ ಸಮಾಜವ್ಯವಸ್ಥೆಯಲ್ಲಿ ಉನ್ನತ ಸ್ಥಾನದಲ್ಲಿರುವವರ ಜೊತೆ ಹೆಚ್ಚು ಬಳಕೆಯಾಗಿ ಅನ್ಯಸಂಸ್ಕೃತಿಯನ್ನು ಆಧರಿಸಿ ಒಪ್ಪಿ ಅವರ ಸಂಪ್ರದಾಯ, ನಡೆ ನಡಾವಳಿಗಳನ್ನು ತಮ್ಮಲ್ಲಿ ಅಳವಡಿಸಿ ಕೊಂಡು ತಮ್ಮ ಬುಡಕಟ್ಟು ಲಕ್ಷಣಗಳನ್ನು ಒಂದೊಂದಾಗಿ ಕಳಚಿಕೊಂಡು ಇಂದು ಹಿಂದೂ ಜಾತಿಗಳಾಗಿ ಪರಿವರ್ತನೆಗೊಳ್ಳುತ್ತಿದ್ದಾರೆ. ಪರಿವರ್ತನಶೀಲವಾದ ಬದುಕಿನಲ್ಲಿ ಇವೆಲ್ಲಾ ಅನಿವಾರ್ಯ ವಾಗಿವೆ. ಹೀಗಾಗಿ ಗೌಳಿಗರ ಹಲವಾರು ಆಚರಣೆಗಳಲ್ಲಿ ಒಂದು ಬಗೆಯ ಸಂಕೀರ್ಣತೆ ಕಾಣುತ್ತಿವೆ. ತಮ್ಮ ಸಾಂಸ್ಕೃತಿಕ ವೈರುಧ್ಯವು ಸಂಘರ್ಷಕ್ಕೆ ಎಡೆ ಮಾಡಿಕೊಡದಂತೆ ಎಚ್ಚರವಹಿಸಿ ಗೌಳಿಗರು ಒಂದು ಬಗೆಯ ಸಾಂಸ್ಕೃತಿಕ ಹೊಂದಾಣಿಕೆಯನ್ನು ಮಾಡಿಕೊಂಡಿದ್ದಾರೆ. ಇತ್ತೀಚೆಗೆ ಗೌಳಿಗರು ಮದುವೆ, ಹುಟ್ಟು, ಸಾವು ಮುಂತಾದ ಜೀವನಾವರ್ತನದಲ್ಲಿ ಪುರೋಹಿತರನ್ನು ಆಮಂತ್ರಿಸುತ್ತಿದ್ದಾರೆ. ವೈದಿಕಮಂತ್ರಗಳ ಪ್ರವೇಶವಾಗತೊಡಗಿವೆ. ಮದುವೆಯ ಕಾಲಕ್ಕೆ ಜಾತಕ ನೋಡಿಸುವ ಚಟವನ್ನು ಕೆಲವರು ರೂಢಿಸಿಕೊಳ್ಳುತ್ತಿದ್ದಾರೆ. ಮದುವೆಯಲ್ಲಿ ಹೆಣ್ಣಿಗೆ ತೆರ ಕೊಡುವ ಪದ್ಧತಿ ಕಡಿಮೆಯಾಗಿ ವರದಕ್ಷಿಣೆ ನೀಡುವುದು ಅಲ್ಲಲ್ಲಿ ಗೋಚರವಾಗುತ್ತಿವೆ. ಶುಭಕಾರ್ಯಗಳಲ್ಲಿ ಕ್ಯಾಸೆಟುಗಳ ಹಾವಳಿಯಿಂದ ಹಾಡುಗಾರ್ತಿಯರ ಹಾಡುಗಳು ಮೂಲೆಗುಂಪಾಗುತ್ತಲಿವೆ. ಗೌಳಿಗರು ತಮ್ಮ ದೇವತೆಗಳ ಆರಾಧನೆಯ

ಜೊತೆಗೆ ವೈದಿಕ ಪರಂಪರೆಯ ದೇವತೆಗಳ ಆರಾಧನೆಯನ್ನು ಸ್ವೀಕರಿಸುತ್ತಿದ್ದಾರೆ. ಹಾಗೂ ಅವರ ಜಾನಪದ ಕಲೆಗಳ ಬಗ್ಗೆ ಯುವಕ, ಯುವತಿಯರು ನಿರಾಸಕ್ತಿಯನ್ನು ತಾಳುತ್ತಿರುವುದರಿಂದ ಈಗ ಅವು ತಮ್ಮ ಹಿಂದಿನ ಸಾಂಸ್ಕೃತಿಕ ಮೌಲ್ಯವನ್ನು ಕಳೆದುಕೊಂಡು ಸೊರಗಿ ನಶಿಸತೊಡಗಿವೆ. ಆಧುನಿಕತೆಯ ಕಾರಣದಿಂದಾಗಿ ಕೆಲವು ಗೌಳಿಗರು ಸುಧಾರಣೆಯ ಪ್ರಗತಿಯ ಮಾರ್ಗವನ್ನು ಕಂಡುಕೊಂಡರೆ ಬಹುಸಂಖ್ಯಾತರು ಇಂದಿಗೂ ಬಡತನದಿಂದ ಬಳಲುತ್ತಿದ್ದಾರೆ. ಗೌಳಿಗ ಮಹಿಳೆಯರು ಅನಿವಾರ್ಯವಾಗಿ ಸ್ಥಿತ್ಯಂತರ ಹೊಂದುತ್ತಿದ್ದಾರೆ. ಅದಕ್ಕಾಗಿ ಅವರ ಉದ್ಧಾರಕ್ಕಾಗಿ ನಮ್ಮ ಸರ್ಕಾರ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿ ಅವರ ಬದುಕಿಗೊಂದು ನೆಲೆ ತೋರಿಸುವ ಅವಶ್ಯಕತೆ ಇದೆ.

**ಅಧ್ಯಯನದ ಹಂಬಲಗಳು**

ಮಹಿಳೆಯರನ್ನು ಕುರಿತು ಅಧ್ಯಯನವೆಂದರೆ ಅದೊಂದು ಶುದ್ಧ ಶೈಕ್ಷಣಿಕ ಚೌಕಟ್ಟಿನಲ್ಲಿ ನಡೆಯುವ ಅಕಾಡೆಮಿಕ ಚಟುವಟಿಕೆ ಮಾತ್ರವಲ್ಲ. ಜೊತೆಗೆ ಶೋಷಿತರನ್ನು ಮತ್ತು ಮಹಿಳೆಯರನ್ನು ಕುರಿತ ಅಧ್ಯಯನಗಳು ನಿರ್ಲಿಪ್ತ ಅವಕಾಶದಲ್ಲಿ ನಡೆಯುವುದಿಲ್ಲ. ಶೋಷಿತರನ್ನು ಮತ್ತು ಮಹಿಳೆಯರನ್ನು ಇಲ್ಲಿ ಕುರಿತು ನಡೆಯುವ ಅಧ್ಯಯನಗಳು ನಿತ್ಯ ವರ್ತಮಾನದ ಸಾಮಾಜಿಕ, ಆರ್ಥಿಕ, ರಾಜಕೀಯ ವಿದ್ಯಮಾನಗಳ ನಡುವೆ ರೂಪುಗೊಳ್ಳುತ್ತವೆ. ಶೋಷಿತರ ಮತ್ತು ಮಹಿಳೆಯರ ಕುರಿತ ಅಧ್ಯಯನದ ಒಂದು ನಿರ್ಲಿಪ್ತ ಶೈಕ್ಷಣಿಕ ವಾತಾವರಣದಲ್ಲಿ ಸಂಭವಿಸುವುದಿಲ್ಲ.

ಪ್ರಸ್ತುತ ಬರವಣಿಗೆಯಲ್ಲಿ ಈ ಬಗೆಯ ಅಶಯಗಳು ವ್ಯಕ್ತವಾದರೆ ಅದು ಸಹಜ ಎಂಬುದು ನನ್ನ ಭಾವನೆ. ಮಹಿಳೆಯರನ್ನು ಕುರಿತು ಅಧ್ಯಯನಕ್ಕೆ ಗೊಂಡಿರುವ ಸ್ವತಃ ಮಹಿಳೆಯಾಗಿ ಒಂದು ಸಮುದಾಯದ ಮಹಿಳೆಯನ್ನು ಅಧ್ಯಯನ ಮಾಡುವಾಗ ಅನೇಕ ಕಡೆ ಭಾವುಕಳಾಗಿದ್ದೇನೆ. ಗೌಳಿಗರ ವಾಡೆಗಳಲ್ಲಿ ನಿತ್ಯ ಬೆಳಗಿನ ನಾಲ್ಕುಗಂಟೆಗೆ ಪ್ರಾರಂಭವಾಗುವ ಅವರ ದುಡಿಮೆ, ಕಷ್ಟ, ಸಹಿಷ್ಣುತೆ, ಕುಟುಂಬದ ನಿರ್ವಹಣೆ ದಿನದ ವಿವಿಧ ಸಂದರ್ಭದಲ್ಲಿ ಬದಲಾಗುವ ಅವರ ದುಡಿಮೆಯ ಆಯಾಮಗಳನ್ನು ಅತ್ಯಂತ ಹತ್ತಿರದಿಂದ ನೋಡಿದ್ದೇನೆ. ಕಳೆದ ನಾಲ್ಕು ವರ್ಷದ ಗೌಳಿಗರ ಜೊತೆಗೆ ನನ್ನ ಒಡನಾಟದ ಫಲವಾಗಿ ಈ ಅಧ್ಯಯನ ರೂಪುಗೊಂಡಿದೆ. ಈ ಕೆಳಗಿನ ನಾಲ್ಕು ಉದ್ದೇಶಗಳನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ.

೧. ಅಸಂಘಟಿತ ವಲಯದಲ್ಲಿ ಸ್ತ್ರೀ ಪುರುಷ ಇಬ್ಬರು ಇದ್ದರೂ ಮಹಿಳೆಯರೇ ಹೆಚ್ಚಾಗಿರಲು ಕಾರಣ ಹಾಗೂ ಈ ವಲಯದಲ್ಲಿ ಪುರುಷರಿಗೆ ಇದ್ದಷ್ಟು ಸ್ಥಾನ ಮಹಿಳೆಯರಿಗೆ ಇರದೇ ಇರುವುದಕ್ಕೆ ಕಾರಣಗಳನ್ನು ಗುರುತಿಸುವುದು.

೨. ಲಿಂಗ ಅಸಮಾನತೆಯನ್ನು ಗುರುತಿಸುವುದು

೩. ಕೆಲಸದ ಸ್ವರೂಪ ಯಾವ ರೀತಿಯಲ್ಲಿ ಕಂಡುಬರುತ್ತವೆ ಎಂಬುದನ್ನು ಗಮನಿಸುವುದು.

೪. ಆಧುನಿಕ ಸಂದರ್ಭದಲ್ಲಿ ಈ ಸಮುದಾಯದಲ್ಲಿ ಉಂಟಾಗುತ್ತಿರುವ ಸ್ಥಿತ್ಯಂತರಗಳನ್ನು ಮತ್ತು ಸಮಸ್ಯೆಗಳನ್ನು ಅಧ್ಯಯನಿಸುವುದು.

**ಅಧ್ಯಯನದ ವ್ಯಾಪ್ತಿ**

ಗೌಳಿಗರು ಹೆಚ್ಚಾಗಿ ನೆಲೆಸಿರುವುದು ಗೋವಾ ಹಾಗೂ ಮಹಾರಾಷ್ಟ್ರದ ರತ್ನಗಿರಿ, ಕೊಲ್ಲಾಪುರ, ಪ್ರದೇಶಗಳಲ್ಲಿ ಕರ್ನಾಟಕದಲ್ಲಿ ಗೌಳಿಗರು ಸಾಮಾನ್ಯವಾಗಿ ದಟ್ಟ ಅಡವಿಗಳಲ್ಲಿಯೇ ತಮ್ಮ ವಾಡೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಉತ್ತರ ಕನ್ನಡ, ಶಿವಮೊಗ್ಗ, ಧಾರವಾಡ, ಬೆಳಗಾವಿ, ಚಿಕ್ಕಮಗಳೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಗೌಳಿಗರು ವಾಡೆಗಳಿವೆ. ಈ ಜಿಲ್ಲೆಗಳಲ್ಲಿ ಇವರ ನೆಲೆಗಳು ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತವೆ. ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ, ಹಳಿಯಾಳ ಮತ್ತು ಮುಂಡಗೋಡು ತಾಲೂಕಿನಲ್ಲಿ ಹೆಚ್ಚಾಗಿ ಇವರು ಕಂಡುಬರುತ್ತಾರೆ. ಜೋಯಿಡಾ ತಾಲೂಕಿನಲ್ಲೂ ಕಡಿಮೆ ಪ್ರಮಾಣ ದಲ್ಲಿದ್ದಾರೆ. ಇವರು ಹೆಚ್ಚಾಗಿ ಮಲೆನಾಡು ಪ್ರದೇಶದಲ್ಲೇ ನೆಲೆಸಿರುವುದು ಇವರ ವೃತ್ತಿಗೆ ಸಹಜವಾಗಿದೆ. ಮಲೆನಾಡಿನ ಸೆರಗು ಎಂದು ಗುರುತಿಸಿರುವ ಪ್ರದೇಶಗಳಲ್ಲಿ ಇವರ ನೆಲೆಗಳು ಖಾಯಂ ನೆಲೆಯಾಗಿ ಇರುವುದನ್ನು ಕಾಣಬಹುದು. ಒಂದೊಂದು ವಾಡವು ಸ್ವತಂತ್ರ ನೆಲೆಗಳಾಗಿದ್ದರೂ ಸಮೀಪದ ಹಳ್ಳಿಯ ಮಜಿರೆ ಹಳ್ಳಿಗಳಾಗಿಯೇ ಪರಿಗಣಿತವಾಗಿವೆ. ನಾನು ಆಯ್ಕೆ ಮಾಡಿಕೊಂಡ ಉತ್ತರ ಕನ್ನಡ ಜಿಲ್ಲೆಯ ಮೂರು ತಾಲೂಕುಗಳಲ್ಲಿ ಎರಡೆರಡು ವಾಡೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ ಅವುಗಳೆಂದರೆ,

ಯಲ್ಲಾಪುರ ತಾಲೂಕು ಕಿರುವತ್ತಿ ಮತ್ತು ಹೊಸಳ್ಳಿ

ಹಳಿಯಾಳ ತಾಲೂಕು ವಿಟ್ನಾಳ ಮತ್ತು ಅಂಬಾವಾಡೆ

ಮುಂಡಗೋಡು ಮೈನಳ್ಳಿ ಮತ್ತು ಬಡ್ಡಿಗೇರಿ

ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿರುವ ಮೇಲ್ಕಂಡ ವಾಡೆಗಳಲ್ಲದೆ. ತೀರಾ ಹಿಂದುಳಿದ ಪ್ರದೇಶಗಳಾದ ಜೋಯಿಡಾ ತಾಲೂಕಿನ ವಾಡೆಗಳಿಗೂ ಹೋಗಿ ಬಂದಿದ್ದೇನೆ. ಅವರ ಬೇರೆ ಬೇರೆ ವಾಡೆಗಳಿಗೂ ಭೇಟಿ ಕೊಟ್ಟಿದ್ದೇನೆ.

**ಅಧ್ಯಯನದ ವೈಧಾನಿಕತೆ**

ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ವೈವಿಧ್ಯಮಯ ಜಿಲ್ಲೆಯಾಗಿದೆ. ಗೌಳಿ, ಸಿದ್ಧಿ, ಕುಣಬಿ, ಗ್ರಾಮೊಕ್ಕಲು, ಮುಕ್ರಿ, ಅಗೇರ, ಕರೆಒಕ್ಕಲ, ಹಸಲ ಮುಂತಾದ ಜನ ಸಮುದಾಯಗಳು ಉತ್ತರ ಕನ್ನಡ ಜಿಲ್ಲೆಯ ಜನ ವೈವಿಧ್ಯ ಸಿರಿವಂತಿಕೆಯನ್ನು ಹೆಚ್ಚಿಸಿವೆ. ಅದರಲ್ಲಿ ಗೌಳಿಗರು ವಿಶೇಷವಾಗಿ ಕಂಡುಬರುತ್ತಾರೆ. ತಮ್ಮ ಅಪರೂಪದ ಉಡುಗೆ-ತೊಡುಗೆ ಅನ್ಯ ಜೀವನ ವಿಧಾನಗಳಿಂದ ಗೌಳಿಗರು ಭಿನ್ನವಾಗಿ ಕಾಣುತ್ತಾರೆ. ಅದರಲ್ಲೂ ಗೌಳಿಗರ ಮಹಿಳೆಯರ ಸದರಿ ಸಮುದಾಯದ ಸಾಂಸ್ಕೃತಿಕ ಚೈತನ್ಯವನ್ನು ಜೀವಂತವಾಗಿಟ್ಟುಕೊಂಡು ಬಂದವರು. ಪ್ರಸ್ತುತ ನಾನು ಗೌಳಿಗರ ಮಹಿಳೆಯರ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡಲು ಉದ್ದೇಶಿಸಿದ್ದೆ. ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗಿನ ಅಧ್ಯಯನ ವಿಧಾನಗಳನ್ನು ಅನುಸರಿಸಲಾಗಿದೆ.

೧. **ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ** : ವಸಾಹತು ಆಡಳಿತದಲ್ಲಿ ಇಲ್ಲಿಯವರೆಗೆ ಗೌಳಿಗರ ಕುರಿತು ನಡೆದಿರುವ ಅಧ್ಯಯನಗಳನ್ನು ಪರಾಮರ್ಶಿಸಲಾಗಿದ್ದ ಜೊತೆಗೆ ಗೌಳಿಗರ ಮೌಖಿಕ ಸಾಹಿತ್ಯವನ್ನು ಪ್ರಧಾನ ಆಕರವೆಂದು ಪರಿಗಣಿಸಲಾಗಿದೆ.

೨. **ಚಾರಿತ್ರಿಕ ವಿಧಾನ** ಲಭ್ಯ ಮೌಖಿಕ ಮತ್ತು ಲಿಖಿತ : ಸಾಹಿತ್ಯಕ ಆಕರಗಳ ಮೂಲಕ ಗೌಳಿಗ ಸಮಾಜದ ಮತ್ತು ಗೌಳಿಗ ಮಹಿಳೆಯರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳನ್ನು ಗತ ಲೌಕಿಕ ಅಧ್ಯಯನ ವಿಧಾನದ ಮೂಲಕ ಅಧ್ಯಯನ ಮಾಡಲಾಗಿದೆ. ಇದಕ್ಕಾಗಿ ಗೌಳಿಗರ ಮೌಖಿಕ ಸಾಹಿತ್ಯ, ಆಚರಣೆ, ಆರಾಧ್ಯಪರಂಪರೆ, ಸ್ಮಾರಕಗಳು, ವಿಧಿನಿಷೇಧಗಳನ್ನು ಪ್ರಧಾನ ಆಕರಗಳನ್ನಾಗಿ ಮತ್ತು ಲಿಖಿತ ಆಕರಗಳನ್ನು ಅನುಷಂಗಿಕವಾಗಿ ಬಳಸಿಕೊಳ್ಳಲಾಗಿದೆ.

೩. **ಪ್ರಶ್ನಾವಳಿ ವಿಧಾನ** : ಗೌಳಿಗ ಮಹಿಳೆಯರ ವರ್ತಮಾನದ ಸ್ಥಿತ್ಯಂತರವನ್ನು ಅರ್ಥಮಾಡಿಕೊಳ್ಳಲು ನಿಶ್ಚಿತ ಪ್ರಶ್ನಾವಳಿಯನ್ನು ರೂಪಿಸಲಾಗಿದ್ದು ಸದರಿ ಪ್ರಶ್ನಾವಳಿಯನ್ನು ಗೌಳಿಗ ಮಹಿಳೆಯರ ಮನೆ ಮನೆಯ ಸಮಗ್ರ ವಿವರಗಳನ್ನು (Household Survy) ಸಂಗ್ರಹಿಸಲು ಬಳಸಲಾಯಿತು. ಈ ಪ್ರಶ್ನಾವಳಿಗಳ ಮೂಲಕ ದೊಡ್ಡಿಗಳಲ್ಲಿನ ಗೌಳಿ ಕುಟುಂಬಗಳ ಸಾಮಾನ್ಯ ವಿವರಗಳನ್ನು ಸಂಗ್ರಹಿಸಲಾಯಿತು. ಈ ಮಾಹಿತಿ ಸಂಗ್ರಹಕ್ಕೆ ಗೌಳಿಗರ ಮಾದರಿ (Sample) ವಾಡೆಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯ ಮಾಡಲಾಗಿದೆ.

೪. **ಗುಂಪು ಚರ್ಚೆ ಮತ್ತು ಸಂದರ್ಶನ** : ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗೌಳಿಗರ ಆಯ್ಕೆ ವಾಡೆಗಲ್ಲಿನ ಮಹಿಳೆಯರನ್ನು ಮತ್ತು ವ್ಯಕ್ತಿಗಳನ್ನು ಸಂದರ್ಶನ ಜೊತೆಗೆ ಮಹಿಳೆಯರನ್ನು ಕೆಲವು ಗುಂಪಾಗಿಸಿ ನಿಶ್ಚಿತ ಪ್ರಶ್ನಾವಳಿಯ ಮೂಲಕ ಗುಂಪು ಚರ್ಚೆಗಳನ್ನು ಸಾಧ್ಯವಾಗಿಸಿ ಅವರಿಂದ ಮಾಹಿತಿ ಪಡೆಯಲಾಗಿದೆ. ಇದರಿಂದ ವ್ಯಕ್ತಿಗತ ಮತ್ತು ಸಾಮುದಾಯಿಕ ಜನಾಭಿಪ್ರಾಯಗಳನ್ನು ಪಡೆಯಲು ಸಾಧ್ಯವಾದಂತಾಗಿದೆ.

೫. **ಅವಲೋಕನ** : ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗೌಳಿಗರ ಜೊತೆಯಲ್ಲಿಯೇ ಕೆಲವು ದಿನ ಇದ್ದುದರಿಂದ ಅಮೂಲ್ಯ ತಿಳುವಳಿಕೆಯನ್ನು ಪಡೆಯಲು ಸಾಧ್ಯವಾಗಿದೆ. ಸಹಭಾಗಿತ್ವ ಅವಲೋಕನ ವಿಧಾನವು ಅಂಕಿ–ಅಂಶಗಳು ಕೊಡುವ ತಿಳುವಳಿಕೆಗಿಂತ ಹೆಚ್ಚು ಆಳವಾದ ತಿಳುವಳಿಕೆ ಯನ್ನು ನೀಡಬಲ್ಲದು ಅಧ್ಯಯನಕ್ಕೆ ಒಳಪಡುವ ಗೌಳಿಗರ ಮಾದರಿ ವಾಡೆಗಳಲ್ಲಿ ಕೆಲವು ದಿನ ವಾಸ್ತವ್ಯ ಹೂಡುವುದರ ಮೂಲಕ ಗೌಳಿಗರ ಜೀವನ ವಿಧಾನ ಮತ್ತು ಗೌಳಿಗ ಮಹಿಳೆಯರು ಮುಖಾಮುಖಿ ಆಗಿಸುವ ಸಾಮಾಜಿಕಾರ್ಥಿಕ ಸಂಘರ್ಷಗಳನ್ನು ಅರ್ಥಮಾಡಿಕೊಳ್ಳಲು ಯತ್ನಿಸಲಾಗಿದೆ.

೬. **ವ್ಯಕ್ತಿ ಅಧ್ಯಯನ ವಿಧಾನ** : ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗೌಳಿಗರ ಆಯ್ಕೆ ವಾಡೆಗಳಲ್ಲಿನ ಮಹಿಳೆಯರನ್ನು ಮತ್ತು ವ್ಯಕ್ತಿಗಳನ್ನು ಸಂದರ್ಶನ ಮಾಡಲಾಗಿದೆ. ವ್ಯಕ್ತಿ ಅಧ್ಯಯನಕ್ಕೆ ೧೦೦ ಜನ ಗೌಳಿ ಮಹಿಳೆಯರನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಈ ಅಧ್ಯಯನಕ್ಕೆ ಗೃಹಿಣಿಯರು, ಪಶುಪಾಲನೆ ಮಾಡುವವರು, ಡೇರಿಗೆ ಕೆಲಸಕ್ಕೆ ಹೋಗುವವರು, ಕೂಲಿಗೆ ಹೋಗುವವರು ಹಾಗೂ ಕಾಲೇಜಿಗೆ ಹೋಗುವರನ್ನು ಆಯ್ಕೆಮಾಡಿಕೊಳ್ಳಲಾಗಿದೆ.

೭. **ನಮೂನೆಯ ವಿಧಾನ :** ಗೌಳಿಗರು ಕರ್ನಾಟಕದ ಅರಣ್ಯ ಪ್ರದೇಶ ಹೆಚ್ಚು ಇರುವ ಕಡೆ ಮಾತ್ರ ನೆಲೆಸಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಇವರ ಪ್ರಮಾಣ ಹೆಚ್ಚಿದೆ. ಶಿವಮೊಗ್ಗ, ಚಿಕ್ಕಮಗಳೂರು, ಧಾರವಾಡ, ಕಡೆಗಳಲ್ಲಿ ಕಡಿಮೆ ಪ್ರಮಾಣದಲ್ಲಿದ್ದಾರೆ. ಮಾದರಿ ವಿಧಾನದ ಮೂಲಕ ಆಯ್ಕೆ ಮಾಡಿಕೊಳ್ಳಲಾಗಿದೆ. ಉತ್ತರ ಕನ್ನಡದಲ್ಲಿ ನೆಲೆಸಿರುವ ಗೌಳಿ ಸಮುದಾಯದ ಮೂರು ತಾಲೂಕುಗಳಲ್ಲಿ ಎರೆಡೆರಡು ವಾಡೆಗಳನ್ನು ಅವುಗಳ ವೈಶಿಷ್ಟ್ಯತೆಗಳಿಗೆ ಅನುಗುಣವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ಪ್ರಬಂಧವು ಒಟ್ಟು ಐದು ಪ್ರಮುಖ ಅಧ್ಯಾಯಗಳನ್ನು ಮತ್ತು ಸಮಾರೋಪವನ್ನು ಹೊಂದಿರುತ್ತವೆ. ಮೊದಲ ಅಧ್ಯಾಯವು ಒಟ್ಟಾರೆ ಮಹಾಪ್ರಬಂಧದ ತಾತ್ವಿಕ ನಿಲುವನ್ನು ಸ್ಥೂಲವಾಗಿ ವಿವರಿಸುತ್ತದೆ. ಇಲ್ಲಿಯವರೆಗೆ ಕನ್ನಡದಲ್ಲಿ ಮಹಿಳೆಯರನ್ನು ಕುರಿತು ನಡೆದಿರುವ ಚರ್ಚೆಗಳನ್ನು ಗಮನದಲ್ಲಿರಿಸಿಕೊಂಡು ಮತ್ತು ಸ್ವಾತಂತ್ರ್ಯಪೂರ್ವದ ಚಿತ್ರಣ, ವಲಸೆ ಬಂದಿರುವ ಬಗೆ, ಅದಕ್ಕೆ ಕಾರಣಗಳನ್ನು ಮತ್ತು ಪ್ರಸ್ತುತ ಅಧ್ಯಯನದ ಸೈದ್ಧಾಂತಿಕ ನಿಲುವುಗಳನ್ನು ಮೊದಲ ಅಧ್ಯಯನದಲ್ಲಿ ಸ್ಪಷ್ಟಪಡಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರಾದೇಶಿಕ ವಿವರಗಳನ್ನು ಮತ್ತು ಈ ಪ್ರಬಂಧ ಬರೆಯಲು ಅನುಸರಿಸಿದ ಅಧ್ಯಯನ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಗೌಳಿಗ ಸಮುದಾಯದ ಸಾಮಾಜಿಕ ಸ್ಥಿತಿಗತಿಯನ್ನು ಮತ್ತು ಅವರಲ್ಲಿ ಮಹಿಳೆಯರ ಪ್ರಾತಿನಿಧ್ಯವನ್ನು ವಿವರಿಸಲಾಗಿದೆ. ಗೌಳಿಗ ಕುಟುಂಬದಲ್ಲಿನ ಹೆಣ್ಣಿನ ಸ್ಥಾನಮಾನ, ಕುಟುಂಬದ ನಿರ್ವಹಣೆ ಮತ್ತು ಒಟ್ಟಾರೆ ಗೌಳಿ ಸಮಾಜದ ನಿರ್ಣಾಯಕ ಅಧಿಕಾರವಲಯದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಹಾಗೂ ಬದಲಾವಣೆಯನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ವರ್ತಮಾನದ ಸಾಮಾಜಿಕ ಸ್ಥಾನಮಾನವನ್ನು ವಿವರಿಸಲು ಪ್ರಯತ್ನಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗೌಳಿಗರ ವಿಭಿನ್ನ ಪ್ರದೇಶಗಳ ದೊಡ್ಡಿಗಳ ಮನೆ ಮನೆಗೆ ಗಣತಿ ಮತ್ತು ಸಾಂದರ್ಭಿಕ ಅಧ್ಯಯನ ವಿಶೇಷ ಅಂಕಿಅಂಶಗಳನ್ನು ಮತ್ತು ವಿವರಗಳನ್ನು ಮುಖ್ಯ ವಾಗಿಟ್ಟುಕೊಂಡು ಈ ಅಧ್ಯಾಯವನ್ನು ಬರೆಯಲಾಗಿದೆ. ಗೌಳಿಮಹಿಳೆಯರ ಪಾರಂಪರಿಕ ವೃತ್ತಿ ಮತ್ತು ಅವರ ಚಾರಿತ್ರಿಕ ರೂಪಾಂತರಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಅರಣ್ಯದ ಉಪ ಉತ್ಪನ್ನ ಮತ್ತು ಗೌಳಿಗ ಮಹಿಳೆಯರ ಪಾರಂಪರಿಕ ಹಕ್ಕುಗಳು ಹಾಗೂ ಅರಣ್ಯ ಇಲಾಖೆಯ ಸರ್ಕಾರಿ ಕಾನೂನುಗಳ ನಡುವಿನ ಸಂಘರ್ಷಾತ್ಮಕ ನಿಲುವುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ನಾಲ್ಕನೇ ಅಧ್ಯಾಯವು ಶಿಕ್ಷಣದ ಬಗೆಗಿನ ವಿವರ ಆಗಿದೆ. ಪ್ರಾಚೀನ ಕಾಲದಿಂದ ಹಿಡಿದು ಬ್ರಿಟಿಷರ ಕಾಲಾವಧಿಯವರೆಗೆ ಮಹಿಳೆಯರ ಶಿಕ್ಷಣ ಹೇಗಿತ್ತು ಎನ್ನುವುದನ್ನು ವಿಶ್ಲೇಷಿಸಲಾಗಿದೆ. ಸ್ವಾತಂತ್ರ್ಯನಂತರದ ಸರ್ಕಾರದ ಯೋಜನೆಗಳಿಂದ ಮಹಿಳೆಯರ ಶಿಕ್ಷಣದಲ್ಲಿ ಅದ ಬದಲಾವಣೆಗಳೇನು ಅರಣ್ಯದಲ್ಲಿ ವಾಸಮಾಡುತ್ತಿದ್ದರಿಂದ ಈ ಸಮುದಾಯಕ್ಕೆ ಶಿಕ್ಷಣದ ಅವಕಾಶಗಳೇ ಇಲ್ಲದಿರುವುದು, ಇವತ್ತಿನ ಕಡ್ಡಾಯ ಶಿಕ್ಷಣದಿಂದ ಸ್ವಲ್ಪ ಮಟ್ಟಿನ ಬದಲಾವಣೆ ಎನ್ನುವುದು ಹೇಗೆ ಆಗುತ್ತಿವೆ. ಔಪಚಾರಿಕ ಶಿಕ್ಷಣದ ಕಡೆ ಅವರ ಒಲವುಗಳೇನು ಇತ್ಯಾದಿ ವಿವರಗಳನ್ನು ನೀಡಲು ಪ್ರಯತ್ನಿಸಲಾಗಿದೆ.

ಐದನೆ ಅಧ್ಯಾಯವು ಆರೋಗ್ಯ ಸಂಬಂಧಿ ವಿಚಾರವಾಗಿದೆ. ಪಾರಂಪರಿಕ ವೈದ್ಯ ವೃತ್ತಿಯನ್ನು ಅನುಸರಿಸಿಕೊಂಡು ಬರುತ್ತಿರುವ ಈ ಸಮುದಾಯದಲ್ಲಿ ಆಧುನಿಕ ವೈದ್ಯ ಪದ್ಧತಿ ಕಾಣುತ್ತಿವೆಯೇ ಬದಲಾವಣೆ ಎನ್ನುವುದು ಕಾಣಬಹುದಾ ಎನ್ನುವುದನ್ನು ವಿವರಿಸಿದ್ದೇನೆ. ಇವತ್ತಿನ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಯಾವ ರೀತಿಯಲ್ಲಿ ಹಾಗೂ ಸ್ವಯಂ ಸೇವಾಸಂಸ್ಥೆಗಳು ಹೇಗೆ ಇವರ ಆರೋಗ್ಯ ಸುಧಾರಣೆಯಲ್ಲಿ ಕಾರ್ಯ ನಿರ್ವಹಿಸುತ್ತವೆ ಅದು ಅವರಿಗೆ ತಲುಪುತ್ತಿದೆಯೇ ಎನ್ನುವುದನ್ನು ವಿಶ್ಲೇಷಣಾತ್ಮಕವಾಗಿ ವಿವರಿಸಲು ಪ್ರಯತ್ನಿಸಿದ್ದೇನೆ. ಜನಪದ ವೈದ್ಯ ಮತ್ತು ಆಧುನಿಕ ವೈದ್ಯ ಪದ್ಧತಿಗಳ ನಡುವೆ ಆಗುತ್ತಿರುವ ಸಂಘರ್ಷಗಳು ಇದರಿಂದ ಉಂಟಾಗುತ್ತಿರುವ ಸಮಸ್ಯೆಗಳೇನು ಎಂದು ತಿಳಿಯುವ ಪ್ರಯತ್ನ ಮಾಡಿದ್ದೇನೆ.

ಸಮಾರೋಪವು ಈ ಎಲ್ಲಾ ಅಧ್ಯಾಯನಗಳನ್ನು ಸ್ಥೂಲವಾಗಿ ವಿವರಿಸುತ್ತವೆ ಮತ್ತು ಒಟ್ಟಾರೆ ಅಧ್ಯಯನದ ಫಲಿತಗಳನ್ನು ಸಮಾರೋಪದಲ್ಲಿ ನೀಡಲಾಗಿದೆ.

**ಇದುವರೆಗೆ ನಡೆದಿರುವ ಸಮೀಕ್ಷೆ**

ಉತ್ತರ ಕನ್ನಡ ಜಿಲ್ಲೆಯ ಗೌಳಿ ಸಮುದಾಯದ ಕುರಿತು ಇದುವರೆಗೆ ವ್ಯಾಪಕವಾದ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ನಮಗೆ ಗೌಳಿಗರ ಬಗ್ಗೆ ಮಾಹಿತಿ ಸಿಗುವುದು ೧೮೮೨ರಲ್ಲಿ ಜೇಮ್ಸ್ ಎಮ್ ಕೊಂಬೆಲ್‌ನಿಂದ ರಚಿತವಾದ Gazetter of the Bombay presidency Kanara District ಇದರಲ್ಲಿ ಗೌಳಿಗರ ಬಗ್ಗೆ ಮಾಹಿತಿಸಿಗುತ್ತವೆ.

ಆರ್.ವಿ. ಎಂಥೋವನ್ ಅವರ The Tribes and Castes of Bombay, 1922, (ದ್ವಿ.ಮು. ೧೯೭೫) ಮುಂಬಯಿ ಪ್ರಾಂತ್ಯದ ಜಾತಿ ಮತ್ತು ಬುಡಕಟ್ಟುಗಳ ಬಗೆಗೆ ಸಾಕಷ್ಟು ಮಾಹಿತಿ ಒದಗಿಸುತ್ತವೆ. The Mysore Tribes and Castes Vol-III, 1930 (ಮ.ಮು.೧೯೮೮) ಗೌಳಿಗರ ಬಗ್ಗೆ ಸಂಪೂರ್ಣ ಮಾಹಿತಿ ಸಿಗುತ್ತವೆ. The People of India Karnataka Vol-xxvi, part-2, 2003, Antropological survey of India ಗೌಳಿಗರ ಬಗ್ಗೆ ಸಮಗ್ರವಾದ ಮಾಹಿತಿಯನ್ನು ನೀಡುತ್ತದೆ. Hindu Tribes and Castes Vol-II, CASMO, 1879, pub New Delhi, (ದ್ವಿ.ಮು.) 1987. ಇದರಲ್ಲಿ ಗೌಳಿಗರ ಮೂರು ಉಪಜಾತಿಗಳಾದ ೧. ಅಹಿರ್ ಗೌಳಿ ೨. ಕೊಂಕಣಿ ಗೌಳಿ ೩. ಲಿಂಗಾಯತ ಗೌಳಿ ಇವರ ಬಗ್ಗೆ ಉಲ್ಲೇಖ ಇದೆ. Encyclopiedia Indian Tribes and Castes Vol-VI, CASMO Pub. New Dehli, 2004 ಇವರಲ್ಲಿ ಗೌಳಿಗರ ಪ್ರಕಾರಗಳನ್ನು ಹೇಳಿದೆ. ಗೌಳಿಗರ ಬಗ್ಗೆ ಸಮಗ್ರ ಮಾಹಿತಿ ಇದೆ. ಅಂಬಳಿಕೆ ಹಿರಿಯಣ್ಣ ಅವರು ೧೯೮೩ರಲ್ಲಿ ಐ.ಬಿ.ಎಚ್. ಪ್ರಕಾಶನ ಪ್ರಕಟಿಸಿದ ಕಚ್ಚೆ ಗೌಳಿಗರು ಇದು ಜಾತಿ ಮತ್ತು ಬುಡಕಟ್ಟುಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ. Caste and Southern India Vol-II, 1987 ಗೌಳಿಗರ ಬಗ್ಗೆ ಮಾಹಿತಿ ಸಿಗುವುದು. ಕರ್ನಾಟಕ ರಾಜ್ಯಕೋಶ - ೮ ಜನಸಮುದಾಯ ಸಂಪುಟ ಪ್ರಸಾರಾಂಗ ಗೌಳಿಗರ ಸ್ವಲ್ಪ ಮಾಹಿತಿ ಸಿಗುತ್ತವೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ೧೯೯೩ರಲ್ಲಿ ಉಪಸಂಸ್ಕೃತಿಯ ಅಧ್ಯಯನ ಮಾಲೆಯ

ಅಡಿ ಪ್ರಕಟವಾದ ಕಚ್ಚೆಗೌಳಿಗರ ಸಂಸ್ಕೃತಿ ಅಂಬಳಿಕೆ ಹಿರಿಯಣ್ಣರವರ ಈ ಕೃತಿ ಈ ಸಮುದಾಯದ ಬಗ್ಗೆ ಸಮಗ್ರವಾದ ಮಾಹಿತಿಯನ್ನು ನೀಡುತ್ತದೆ.

ಪ್ರೊ. ಎಚ್.ಜೆ. ಲಕ್ಕಪ್ಪಗೌಡ ಅವರ ಪ್ರಧಾನ ಸಂಪಾದಕರಾಗಿ ಕರ್ನಾಟಕ ಬುಡಕಟ್ಟುಗಳು ಸಂಪುಟ-೧ರಲ್ಲಿ ಡಾ. ಎಚ್.ಎಚ್.ಎಂ. ಮಹೇಶ್ವರಯ್ಯನವರು ಬರೆದ ಲೇಖನದಲ್ಲಿ ಗೌಳಿಗರ ಬಗ್ಗೆ ಸಂಪೂರ್ಣ ಮಾಹಿತಿಸಿಗುತ್ತದೆ. ೧೯೭೭ರಲ್ಲಿ ಹಿಂದುಳಿದ ವರ್ಗಗಳ ಆಯೋಗ - ಹಾವನೂರು ಆಯೋಗದಲ್ಲಿ ಗೌಳಿಗರ ಬಗ್ಗೆ ವಿವರಣೆ ನೀಡಿದ್ದಾರೆ. ಡಾ. ಕೃಷ್ಣನಂದ ಕಾಮತ್ ಅಕ್ಷತ ನಾವು ನಮ್ಮವರು ರೀತಿ ರಿವಾಜುಗಳು, ೧೯೯೯, ಎಂಬ ಕಿರುಹೊತ್ತಿಗೆಯಲ್ಲಿ ಗೌಳಿಗರ ಬದುಕು, ದುಡಿಮೆ, ಸಂಪ್ರದಾಯ ಮುಂತಾದ ವಿಷಯಗಳನ್ನು ಚರ್ಚಿಸಿದ್ದಾರೆ. ಕರ್ನಾಟಕ ಜನಪದ ಕಲೆಗಳ ಕೋಶ, ೧೯೯೬ಎಂಬ ಬೃಹತ್ ಗ್ರಂಥದಲ್ಲಿ ಕರ್ನಾಟಕದ ಸಮುದಾಯಗಳ ಜನಪದ ಕಲೆಗಳನ್ನು ಪರಿಚಯಿಸಿದ್ದಾರೆ. ಅದರಲ್ಲಿ ಗೌಳಿಗರ ಹೋಳಿ ಕುಣಿತದ ಬಗ್ಗೆ ಹೇಳಲಾಗಿದೆ. ಪ್ರೊ. ಕರಿಗೌಡ ಬೀಚನಹಳ್ಳಿ, ಕರಕುಶಲಕಲೆಗಳು, ೨೦೦೦, ಎಂಬ ವಿಶ್ವಕೋಶ ೨ರಲ್ಲಿ ಕರ್ನಾಟಕ ಜನಪದ ಪ್ರದರ್ಶನ ಕಲೆಗಳ ವೇಷಭೂಷಣಗಳು ಎಂಬ ಲೇಖನದಲ್ಲಿ ಗೌಳಿಗರ ವೇಷಭೂಷಣದ ಬಗ್ಗೆ ವಿವರಿಸಲಾಗಿದೆ.

ಡಾ. ಚಕ್ಕರೆ ಶಿವಶಂಕರ, ಜಾನಪದ ಕಲಾ ಪ್ರವೇಶ ಎಂಬ ಗ್ರಂಥದಲ್ಲಿ ಗೌಳಿಗರ ಕುಣಿತಗಳ ಬಗ್ಗೆ ಬರೆದಿದ್ದಾರೆ. ಪ್ರೊ. ಹಿ.ಚಿ. ಬೋರಲಿಂಗಯ್ಯ ಗಿರಿಜನ ನಾಡಿಗೆ ಪಯಣ, ೧೯೯೧, ಗಿರಿಜನರು, ೧೯೯೪ ಇವುಗಳಲ್ಲಿ ಗೌಳಿಗರ ಬಗ್ಗೆ ಕುರಿತು ಮಾಹಿತಿ ಸಿಗುತ್ತದೆ. ಡಾ. ಬಿ.ಎಸ್.ಸ್ವಾಮಿ, ಜಾನಪದ ಐಸಿರಿ, ೨೦೦೬, ಗೌಳಿಗರ ಬಗ್ಗೆ ಮಾಹಿತಿ ಲಭಿಸುತ್ತದೆ. ಸಂಶೋಧಕರಾದ ಎನ್. ಸಿಲ್ವಾ ಅವರು ೧೯೬೪, ಕಾರವಾರ ಜಿಲ್ಲಾ ದರ್ಶನದಲ್ಲಿ ಗೌಳಿಗರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಕರ್ನಾಟಕ ಸ್ಟೇಟ್ ಗೆಝೇಟಿಯರ್‌ನಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಪರಿಚಯಿಸುವಾಗ ಗೌಳಿ ಸಮುದಾಯದ ಬಗ್ಗೆ ಕಿರುಪರಿಚಯವನ್ನು ನೀಡಿದೆ. ಮೈಸೂರಿನ ಉತ್ತರ ಕನ್ನಡದ ಸಾಂಸ್ಕೃತಿಕ ಸಂಘ ವೈಜಯಂತಿ ಎಂಬ ಸಂಪುಟದಲ್ಲಿ ಉತ್ತರ ಕನ್ನಡದ ೨೩ ಸಮುದಾಯಗಳ ಸಾಂಸ್ಕೃತಿಕ, ಸಾಹಿತ್ಯ, ಆರ್ಥಿಕ, ಮಾಹಿತಿಯನ್ನು ನೀಡುತ್ತವೆ. ಅದರಲ್ಲಿ ಗೌಳಿಗರ ಬಗ್ಗೆ ಮಾಹಿತಿ ಸಿಗುತ್ತದೆ.

ಪ್ರಮೋದ ಹೆಗಡೆಯವರು ೧೯೯೪ರಲ್ಲಿ ಪ್ರಕಟವಾದ 'ಅಡವಿಯಲ್ಲಿ ಬಿಡದಿ ಮಾಡಿರುವ ಗೌಳಿಗರು' ಎಂಬ ಪುಸ್ತಕದಲ್ಲಿ ಮಾಹಿತಿಯನ್ನು ನೀಡಿದ್ದಾರೆ. ಬೀರಣ್ಣ ನಾಯಕ ಮೊಗಟಾರವರ ೧೯೯೪ರಲ್ಲಿ ಪ್ರಕಟವಾದ 'ಹಾಲಿನ ಹೊನಲ ಗೌಳಿಗರು' ಎಂಬ ಪುಸ್ತಕದಲ್ಲಿ ಇವರ ಬಗ್ಗೆ ಮಾಹಿತಿ ಸಿಗುತ್ತವೆ. ಕನ್ನಡ ವಿಶ್ವವಿದ್ಯಾಲಯ ಹಂಪಿ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ. ಗಂಗಾಧರ ದೈವಜ್ಞ ಅವರು ಗೌಳಿಗರ ಮೇಲೆ ಯೋಜನಾಕಾರ್ಯ(project work)ವನ್ನು ಮಾಡಿದ್ದಾರೆ. ಹಾಗೂ ಕರ್ನಾಟಕ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗದ ಖಾನ್‌ರವರು ಗೌಳಿಗರ ಬಗ್ಗೆ ಯೋಜನಾ ಕಾರ್ಯ(project work)ವನ್ನು ಮಾಡಿದ್ದಾರೆ. ಬುಡಕಟ್ಟು ಅಧ್ಯಯನ ಪತ್ರಿಕೆಯಲ್ಲಿ ವಿ.ಎಸ್. ಪಾಟೀಲರ

ಲೇಖನದಲ್ಲಿ 'ಗೌಳಿಗರ ವಲಸೆ' ಬಗ್ಗೆ ಸ್ವಲ್ಪ ಮಾಹಿತಿ ಸಿಗುತ್ತದೆ. ಸುಧಾ, ವಾರಪತ್ರಿಕೆ ಮತ್ತು ಉದಯವಾಣಿ, ಪ್ರಜಾವಾಣಿ ದಿನಪತ್ರಿಕೆಗಳಲ್ಲಿ 'ಗೌಳಿಗರ ದಸರಾ ಹಬ್ಬ'ದ ಕುರಿತು ಲೇಖನವನ್ನು ಕಾಣಬಹುದು. ತರಂಗ ಮತ್ತು ಸಿರಿಸಮೃದ್ಧಿ ಪತ್ರಿಕೆಯಲ್ಲಿ ಇವರ 'ಪಶುಪಾಲನೆ'ಯ ಬಗ್ಗೆ ದನಕರುಗಳಿಗೆ ಬರುವ ರೋಗಗಳನ್ನು ನಿಯಂತ್ರಿಸುವ ವಿಶಿಷ್ಟ ಪ್ರಯೋಗಗಳ ಬಗ್ಗೆ ಪುಟ್ಟ ಲೇಖನ ಕಾಣಬಹುದು.

ಮೇಲಿನ ಬಹುತೇಕ ಎಲ್ಲಾ ಗ್ರಂಥಗಳು ತಮ್ಮ ಅಧ್ಯಯನದ ಮಿತಿಯನ್ನೊಳಗೊಂಡು ಗೌಳಿ ಸಮುದಾಯವನ್ನು ಅಧ್ಯಯಿಸಿ ವಿಪುಲ ತಿಳುವಳಿಕೆಯನ್ನು ನೀಡಿವೆ. ಹಾಗೆಯೇ ನನ್ನ ಸಂಶೋಧನೆಗೆ ದಾರಿದೀಪವಾಗಿವೆ. ಪ್ರಸ್ತುತ ಎಲ್ಲಾ ಕೃತಿಗಳನ್ನು ಗಮನದಲ್ಲಿಟ್ಟುಕೊಂಡು ಹೇಳಬೇಕೆಂದರೆ ಗೌಳಿಗ ಮಹಿಳೆಯರ ಕುರಿತ ಕೇವಲ ಪ್ರಾಸಂಗಿಕವಾಗಿ ಮಾತ್ರ ಚರ್ಚಿಸಲಾಗಿದೆ. ಹೊರತು ಗೌಳಿ ಮಹಿಳೆಯರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳನ್ನು ಹಾಗೂ ಬದಲಾವಣೆಯಾಗಿ ವರ್ತಮಾನದಲ್ಲಿ ಅವರ ಸ್ಥಿತಿಗತಿ ಸ್ಥಾನಮಾನ ಇವು ರೂಪಗೊಂಡಿರಲು ಚಾರಿತ್ರಿಕ ಹಿನ್ನೆಲೆಯನ್ನು ಕೂಡ ಅವಲೋಕಿಸಿ ಅಧ್ಯಯನ ನಡೆಸಲು ಪ್ರಯತ್ನಿಸಲಾಗಿದೆ.

**೧.೧ ಭೌಗೋಳಿಕ ಹಿನ್ನೆಲೆ**

ಮೂಲತಃ ಕರ್ನಾಟಕದವರಲ್ಲವ ಗೌಳಿಗರು ಒಂದು ಶತಮಾನದ ಹಿಂದೆ ಪಕ್ಕದ ಮಹಾರಾಷ್ಟ್ರ ಹಾಗೂ ಗೋವಾ ರಾಜ್ಯಗಳಿಂದ ಕರ್ನಾಟಕಕ್ಕೆ ವಲಸೆ ಬಂದವರಾಗಿದ್ದಾರೆ. ಈ ಬುಡಕಟ್ಟು ಕರ್ನಾಟಕಕ್ಕೆ ಯಾವಾಗ ಬಂದಿತೆಂಬ ನಿಖರ ದಾಖಲೆಗಳಾವವೂ ಲಭ್ಯವಿಲ್ಲದಿದ್ದರೂ ಮೂರು ನಾಲ್ಕು ತಲೆಮಾರುಗಳಿಂದ ಕರ್ನಾಟಕದಲ್ಲಿ ವಾಸಿಸುತ್ತಿರುವ ಬಗ್ಗೆ ಅವರಿಂದಲೇ ಮಾಹಿತಿ ದೊರೆಯುತ್ತದೆ. ಗೌಳಿಗರು ಈಗಲೂ ತಮ್ಮ ಮೂಲನೆಲೆಯೊಂದಿಗೆ ತಮ್ಮ ಗಾಢವಾದ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ಕರ್ನಾಟಕದ ಅನೇಕ ಬುಡಕಟ್ಟುಗಳು ಮೂಲದ ಆಂಧ್ರಪ್ರದೇಶ ಹಾಗೂ ತಮಿಳುನಾಡಿನ ಸಂಬಂಧವನ್ನು ಕಡಿದುಕೊಂಡು ಕರ್ನಾಟಕದಲ್ಲಿ ಬದುಕುತ್ತಿವೆ. ಗೌಳಿಗರು ಮಾತ್ರ ತಮ್ಮ ಮೂಲ ನೆಲೆ ಹಾಗೂ ವಂಶಜರ, ಬಂಧುಬಾಂಧವರನ್ನು ನೆನಪಿಸಿಕೊಂಡು ಪದೇಪದೇ ಹೋಗಿ ಬರುತ್ತಿರುತ್ತಾರೆ. ಮಹಾರಾಷ್ಟ್ರದ ಖಂಡೋಬ ಹಾಗೂ ಇತರ ದೈವಗಳ ಆರಾಧನೆಯಲ್ಲಿ ತೊಡಗಿರುವ ಅವರು ತಮ್ಮನ್ನು ಧನಗರ್ ಜಾತಿಯವರು ಎಂದು ಕರೆದುಕೊಳ್ಳುತ್ತಾರೆ. ಕನ್ನಡಿಗರು ಇವರನ್ನು ಗೌಳಿಗರು ಎಂದು ಕರೆಯುತ್ತಾರೆ. ಗೌಳಿಗರ ಹೆಂಗಸರು ಸೀರೆಯನ್ನು ಕಚ್ಚೆಯ ರೂಪದಲ್ಲಿ ಹಾಕಿಕೊಳ್ಳುವುದರಿಂದ ಕಚ್ಚೆಗೌಳಿಗರು ಎಂತಲೂ, ಮರಾಠಿ ಭಾಷೆಯನ್ನು ಮಾತನಾಡುವುದರಿಂದ ಕಚ್ಚೆ ಮರಾಠರು ಎಂತಲೂ ಕರೆಯುತ್ತಾರೆ. ಹೈನುಗಾರಿಕೆಯನ್ನು ವೃತ್ತಿಯನ್ನಾಗಿಟ್ಟುಕೊಂಡು ಕರ್ನಾಟಕದ ದಟ್ಟಡವಿಯಲ್ಲಿ ವಾಸಿಸುವ ಇವರನ್ನು ಕಚ್ಚೆಗೌಳಿಗರೆಂದೇ ಕರೆಯುವುದು ಹೆಚ್ಚು ವಾಡಿಕೆಯಾಗಿದೆ. ಕೆಲವು ಕಡೆ ಕಚ್ಚೆ ಧಂಗರೆಂದೂ ಕರೆಯುತ್ತಾರೆ.

ಕರ್ನಾಟಕದಲ್ಲಿ ಗೌಳಿಗರು ಸಾಮಾನ್ಯವಾಗಿ ದಟ್ಟಡವಿಗಳಲ್ಲಿಯೇ ತಮ್ಮ ವಾಡೆಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಶಿವಮೊಗ್ಗ, ಧಾರವಾಡ, ಬೆಳಗಾಂ, ಚಿಕ್ಕಮಗಳೂರು, ಉತ್ತರಕನ್ನಡ ಜಿಲ್ಲೆಯ ಕೆಲವು

ಭಾಗಗಳಲ್ಲಿ ಗೌಳಿಗರ ವಾಡೆಗಳಿವೆ. ಹಸಿರು ತುಂಬಿದ ಬೆಟ್ಟಗುಡ್ಡಗಳಿಂದ ಆವೃತವಾದ ಪ್ರದೇಶವನ್ನು ಆರಿಸಿಕೊಂಡು ವಾಡೆಗಳನ್ನು ನಿರ್ಮಿಸುವ ಗೌಳಿಗರು ತಾವು ಸಾಕುವ ಎಮ್ಮೆಗಳಿಗೆ ಸರಿಯಾದ ಆಹಾರ, ನೀರು ದೊರೆಯುತ್ತದೆಯೇ ಎಂಬುದನ್ನು ಖಚಿತಪಡಿಸಿಕೊಂಡೇ ಮನೆಗಳನ್ನು ನಿರ್ಮಿಸಲು ತೊಡಗುತ್ತಾರೆ.

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕು ಭದ್ರಾವತಿ, ಶಿಕಾರಿಪುರ ತಾಲೂಕಿನ ಹಾಲುಕುಣಿ, ಹಾರೆಗೊಪ್ಪ, ಕಟ್ಟಿಗೆ ಹಳ್ಳಿ, ಸಾಗರ ತಾಲೂಕಿನ ಆನಂದಪುರ ಸಮೀಪದ ಕಾಡುಗಳಲ್ಲಿ ಇವರ ನೆಲೆಗಳಿವೆ. ಚಿಕ್ಕಮಗಳೂರು ಜಿಲ್ಲೆಯ ಉಂಬಳ ಬೈಲು, ಶೆಟ್ಟಿಹಳ್ಳಿ, ಬಂಡಿಗುಂಡ, ಸಿದ್ರಳ್ಳಿ ಉತ್ತರಕನ್ನಡ ಜಿಲ್ಲೆಯ ದಾಂಡೇಲಿ, ಹಳಿಯಾಳದ ಸುತ್ತಮುತ್ತಲಿನ ಬಾಗವತಿವಾಡೆ, ಬಸಟ್ಟಿಕೊಪ್ಪವಾಡೆ, ಸಾಮ್ರಾಣಿವಾಡೆ, ಗೊಂಡಳ್ಳಿವಾಡೆ ಟಿ. ರಾಮಚಂದ್ರನಗರ, ಜಪಗಾ, ಸಾದಸಂತ, ಹಿಂಡಸಗಿರ ಅಂಬೆವಾಡೆ ವಿಟ್ನಾಣ ಹಾಗೂ ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಹಿಂಡಿಜಿಗಿರಿವಾಡೆ, ಸಂಟಿಕೊಪ್ಪ ವಾಡೆ, ಬೈಲದೂರವಾಡೆ, ಯಳವಳ್ಳಿವಾಡೆ, ಯಲ್ಲಾಪುರ ತಾಲೂಕಿನ ಹೊಸಳ್ಳಿವಾಡೆ, ಹೊನ್ನಸಗಿರಿವಾಡೆ, ಪಾಣಿಗುಂಡವಾಡೆ, ಕ್ವಾಣಮಟ್ಟಿವಾಡೆ, ತೆಂಗಿನಗಿರಿವಾಡೆ, ಮದ್ನೂರುವಾಡೆ, ಮಾದಿಕೊಪ್ಪವಾಡೆ, ಹೊಳೇನಕಟ್ಟೆವಾಡೆ, ಮಂಗ್ಯನತವರಗಿರಿವಾಡೆ, ಜೋಗಿಕೊಪ್ಪವಾಡೆ, ಕೋಳಿಗೇರೆವಾಡೆ, ಅಲಕೇರಿವಾಡೆ, ಮಜ್ಜಿಗೆಹಳ್ಳಿ, ಗಣೇಶವಾಡಿ ಹಾಸೋಡಿವಾಡೆ, ಚಳ್ಳಗಿರಿವಾಡೆ, ದೊಡ್ಡೇರಿವಾಡೆ, ಮಾವಿನಕೇರಿವಾಡೆ, ಗಂಗೂರ್‌ವಾಡೆ, ಶಾರ್ತಿಜವಾಡೆ, ಹುಲ್ಲಳ್ಳಿವಾಡೆ, ಗಣಿದಾಳವಾಡೆ, ಜೋಡಿಗವಾಡೆ, ಚೌಡಿಕಟ್ಟೆವಾಡೆ ಮುಂಡಗೋಡ ತಾಲೂಕಿನ ಬೆಣ್ಣಳ್ಳಿ, ಬಡ್ಡಿಗೇರಿ, ಮೈನಳ್ಳಿ, ಗುಂಜಾವತಿ, ಸಿಲಗುಂಡಿ, ಚಳಗೇರಿ, ಕಾರಿಕೊಪ್ಪ, ಯಲ್ಲಾಪುರ ತಾಲೂಕಿನ ಮತ್ತು ಜೋಯಿಡಾ ತಾಲೂಕಿನ ಕೆಲವು ಹಳ್ಳಿಗಳಲ್ಲಿ ಗೌಳಿಗರು ವಾಸಿಸುತ್ತಾರೆ. ಖಾನಾಪುರ ತಾಲೂಕಿನ ಕುಸುಮಳ್ಳಿ, ಜಾಂಬೋಟಿ ಹಾಗೂ ಬೆಳಗಾವಿಯ ಸುತ್ತಮುತ್ತಲಿನ ದಟ್ಟಡವಿಗಳಲ್ಲಿ ಗೌಳಿಗರು ವಾಸಿಸುತ್ತಾರೆ. ಅಲ್ಲದೆ ಮಹಾರಾಷ್ಟ್ರದ ಕೊಲ್ಲಾಪುರ, ರತ್ನಗಿರಿ, ಗೋವಾದ ಕೆಲವಡೆ ಇವರು ವಾಸಿಸುತ್ತಿದ್ದಾರೆ ಎಂದು ತಿಳಿದುಬರುತ್ತದೆ.

### ೧.೨ ವಲಸೆಯ ದಾರಿ

ಕರ್ನಾಟಕ ವಿಶಿಷ್ಟ ಬುಡಕಟ್ಟುಗಳಲ್ಲಿ ಒಂದಾದ ಗೌಳಿಗರು ದಟ್ಟವಾದ ಸಾಂಸ್ಕೃತಿಕ ಅನನ್ಯತೆಯನ್ನು ರೂಢಿಸಿಕೊಂಡು ಭಾಷೆ, ವೃತ್ತಿ, ಜೀವನಕ್ರಮದಲ್ಲಿ ಇತರ ಬುಡಕಟ್ಟುಗಳಿಗಿಂತ ಪ್ರತ್ಯೇಕವಾದ ಅಸ್ತಿತ್ವವನ್ನು ಉಳಿಸಿಕೊಂಡಿದ್ದಾರೆ. ಕರ್ನಾಟಕದ ಅನೇಕ ಸಮುದಾಯಗಳು ಪ್ರತ್ಯೇಕ ಗುಂಪುಗಳಾಗಿ ತಮ್ಮ ಜೀವನ ಕ್ರಮ, ನಂಬಿಕೆ, ಆಚರಣೆ ಸಂಪ್ರದಾಯಗಳಲ್ಲಿ ಪ್ರತ್ಯೇಕತೆಯನ್ನು ರೂಢಿಸಿಕೊಂಡು ಬಂದಿವೆ. ಯಾವುದೇ ಗುಂಪು ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬರುವಲ್ಲಿ ಸದಾ ಪ್ರಯತ್ನಶೀಲವಾಗಿರುತ್ತದೆ. ಒಂದು ಸಮುದಾಯ ಇನ್ನೊಂದು ಸಮುದಾಯದೊಡನೆ ಮುಖಾಮುಖಿಯಾಗಿ ಸಂಘರ್ಷಕ್ಕೊಳಗಾಗಿ ಬದುಕುತ್ತಲೇ ತನ್ನತನವನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿರುತ್ತದೆ. ಸಣ್ಣ

ಸಣ್ಣ ದ್ವೀಪಗಳಾಗಿ ರೂಪಗೊಂಡಿರುವ ಅನೇಕ ಸಮುದಾಯಗಳು ಪ್ರತ್ಯೇಕವಾದ ಸಮಷ್ಠಿ ಬದುಕನ್ನು ಇಂದಿಗೂ ಕ್ರಿಯಾಶೀಲವಾಗಿ ಇಟ್ಟುಕೊಂಡು ಬದುಕುತ್ತಿರುವುದು ಅಚ್ಚರಿಯನ್ನುಂಟುಮಾಡುತ್ತದೆ. ನಗರೀಕರಣ ಪ್ರಕ್ರಿಯೆಯಲ್ಲಿ ನಾಶವಾಗಿರುವ ಅನ್ಯೋನ್ಯತೆಯ ಸಾಮೂಹಿಕ ಬದುಕು ಇಂತಹ ಬುಡಕಟ್ಟುಗಳಲ್ಲಿ ಮಾತ್ರ ಇನ್ನೂ ಜೀವಂತವಾಗಿದೆ.

ಸಮುದಾಯುಗಳ ಜೀವನಕ್ರಮ, ಆಚಾರ-ವಿಚಾರ, ನಂಬಿಕೆಗಳನ್ನು ಇಡಿಯಾಗಿ ನೋಡುವುದಕ್ಕಿಂತ ಪ್ರತ್ಯೇಕವಾಗಿ ನೋಡುವ ಕ್ರಮ ಈಗ ಹೆಚ್ಚು ಜನಪ್ರಿಯವಾಗುತ್ತಿದೆ. ಸಮುದಾಯದ ಪ್ರತ್ಯೇಕ ಅಸ್ತಿತ್ವವನ್ನು ಸೂಕ್ತನೆಲೆಯಲ್ಲಿ ಗುರುತಿಸುವ ಕ್ರಮ ಹಾಗೂ ಅದರ ದೇಸೀಯ ಅಸ್ತಿತ್ವವನ್ನು ಅರ್ಥಮಾಡಿಕೊಳ್ಳುವ ಕ್ರಮ ಸಂಶೋಧಕರಿಗೆ ಹೆಚ್ಚು ಮಹತ್ವದಾಗಿ ಕಾಣತೊಡಗಿದೆ. ಯಾವುದೇ ಬುಡಕಟ್ಟು ಭಿನ್ನವಾಗಿ ಕಾಣುವುದು ಅದರ ವೃತ್ತಿ, ಭಾಷೆ, ಸಾಹಿತ್ಯ, ಸಂಸ್ಕೃತಿ ಹಾಗೂ ಜೀವನ ಕ್ರಮದಿಂದ ಸಂಸ್ಕೃತಿಯೆಂಬುದು ವಿಶಾಲಾರ್ಥದಲ್ಲಿ ಒಂದು ಸಮೂಹದ ಜೀವನ ಕ್ರಮವೇ ಆಗಿರುತ್ತದೆ. ಬುಡಕಟ್ಟಿಗೆ ಸೇರಿದ ಜನರು ತಾವು ಬದುಕುತ್ತಿರುವ ಗುಂಪಿನಲ್ಲಿ ಹೊಂದಾಣಿಕೆ ಮಾಡಿಕೊಂಡು, ಜವಾಬ್ದಾರಿಯನ್ನು ಅರ್ಥಮಾಡಿಕೊಂಡು ಮುಂದೆ ಸಾಗುತ್ತಿದ್ದರೆ ಅದು ಈ ಗುಂಪಿನ ಅಸ್ತಿತ್ವವನ್ನು ಸಾರುತ್ತದೆ. ಬುಡಕಟ್ಟು ಜನರ ಸಾಧನಾ ಸಾಮಾಗ್ರಿಗಳು, ವೇಷಭೂಷಣಗಳು, ವಸತಿ ಸೌಕರ್ಯಗಳು, ಜೀವನ ನಿರ್ವಹಿಸುವ ಕ್ರಮ, ಮಾನಸಿಕವಾಗಿ ಅವರು ಒಂದಾಗಿರುವ ರೀತಿ, ಅಮೂರ್ತವಾದ ಅವರ ಸಂಬಂಧದ ಬೆಸುಗೆ ಅವರ ಸಂಸ್ಕೃತಿಯಲ್ಲಿ ಸೇರಿರುತ್ತವೆ. ಎಲ್ಲಾ ಸಾಂಸ್ಕೃತಿಕ ಸಮೂಹಗಳೂ ಮಾನಸಿಕವಾಗಿ ಒಂದಾಗಿರುವಂತೆಯೇ, ನಂಬಿಕೆ, ಆಚರಣೆ, ವೃತ್ತಿ, ಭಾಷೆ, ರಕ್ತಸಂಬಂಧದ ಮೂಲಕ ತಮ್ಮ ಬೆಸುಗೆಯನ್ನು ಸಾಂದ್ರಗೊಳಿಸುತ್ತಾ ಸಾಗುತ್ತವೆ. ತಾವು ಬದುಕುತ್ತಿರುವ ಕ್ರಮವೇ ಸರಿಯಾದುದು, ತಮ್ಮ ಜೀವನಮೌಲ್ಯಗಳೇ ಶ್ರೇಷ್ಠವಾದುದೆಂದು ಭಾವಿಸುವುದರ ಜೊತೆಗೆ ಇತರ ಸಮುದಾಯಗಳು ತಮಗಿಂತ ಕೀಳೆಂಬ ಭಾವನೆಯಿಂದಲೂ ನೋಡುತ್ತವೆ. ಹೀಗಾಗಿ ತಮ್ಮ ಪ್ರತ್ಯೇಕತೆಯನ್ನು ಕಾಯ್ದು ಕೊಳ್ಳಲು ಅವು ಮಾನಸಿಕವಾಗಿ ಸಿದ್ಧವಾಗಿರುವುದರಿಂದಲೇ ಅವು ಇತರ ಸಮೂಹ ಸಂಸ್ಕೃತಿಗಳ ಮಧ್ಯೆ ಮುಖಾಮುಖಿಯಾಗಿ ಸಂಘರ್ಷಿಸುತ್ತಲೇ ತಮ್ಮದನ್ನು ಗಟ್ಟಿಯಾಗಿ ಉಳಿಸಿಕೊಳ್ಳಲು ಸಮರ್ಥವಾಗಿರುತ್ತವೆ.

ಮಹಾರಾಷ್ಟ್ರದ ಸಾಂಗ್ಲಿ, ಸೊಲ್ಲಾಪುರ, ಕೊಲ್ಲಾಪುರ, ಪಂಡರಾಪುರ, ಸತಾರ, ಗೋವಾ ಹೀಗೆ ಬೇರೆ ಬೇರೆ ಸ್ಥಳಗಳಿಂದ ಕರಾವಳಿ ತೀರದ ಗುಂಟ, ಘಟ್ಟದ ಕಾಡುಗಳ ಮೂಲಕ ಬೆಳವಲ ನಾಡಿನ ಬಿಜಾಪುರ ಹಳಿಯಾಳಗಳ ಮಾರ್ಗವಾಗಿ ಬೇರೆ ಬೇರೆ ದಾರಿಗಳಲ್ಲಿ ಬಂದರೆನ್ನಲಾಗುತ್ತಿದೆ. ಮೇಲೆ ಹೇಳಿದ ಎಲ್ಲ ಕಾರಣಗಳಿಗಾಗಿ ಎಲ್ಲ ಸ್ಥಳಗಳಿಂದ ಎಲ್ಲ ಮಾರ್ಗಗಳಲ್ಲಿ ಭಿನ್ನ ಗುಂಪುಗಳಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಇವರೆಲ್ಲ ಕರ್ನಾಟಕವನ್ನು ಸೇರಿಕೊಂಡಿದ್ದಾರೆ ಎನ್ನಬಹುದು. ಒಟ್ಟಿನಲ್ಲಿ ಹೀಗೆ ವಲಸೆ ಬಂದ ತಮ್ಮದೇ ಗುಂಪುಗಳಲ್ಲಿ ಬದುಕುತ್ತಿರುವ ವಿಶಿಷ್ಟ ಸಂಸ್ಕೃತಿಯ ಮರಾಠಿ, ಕೊಂಕಣಿ ಮತ್ತು ಅವುಗಳ ಉಪಭಾಷೆಗಳನ್ನು ಬಳಸುವ ಪ್ರತ್ಯೇಕ ಸಮುದಾಯಗಳು ಕರ್ನಾಟಕದಲ್ಲಿವೆ.

## ೧.೩ ವಲಸೆಗೆ ಕಾರಣಗಳು

ಗೌಳಿಗರು ಕರ್ನಾಟಕಕ್ಕೆ ಯಾವಾಗ ವಲಸೆ ಬಂದರು ಎಂದು ಖಚಿತವಾಗಿ ಹೇಳಲು ಯಾವ ದಾಖಲೆಗಳು, ವಿವರಗಳು ಸಿಗುವುದಿಲ್ಲ. ಕೆಲವರನ್ನು ಕೇಳಿದರೆ ೪-೫ ತಲೆಮಾರುಗಳಿಂದ ಇಲ್ಲಯೇ ವಾಸಿಸುತ್ತಿದ್ದೇವೆ ಎನ್ನುತ್ತಾರೆ. ಇವರ ಮೂಲ ಭಾಷೆ ಮರಾಠಿಯೇ ಆಗಿದೆ. ಇವರು ವಲಸೆ ಬರಲು ಹಲವು ಕಾರಣಗಳನ್ನು ಕೊಡಬಹುದು. ಬ್ರಿಟಿಷರ ದಬ್ಬಾಳಿಕೆಯಿಂದ ಇರಬಹುದು ಅಥವಾ ಪಶು ಪಾಲನೆಯೇ ಮೂಲ ಕಸುಬು ಆಗಿರುವುದರಿಂದ ಮೇವಿನ ಕೊರತೆಯಿಂದ ಬಂದಿರಬಹುದು. ಮುಸ್ಲಿಮರ ಧಾಳಿಯಿಂದ ಹೆಣ್ಣು ಮಕ್ಕಳಿಗೆ ರಕ್ಷಣೆ ಇಲ್ಲ ಎನ್ನುವ ಕಾರಣಕ್ಕೆ ಕರ್ನಾಟಕಕ್ಕೆ ವಲಸೆ ಬಂದಿರಬಹುದು.

ವಲಸೆ ಬುಡಕಟ್ಟು ಜನಾಂಗದವರೆಂದೂ ಗಿರಿಜನರೆಂದೂ ಗುರುತಿಸಲಾಗಿರುವ ಶ್ರಮ ಸಂಸ್ಕೃತಿಯನ್ನು ನೆಚ್ಚಿಕೊಂಡಿರುವ ಜನಸಮೂಹಗಳೂ ಮಹಾರಾಷ್ಟ್ರದಿಂದ ವಲಸೆ ಬಂದಿವೆ. ಕರ್ನಾಟಕ ಪ್ರಾಂತ್ಯದಲ್ಲಿ ಎಂದು ಹೇಳಲಾಗಿರುವ ಐವತ್ತಕ್ಕೂ ಹೆಚ್ಚು ಸಂಖ್ಯೆಯ ಬುಡುಕಟ್ಟುಗಳಲ್ಲಿ ಇವೂ ಸೇರಿಕೊಂಡಿವೆ. ನವನಾಗರಿಕತೆಯಿಂದ ದೂರ ಉಳಿದ ಘಟ್ಟ ಪ್ರದೇಶದ ಹಳ್ಳಿಗಾಡುಗಳಲ್ಲಿ ನೆಲೆಸಿರುವ ಈ ಬುಡಕಟ್ಟು ಜನರು ಕರ್ನಾಟಕಕ್ಕೆ ಯಾವಾಗ ಏಕೆ, ಹೇಗೆ ಬಂದರೆಂಬ ಬಗ್ಗೆ ಖಚಿತವಾದ ಆಧಾರಗಳಾಗಲಿ, ಅಭಿಪ್ರಾಯಗಳಾಗಲಿ ದೊರೆಯುವುದಿಲ್ಲ. ಬದಲಿಗೆ ಅನೇಕ ಕುತೂಹಲಕಾರಿ ಐತಿಹ್ಯಗಳು ಪ್ರಚಲಿತವಾಗಿವೆ. ಬರಗಾಲ ಬಂದದ್ದರಿಂದ ಬದುಕು ಹುಡುಕಿ ಬಂದರೆಂದೂ, ಮುಸ್ಲಿಮರು ದೇವಾಲಯಗಳ ಮೇಲೆ ದಾಳಿ ಮಾಡಿ ಅಟ್ಟಿದ್ದರೆಂದೂ, ಪೋರ್ಚುಗೀಸರು ನಡೆಸುತ್ತಿದ್ದ ಕಡ್ಡಾಯ ಮತಾಂತರದಿಂದ ಪಾರಾಗಲು ಓಡಿ ಬಂದರೆಂದೂ, ಯುದ್ಧದಲ್ಲಿ ರಾಜ ಸೋತಾಗ ಸೈನಿಕರಾಗಿದ್ದವರು ದಿಕ್ಕು ಕಾಣದೆ ತಲೆಮರೆಸಿಕೊಂಡು ಬಂದರೆಂದೂ, ಶತ್ರುಗಳಿಂದ ರಕ್ಷಣೆಕೋರಿ ರಾಜನೇ ಓಡಿ ಬಂದಾಗ ಅವನೊಂದಿಗೆ ಬಂದರೆಂದೂ ಹಲವಾರು ಊಹೆಗಳು ಹರಿದಾಡುತ್ತಿವೆ.

೧೮೧೭ರಲ್ಲಿ Criminal Tribal Act ಜಾರಿಗೆ ಬಂದರೂ, ಉತ್ತರ ಭಾರತದಲ್ಲಿ ಕಂಪನಿ ಸರಕಾರವು ೧೭೯೩ ರಲ್ಲಿಯೇ ಕೆಲವು ಸಮುದಾಯಗಳನ್ನು ಪಟ್ಟಿ ಮಾಡಿ ಇವು ಅಪಾಯಕಾರಿಗಳೆಂದು ಗುರುತಿಸಿತು. ಇದರಿಂದ ಇಲ್ಲಿನ ಬಹುತೇಕ ಶ್ರಮಜೀವಿಗಳು ಮತ್ತು ಆದಿವಾಸಿಗಳು ತಮ್ಮ ನೆಲೆಗಳನ್ನು ಕಳೆದುಕೊಂಡು ಅಲೆಮಾರಿಗಳಾದರು, ಎಲ್ಲವನ್ನೂ ಕಳೆದುಕೊಂಡಿತು. ಶ್ರಮಜೀವಿವರ್ಗ ಮಾತ್ರ. ಕಂಪನಿ ಆಡಳಿತದ ವಿರುದ್ಧ ಇವರು ಹೋರಾಡಲೇಬೇಕಾದ ಚಾರಿತ್ರಿಕ ಅನಿವಾರ್ಯತೆ ಏರ್ಪಟ್ಟಿತು. "ಯಾವ ಸಮುದಾಯಗಳು ಸ್ಥಳೀಯ ರಾಜರ ಸೈನ್ಯದಲ್ಲಿದ್ದು ಕಂಪನಿ ಆಡಳಿತದ ವಿರುದ್ಧ ಹೋರಾಡುತ್ತಿದ್ದವೋ ಆ ಎಲ್ಲ ಸಮುದಾಯಗಳನ್ನು ಕಂಪನಿ ಸರಕಾರ ಯುದ್ಧಾನಂತರ ಅನೇಕ ಬಗೆಯಲ್ಲಿ ಹಿಂಸಿಸುತ್ತಿತ್ತು. ಅವರಿಗೆ ಭಾರತದ ಸಮಾಜದ ಕುರಿತು ಸರಿಯಾದ ಕಲ್ಪನೆಯೇ ಇರಲಿಲ್ಲ. ಅಲೆಮಾರಿ ಪಶುಪಾಲಕರು, ವೃತ್ತಿ ಸಂಗೀತಗಾರರು, ಆದಿವಾಸಿಗಳು, ದೊಂಬರಾಟದವರು, ಜಿಪ್ಸಿಗಳು, ಹಾವಾಡಿಸುವವರು, ಅಲೆಮಾರಿ ವೈದ್ಯರು, ಈ ಸಮುದಾಯಗಳನ್ನು ಬ್ರಿಟೀಷರು ಅರ್ಥ

ಮಾಡಿಕೊಳ್ಳಲಿಲ್ಲ. ಈ ಸಮುದಾಯಗಳನ್ನು ಅವರು ಸದಾ ಅನುಮಾನಿಸುತ್ತಲೇ ಬಂದರು. ಸಹಜವಾಗಿಯೇ ಈ ಸಮುದಾಯಗಳು ಅಪರಾಧಿ ಸಮುದಾಯಗಳ ಪಟ್ಟಿಗೆ ಸೇರಿಸಲ್ಪಟ್ಟವು.

೧೮೭೧ರಲ್ಲಿ ಕ್ರಿಮಿನಲ್ ಟ್ರೈಬಲ್ ಕಾಯ್ದೆ ಸಿದ್ಧವಾಗಿ ಜಾರಿಗೆ ಬಂದಿತು. ದುರಂತವೆಂದರೆ ಈ ಪಟ್ಟಿಯಲ್ಲಿದ್ದ ಸಮುದಾಯಗಳನ್ನು ಕಂಪನಿ ಸರಕಾರವು ಜನ್ಮತಃ ಅಪರಾಧಿಗಳು (Born criminals) ಎಂದು ಪರಿಗಣಿಸಿ ಬಿಟ್ಟಿತು.

೧೮೭೧ರಲ್ಲಿ Criminal Tribal Act ಮದ್ರಾಸ್, ಹೈದರಾಬಾದ್ ಮತ್ತು ಮೈಸೂರು ಪ್ರಾಂತ್ಯಗಳಿಗೆ ವಿಸ್ತರಿಸಲ್ಪಟ್ಟಿತು. ವಸಾಹತು ಸರಕಾರ ದಕ್ಷಿಣದಲ್ಲೂ ಅನೇಕ ಶ್ರಮಜೀವಿಗಳನ್ನು 'ಅಪರಾಧಿಗಳ ಪಟ್ಟಿಗೆ' ಸೇರಿಸುತ್ತಲೇ ಹೋಯಿತು.

ಇಂತಹ ಸಂದರ್ಭದಲ್ಲಿ ಈ ಸಮುದಾಯಗಳು ಮುಖ್ಯವಾಹಿನಿಯ ಕಣ್ಣುತಪ್ಪಿಸಿ ಊರಿಂದ ಹೊರಗೆ ಕಾಡುಗಳಲ್ಲಿ ಬದುಕಲಾರಂಭಿಸಿದವು. ಅಪರಾಧಿ ಬುಡಕಟ್ಟು ಕಾಯ್ದೆಯು, ಪೋಲೀಸರಿಗೆ ಈ ಸಮುದಾಯಗಳನ್ನು ವಿಶೇಷ ಸಂದರ್ಭದಲ್ಲಿ ಕಂಡಲ್ಲಿ ಕೊಂದು ಹಾಕುವ ಅಧಿಕಾರವನ್ನೂ ಕೊಟ್ಟು ಬಿಟ್ಟಿತ್ತು. ಈ ಕಾಲಘಟ್ಟದಲ್ಲಿ 'ಅಲೆಮಾರಿತ್ವ' ಸಹಜವಾಗಿಬಿಟ್ಟಿತು. ಕೇವಲ ಆರ್ಥಿಕ ಮೂಲಗಳನ್ನು ಮಾತ್ರ ಈ ಸಮುದಾಯಗಳು ಕಳೆದುಕೊಳ್ಳಲಿಲ್ಲ. ಬದುಕಲು ನೆಲ ಮತ್ತು ಬದುಕುವ ಅವಕಾಶ ಎರಡನ್ನೂ ಕಳೆದುಕೊಂಡು ಸುರಕ್ಷಿತ ನೆಲೆಗಳನ್ನು ಹುಡುಕಿಕೊಂಡು ಅಲೆಯಲಾರಂಭಿಸಿದವು.

ನಾವು ಇಂದು ಯಾರನ್ನು ಅಲೆಮಾರಿಗಳೆಂದು ಪಟ್ಟಿ ಮಾಡುತ್ತೇವೋ ಅವರಲ್ಲಿ ಶೇ. ೬೫ ಸಮುದಾಯಗಳು ಈ Criminal Tribal Act ಅಡಿಯಲ್ಲಿ ಬರುವ ಸಮುದಾಯಗಳೇ ಆಗಿವೆ. ಹೀಗಾಗಿ ಕರ್ನಾಟಕದಲ್ಲಿರುವ ಬಹುತೇಕ ಅಲೆಮಾರಿಗಳು, ವಾಯುವ್ಯ ಭಾರತ, ಮಧ್ಯಭಾರತ ಇಲ್ಲವೆ ಓರಿಸ್ಸಾ, ಆಂಧ್ರ ಪ್ರದೇಶಗಳಿಂದ ಇಲ್ಲಿಗೆ ವಲಸೆ ಬಂದವರೇ ಆಗಿದ್ದಾರೆ.

**i. ವೃತ್ತಿ ಕಾರಣಗಳು**

ಗೌಳಿಗರು ಕರ್ನಾಟಕಕ್ಕೆ ವಲಸೆ ಬರಲಿಕ್ಕೆ ಅವರ ವೃತ್ತಿಗೆ ಸಂಬಂಧಿಸಿದ ಕಾರಣವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. ಮಹಾರಾಷ್ಟ್ರದ ರತ್ನಗಿರಿ ಅಜರಾ ಮತ್ತು ಕೊಲ್ಹಾಪುರದ ಸುತ್ತಲಿನ ಪ್ರದೇಶಗಳಲ್ಲಿ ಪಶುಪಾಲಕರು ಹೆಚ್ಚಾಗಿ ನೆಲೆಸಿದ್ದರು. ಪಶುಪಾಲನೆಯ ಉತ್ಪಾದನೆ ಹೆಚ್ಚಾಗತೊಡಗಿತು. ಹಾಲಿನ ಉತ್ಪಾದನೆಯ ಬೇಡಿಕೆ ದಿನದಿಂದ ದಿನಕ್ಕೆ ಕಡಿಮೆಯಾಗತೊಡಗಿತು. ಈ ಸಂದರ್ಭದಲ್ಲಿ ಕೊಲ್ಹಾಪುರದಲ್ಲಿ ಬೆಣ್ಣೆಗೆ ಮಾತ್ರ ಸ್ವಲ್ಪ ಬೇಡಿಕೆ ಇತ್ತು. ಉಳಿದಂತೆ ಹಾಲು, ಮೊಸರು ಮಜ್ಜಿಗೆಗೆ ಬೇಡಿಕೆ ತೀರ ಕಡಿಮೆ ಯಾಗುತ್ತಿತ್ತು. ಇದರಿಂದ ಗೌಳಿಗರ ಆರ್ಥಿಕ ಸ್ಥಿತಿಗತಿಯ ಮೇಲೆ ಗಂಭೀರ ಪರಿಣಾಮ ಉಂಟಾಯಿತು. ಈ ಕೊರತೆಯನ್ನು ನೀಗಿಸಿಕೊಳ್ಳಲು ಗೌಳಿಗರು ಪಶುಪಾಲನೆಯಿಂದ ಕೃಷಿಕ ವೃತ್ತಿಯನ್ನು ಪ್ರಾರಂಭಿಸಿದರು. ಅರೆಮಾರಿಗಳಾಗಿದ್ದ ಗೌಳಿಗರು ಸ್ವಂತ ಭೂಮಿಯನ್ನು ಹೊಂದಿರಲಿಲ್ಲ. ಸರ್ಕಾರದ ಕಾಡು ಪ್ರದೇಶಗಳಲ್ಲಿಯೇ ಕೃಷಿ ವೃತ್ತಿ ಪ್ರಾರಂಭಿಸಿದರು. ಅಲ್ಲಿ ಗೌಳಿಗರು ಕುಮರಿ ಬೇಸಾಯಿ ಪದ್ಧತಿಯನ್ನು ಅನುಸರಿಸುತ್ತಿದ್ದರು. ಗೌಳಿಗರು ಕಾಡನ್ನು ಕಡಿದು ವ್ಯವಸಾಯ

ಭೂಮಿಯನ್ನಾಗಿ ಪರಿವರ್ತಿಸುತ್ತಿದ್ದಾರೆ ಎಂದು ತಿಳಿದ ಸರ್ಕಾರ ಇವರನ್ನೂ ಅಲ್ಲಿಂದಲೂ ಹೊರದಬ್ಬಿತು. ಈ ಎಲ್ಲ ಕಾರಣಗಳಿಂದ ಗೌಳಿಗರು ತಮ್ಮ ಮೂಲ ಸ್ಥಳದಿಂದ ಕರ್ನಾಟಕದ ಅರಣ್ಯಪ್ರದೇಶಕ್ಕೆ ಬಂದರು ಎಂದು ತಿಳಿಯುತ್ತದೆ.

ಮಹಾರಾಷ್ಟ್ರದ ರತ್ನಗಿರಿ ಅಜರಾ, ಕೊಲ್ಹಾಪುರದ ಸುತ್ತಮುತ್ತಲಿನ ಪ್ರದೇಶಗಳಿಂದ ವಲಸೆ ಆರಂಭಿಸಿದ ಗೌಳಿಗರು ಮೊದಲು ಕರ್ನಾಟಕದ ಬೆಳಗಾವ ಜಿಲ್ಲೆಯ ಖಾನಾಪುರ ಅರಣ್ಯ ಪ್ರದೇಶದಲ್ಲಿ ನೆಲೆಯೂರಿದರು. ನಂತರ ಹಂತಹಂತವಾಗಿ ಕಾಡಿನ ಒಳಗೆ ನುಗ್ಗುತ್ತಾ ಧಾರವಾಡ ಹಳಿಯಾಳ, ಅಳ್ನಾವರ್, ದಾಂಡೇಲಿ, ಮುಂಡಗೋಡ, ಯಲ್ಲಾಪುರ, ಶಿವಮೊಗ್ಗ, ಭದ್ರಾವತಿ, ಚಿಕ್ಕಮಗಳೂರು ಮುಂತಾದ ಪ್ರದೇಶಗಳಿಗೆ ವಲಸೆ ಹೋಗಿದ್ದಾರೆ. "ಮಹಾರಾಷ್ಟ್ರದ ಧನ್‌ಗರ್‌ದಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುವ ನಂಬಿಕೆ, ಸಂಪ್ರದಾಯಗಳು, ರೀತಿನೀತಿಗಳು, ಹಬ್ಬ ಹರಿದಿನಗಳು, ಊಟೋಪಚಾರಗಳು ಕರ್ನಾಟಕಕ್ಕೆ ವಲಸೆ ಬಂದಿರುವ ಗೌಳಿಗರಲ್ಲಿಯೂ ಸಾಮಾನ್ಯವಾಗಿ ಕಂಡು ಬಂದಿರುವುದರಿಂದಲೂ ಅವು ಸದೃಶವಾಗಿರುವುದರಿಂದಲೂ ಕಚ್ಚೆ ಗೌಳಿಗರು ಮಹಾರಾಷ್ಟ್ರ ಮೂಲದವರೆಂಬುದು ಸ್ಪಷ್ಟ. ಮಾತನಾಡುವ ಭಾಷೆ, ರೂಢಿಸಿಕೊಂಡಿರುವ ಸಂಸ್ಕೃತಿಯಿಂದಲೂ ಇವರು ಅದೇ ಮೂಲದವರು ಎಂದು ಹೇಳುವುದು ಸುಲಭ. ಬಹುಕಾಲದಿಂದ ಕಾಡಿನಲ್ಲಿಯೇ ನೆಲೆಸಿರುವುದರಿಂದ ಇವರು ಕೃತಕವಲ್ಲದ ಮರಾಠಿಯನ್ನೇ ಮಾತನಾಡುವುದು ಸ್ವಾಭಾವಿಕ" (ಅಂಬಳಿಕೆ ಹಿರಿಯಣ್ಣ ಪು.೧೪) ಅಂಬಳಿಕೆ ಹಿರಿಯಣ್ಣ ಅವರು ಗೋವಾದಿಂದಲೂ ಗೌಳಿಗರು ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ ಎಂದು ಹೇಳುತ್ತಾರೆ. ನಾನು ಕ್ಷೇತ್ರಕಾರ್ಯ ಕೈಕೊಂಡಲ್ಲೆಲ್ಲ ಗೌಳಿಗರು ನಾವು ಮಹಾರಾಷ್ಟ್ರದಿಂದಲೇ ಇಲ್ಲಿಗೆ ಬಂದಿದ್ದೇವೆ ಎಂದೇ ಹೇಳುತ್ತಾರೆ ವಿನಃ ಗೋವಾದಿಂದ ಎಂದು ಹೇಳುವುದಿಲ್ಲ.

**ii. ಆರ್ಥಿಕ ಕಾರಣಗಳು**

ಗೌಳಿಗರು ಶುದ್ಧ ಪಶುಪಾಲಕರು. ದನಗಳೇ ಇವರ ಸಂಪತ್ತು. ದನಕರುಗಳಿಗೆ ಸ್ವಲ್ಪ ಅಲ್ಪ ತೊಂದರೆಯಾದರೆ ಬಹಳ ನೊಂದುಕೊಳ್ಳುತ್ತಾರೆ. ಗೌಳಿಗರು ತಮಗೆ ಆಹಾರ, ನೀರು ಸಿಗದಿದ್ದರೂ ಚಿಂತಿಸುವುದಿಲ್ಲ ಆದರೆ ಅವರು ಸಾಕಿರುವ ಆಕಳು, ಎಮ್ಮೆಗಳಿಗೆ ಮಾತ್ರ ಯಾವ ಕಾರಣಕ್ಕೂ ನೀರು, ಆಹಾರದ ಕೊರತೆಯಾಗಬಾರದು ಎಂಬುದು ಅವರ ಬಯಕೆ. ಕಳೆದ ಎರಡುಮೂರು ವರ್ಷಗಳಿಂದ ಮಳೆಪ್ರಮಾಣ ಕಡಿಮೆಯಾಗುತ್ತ ಬಂದದ್ದರಿಂದ ಕಾಡಿನಲ್ಲಿ ಹುಲ್ಲು, ನೀರಿಗೆ ಬಹಳ ತೊಂದರೆಯಾಗಿದೆ. ಬರದ ಸ್ಥಿತಿಯಲ್ಲಿ ತಮ್ಮ ಹಸು ಎಮ್ಮೆಗಳು ಆಹಾರವಿಲ್ಲದೆ ಸೊರಗಿ ಸಾಯಬಾರದು ಎಂದು ತಿಳಿದು ಅವುಗಳನ್ನು ಹುಲ್ಲು, ನೀರು ಸಮೃದ್ಧವಾಗಿರುವ ರೈತರಿಗೆ ಅತ್ಯಂತ ಕಡಿಮೆ ಹಣಕ್ಕೆ ಮಾರಿರುವ ಸಂಗತಿಗಳು ಅಲ್ಲಲ್ಲಿ ಕಂಡುಬರುತ್ತವೆ. ಪಶುಪಾಲನೆಯಲ್ಲಿ ಅತ್ಯಂತ ಕಟ್ಟುನಿಟ್ಟಾದ ಇವರು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬರಲು ಅವರ ಪಶುಸಂಪತ್ತಿಗಾದ ಆಹಾರ ಮತ್ತು ನೀರಿನ ಕೊರತೆಯಾಗಿರಬಹುದು.

ಗೌಳಿಗರು ಕರ್ನಾಟಕ್ಕೆ ಸುಮಾರು ಮುನ್ನೂರು ವರ್ಷಗಳ ಹಿಂದೆ ಖಾನಾಪೂರ ಅರಣ್ಯ ಪ್ರದೇಶದ ಮೂಲಕ ಬಂದಿರಬಹುದೆಂದು ಕಾಲವಳ್ಳಿಯ ಸ್ಥಳೀಯರು ಅಭಿಪ್ರಾಯ ಪಡುತ್ತಾರೆ.

ಗೌಳಿಗರು ಸುಮಾರು ೧೮೨೪ಕ್ಕಿಂತ ಮೊದಲೇ ಖಾನಾಪೂರ ಮತ್ತು ಬೈಲಹೊಂಗಲ ತಾಲೂಕಿನ ಕುಲ್ಲೊಳ್ಳಿ, ಕತ್ತುದಡ್ಡಿ ಮುಂತಾದ ಅರಣ್ಯಪ್ರದೇಶಗಳಲ್ಲಿ ಅಲ್ಲಲ್ಲಿ ವಾಸವಾಗಿದ್ದರು ಎಂಬುದು ತಿಳಿಯುತ್ತದೆ. ಕಿತ್ತೂರು ಚನ್ನಮ್ಮನ ಬಲಗೈ ಬಂಟನೆಂದೇ ಹೆಸರು ವಾಸಿಯಾಗಿದ್ದ ಸಂಗೊಳ್ಳರಾಯಣ್ಣ ಚನ್ನಮ್ಮನನ್ನು ಬ್ರಿಟೀಷರು ಸೆರೆಹಿಡಿದ ನಂತರ ಬ್ರಿಟೀಷರ ಕಣ್ಣು ತಪ್ಪಿಸಿಕೊಂಡು ಕುಲವಳ್ಳಿ ಅಳ್ನವರ, ಖಾನಾಪೂರ, ನಂದಗಡ, ಬೀಡಿ ಈ ಪ್ರದೇಶದ ಕಾಡಿನಲ್ಲಿ ತನ್ನ ಸಹಚರರೊಂದಿಗೆ ವಾಸಿಸುತ್ತಾ ಬ್ರಿಟೀಷ್ ಆಡಳಿತದ ವಿರುದ್ಧ ದಂಗೆ ಏಳುತ್ತಿರುತ್ತಾನೆ. ಆ ಸಂದರ್ಭದಲ್ಲಿ ರಾಯಣ್ಣ ಗೌಳಿಗರ ಆಶ್ರಯ ಕೆಲವು ಸಲ ಪಡೆದುಕೊಂಡಿದ್ದ ಎಂದು ಸ್ಥಳೀಯರು ಹೇಳುತ್ತಾರೆ. ಸಂಗೊಳ್ಳಿ ರಾಯಣ್ಣನನ್ನು ಬಂಧಿಸಲು ಬ್ರಿಟೀಷರು ಪಿತೂರಿ ನಡೆಸಿ ಅವನನ್ನು ಬಂಧಿಸುವಲ್ಲಿ ಯಶಸ್ವಿಯಾಗುತ್ತಾರೆ. ರಾಯಣ್ಣನನ್ನು ಬಂಧಿಸಲು ಸಹಕರಿಸಿದವರಿಗೆ ಬ್ರಿಟೀಷರು ಕುಲವಳ್ಳಿಯಲ್ಲಿ ಸುಮಾರು ೭೦೦ ಎಕರೆ ಕಾಡು ಜಮೀನನ್ನು ಉಂಬಳಿಯಾಗಿ ನೀಡಿದ್ದರು. ಇದೇ ಕುಲವಳ್ಳಿ ಪ್ರದೇಶದಲ್ಲಿ ಬೈಲಹೊಂಗಲ ತಾಲೂಕಿನ ಖೊದಾನಪುರ ಗ್ರಾಮದ ಇನಾಮದಾರರಿಗೆ ಸಂಬಂಧಿಸಿದ ಹನ್ನೊಂದು ನೂರು ಎಕರೆ ಕಾಡು ಭೂಮಿ ಇತ್ತು. ಈ ಪ್ರದೇಶಗಳಲ್ಲಿ ಗೌಳಿಗರು ಅಂದು ವಾಸಿಸುತ್ತಿದ್ದರು ಎಂದು ಸ್ಥಳೀಯರು ಮಾಹಿತಿ ನೀಡುತ್ತಾರೆ.

ಇನ್ನೊಂದು ಮಾಹಿತಿಯ ಪ್ರಕಾರ ಮೊದಲು ಕುಲವಳ್ಳಿ ಅರಣ್ಯ ಪ್ರದೇಶಕ್ಕೆ ಮಹಾರಾಷ್ಟ್ರದಿಂದ ಶ್ರೀ ದೊಂಡು ಲಾಂಬೂರು ಅವರ ತಂದೆ ಬಾಗ ಲಾಂಬೂರ ಅವರ ವಲಸೆ ಬಂದವರಲ್ಲಿ ಮೊದಲಿಗರು. ಮೊದಮೊದಲು ಹಸು-ಎಮ್ಮೆಗಳನ್ನು ಅಲ್ಲಲ್ಲಿ ಮೇಯಿಸುತ್ತ ಸುತ್ತಾಡುತ್ತಿದ್ದರು. ಇವರಿಗಿಂತ ಮೊದಲು ವಾಸವಾಗಿದ್ದ ಗೌಳಿಗನೊಬ್ಬ ಬಾಗ ಲಾಂಬೂರನನ್ನು ಕುಲವಳ್ಳಿಗೆ ಕರೆತಂದು ಖೊದಾನಪುರದ ರಾವ ಸಾಹೇಬರಿಗೆ ಬೆಟ್ಟಿಮಾಡಿಸಿದ. ಖೊದಾನಪುರದ ರಾವ ಸಾಹೇಬ ತನ್ನ ಮನೆಯಲ್ಲಿರುವ ಹಸು ಎಮ್ಮೆಗಳನ್ನು ನೋಡಿಕೊಳ್ಳುತ್ತ ಕುಲವಳ್ಳಿಯಲ್ಲಿಯೇ ಇರಲು ಸೂಚಿಸುತ್ತಾರೆ. ಇವನ ನಂತರ ಬಾಗ ಲಾಂಬೂರನ ಸಂಬಂಧಿಕರು, ಪರಿಚಯಸ್ತ ಗೌಳಿಗರ ಕುಲಸ್ಥರು ತಮ್ಮ ತಮ್ಮ ಪಶುಗಳ ಸಮೇತ ಕುಲವಳ್ಳಿಗೆ ವಲಸೆ ಬಂದರು. ಈ ಗೌಳಿಗರು ಕುಲವಳ್ಳಿಗೆ ವಲಸೆ ಬಂದಾಗ ಕಾಡಿನಲ್ಲಿ ದನಕರುಗಳಿಗೆ ಸಮೃದ್ಧವಾಗಿ ಮೇವು ನೀರು ಸಿಗುತ್ತಿತ್ತು. ಗೌಳಿಗರಲ್ಲದೇ ಇತರೆ ಸಮುದಾಯದ ಜನ ಕುಲವಳ್ಳಿಯಲ್ಲಿ ಖೊದಾನಪುರ ದಣಿಗಳ ಆಶ್ರಯ ಪಡೆದು ಅಲ್ಲಲ್ಲಿ ಬೇಸಾಯ ಮಾಡಿಕೊಂಡು ತಾವು ಬೆಳೆದ ಬೆಳೆಯಲ್ಲಿ ಅರ್ಧ ಪಾಲನ್ನು ದಣಿಗಳಿಗೆ ನೀಡಿ ಬದುಕುತ್ತಿದ್ದರು. ಗೌಳಿಗರು ಕುಲವಳ್ಳಿಯಲ್ಲಿ ಪಶುಪಾಲನೆ ಜೊತೆಗೆ ಬೇಸಾಯ ವೃತ್ತಿಯನ್ನು ಇಲ್ಲಿ ಪ್ರಾರಂಭಿಸಿದ್ದರು ಎಂದು ತಿಳಿಯುತ್ತದೆ.

ಅಂಬಳಿಕೆ ಹಿರಿಯಣ್ಣ ಅವರು ತಮ್ಮ "ಕಚ್ಚೆ ಗೌಳಿಗಳು" ಎಂಬ ಗ್ರಂಥದಲ್ಲಿ ಗೌಳಿಗರು ಕರ್ನಾಟಕಕ್ಕೆ ವಲಸೆ ಬರಲು ಕಾರಣಗಳನ್ನು ಹೀಗೆ ನೀಡುತ್ತಾರೆ. ಮಹಾರಾಷ್ಟ್ರದ ಅಜರಾ, ರತ್ನಗಿರಿ, ಕೊಲ್ಹಾಪುರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಗೌಳಿಗರು ಎಮ್ಮೆ-ಆಕಳುಗಳನ್ನು ಸಾಕಿಕೊಂಡಿದ್ದರು. ಒಂದು ಕಾಲದಲ್ಲಿ ರತ್ನಗಿರಿ ಕೊಲ್ಹಾಪುರದ ಸುತ್ತಮುತ್ತಲಿದ್ದ ಕಾಡಿನಲ್ಲಿ ದನಗಳಿಗೆ ಬೇಕಾದಷ್ಟು ಹುಲ್ಲು, ನೀರು ಸಿಗುತ್ತಿತ್ತು. ಅಲ್ಲಿ ತೀವ್ರ ಅನಾವೃಷ್ಟಿ ತಲೆದೋರಿತು. ಪಶುಪಾಲನೆಯೇ ಇವರ

ಮೂಲವೃತ್ತಿಯಾದದ್ದರಿಂದ ಪಶುಗಳ ಪಾಲನೆ ಅವರ ಪ್ರಮುಖ ಕರ್ತವ್ಯವಾಗಿತ್ತು. ಹೀಗಾಗಿ ಗೌಳಿಗರು ಪಶುಗಳಿಗೆ ಆಹಾರ ಹುಡುಕಿ ಕೊಂಡು ಕರ್ನಾಟಕದ ಅರಣ್ಯಕ್ಕೆ ವಲಸೆ ಬಂದರು. ಅಲ್ಲದೆ ಬೇಡರು ಗೌಳಿಗರ ಎಮ್ಮೆ, ಹಸುಗಳನ್ನು ಅಪಹರಿಸುತ್ತಿದ್ದರು ಎಂದು ಅಭಿಪ್ರಾಯ ಪಡುತ್ತಾರೆ. ಮಹಾರಾಷ್ಟ್ರದಲ್ಲಿ ವಾಸಿಸುತ್ತಿದ್ದ ಬೇಡರು ಅನೇಕ ಪಶುಪಾಲಕ ವರ್ಗದವರ ಎಮ್ಮೆ, ಆಕಳು, ಕುರಿಗಳನ್ನು ಅಪಹರಿಸುತ್ತಿದ್ದರು ಎಂಬುದು ಮಾಳಿಂಗರಾಯನ ಕಾವ್ಯದಿಂದಲೂ ತಿಳಿದುಬರುತ್ತದೆ.

ಮಹಾರಾಷ್ಟ್ರದ ಪ್ರದೇಶದಲ್ಲಿ ಸೋಮರಾಯ ತುಕ್ಕಪ್ಪರಾಯ ಅಣ್ಣತಮ್ಮಂದಿರು ಇವರ ಹತ್ತಿರ ತಮ್ಮ ಗುರುವಾದ ಗೋರಖನಾಥನ ಹತ್ತಿರ ಸುಮಾರು ೨೦೦ ಆಕಳುಗಳಿದ್ದವು. ಸದಾ ಕಾಡಿನಲ್ಲಿಯೇ ದನಗಳೊಂದಿಗೆ ಸುತ್ತಾಡುತ್ತಿದ್ದ ಇವರು ಶೂರರೂ ಆಗಿದ್ದರು. ಇವರು ಬಿಲ್ಲುಬಾಣದ ವಿದ್ಯೆಯನ್ನು ಚೆನ್ನಾಗಿ ಅರಿತವರಾಗಿದ್ದರು. ತುಕ್ಕಪ್ಪರಾಯ ಒಂದು ಸಲ ದನಗಳನ್ನು ಮೇಯಿಸುತ್ತಿದ್ದಾಗ ಹನ್ನೊಂದು ಜನ ಬೇಡರು ತುಕ್ಕಪ್ಪರಾಯನ ಮೇಲೆ ಎರಗಿ ಅವನನ್ನು ಕೊಂದು ಎಲ್ಲ ಆಕಳುಗಳನ್ನು ಅಪಹರಿಸಿ ಕೊಂಡು ಹೋಗುತ್ತಾರೆ. ತುಕ್ಕಪ್ಪರಾಯನನ್ನು ಬೇಡರು ಕೊಂದು ಆಕಳುಗಳನ್ನು ಅಪಹರಿಸಿದ ಸುದ್ದಿ ಅವನ ಮಕ್ಕಳಾದ ಜಕ್ಕಪ್ಪ ಮಾಳಪ್ಪನಿಗೆ ತಿಳಿಯುತ್ತದೆ. ಜಕ್ಕಪ್ಪ ಮಾಳಪ್ಪ ದೊಡ್ಡವರಾಗಿ ಬೇಡರನ್ನು ಹುಡುಕಾಡಿ ಅವರ ತಲೆಕಡಿದು ಆಕಳುಗಳನ್ನು ಬಿಡಿಸಿಕೊಂಡು ಬಂದ ಕಥೆ ಇಲ್ಲಿ ನೆನಪಾಗುತ್ತದೆ. ಒಟ್ಟಿನಲ್ಲಿ ಮಹಾರಾಷ್ಟ್ರದ ಗುಡ್ಡಗಾಡು ಪ್ರದೇಶದಲ್ಲಿ ಅಲೆಮಾರಿಗಳಾಗಿದ್ದ ಪಶುಪಾಲಕರಿಗೆ ಬೇಡರು ತೊಂದರೆ ಕೊಡುತ್ತಿದ್ದರು. ಅವರ ಕಾಟದಿಂದ ತಪ್ಪಿಸಿಕೊಳ್ಳಲು ಗೌಳಿಗರು ಕರ್ನಾಟಕಕ್ಕೆ ವಲಸೆ ಬಂದಿರಲೂಬಹುದು.

**iii. ಸಾಮಾಜಿಕ ಕಾರಣಗಳು**

ಸಾಮಾಜಿಕವಾಗಿ ಕಟ್ಟುನಿಟ್ಟಾದ ಸಂಪ್ರದಾಯ ಮತ್ತು ನಂಬಿಕೆಗಳ ಮೇಲೆ ಭದ್ರವಾಗಿ ನಿಂತಿರುವ ಗೌಳಿಗೆ ಸಮುದಾಯದ ವಲಸೆಗೆ ಕಾರಣ ಎಂದರೆ ತಮ್ಮ ಸಂಪ್ರದಾಯಗಳಿಗೆ ಎಲ್ಲಿ ಬ್ರಿಟಿಷರಿಂದ ಅಡಚಣೆ ಉಂಟಾಗಬಹುದು ಎನ್ನುವ ಕಾರಣಕ್ಕೆ ಇರಬಹುದು. ಮತ್ತೊಂದು ಕಾರಣವೆಂದರೆ ಗೌಳಿಗ ಮಹಿಳೆಯರು ಸುಂದರವಾಗಿರುವುದರಿಂದ ಅವರಿಗೆ ಮಹಮ್ಮದೀಯರಿಂದ ಆಗುವ ತೊಂದರೆಯನ್ನು ತಪ್ಪಿಸಲು ವಲಸೆ ಬಂದಿರಬಹುದು ಎನ್ನಬಹುದು.

**iv. ನೈಸರ್ಗಿಕ ಕಾರಣಗಳು**

ನಮಗೆಲ್ಲ ತಿಳಿದಿರುವ ಹಾಗೇ ಎಲ್ಲಾ ಜೀವಿಗಳು ನಿಸರ್ಗವನ್ನು ಅವಲಂಬಿಸಿವೆ. ಭಾರತದಲ್ಲಿ ಬೀಳುವ ಮಳೆಯು ಅನಿಶ್ಚಿತತೆ ಮತ್ತು ಅಕಾಲಿಕ ರೀತಿಯ ಮುಖ್ಯ ಲಕ್ಷಣಗಳನ್ನು ಹೊಂದಿದೆ. ಕೆಲವು ಸಲ ಅತೀವೃಷ್ಟಿ ಆಗಬಹುದು. ಹಾಗೆಯೇ ಒಮ್ಮೊಮ್ಮೆ ಅನಾವೃಷ್ಟಿ ತಲೆದೋರಬಹುದು. ಇದರಿಂದ ಎಲ್ಲಾ ಸಮುದಾಯಗಳ ಮೇಲೂ ಪ್ರಭಾವ ಬೀರಬಹುದು ಈ ರೀತಿ ಮಹಾರಾಷ್ಟ್ರದಲ್ಲಿಯೂ ಸಂಭವಿಸಿತು. ಗೌಳಿಗರ ಮೂಲವೃತ್ತಿ ಪಶುಪಾಲನೆಯೆ ಆಗಿರುವುದರಿಂದ ಅವರು ಮೇವಿನ ಕೊರತೆಯನ್ನು ಅನುಭವಿಸಬೇಕಾಯಿತು. ಇದರಿಂದ ಕರ್ನಾಟಕಕ್ಕೆ ವಲಸೆ ಬಂದಿರಲೂಬಹುದು.

ಇವರು ಅರಣ್ಯದಲ್ಲಿ ವಾಸಿಸುವುದರಿಂದ ಕ್ರಿಮಿಕೀಟಗಳು, ವನ್ಯ ಮೃಗಗಳಿಂದ ಧಾಳಿ, ಬೆಳೆ ನಾಶ ಇವುಗಳಿಂದ ಹೆದರಿ ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬಂದಿರಬಹುದು. ಅದಕ್ಕಾಗಿ ಇವರು ಸ್ವಂತ ಭೂಮಿಯನ್ನು ಹೊಂದಿರುವುದಿಲ್ಲ. ಬೇಸಾಯವನ್ನು ಮಾಡಲು ಕಾಡನ್ನು ಕಡಿದು ವ್ಯವಸಾಯ ಭೂಮಿಯನ್ನಾಗಿ ಪರಿವರ್ತಿಸುತ್ತಿದ್ದಾರೆ ಎಂದು ತಿಳಿದ ಸರ್ಕಾರ ಇವರನ್ನು ಅರಣ್ಯ ಪ್ರದೇಶದಿಂದ ಹೊರದಬ್ಬಿರಬಹುದು. ಈ ಎಲ್ಲಾ ಕಾರಣಗಳಿಂದ ಗೌಳಿಗರು ತಮ್ಮ ಮೂಲ ಸ್ಥಳದಿಂದ ಕರ್ನಾಟಕದ ಮುಖ್ಯ ಪ್ರದೇಶಕ್ಕೆ ಬಂದರು ಎಂದು ತಿಳಿಯುತ್ತದೆ.

**v. ಧಾರ್ಮಿಕ ಕಾರಣಗಳು**

ಗೌಳಿಗರಲ್ಲಿ ಹೆಚ್ಚಾಗಿ ಹಿಂದೂಧರ್ಮದ ಆಚರಣೆಯನ್ನು ಕಾಣಬಹುದು. ಮೂಲತಃ ಮಹಾರಾಷ್ಟ್ರದವರಾದ ಇವರು ವಿಠೋಬನ ಆರಾಧಕರು, ಹೆಚ್ಚಾಗಿ ಇವರ ಹೆಸರುಗಳೆಲ್ಲವೂ ವಿಠೋಬನ ಹೆಸರಿನಿಂದಲೇ ಆರಂಭವಾಗುತ್ತದೆ. ಗೌಳಿಗರ ಮನೆತನದ ದೇವ ದೇವತೆಗಳೆಲ್ಲ ಅವರ ಮೂಲಸ್ಥಾನ ಮಹಾರಾಷ್ಟ್ರದಲ್ಲಿದೆ. ಸಾಮನ್ಯವಾಗಿ ವರ್ಷಕ್ಕೆ ಒಂದು ಸಲ ತಮ್ಮ ಪೂರ್ವಜರ ದೈವಗಳ ಪೂಜೆಗಾಗಿ, ಆರಾಧನೆಗಾಗಿ ಕುಟುಂಬದಲ್ಲಿಯ ಒಬ್ಬ ಸದಸ್ಯ ತಮ್ಮ ಮೂಲಸ್ಥಾನಕ್ಕೆ ಹೋಗಿ ಬರುತ್ತಾರೆ. ಸಂಪ್ರದಾಯ ನಂಬಿಕೆಗಳನ್ನು ಆಚರಿಸುವ ಇವರಿಗೆ ಅದರಲ್ಲೂ ಹೆಚ್ಚಾಗಿ ಗೌಳಿಗ ಮಹಿಳೆಯರಿಗೆ ಮಹಮ್ಮದೀಯರಿಂದ ತೊಂದರೆ ಉಂಟಾಗುತ್ತಿತ್ತು. ಅವರು ಗೌಳಿಗ ಮಹಿಳೆಯನ್ನು ಅಪಹರಿಸುತ್ತಿದ್ದರು. ಇದರಿಂದ ಗೌಳಿಗ ಮಹಿಳೆಯರು ಮುಸ್ಲಿಂ ಸಮುದಾಯಕ್ಕೆ ಮತಾಂತರ ಹೊಂದಬೇಕಾಗಿತ್ತು. ಇದರಿಂದ ತಮ್ಮ ಹೆಣ್ಣು ಮಕ್ಕಳಿಗೆ ರಕ್ಷಣೆ ಕೊಡುವುದಗೋಸ್ಕರವಾಗಿಯೂ ಹಾಗೂ ತಮ್ಮ ಆಚಾರ, ವಿಚಾರಗಳನ್ನು ರಕ್ಷಿಸಿಕೊಳ್ಳುವುದಕ್ಕೆ ಇವರು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬಂದರು ಎನ್ನಲಾಗುತ್ತದೆ.

ಹೀಗೆ ಹಲವು ಒಳಪಂಗಡಗಳನ್ನು ಎರಡು ಮುಖ್ಯ ಪಂಗಡಗಳಾಗಿ ಪರಿಗಣಿಸಬಹುದು ಎನಿಸುತ್ತದೆ. ಒಂದು ಗುಂಪು ಶಿವಾಜಿ ಮತ್ತಿತರೆ ರಾಜರುಗಳ ಕಾಲದಲ್ಲಿ ಸೈನಿಕರಾಗಿದ್ದೋ, ಆಶ್ರಿತರಾಗಿದ್ದೋ ಒಡೆಯರ ಸೋಲಿನಿಂದ ದಿಕ್ಕು ಕಾಣದೆ ಶತ್ರುರಾಜರಿಂದ ತಲೆ ತಪ್ಪಿಸಿಕೊಂಡು ಸಾಂಗ್ಲಿ ಸೊಲ್ಲಾಪುರ ಪಂಡರಾಪುರ ಸತಾರಗಳಿಂದ ಕರಾವಳಿಯ ಮಾರ್ಗವಾಗಿ ದಕ್ಷಿಣದ ಕಡೆಗೆ ಓಡಿ ಬಂದವರದ್ದು.

ಇನ್ನೊಂದು ಮುಖ್ಯ ಪಂಗಡ ಗೋವಾದಿಂದ ಬಂದವರದ್ದು. ಶಿವಾಜಿಯ ರಾಜ್ಯ ವಿಸ್ತರಿಸಲಾಗಿ ಗೋವೆಯನ್ನೊಳಗೊಂಡಿದ್ದ ಅವನ ರಾಜ್ಯದಲ್ಲಿ ನೆಲೆಸಿದ್ದ ಮರಾಠರಿಗೆ ಪೋರ್ಚುಗೀಸರ ಅಲ್ಬುಕರ್ಕನಿಂದ ಮತಾಂತರಕ್ಕೊಳಗಾಗಬೇಕಾದ ಗಂಡಾಂತರ ಬಂತು. ಹಿಂದೂಗಳು ಇದನ್ನು ಪ್ರತಿಭಟಿಸಿ ಅಲ್ಲಿಂದ ತಪ್ಪಿಸಿಕೊಂಡು ಕರಾವಳಿಗುಂಟ ವಲಸೆ ಬಂದರು.

ಬಹುತೇಕ ಈ ಬುಡಕಟ್ಟು ಪಂಗಡಗಳ ಜನರ ಜೀವನ ಶೈಲಿ, ಸಂಪ್ರದಾಯ, ನಂಬಿಕೆ, ಉದ್ಯೋಗ, ಊಟೋಪಚಾರ, ಉಡುಪು, ಭಾಷೆ, ಕಲೆ ಇತ್ಯಾದಿಗಳಲ್ಲಿ ಸಾಮ್ಯವಿದ್ದು ಮೂಲತಃ

ಇವರೆಲ್ಲ ಒಂದೇ ಬುಡಕಟ್ಟಿಗೆ ಸೇರಿದವರಾಗಿರಬಹುದೆನಿಸುತ್ತದೆ. ವಲಸೆ ಬಂದಾದ ನಂತರ ಬೇರೆ ಬೇರೆ ಸ್ಥಳಗಳಲ್ಲಿ ಪ್ರತ್ಯೇಕ ಗುಂಪುಗಳಾಗಿ ಬದುಕಬೇಕಾಗಿ ಬಂದಿದ್ದರಿಂದ ಇವರಲ್ಲಿ ಸಂಪರ್ಕ ಕಡಿಮೆಯಾಗಿ ಸ್ಥಳೀಯ ಸಂಸ್ಕೃತಿಗಳ ಪ್ರಭಾವ ಹೆಚ್ಚಾಗಿ ಮೂಲ ಸಂಸ್ಕೃತಿಯಲ್ಲಿ ವೈವಿಧ್ಯಗಳು ಕಾಣಿಸಿಕೊಂಡಿವೆ. ಅವುಗಳನ್ನೇ ದೊಡ್ಡದು ಮಾಡುತ್ತ ಹುಸಿ ಪ್ರತಿಷ್ಠೆಗಳನ್ನು ಬೆಳೆಸಿಕೊಳ್ಳುತ್ತ, ರಕ್ತ ಸಂಬಂಧಗಳಿಂದಲೂ ದೂರಾಗಿ ಶ್ರೇಣೀಕರಣಗೊಳ್ಳುತ್ತ ಈ ಗುಂಪುಗಳು ಪ್ರತ್ಯೇಕ ಪಂಗಡಗಳೇ ಆಗಿಬಿಟ್ಟಿವೆ. ಹೀಗಾಗಿ ಇಂದಿನ ಕರ್ನಾಟಕದೊಳಗಿನ ಮರಾಠ ಬುಡಕಟ್ಟು ಜನಾಂಗದವರಲ್ಲಿ ಅನೇಕ ಪಂಗಡ ಒಳ ಪಂಗಡಗಳನ್ನು ಗುರುತಿಸಬಹುದಾಗಿದೆ.

### ೧.೪ ಸ್ವಾತಂತ್ರ್ಯ ಪೂರ್ವದ ಚಿತ್ರಣ

ಏಕಕಾಲಕ್ಕೆ ಬಂದು ಪರಕೀಯ ಸಮಾಜದ ರಾಜಕೀಯ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಲೋಕಗಳನ್ನು ಒಂದು ಜನಾಂಗದ ಪ್ರಜ್ಞೆಯನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಿಸುವ ಆಧುನಿಕ ವಸಾಹತುವಾದ ಆಧುನಿಕ ಪಶ್ಚಿಮ ರೂಪಿಸಿದ ಒಂದು ವಿಶಿಷ್ಟ ಆಕ್ರಮಣವಾದಿ ಸಿದ್ಧಾಂತ. ಇದು ನಿರ್ದಿಷ್ಟ ಸಂಕಥನಗಳು, ಪರಿಭಾಷೆ, ಧರ್ಮ, ಸಂಸ್ಕೃತಿ, ವ್ಯಾಪಾರ, ಶಿಕ್ಷಣ, ನಿಯಂತ್ರಣ ಇವೆಲ್ಲವೂ ಕೂಡಿ ರೂಪಗೊಂಡ ವ್ಯವಸ್ಥೆ. ಬ್ರಿಟಿಷರ ಹಂತ ಹಂತವಾದ ಆಕ್ರಮಣಕ್ಕೆ ತುತ್ತಾಗಿ ತಮ್ಮ ಮೂಲಭೂತವಾದ ಸಾಂಸ್ಕೃತಿಕ, ಸಾಮಾಜಿಕ ಮತ್ತು ಮಾನವೀಯ ನೆಲೆಯನ್ನು ಕಳೆದುಕೊಂಡು ತಮ್ಮ ನೆಲದಲ್ಲೇ ಪರದೇಶಿತನವನ್ನು ಅನುಭವಿಸಿದರು ಅಮಾನವೀಯವಾದ, ದುರಾಕ್ರಮಣವನ್ನು ಸತತವಾಗಿ ನಡೆಸುತ್ತಾ, ಆದಿವಾಸಿ ಸಮುದಾಯದ ಸ್ವಾತಂತ್ರ್ಯವನ್ನು ಆಶೋತ್ತರಗಳನ್ನು, ಮನಸು ಚಿಂತನೆಗಳನ್ನು, ಕನಸು ಕಲ್ಪನೆಗಳನ್ನು ಛಿದ್ರ ಛಿದ್ರಗೊಳಿಸಿ ಹೀನ ಸ್ಥಿತಿಗೆ ತಂದರು. ಜನವರ್ಗದಲ್ಲಿ ಮೂಡಿದ ಬೇಧ-ಭಾವಗಳು ಜನರನ್ನು ಒಂದಷ್ಟು ವಿಭಜಿಸುವ ಮೂಲಕ ಪ್ರಗತಿ, ಸ್ವಾವಲಂಬನೆ, ಸ್ವಾಭಿಮಾನ, ಸ್ವತಂತ್ರ ಮನೋಧರ್ಮಗಳ ಬೇರನ್ನೇ ಕತ್ತರಿಸಿದರು ಎನ್ನಬಹುದು ಇವುಗಳಲ್ಲದೆ ಬ್ರಿಟಿಷರ ಕುಟಿಲ ಕ್ರಮಗಳಿಂದ ಸ್ಥಳೀಯರ ಸ್ವಾರ್ಥದಿಂದ ಭಾರತಕ್ಕೆ ಕಾಲಿರಿಸಿದ ವಸಾಹತುಶಾಹಿ ವೇಗವಾಗಿ, ಪ್ರಬಲವಾಗಿ ಭಾರತೀಯ ಜನಜೀವನದ ಎಲ್ಲ ಮುಖಗಳನ್ನು ತನ್ನ ಮುಷ್ಠಿಯಲ್ಲಿ ತೆಗೆದುಕೊಂಡು ಭಾರತೀಯ ಸಮಾಜವನ್ನು ಗಾಢ ಪರಾವಲಂಬನೆಯಲ್ಲಿ ಇರಿಸಿತು. ಬ್ರಿಟಿಷರು ಭಾರತಕ್ಕೆ ಬಂದಾಗ ಇಲ್ಲಿನ ಭೂಮಿಯನ್ನು ಅಳೆದು ಎಲ್ಲೆಲ್ಲಿ ವಾಸ್ತವ್ಯವಿದೆ, ಇಲ್ಲಿನ ಜನ ಯಾರ್‍ಯಾರು, ಅವರ ಧಾರ್ಮಿಕ ಸಾಮಾಜಿಕ ಆಚರಣೆ ಇವುಗಳ ಮೇಲೆ ವ್ಯವಸ್ಥಿತವಾದ ದಾಖಲಾತಿ ಹಾಗೂ ನಮ್ಮ ಭಾಷೆ, ಸಂಸ್ಕೃತಿಗಳ ಮೇಲೆ ನಮಗೇ ಇಲ್ಲದ ಆಸಕ್ತಿಯನ್ನು ಬ್ರಿಟಿಷರು ತೋರಿಸಿದರು. ವಾಸ್ತವದಲ್ಲಿ ಬ್ರಿಟಿಷರ ಅಧ್ಯಯನಗಳು ಭಾರತವನ್ನು ವಶಪಡಿಸಿಕೊಂಡು ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಲೂಟಿಮಾಡಲು ಅಗತ್ಯವಾದ ಮಾಹಿತಿ ಸಂಗ್ರಹವಾಗಿರುವುದು ಭಾರತದ ಸಮುದಾಯಗಳ ಅಧ್ಯಯನಗಳನ್ನು ಮಾಡಿದ ಬ್ರಿಟಿಷರು ಜನರ ಕಲೆಗಳನ್ನು, ವೃತ್ತಿಗಳನ್ನು ನಿರ್ಬಂಧಿಸಿದರು ಇಲ್ಲವೇ ನಿಷೇದಿಸಿದರು.

ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದುತ್ತಾ ಬಂದಿವೆ. ಬ್ರಿಟಿಷರ ಆಳ್ವಿಕೆಗೆ ಮೊದಲು ಬುಡಕಟ್ಟುಗಳ ಸ್ವಾತಂತ್ರ್ಯಕ್ಕೆ ಯಾವುದೇ ಧಕ್ಕೆ ಬಂದಿರಲಿಲ್ಲ. ಬ್ರಿಟಿಷರು ಬಂದ ನಂತರ ಭಾರತದಾದ್ಯಂತ ಏಕರೀತಿಯ ಆಳ್ವಿಕೆಯ ಕ್ರಮ ಜಾರಿಗೆ ಬಂತು. ಕಾಲಕ್ರಮೇಣ ಕೈಗಾರಿಕಾ ಕ್ರಾಂತಿಯಿಂದಾಗಿ ಬ್ರಿಟಿಷರು ಭಾರತದಾದ್ಯಂತ ರೈಲ್ವೇ ಸಂಪರ್ಕ ಏರ್ಪಡಿಸಲು ರಸ್ತೆಗಳನ್ನು ಮಾಡಿಸಲು ಪ್ರಾರಂಭಿಸಿದರು. ಇದರಿಂದಾಗಿ ಕಾಡುಗಳನ್ನು ಕಡಿಯಬೇಕಾಯಿತು. ಸಂಪರ್ಕ ಸಾಧನಗಳು ಹೆಚ್ಚಾದಂತೆಲ್ಲಾ ಪರ್ವತಾರಣ್ಯಗಳಲ್ಲಿ ವಾಸವಾಗಿದ್ದ ಬುಡಕಟ್ಟುಗಳ ಜನ ಅನಿವಾರ್ಯವಾಗಿ ಇತರ ಜನಗಳ ಸಂಪರ್ಕಕ್ಕೆ ಬರಬೇಕಾಯಿತು. ಈ ಮಧ್ಯೆ ಕ್ರಿಶ್ಚಿಯನ್ ಪಾದ್ರಿಗಳು ಬುಡಕಟ್ಟು ಜನರಿಗೆ ಕ್ರೈಸ್ತಧರ್ಮದ ಬೋಧನೆಯನ್ನು ಮಾಡುವುದರ ಮೂಲಕ ಅವರನ್ನು ತಮ್ಮ ಧರ್ಮಕ್ಕೆ ಪರಿವರ್ತಿಸಲು ತೊಡಗಿದರು. ಕೆಲವರು ಕ್ರಿಶ್ಚಿಯನ್ನರಾಗಿ ಪರಿವರ್ತಿತರಾದುದು ಉಂಟು. ಬ್ರಿಟಿಷ್‌ರು ಜನರಿಗೆ ಸೇರಿದ ಪರ್ವತಾರಣ್ಯ ಪ್ರದೇಶಗಳನ್ನು ಅವರಿಂದ ಕಿತ್ತುಕೊಂಡಿದ್ದು ಕಾರಣವಾಯಿತು. ಇದರಿಂದಾಗಿ ಸ್ಥಳಾಂತರ ಬೇಸಾಯ ಮಾಡುತ್ತಿದ್ದ ಹಲವಾರು ಬುಡಕಟ್ಟುಗಳ ಜನಕ್ಕೆ ತಮ್ಮ ಭೂಮಿಯಿಲ್ಲದಂತಾಯಿತು. ಈ ಸಂದರ್ಭದಲ್ಲಿಯೇ ಬ್ರಿಟಿಷ್ ಜನ ಟೀ ತೋಟಗಳ ಒಡೆಯರಾದರು. ಗಣಿಗಳ ಮಾಲೀಕರಾದರು. ಇವುಗಳಲ್ಲಿ ಕೆಲಸ ಮಾಡಲು ಕೆಲಸಗಾರರು ಬೇಕಾಯಿತು. ಇದರಿಂದ ದಿನನಿತ್ಯದ ಜನಸಂಪರ್ಕಕ್ಕೆ ಬಂದು ಬುಡಕಟ್ಟು ಜನ ತಮ್ಮ ಮೂಲಸಂಸ್ಕೃತಿಯ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಾ ಇವರು ಹಿಂದೂ ಜನಗಳ ಸಂಪ್ರದಾಯವನ್ನು ಅನುಸರಿಸತೊಡಗಿದರು. ಭೂಮಿಯನ್ನು ಕಳೆದುಕೊಂಡು ಕೂಲಿಗಾಗಿ ದುಡಿಯತೊಡಗಿದರು. ತೀವ್ರವಾದ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದರು. ಕೆಲವು ಬುಡಕಟ್ಟಿನ ಜನರಿಗಂತೂ ತಮ್ಮ ಪ್ರದೇಶ ಪರಕೀಯ ವಶವಾಯಿತೆಂಬ ಪರಕೀಯ ಪ್ರಜ್ಞೆ ಜಾಗೃತವಾಗಿ ತಮ್ಮ ಹಕ್ಕನ್ನುಳಿಸಿಕೊಳ್ಳಲು ದಂಗೆ ಎದ್ದರು. ಬ್ರಿಟಿಷರು, ಈ ದಂಗೆಯನ್ನು ಅಡಗಿಸಿದರು. ಕೆಲವು ಬುಡಕಟ್ಟಿನ ಜನರ ದರೋಡೆಗೆ ತೊಡಗಿದರು. ಇಂತಹ ಬುಡಕಟ್ಟುಗಳನ್ನು ಅಪರಾಧಿ ಬುಡಕಟ್ಟುಗಳೆಂದು ಪರಿಗಣಿಸಿ ಬ್ರಿಟಿಷ್ ಸರಕಾರ ಇವುಗಳ ಮೇಲೆ ವಿಶೇಷ ರಕ್ಷಣಾಕ್ರಮಗಳನ್ನು ಕೈಗೊಳ್ಳಬೇಕಾಯಿತು.

೧೮ ಮತ್ತು ೧೯ನೇ ಶತಮಾನದಲ್ಲಿ ಬ್ರಿಟಿಷರು ತಂದ ಅರಣ್ಯನೀತಿ ಮತ್ತು ಭೂಸುಧಾರಣೆಗಳು ವಸಾಹತು ಆಡಳಿತ ಹಿತ ಕಾಯಲೆಂದೇ ರೂಪಿಸಲ್ಪಟ್ಟವು. ಈ ಕಾಯ್ದೆಗಳು ಭಾರತದ ಆದಿಮ ಕೃಷಿಕ ಸಮಾಜಗಳ ಭೂಮಿ ಮತ್ತು ಅರಣ್ಯಗಳ ಮೇಲಿನ ಪಾರಂಪರಿಕ ಅವಲಂಬನೆಯನ್ನು ನಾಶ ಮಾಡಿದವು. ಕಾನೂನುಬದ್ಧ ಒಡೆತನವನ್ನು ಮಾತ್ರ ಈ ಕಾಯ್ದೆಗಳು ಅನುಮೋದಿಸಿದವು. ಆದಿವಾಸಿಗಳು ವಾಸಿಸುವ ಘಟ್ಟ ಪ್ರದೇಶಗಳಲ್ಲಿ ತಮ್ಮ ಕಾಫಿ ಮತ್ತು ಟೀ ಎಸ್ಟೇಟ್‌ಗಳನ್ನು ವಿಸ್ತರಿಸಲು ಪ್ಲಾಂಟರುಗಳು ಕಂಪನಿಯ ಸೈನ್ಯದ ಮೂಲಕ ಆದಿವಾಸಿಗಳಿಗೆ ಮುಖಾಮುಖಿಯಾದರು. ಅರಣ್ಯ ರಾಷ್ಟ್ರೀಕರಣಗೊಂಡಿದ್ದರಿಂದ, ಅದು ಸರ್ಕಾರದ 'ಸ್ವತ್ತಾ'ಗಿ ಪರಿಗಣಿಸಲ್ಪಟ್ಟಿತು. ರಾಷ್ಟ್ರದ ಹಿತದ ದೃಷ್ಟಿಯಿಂದ ಅರಣ್ಯವನ್ನು ಆದಿವಾಸಿಗಳು ಬಿಟ್ಟುಹೋಗಬೇಕೆಂದು ಅರಣ್ಯ ಕಾಯ್ದೆ ಆದಿವಾಸಿಗಳಿಗೆ ಅಜ್ಞಾಪಿಸಿತು. ಆದಿವಾಸಿಗಳು ಈ ಕಾಯ್ದೆಯನ್ನು ಆಗಿನಿಂದಲೇ ಪ್ರತಿಭಟಿಸುತ್ತಾ ಬಂದರು. ಅರಣ್ಯ

ಮತ್ತು ಕೃಷಿ ಭೂಮಿಯ ಕುರಿತು ತಮ್ಮ ಪಾರಂಪರಿಕ ಅವಲಂಬನೆಯನ್ನು ಮುಂದುವರಿಸಿಕೊಂಡು ಹೋಗಲು ವಸಾಹತು ಆಡಳಿತ ಕಾಲದಿಂದ ಇಲ್ಲಿಯವರೆಗೂ ಆದಿವಾಸಿಗಳು ಹೋರಾಟ ಮಾಡುತ್ತಲೇ ಬಂದಿದ್ದಾರೆ.

**i. ವಸಾಹತುಶಾಹಿ ಅರಣ್ಯನೀತಿ**

ವಸಾಹತು ಆಡಳಿತ ಅರಣ್ಯ ಮತ್ತು ಆದಿವಾಸಿಗಳ ವಿಷಯದಲ್ಲಿ ನಿರ್ದಯವಾಗಿತ್ತು. ಬ್ರಿಟಿಷ್ ಆಡಳಿತ ೧೮೬೫ ರಲ್ಲಿ ರೂಪಿಸಿದ ಅರಣ್ಯನೀತಿಯ ವಸಾಹತುಶಾಹಿಗಳು ಅರಣ್ಯ ಮತ್ತು ಆದಿವಾಸಿಗಳ ಕುರಿತು ಹೇಗೆ ಯೋಚಿಸುತ್ತಿದ್ದರು ಎಂಬುದನ್ನು ಎತ್ತಿ ತೋರಿಸುತ್ತದೆ. ಲ್ಯಾಟಿನ್ ಅಮೇರಿಕಾ ಮತ್ತು ಆಫ್ರಿಕಾದ ದೇಶಗಳಲ್ಲಿ ವಸಾಹತುಶಾಹಿಗಳು ಯಾವ ಬಗೆಯಲ್ಲಿ ನಿಸರ್ಗವನ್ನು ಮತ್ತು ಮಾನವ ಸಂಪನ್ಮೂಲಗಳನ್ನು ಕೊಳ್ಳೆ ಹೊಡೆದು ತಮ್ಮ ಸಾಮ್ರಾಜ್ಯಗಳನ್ನು ಕಟ್ಟಿಕೊಂಡರೋ, ಅದಕ್ಕಿಂತ ಹೀನಾಯವಾಗಿ ಭಾರತದಲ್ಲಿ ನಡೆದುಕೊಂಡರು. ಯುರೋಪಿನ ಸಹಜ ಭೋಗದ ಲಾಲಸೆಯಲ್ಲಿ ಜಗತ್ತಿನ ಎಲ್ಲ ಅಮಾಯಕ ಸಂಪತ್ತನ್ನು ಕೊಳ್ಳೆಹೊಡೆದ ವಸಾಹತುಶಾಹಿಗಳಿಗೆ ಭಾರತದಂತಹ ವೈವಿಧ್ಯ ಸಮಾಜಗಳಿರುವ ದೇಶ ಸುಲಭದ ತುತ್ತೇ ಆಗಿತ್ತು.

ಸೈನ್ಯದ ಬಲ ನಡೆಯದಿದ್ದ ಕಡೆ ಬ್ರಿಟಿಷರು ಅಮಾನವೀಯ ಕಾನೂನುಗಳನ್ನು ಹೇರಿ ತಮ್ಮ ಆಡಳಿತವನ್ನು ಸುಗಮಗೊಳಿಸಿಕೊಳ್ಳುತ್ತಿದ್ದರು. ಭಾರತದಲ್ಲಿ ಅರಣ್ಯ, ಆದಿವಾಸಿಗಳಿಗೆ ಮತ್ತು ದುಡಿವ ಕೆಳಜಾತಿ ವರ್ಗಗಳಿಗೆ ರಚಿಸಿದ ಕಾನೂನುಗಳು ಇದೇ ನೆಲೆಯಲ್ಲಿ ರೂಪಗೊಂಡವು. ತಮ್ಮ ಕಾಫಿ ಎಸ್ಟೇಟುಗಳನ್ನು ಬೆಳೆಸಲು, ರೈಲು ಮಾರ್ಗ ಹಾಕಲು, ಎಲ್ಲಕ್ಕಿಂತ ಮುಖ್ಯವಾಗಿ ಗೆರಿಲ್ಲಾ ಮಾದರಿಯ ಯುದ್ಧದಲ್ಲಿ ವಸಾಹತು ಆಡಳಿತವನ್ನು ಇನ್ನಿಲ್ಲದಂತೆ ಸೋಲಿಸಿಬಿಟ್ಟಿದ್ದ ಆದಿವಾಸಿಗಳನ್ನು ಮಟ್ಟಹಾಕಲು ಕಂಪನಿ ಆಡಳಿತ ತಮಗೆ ಅನುಕೂಲವಾದ ಅರಣ್ಯನೀತಿಯನ್ನು ಜಾರಿಗೆ ತರಲೇಬೇಕಿತ್ತು. ಅರಣ್ಯ ಯಾರದು? ಯಾರು ಅದನ್ನು ಬಳಸಬೇಕು? ಅರಣ್ಯದಲ್ಲಿ ಯಾರಿರಬೇಕು? ಯಾರಿರಬಾರದು? ಎಂಬೆಲ್ಲ ಸಂಗತಿಗಳು ಈ ಅರಣ್ಯನೀತಿಯಿಂದ ಸ್ಪಷ್ಟಗೊಂಡವು. ಈವತ್ತಿನ ಸಂರಕ್ಷಿತ ಅರಣ್ಯ, ಅಭಯಾರಣ್ಯ, ವನ್ಯ ಮೃಗ ಸಂರಕ್ಷಣೆ, ರಾಷ್ಟ್ರೀಯ ಉದ್ಯಾನವನ ಎಂಬ ಆಧುನಿಕ ಕಲ್ಪನೆಗಳೆಲ್ಲ ಈ ಪುರಾತನ ಕಾಯ್ದೆಯಲ್ಲಿಯೇ ತಮ್ಮ ಬೇರುಗಳನ್ನು ಬಿಟ್ಟುಕೊಂಡಿವೆ. ಭಾರತಕ್ಕೆ ಸ್ವಾತಂತ್ರ್ಯ ಬಂದು ೬೮ ವರ್ಷ ಕಳೆದರೂ ಇಲ್ಲಿನ ಅರಣ್ಯನೀತಿ, ಬ್ರಿಟಿಷ್ ಸರ್ಕಾರದ ಅರಣ್ಯನೀತಿಯ ಯಥಾವತ್ತು ನಕಲಾಗಿಯೇ ಉಳಿದುಕೊಂಡಿವೆ. ವಸಾಹತು ಆಡಳಿತ ಸಂದರ್ಭದಲ್ಲಿ ಕಂಪನಿ ಸರ್ಕಾರ ಮೊದಲ ಬಾರಿಗೆ The Madras Forest Act ೧೮೬೫ ಎಂಬ ಕಾಯ್ದೆಯನ್ನು ಜಾರಿಗೆ ತರುತ್ತದೆ. ಆನಂತರ ಕಾಲಕಾಲಕ್ಕೆ ಬ್ರಿಟಿಷರು ಈ ಕೆಳಗಿನಂತೆ ಅರಣ್ಯ ನೀತಿಯನ್ನು ಪುನರ್ ರೂಪಿಸುತ್ತಲೇ ಬಂದಿದ್ದಾರೆ.

1. The Indian Forest Act 1878

2. The Forest Act 1890

3. The Amanding Act 1891

4. The Indian Forest (Amending) Act 1901

5. The Indian Forest (Amending) Act 1911

6. The Repealing and Amending Act 1914

7. The Indian Forest Amendment Act 1918

8. The Devolution Act 1920

ವಸಾಹತುಶಾಹಿ ಯಾವತ್ತೂ ಮನುಷ್ಯನ ಹಿತಾಸಕ್ತಿಗಿಂತ ತನ್ನ ಭೋಗಜೀವನ ಕುರಿತು ಯೋಚಿಸಿದ್ದೇ ಹೆಚ್ಚು. ವಸಾಹತುಶಾಹಿ ತಾನು ಉದ್ಧಾರವಾಗಲು ಮೂರನೇ ಜಗತ್ತಿನ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಬಳಸಿಕೊಳ್ಳಲೇಬೇಕಿತ್ತು. ಅಮಾನೀಯ ಕಾನೂನುಗಳು ಇವರ ಆಡಳಿತ ನೆರವಿಗಾಗಿಯೇ ರೂಪಿಸಲ್ಪಡುತ್ತಿದ್ದವು. ಅಂತಹ ಅನೇಕ ಕಾಯ್ದೆಗಳಲ್ಲಿ ಅರಣ್ಯ ಕಾಯ್ದೆಯೂ ಒಂದು. ವಸಾಹತು ಆಡಳಿತ ಅರಣ್ಯ ಕಾಯ್ದೆಯಲ್ಲಿ ಮುಖ್ಯವಾಗಿ ಎರಡು ನಿಲುವುಗಳು ನಿಗೂಢವಾಗಿ ಅಡಗಿಕೊಂಡಿವೆ.

೧. ಭಾರತ, ಆಫ್ರಿಕಾ, ಲ್ಯಾಟಿನ್ ಅಮೇರಿಕಾದಂತಹ ದೇಶಗಳಲ್ಲಿನ ಅರಣ್ಯಗಳ ವೈವಿಧ್ಯಮಯ ಸಂಪತ್ತನ್ನು ಕೊಳ್ಳೆ ಹೊಡೆಯುವುದು.

೨. ಈ ಅರಣ್ಯದಲ್ಲಿನ ಆದಿವಾಸಿಗಳನ್ನು ತಮ್ಮ ಆಡಳಿತದ ವ್ಯಾಪ್ತಿಗೆ ತಂದುಕೊಂಡು ಅವರನ್ನು ನಿಯಂತ್ರಿಸುತ್ತ ಅವರನ್ನು ಶ್ರಮದಾಯಕ ದುಡಿಮೆಗಳಿಗೆ ಹಚ್ಚುವುದು.

ವಸಾಹತು ಆಡಳಿತ ಭಾರತದಲ್ಲಿ ಜಾರಿಗೊಳಿಸಿದ ಅರಣ್ಯ ನೀತಿಯನ್ನು ಗಮನಿಸಿದರೆ ಸಾಕು ಈ ಎರಡು ಪ್ರಮುಖ ಉದ್ದೇಶಗಳು ಕಣ್ಣಿಗೆ ಹೊಡೆದಂತೆ ಎದ್ದುಕಾಣುತ್ತವೆ. ದುರಾಸೆಯ ಉದ್ದೇಶ ಗಳನ್ನೇ ಇಟ್ಟುಕೊಂಡು ಜಗತ್ತಿನ ಎಲ್ಲ ಕಡೆ ಜಲ ಮಾರ್ಗಗಳನ್ನು ಶೋಧಿಸಲೆಂದು ನೀರಿನಲ್ಲಿ ಈಜುಬಿದ್ದ ಯುರೋಪಿನ ದೇಶಗಳ ಕಣ್ಣೆದುರಿಗಿದ್ದುದು, ಮೂರನೇ ಜಗತ್ತಿನ ಅಪಾರ ವೈವಿಧ್ಯದ ನಿಸರ್ಗ ಮತ್ತು ಅಮಾಯಕ ಆದಿಮ ಕೃಷಿಕ ಸಮಾಜಗಳು.

ಹೀಗಾಗಿ ಭಾರತದಲ್ಲಿ ಬ್ರಿಟಿಷರು ಜಾರಿಗೆತಂದ ಅರಣ್ಯನೀತಿ ವಸಾಹತು ಆಡಳಿತ ಉದ್ದೇಶಗಳ ಈಡೇರಿಕೆಗೆ ನೂರಕ್ಕೆ ನೂರು ಪೂರಕವಾಗಿತ್ತು. ಹೆಸರಿಗೆ ಮಾತ್ರ ಪರಿಸರ ಕಾಳಜಿ ಮತ್ತು ರಾಷ್ಟ್ರದ ಹಿತಾಸಕ್ತಿ ಎಂಬ ಮಾಯದ ಪರದೆಯನ್ನು ತಮ್ಮ ಅಮಾನವೀಯ ಹುನ್ನಾರಗಳಿಗೆ ಕಂಪನಿ ಸರ್ಕಾರ ಹೊದಿಸುತ್ತಿತ್ತು. ರಾಷ್ಟ್ರೀಯ ಉದ್ಯಾನ, ಸಂರಕ್ಷಿತ ಅರಣ್ಯ, ಅಭಯಾರಣ್ಯ ಎಂಬ ಪರಿಕಲ್ಪನೆಗಳೇ ಅನೇಕ ವೈರುಧ್ಯಗಳನ್ನು ತಮ್ಮಲ್ಲಿಟ್ಟುಕೊಂಡಿವೆ. ಈ ಎಲ್ಲ ಪರಿಕಲ್ಪನೆಗಳ ಹಿಂದೆ ಅತ್ಯಂತ ಸ್ಪಷ್ಟವಾಗಿ ವಸಾಹತುಶಾಹಿಗಳ ದುರದ್ದೇಶಗಳು ಎದ್ದು ಕಾಣುತ್ತವೆ. ರಾಷ್ಟ್ರೀಯ ಉದ್ಯಾನ ಮತ್ತು ಅಭಯಾರಣ್ಯ ಗಳನ್ನು ರೂಪಿಸಲು ಇವರ ಕೊಟ್ಟ ಕಾರಣಗಳು ಎರಡು.

೧. ಅರಣ್ಯಗಳು ಭೂಮಿಯ ವಾತಾವರಣವನ್ನು ಕಾಪಾಡುತ್ತವೆ ಅದಕ್ಕಾಗಿ ಅವುಗಳನ್ನು ಕಾಪಾಡಬೇಕು.

೨. ವನ್ಯ ಮೃಗಗಳು ನಾಶವಾಗುತ್ತಿವೆ. ಅವುಗಳ ತಳ ಅಭಿವೃದ್ಧಿಪಡಿಸುವುದರ ಜೊತೆಗೆ ಅವುಗಳನ್ನು ಸಂರಕ್ಷಿಸುವ ಹೊಣೆ ಸರ್ಕಾರದ್ದು ಆಗಿದೆ ಎಂದು ಹೇಳಿದ ಸರ್ಕಾರ, ರಾಷ್ಟ್ರೀಯ ಉದ್ಯಾನಗಳ ಹೃದಯ ಭಾಗದಲ್ಲಿ ಗಣಿಗಾರಿಕೆಗೆ ಮತ್ತು ಬೃಹತ್ ಡ್ಯಾಂಗಳನ್ನು ಕಟ್ಟಲು ಸಾವಿರಾರು ಎಕರೆ ಪ್ರದೇಶವನ್ನು ನಾಶಮಾಡಿತು ಎಂದು ತಿಳಿಯುತ್ತದೆ.

ಮಧ್ಯಯುಗದಲ್ಲಿ ಇಂಗ್ಲೀಷರು ತಮ್ಮೆಲ್ಲ ನೈಸರ್ಗಿಕ ಸಂಪನ್ಮೂಲಗಳನ್ನು ವಿನಾಶಪಡಿಸಿ ಕೊಂಡು ತಮ್ಮ ಅಸ್ತಿತ್ವಕ್ಕಾಗಿ ಹೊಸ ಸ್ಥಳಗಳನ್ನು ಸಂಶೋಧಿಸಹತ್ತಿದರು. ಇದೇ ಬಯಕೆಯು ಆಧುನಿಕ ವಿಜ್ಞಾನ-ತಂತ್ರಜ್ಞಾನದ ನಿರ್ಮಾಣಕ್ಕೂ ಕಾರಣವಾಗಿ, ತಂತ್ರಜ್ಞಾನದ ಲಭ್ಯತೆಯಿಂದಾಗಿ ಐರೋಪ್ಯ ನೌಕಾಪಡೆಯಿಂದ ಮಹಾಸಾಗರಗಳನ್ನು ದಾಟಿ ಬರುವಂತಾಯ್ತು.

ಹಡಗು ನಿರ್ಮಾಣದಲ್ಲಿ ಆಂಗ್ಲರು ತಮ್ಮೆಲ್ಲ 'ಓಕ್' ಅರಣ್ಯಗಳನ್ನು ನಾಶಪಡಿಸಿದರು. ಈ ಎಲ್ಲ ನೈಸರ್ಗಿಕ ಸಂಪನ್ಮೂಲಗಳ ವಿನಾಶದೊಂದಿಗೆ ಅನಂತರದಲ್ಲಿ ಈ ಸ್ಥಳಗಳನ್ನು ಹುಲ್ಲುಗಾವಲು ಹಾಗೂ ಸಮುದಾಯ ನೆಲವನ್ನಾಗಿ ಘೋಷಿಸಿದರು.

ಆದರೆ ೧೭ನೇ ಶತಮಾನದಲ್ಲಿ ಭೂ ಒಡೆಯರು ಈ ನೆಲಗಳನ್ನೆಲ್ಲ ಅತಿಕ್ರಮಿಸಿ, ಸಮುದಾಯಗಳ ಸಮಾಧಿ ಮೇಲೆ ಖಾಸಗೀ ಅರಣ್ಯಗಳನ್ನು ಕಟ್ಟಿದರು. ಇದೇ ಒಂದು ಪರಂಪರೆಯಾಗಿ ಬ್ರಿಟನ್ನಿನಲ್ಲಿ ಸಮುದಾಯ ಅರಣ್ಯಗಳು ನಾಶಗೊಂಡು, ಸರಕಾರದ ಆದೇಶದ ಮೇರೆಗೆ ಕೇವಲ ಖಾಸಗೀ-ಸರಕಾರಿ ಅರಣ್ಯಗಳು ಮಾತ್ರವೇ ರೂಪಗೊಂಡವು. ಮುಂದೆ ಇದನ್ನೇ ತಾರ್ಕಿಕವಾಗಿಯೂ ಭಾರತದಲ್ಲಿ ಬ್ರಿಟಿಷರು ನಿಯೋಜನೆ ಪಡಿಸಿದರು.

ಬ್ರಿಟಿಶರು ಭಾರತದ ಮೇಲೆ ಮುಖ್ಯವಾಗಿ ಮೂರು ಆಶಯಗಳನ್ನು ಹೇರಿದರು.

೧) ಬೇಸಾಯದ ನೆಲದ ಮೇಲೆ ನಿಗದಿತ ಕಂದಾಯವನ್ನು ಹಾಕಿರುವುದು.

೨) ಇಂಗ್ಲಂಡಿನಲ್ಲಿರುವ 'ಮ್ಯಾಂಚೆಸ್ಟರ್'ನ ಮಿಲ್ಲಿಗಾಗಿ ಹತ್ತಿ ಇಂಡಿಗೋಗಳನ್ನು ಪೂರೈಸುವುದು ಹಾಗೂ ಬ್ರಿಟಿಷ್ ಉದ್ಯೋಗ ಸರಾಗವಾಗಿ ನಡೆಯುವಂತಾಗುವುದು ಹಾಗೂ

೩) ತೇಗ, ಸಾಲ ಹಾಗೂ ದೇವದಾರು ಅರಣ್ಯಗಳನ್ನು ಸಮುದಾಯಗಳಿಂದ ಕಸಿದುಕೊಂಡು ಸರಕಾರದ ಮುಷ್ಟಿಯಲ್ಲಿಟ್ಟುಕೊಳ್ಳುವುದು. ಮರಾಠರು ಕಟ್ಟಿದ ತೇಗ ಮರದ ಹಡಗುಗಳನ್ನು ನೋಡಿದ ಬ್ರಿಟಿಶರಿಗೆ ಅವರದ್ದೇ ನಾಡಿನಲ್ಲಿನ 'ಓಕ್' ಮರ ಬರಿದಾಗಿದ್ದುದು ನೆನಪಿಗೆ ಬರುತ್ತಿತ್ತು. ೧೭೯೯ ರಲ್ಲಿ ಬ್ರಿಟಿಶರು ಟಿಪ್ಪೂಸುಲ್ತಾನನನ್ನು ಸೋಲಿಸಿದ ಮೇಲೆ ದಕ್ಷಿಣದ ಪರ್ಯಾಯ ನೆಲದ ಮೇಲೆ ಅವರು ಅಧಿಕಾರ ಹೊಂದಿದರು. ಅವರು ಟಿಪ್ಪೂವಿನ ಗಂಧದ ಮರದ ಕಾನೂನನ್ನು ಮೆಚ್ಚಿಕೊಂಡರು. ಅಲ್ಲದೇ ಇದೇ ಆಧಾರದಲ್ಲಿ (i) ಎಲ್ಲ ಸಮೂಹ ಅರಣ್ಯಗಳನ್ನು ರಾಜ್ಯದ ಹದ್ದುಬಸ್ತಿಗೆ ತಂದರಲ್ಲದೇ,

(ii) ಸಾಗವಾನಿ (ತೇಗ) ಮರವನ್ನು ಈಸ್ಟ್ ಇಂಡಿಯಾ ಕಂಪನಿಯದೆನ್ನುವ ಮಾಗಣಿಯನ್ನು ಮುಂದಿಟ್ಟರು. ಮರಾಠರ ಕಾಲದಲ್ಲಿ ಪವಿತ್ರ ಮರಗಳ ಭಾವನೆಗಳಿಗೆ ಕೊಡಲಿಯೇಟು ಬಿದ್ದಿದ್ದರೆ, ಬ್ರಿಟಿಶರು ರೈತರ ನೆಲದ ಸಾಗವಾನಿ ಮರವನ್ನೂ ಬಿಡದೇ ೧೮೨೫ ರಲ್ಲಿ ಎಲ್ಲೆಡೆ ತಮ್ಮ ಕಂಬಂಧ ಬಾಹುಗಳನ್ನು ವಿಸ್ತರಿಸುತ್ತ ಬಂದರು. ಮುಂದಿನ ಮೂರು ದಶಕಗಳಲ್ಲಿ ಇಡೀ ರಾಷ್ಟ್ರದಾದ್ಯಂತವೂ ನಿಷ್ಕರುಣೆಯ ಅರಣ್ಯ ಹತ್ಯೆಯ ಕೆಲಸ ಅಭಾದಿತವಾಗಿ ನಡೆಯುತ್ತ ಬಂತು.

೧೮೫೭ರ ಯುದ್ಧದ ಅನಂತರದಲ್ಲಿ ಅರಣ್ಯಗಳ ಮೇಲೆ ಇನ್ನೂ ಹಿಡಿತವನ್ನು ಸಾಧಿಸುವ ಅಗತ್ಯತೆಯು ಈಸ್ಟ್ ಇಂಡಿಯಾ ಕಂಪನಿಗೆ ಕಾಣಬಂದಿದ್ದರಿಂದ, ಅರಣ್ಯಗಳ ಯೋಜಿತ ಹಿಡಿತಕ್ಕಾಗಿ ಒಂದು ವ್ಯವಸ್ಥೆಯನ್ನು ಹೊಂದುವುದು ಅನಿವಾರ್ಯವೇ ಆಗಿತ್ತು.

ಮದ್ರಾಸ್ ಕಂದಾಯ ಇಲಾಖೆಯು ತನ್ನ ಕ್ಷೇತ್ರದಲ್ಲಿ ರಾಜ್ಯ ಅರಣ್ಯವನ್ನು ದ್ವಿಗುಣ ಗೊಳಿಸಿ, ಅರಣ್ಯ ಅಭಿವೃದ್ಧಿಯಲ್ಲಿ ಮುತುವರ್ಜಿಯ ಬದಲಿಗೇ ಮುಟ್ಟುಗೋಲು ಕ್ರಮಗಳನ್ನು ಅನುಸರಿಸಿತು. ಸ್ಥಾನಪಲ್ಲಟ ಬೇಸಾಯವು ಆಗ ಚರ್ಚಿತ ವಿಷಯ ಆಗಿತ್ತು. ಇದು ಗುಡ್ಡಗಾಡು ಪ್ರದೇಶಗಳಲ್ಲಿ ಚಾಲ್ತಿಯಲ್ಲಿತ್ತು. ಜನರು ಅರಣ್ಯಗಳನ್ನು ಸುಟ್ಟು ೩-೪ ವರ್ಷಗಳವರೆಗೆ ಧಾನ್ಯಗಳನ್ನು ಬೆಳೆಯುತ್ತಿದ್ದರು. ಅನಂತರ ಇನ್ನೊಂದು ಸ್ಥಳಕ್ಕೆ ಸ್ಥಳಾಂತರಿಸಿ ಇದೇ ಕೆಲಸ ಮಾಡುತ್ತಿದ್ದುದರಿಂದಾಗಿ ಬಹುಕಾಲ ಪಾಳು ನೆಲದ ನಿರ್ಮಾಣ ಆಗುತ್ತಿತ್ತು. ಆದರೆ ಬ್ರಿಟಿಷರು ಇದನ್ನು ಆಕ್ಷೇಪಿಸಿದರಲ್ಲೇ ಜನ ಮಾವು, ಮಹಾಮಾವಾ ಹಾಗೂ ಮ್ಯಾರೋಬೋಲನ್‌ನಂತಹ ಬೆಲೆಯುಳ್ಳ ಸಸ್ಯಗಳನ್ನು ಹಾಗೇ ಬಿಟ್ಟಿರುವುದನ್ನು ಮರೆತರು. ಆದರೆ ಬ್ರಿಟಿಷರ ಚಹ-ಕಾಫಿ ತೋಟಗಳ ಮಾಲಿಕರು ಸ್ಥಳಾಂತರ ಬೇಸಾಯದ ರೀತಿಯನ್ನೇ ವಿರೋಧಿಸಿದರು. ಯಾಕೆಂದರೆ ಅವರ ತೋಟಪಟ್ಟಿಗಳಲ್ಲಿ ಕೆಲಸ ಮಾಡಲು ಇದೇ ಸ್ಥಳಾಂತರ ಬೇಸಾಯದ ಜನರನ್ನು ಅವರು ನೆಚ್ಚಿದ್ದರು. ಆರ್ಥಿಕ ಏಕಸ್ವಾಮ್ಯದಲ್ಲಿ ದೃಷ್ಟಿನೆಟ್ಟ ಬ್ರಿಟಿಷರು ಬ್ರಾಂಡಿಯ ಎಲ್ಲ ಸಲಹೆಗಳನ್ನು ಬದಿಗಟ್ಟು, ಸಮಗ್ರ ಸಮುದಾಯ ಅರಣ್ಯಗಳನ್ನು ರಾಜ್ಯದ ಅಧಿಕಾರ ಕಕ್ಷೆಗೆ ತಂದರು. (ಗಾಡ್ಗೀಳ-ಗುಹಾ ರಿಪೋರ್ಟ್ ೧೯೯೨) ಅತಿ ಹೆಚ್ಚು ಹಣ ನೀಡಿದ ಭೂ ಮಾಲಿಕರಿಗೂ ಈ ನೆಲವನ್ನು ನೀಡಿದ್ದಲ್ಲದೇ, ಜನ ಮರಾಠರೊಂದಿಗೆ ಸೇರಿಬಿಡಬಹುದೆನ್ನುವ ಭಯದಿಂದ ದಕ್ಷಿಣದಲ್ಲಿಯ ಕುಂಬ್ರಿ ಬೇಸಾಯವನ್ನು ನಿಯಂತ್ರಿಸಲಿಲ್ಲ. ಆದರೆ ಉತ್ತರ ಸಹ್ಯಾದ್ರಿಯ ಬುಡಕಟ್ಟು ಜನಾಂಗಗಳ ಪ್ರದೇಶಗಳನ್ನು ಬ್ರಿಟಿಷರು ತಮ್ಮ ಅಧೀನಕ್ಕೆ ತೆಗೆದುಕೊಂಡರು.

ಗ್ರಾಮ ಅರಣ್ಯಗಳನ್ನು ಕಂದಾಯ ಅರಣ್ಯಗಳೆಂದು ಪರಿವರ್ತಿಸಲು ಬ್ರಿಟಿಷ್‌ರು ಒಪ್ಪಿದರಲ್ಲದೇ, ಅಂತಹವನ್ನು ಸ್ಥಾನೀಯರ ಸುಪರ್ದಿಗೆ ವಹಿಸಲು ಒಪ್ಪಿದರು. ಇದು ೧೯೨೭ರ ಅರಣ್ಯ ಕಾನೂನಿನಲ್ಲಿ ನಮೂದಾಗಿಯೂ ಇದೆ. ಆದರೆ ಇಂದಿಗೂ ಅದು ಜಾರಿಗೆ ಬರದಿದ್ದುದು ಒಂದು ಸೋಜಿಗವೇ! ಇದರಿಂದಾಗೇ ಅರಣ್ಯಗಳ ಮೇಲಿನ ಹಕ್ಕು ಕಡಿಮೆಯಾದ್ದರಿಂದಾಗಿ ಜನರು ಅರಣ್ಯ ಅತಿಕ್ರಮಣ ಮಾಡಿ ಬೇಸಾಯ ಮಾಡುವಂತಹಾಗಿದ್ದು. ಆದರೆ ಬ್ರಿಟಿಷ್‌ರು ಅದಕ್ಕೆ ಗಮನವನ್ನೇ ನೀಡದೇ, ಇಂದಿಗೂ ಈ ಸಮಸ್ಯೆಗೆ ಪರಿಹಾರ ಕಾಣದೆ ಹಾಗೇ ಇದೆ.

ಯುರೋಪಿಯನ್ನರ ದುರಾಲೋಚನೆಯ ಮಿದುಳು ಕೆಲಸಮಾಡಿ ಅರಣ್ಯ ಇಲಖೆಯಂತಹ ಅತಿ ವ್ಯವಸ್ಥಿತ ಹದ್ದುಬಸ್ತನ್ನು ಜಾರಿಗೆ ತಂದರು. ಇಲ್ಲಿ ಗುಡ್ಡಗಾಡು, ಇಳಜಾರು, ಪಾಳುಭೂಮಿ, ಮೇವು ನೆಲಗಳೆಲ್ಲವೂ ಅರಣ್ಯ ಇಲಾಖೆಯ ಸುಪರ್ದಿಗೆ ಬಂದವಲ್ಲದೇ, ಬಡ ಬೇಸಾಯಗಾರನ ಕಾಲನ್ನಡಿಗೆಗಳಗೆ ಉಸಿರಾಡುವಲ್ಲಿಯೂ ತೊಂದರೆ ತಂದು, ಜಗತ್ತಿನಲ್ಲಿಲ್ಲದ ಸ್ಥಿತಿಯನ್ನು ತಂದಿಟ್ಟರು.

ಬ್ರಿಟಿಷರು ಬರುವ ಮೊದಲು ದೇಶದಲ್ಲಿ ಅನೇಕ ಸಮೂಹ ಅರಣ್ಯಗಳು ಲಭ್ಯವಿದ್ದವು. ನಮ್ಮ ಅರಣ್ಯಗಳು ಮಸಾಲೆ ಜಿನಸುಗಳಾದ ಅರಿಶಿನ ಎಲೆ (ಮೇಲೊಗರ), ಕಾಳು ಮೆಣಸು ಹಾಗೂ ದಾಲ್ಚಿನ್ನಿ ಉದಾಹರಣೆಗಳು ಇಲ್ಲಿ ಅಣಬೆಯ ರಾಶಿಯೇ ಇದ್ದು ಆಹಾರವಾಗಿದೆ.

ಆದರೆ ಬ್ರಿಟಿಷರ ದೃಷ್ಟಿಯಲ್ಲಿ ಈ ಖಜಾನೆಗೆ ಕಿಮ್ಮತ್ತಿಲ್ಲದೆ ವಿರೋಧವಿತ್ತು. ಆನ್ಯರು ಇದರ ಮೇಲೆ ಬದುಕಿರುವುದು ಮಹತ್ವದ್ದಲ್ಲವೆಂದು ಇಂತಹ ಅರಣ್ಯಗಳನ್ನು ಜಲಪಡೆ, ಬಂದರು ಮುಚ್ಚಿಗೆ, ರೇಲ್ವೆ, ಶಹರುಗಳ ಕಟ್ಟಡಗಳಗಾಗೇ ಮೀಸಲಾದ ದಿಮ್ಮಿಗಳನ್ನು ಪಡೆಯಲು ಇಟ್ಟರು. ಅದಕ್ಕಾಗಿಯೇ ಜನರ ಇಂತಹ ಅರಣ್ಯಗಳ ಅವಲಂಬನೆಯು ಅವರ ದೃಷ್ಟಿಯಲ್ಲಿ ಅಪರಾಧವಾಯಿತು. ಈ ಬ್ರಿಟಿಶರು ವನ್ಯಜೀವಿಗಳನ್ನು ಮಾರಣಹೋಮ ಮಾಡಿ ಅರಣ್ಯ ಅಧಿದೇವತೆಯನ್ನು ಗುಲಾಮರಿರಿಗೆ ದೂಡಿ ತಮ್ಮ ವಸಾಹತು ಬಯಕೆಗಳಗಾಗೇ ಬಳಸಿಕೊಂಡರು.

ಬ್ರಿಟಿಶರ ಈ ರೀತಿಯ ಅರಣ್ಯ ಉಸ್ತುವಾರಿಯು ದೇಶದ ವೈವಿಧ್ಯಮಯವಾದ ಅರಣ್ಯ ನಾಶದ ಜೊತೆಯಲ್ಲಿಯೇ ಏಕಸಸ್ಯ ಸ್ಥಾಯೀ ನೀತಿಯೂ ಜಾರಿಗೆ ಬಂತು. ವಿಜ್ಞಾನವು ಯಾವಾಗಲೂ ಸಂಶಯ ಹಾಗೂ ಅಧ್ಯಯನಗಳನ್ನು ಬಯಸುತ್ತಿದ್ದು, ಅನೇಕ ಪ್ರಯೋಗಗಳ ಫಲಶ್ರುತಿಯನ್ನು ಅವಲಂಬಿಸಿರುತ್ತದೆ. ಆದರೆ ಭಾರತೀಯ ಬ್ರಿಟಿಷ್ ಪ್ರೇರಿತ ಇಂತಹ ಅರಣ್ಯಗಳು ವೈಜ್ಞಾನಿಕ ಆಧಾರಿತಗೊಂಡವು.

ಹೀಗೆ ಕಂಪನಿ ಆಡಳಿತ ಸಂದರ್ಭದಲ್ಲಿ ಈ ದೇಶದ ಆದಿವಾಸಿಗಳು ಇನ್ನಿಲ್ಲದ ಪಲ್ಲಟಗಳಿಗೆ ಒಳಗಾಗಿದ್ದಾರೆ. ತಮ್ಮ ಪಾರಂಪರಿಕ ನೆಲೆ, ಕಸುಬು ಮತ್ತು ಸಾಂಸ್ಕೃತಿಕ ಪರಿಸರದಿಂದ ಬಲವಂತಾಗಿ ಹೊರನೂಕಿಸಿಕೊಂಡಿದ್ದಾರೆ. ವಸಾಹತು ಆಡಳಿತ ಸಹಜವಾದ ಸಾಮ್ರಾಜ್ಯಶಾಹಿ ಧೋರಣೆಯಿಂದ ಹಿಂಸಿಸಲ್ಪಟ್ಟ ಆದಿವಾಸಿಗಳು, ಸ್ವತಂತ್ರ ಭಾರತ ಈ ಹಂತಕ್ಕೆ ಆಧುನಿಕಗೊಳ್ಳುವವರೆಗೂ ಅನೇಕ ಸಂಘರ್ಷಗಳಿಂದ ಘಾಸಿಗೊಂಡಿದ್ದಾರೆ. ಜೊತೆಗೆ ನಾಗರಿಕವಾಗಿ ಇನ್ನೂ ಅವರು 'ಆಧುನಿಕ ಪೂರ್ವ ಸ್ಥಿತಿಯಲ್ಲಿ' ಅಥವಾ 'ಜನಾಂಗಿಕ, ಅನಾಗರಿಕ' ಹಂತದಲ್ಲಿಯೇ ಉಳಿದುಬಿಟ್ಟಿದ್ದಾರೆ. ಎಂದು ಭಾವಿಸಲಾಗಿದೆ. ಬುಡಕಟ್ಟುಗಳನ್ನು ಈ ಬಗೆಯಲ್ಲಿ ಭಾವಿಸುವ ಕ್ರಮವೇ ತೊಡಕಿನದಾಗಿದೆ. 'ಜನಾಂಗಿಕ, ಅನಾಗರಿಕ' ಎಂಬ ಪರಿಕಲ್ಪನೆಗಳೇ ಯಜಮಾನಿಕೆಯ ಅಹಂನಿಂದ ರೂಪುಗೊಂಡಂತವುಗಳು. ಆದಿವಾಸಿಗಳು 'ಮುಖ್ಯವಾಹಿನಿ' ಎಂದು ಕರೆಯಲ್ಪಡುವ ಜಗತ್ತಿನಿಂದ ಎಲ್ಲಿಯವರೆಗೆ ಈ ಬಗೆಯ ಪರಿಭಾಷೆಯಲ್ಲಿ ಗ್ರಹಿಸಲ್ಪಡುತ್ತಾರೋ ಅಲ್ಲಿಯವರೆಗೂ ಆದಿವಾಸಿಗಳು 'ಅನ್ಯರಾಗಿ' ಅಭಿವೃದ್ಧಿ ಫಲಗಳನ್ನು ಅನುಭವಿಸದೆ ದ್ವೀಪಗಳಾಗಿ ಉಳಿದು ಬಿಡುವ ಸಾಧ್ಯತೆ ಇರುತ್ತದೆ. ತಮ್ಮ ಸಂಸ್ಕೃತಿ,

ಭಾಷೆ, ಆಧ್ಯಾತ್ಮ ಮತ್ತು ಜೀವನ ವಿಧಾನಕ್ಕೆ ಸಂಬಂಧಿಸಿದಂತೆ ಯಾವತ್ತೂ ಪ್ರತ್ಯೇಕತೆಯನ್ನು ಮತ್ತು ವೈವಿಧ್ಯತೆಯನ್ನು ಕಾಯ್ದುಕೊಂಡು ಬಂದಿರುವ ಜನರನ್ನು ನಾವು ಇಂದಿನವರಗೂ ವಸಾಹತು ಶಾಹಿ ಉಪಯೋಗವಾದಿ ದೃಷ್ಟಿಕೋನದಿಂದಲೇ ನೋಡಿಕೊಂಡು ಬಂದಿದ್ದೇವೆ. ಈ ದೃಷ್ಟಿಕೋನ ಉಪಭೋಗವನ್ನು ಮತ್ತು ಅಭಿವೃದ್ಧಿಯನ್ನು ಏಕರೂಪದಲ್ಲಿ ಗ್ರಹಿಸುತ್ತದೆ. ಏಕ ಮಾದರಿಯ ಅಭಿವೃದ್ಧಿ ನೀತಿಯಿಂದ ಜನತೆಯ ಕಲ್ಯಾಣ ಮಾತ್ರವಲ್ಲ, ದೇಶದ ಅಖಂಡತೆಯನ್ನು ಸಾಧಿಸಬಹುದೆಂಬುದು ಯುರೋಪಿನ ಸಾಂಪ್ರದಾಯಿಕ ಅಭಿವೃದ್ಧಿ ಚಿಂತನೆಯಾಗಿದೆ. ಈ ಬಗೆಯ ಚಿಂತನೆಗೆ ಸಾಮಾಜಿಕ ಶ್ರೇಣೀಕರಣವಾಗಲಿ, ವೈವಿಧ್ಯತೆಯ ಹೆಸರಲ್ಲಿ ಆಚರಿಸಲ್ಪಡುತ್ತಿರುವ ಸಾಮಾಜಿಕಾರ್ಥಿಕ ತಾರತಮ್ಯ ಗಳಾಗಲಿ, ವರ್ಗ ವೈರುಧ್ಯಗಳಾಗಲಿ ಮತ್ತು ಲಿಂಗ ತಾರತಮ್ಯವಾಗಲಿ ಗೋಚರಿಸುವುದಿಲ್ಲ. ಅಭಿವೃದ್ಧಿಯ ಫಲಗಳನ್ನು ಅನುಭವಿಸುವ ಮತ್ತು 'ಪಡೆದು'ಕೊಳ್ಳುವ ಜನತೆ ಅಖಂಡವಾಗಿ ಕಾಣುತ್ತಾರೆ. ಭಾರತದಂತಹ ಸಾಂಪ್ರದಾಯಿಕ ದೇಶದಲ್ಲಿ ಸಮಾಜ ಯಾವತ್ತೂ ಅಖಂಡವಾಗಿರುವುದಿಲ್ಲ. ಹಾಗಿದ್ದಾಗ ಅಭಿವೃದ್ಧಿ ನೀತಿಯೂ ಅಖಂಡವಾಗಿರಬೇಕಿಲ್ಲ. ಆದರೆ ಅಭಿವೃದ್ಧಿ ನೀತಿಯು ಭಾರತದಲ್ಲಿ ಅಖಂಡ ಸಮಾಜದ ಕಲ್ಪನೆಯಲ್ಲಿಯೇ ರೂಪುಗೊಂಡಿದೆ. ಈ ಕಾರಣಕ್ಕಾಗಿಯೇ ಭಾರತದಲ್ಲಿ ಮಾನವ ಕಲ್ಯಾಣ ಆಗಬೇಕಾದಷ್ಟು, ಪ್ರಮಾಣದಲ್ಲಿ ಆಗಿಲ್ಲ. ದನಿ ಇಲ್ಲದ ಸಮುದಾಯಗಳು ಅಭಿವೃದ್ಧಿಯ ಫಲಗಳನ್ನು ಪಡೆದುಕೊಳ್ಳಲಾಗಿಲ್ಲ.

ಬ್ರಿಟಿಷರು ವೈಜ್ಞಾನಿಕ ನೆಲೆಯಿಲ್ಲದ ಅರಣ್ಯ ಉಸ್ತುವಾರಿಯನ್ನು ಆರಂಭಿಸಿದ್ದೇ ಅಲ್ಲದೇ, ಜನರನ್ನು ಕತ್ತಲೆಯಲ್ಲಿಟ್ಟರು. ಅವರು ಹೇಳುತ್ತಿದ್ದೇನೆಂದರೆ ಜನರೇ ತಮ್ಮ ಉಪಯೋಗಕ್ಕಾಗಿ ಅರಣ್ಯವನ್ನು ನಾಶಗೊಳಿಸಿದರು. ಅತ್ಯಂತ ಇಳಿಜಾರು ಗುಡ್ಡಗಳ ಅರಣ್ಯಗಳನ್ನು ಆಪೋಶಿಸಿದ್ದು, ಇಳಿಮೇಡು ವ್ಯವಸ್ಥೆಗೆ ಧಕ್ಕೆ ತರುವಂತಿತ್ತು. ಆಯ್ಕೆ ವೃತ್ತದಲ್ಲಿಯೂ ಸಸ್ಯಗಳ ನಾಶ ಅವ್ಯಾಹತವಾಗೇ ಇತ್ತು. ಪೂರ್ತಿ ನಾಶದ ವೃತ್ತದ ಉದ್ದೇಶವು ಒಂದೇ ಜಾತಿಯ ಗಿಡಗಳನ್ನು ಹಚ್ಚುವುದೇ ಆಗಿತ್ತು. ಎಲ್ಲ ವೃತ್ತಗಳೂ ವಿನಾಶವನ್ನೇ ಗುರಿಯಾಗಿಸಿಕೊಂಡಿದ್ದು, ಇಂತಹ ಗುಡ್ಡಗಾಡುಗಳಲ್ಲಿಯೂ ಪೂರ್ತಿ ಕಡಿತ ಏರ್ಪಡಿಸಿ ಇಳಿಜಾರು ಇನ್ನೂ ಕಡಿದಾಗಲು ನೆರವು ನೀಡಿದರು.

ಈಸ್ಟ್ ಇಂಡಿಯಾ ಕಂಪನಿಯ ಆಡಳಿತದಲ್ಲಿ ಯಾವುದೇ ನಿಯಮಗಳು ಇರದೇ ಭಾರತದ ಅರಣ್ಯಗಳು ವಿನಾಶ ಹೊಂದುತ್ತ ಬಂದವು. ರೇಲ್ವೇ ಸ್ಲೀಪರ್ ಎಂಜಿನ್ ನಡೆಸಲು ಜಗತ್ತಿನ ಮಹಾಸಾಗರದಲ್ಲೆಡೆಗೆ ತೇಲಾಡುತ್ತಿರುವ ಬ್ರಿಟಿಶ್ ಹಡಗುಗಳ ನಿರ್ಮಾಣದಲ್ಲಿಯೂ ಈ ಅರಣ್ಯಗಳು ಬಳಕೆಯಾಗುತ್ತ ಬಂದವು.

ಅದೇ ರೀತಿಯಾಗಿ ಬಿದಿರು ಮಲೆನಾಡು ಪ್ರದೇಶಗಳಲ್ಲಿ ಹೆಚ್ಚಾಗಿರುವುದರಿಂದ ಗ್ರಾಮೀಣರಲ್ಲಿನ ಮಹತ್ವದ ನೈಸರ್ಗಿಕ ಸಂಪನ್ಮೂಲವೇ ಆಗಿದ್ದು, ತೊಟ್ಟಿಲಿನಿಂದ ಚಟ್ಟದವರೆಗೂ ಅದು ಬಳಸಲ್ಪಡುತ್ತದೆ. ಬಿದಿರು ಮನೆ ನಿರ್ಮಾಣದಲ್ಲಿ, ಕೊಟ್ಟಿಗೆಯ ತಯಾರಿಯಲ್ಲಿ ಬೇಸಾಯ ಕಸುಬಿನ ಸಲಕರಣೆಗಳಲ್ಲಿ ಕೊಳಲು ಹಾಗೂ ಸೌಂದರ್ಯ ಸಾಧನಗಳಲ್ಲಿಯೂ ಬಳಕೆಯಾಗುತ್ತದೆ. ಅನೇಕ ಕರಕುಶಲರಲ್ಲದೇ

ಪರಂಪರಾಗತ ಕೆಲವು ಜಾತಿಗಳು ಇದನ್ನೇ ಅವಲಂಬಿಸಿವೆ. ಬ್ರಿಟಿಶರ ಆಗಮನ ಪೂರ್ವದಲ್ಲಿ ಇದು ಪುಕ್ಕಟೆಯಾಗೇ ಲಭ್ಯವಿತ್ತು. ಯಾವಾಗ ಬ್ರಿಟಿಶರು ಅರಣ್ಯಗಳನ್ನು ತಮ್ಮ ಸುಪರ್ದಿಗಳ ಪಡಿಸಿದರೋ, ಅವರು ಪ್ರತಿ ಟನ್ನಿಗೆ ಐದು ರೂ.ಗಳಂತೆ ಆಕರಿಸಿ, ಆಗ ಅದೇ ಅಧಿಕ ಹೊರೆ ಅನ್ನುವುದನ್ನು ಮರೆತರು. ೧೮೬೦ರಲ್ಲಿ ಆರಂಭವಾದ ಈ ಪರಿಯು ಭಾರತದ ವೈವಿಧ್ಯಮಯ ಕಾಡಿನಲ್ಲಿ ಕಂಡು ಬರುತ್ತಿದ್ದ ಬಿದಿರು, ಆಮ್ಲ, ಬೇರ್, ಮಹೂವಾ, ಮೈರೋಬೋಲನ್, ಮುರುಗಲು ಇತ್ಯಾದಿಗಳ ಬದಲಾಗಿ ಏಕಜಾತಿಯ ಸಾಗುವಾನಿ, ಸೌಲ್, ಪೈನ್ ಮರಗಳನ್ನು ನೈಸರ್ಗಿಕ ಕಾಡಿನ ಬದಲಿಗೆ ಬೆಳಸಹತ್ತಿದರು. ಬಿದಿರನ್ನು ನೆಡುತೋಪುಗಳಲ್ಲಿ ಕಳೆ ಎಂದೇ ಪರಿಗಣಿಸಿ ಅದರ ಸಮೂಲ ನಾಶಕ್ಕೆ ಆರಂಭವಾಯಿತು. ಉತ್ತರ ಕನ್ನಡ ಜಿಲ್ಲೆಯಂತಹ ಅಧಿಕ ಮಳೆಯಾಗುವ ಪ್ರದೇಶದಲ್ಲಿ ಸ್ಥಾನಾಂತರ ಬೇಸಾಯ ಇರುವಲ್ಲಿ ಸಾಗುವಾನಿಯನ್ನು ಹಚ್ಚಿದ್ದು. ಇದು ನಿಷ್ಪ್ರಯೋಜನೆಗೊಂಡು ಇರುವ ಅರಣ್ಯಗಳು ನಾಶವಾದವು. ಜನರೇ ಅರಣ್ಯ ನಾಶಕ್ಕೆ ಕಾರಣ ಎಂದೇ ಹೇಳುತ್ತ ಬಂದ ಅರಣ್ಯ ಇಲಾಖೆಯ ಅಧಿಕಾರಿಗಳಲ್ಲಿ ಇಂದಿಗೂ ಅದೇ ತುಂಬಿದೆ.

### ೧.೫ ಸ್ವಾತಂತ್ರ್ಯ ನಂತರದ ಚಿತ್ರಣ

ಸ್ವಾತಂತ್ರ್ಯ ನಂತರ, ಅರಣ್ಯ ಮತ್ತು ಆದಿವಾಸಿಗಳನ್ನು ಜೊತೆಯಲ್ಲೇ ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಲು ಅನೇಕ ಆಯೋಗಗಳನ್ನು ಭಾರತ ಸರ್ಕಾರ ನೇಮಿಸಿದೆ. ಸ್ವತಃ ನೆಹರು ಆದಿವಾಸಿಗಳನ್ನು ಅಪರವಾಗಿ ಪ್ರೀತಿಸುತ್ತಿದ್ದರು. ಆದಿವಾಸಿಗಳ ಅಭಿವೃದ್ಧಿಗಾಗಿ ಪಂಚಶೀಲ ತತ್ವಗಳನ್ನ ನೆಹರು ರೂಪಿಸಿದರು. ಅಲ್ಲದೆ ಆದಿವಾಸಿಗಳ ಕಾಡಿನ ಮುಗ್ಧ ಪರಿಸರವನ್ನು ಹೊರಗಿನ ಜನ ಯಾವ ಕಾರಣಕ್ಕೂ ಕದಡಬಾರದೆಂದು ನೆಹರು ಪದೇ ಪದೇ ತಮ್ಮ ಭಾಷಣಗಳ ಮೂಲಕ ಕರೆ ನೀಡುತ್ತಿದ್ದರು. ಆದಿವಾಸಿಗಳು ಕಾಡಲ್ಲಿಯೇ ಇದ್ದು, ಅವರಷ್ಟಕ್ಕೆ ಅವರು ಅಭಿವೃದ್ಧಿಯ ಕಡೆಗೆ ನಡೆದು ಹೋಗಬೇಕೆಂದು ನೆಹರು ಬಯಸುತ್ತಿದ್ದರು. ಅವರ ಕಾಲದಲ್ಲಿಯೇ ಮೊದಲಬಾರಿಗೆ ಅರಣ್ಯ ಮತ್ತು ಆದಿವಾಸಿಗಳ ಪಾರಂಪರಿಕ ಸಂಬಂಧದ ಕುರಿತು ವೈಜ್ಞಾನಿಕ ವರದಿಯನ್ನು ಸಿದ್ಧಪಡಿಸಲು ಢೇಬರ್ ಆಯೋಗವನ್ನು ನೇಮಿಸಲಾಯಿತು. ಅನಂತರ ಅನೇಕ ಆಯೋಗಗಳು ಸ್ವಾತಂತ್ರ್ಯಾನಂತರ ನೇಮಿಸಲ್ಪಟ್ಟಿವೆ. ಆ ಆಯೋಗಗಳು ಈ ಕೆಳಗಿನಂತಿವೆ.

೧. ಢೇಬರ್ ಆಯೋಗ ೧೯೬೧

೨. ಹರಿಸಿಂಗ್ ಸಮಿತಿ ೧೯೬೭

೩. ರಾಷ್ಟ್ರೀಯ ಕೃಷಿ ಆಯೋಗ ೧೯೭೬

೪. ಅರಣ್ಯ ಮತ್ತು ಆದಿವಾಸಿ ಅಭಿವೃದ್ಧಿ ಖಾತೆಯ ರಾಜ್ಯ ಮಂತ್ರಿಗಳ ಸಮ್ಮೇಳನ ೧೯೭೮

೫. ರಾಯ್ ಬರ್ಮನ್ ಆಯೋಗ ೧೯೮೨

೬. ಭೂರಿಯಾ ಆಯೋಗ ೧೯೯೬

ಆದಿವಾಸಿಗಳ ಅಭಿವೃದ್ಧಿಯ ಕುರಿತು ಈ ಮೇಲಿನ ಆಯೋಗಗಳು ಮಾಡಿದ ಶಿಫಾರಸ್ಸುಗಳಲ್ಲಿ ಮುಖ್ಯವಾದವುಗಳನ್ನು ಗಮನಿಸಬಹುದಾಗಿದೆ.

**೧. ಧೇಬರ್ ಆಯೋಗದ ಮುಖ್ಯ ಶಿಫಾರಸ್ಸುಗಳು ೧೯೬೧**

ಅ) ಅರಣ್ಯ ಉಪಉತ್ಪನ್ನಗಳ ಮೇಲೆ ಆದಿವಾಸಿ ಸಮುದಾಯಗಳು ಸಂಪೂರ್ಣ ಅಧಿಕಾರ ಹೊಂದುವುದನ್ನು ಸರ್ಕಾರದ ಅರಣ್ಯನೀತಿಯು ಕಾನೂನುಬದ್ಧಗೊಳಿಸಬೇಕು.

ಆ) ಅರಣ್ಯದ ಮಧ್ಯೆ ಹಾಡಿಗಳಲ್ಲಿ ವಾಸಿಸುವ ಆದಿವಾಸಿಗಳ ಜಮೀನುಗಳನ್ನು ರಕ್ಷಿಸಬೇಕು, ಅಲ್ಲದೆ ಈ ಹಾಡಿಗಳಿಗೆ ಬಾವಿಗಳು, ಶಾಲೆ ಮತ್ತು ಆಸ್ಪತ್ರೆಗಳಂತಹ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಟ್ಟು ಅವು ಸ್ವಯಂಪೂರ್ಣವಾಗುವಂತೆ ನೋಡಿಕೊಳ್ಳಬೇಕು.

**೨. ಹರಿಸಿಂಗ್ ಆಯೋಗದ ಮುಖ್ಯ ಶಿಫಾರಸ್ಸುಗಳು ೧೯೬೭**

ಅ) ಅರಣ್ಯಗಳ ಉತ್ಪನ್ನಗಳನ್ನು ಅವಲಂಬಿಸುವ ಉದ್ಯಮಗಳನ್ನು ಮತ್ತು ಕಾರ್ಖಾನೆಗಳನ್ನು ಸ್ಥಳೀಯವಾಗಿ ಸ್ಥಾಪಿಸಿ, ಅಲ್ಲಿ ಆದಿವಾಸಿಗಳಿಗೆ ಉದ್ಯೋಗ ಸಿಗುವಂತೆ ಮಾಡಬೇಕು.

ಆ) ರಾಷ್ಟ್ರೀಯ ಆದಿವಾಸಿ ಅಭಿವೃದ್ಧಿ ಸಹರಕಾರ ಸಂಘಗಳನ್ನು ರೂಪಿಸಿ, ಆದಿವಾಸಿಗಳು ನೆಲೆಸಿರುವ ಕಡೆ ಈ ಸಹಕಾರಿ ಸಂಸ್ಥೆಗಳನ್ನು ಕೊಂಡೊಯ್ದು ಅವರೇ ಈ ಸಂಸ್ಥೆಗಳನ್ನು ನಡೆಸಿಕೊಂಡು ಹೋಗುವ ಯೋಜನೆಯನ್ನು ಹಾಕಿಕೊಳ್ಳಬೇಕು.

**೩. ರಾಷ್ಟ್ರೀಯ ಕೃಷಿ ಆಯೋಗದ ಮುಖ್ಯ ಶಿಫಾರಸ್ಸುಗಳು ೧೯೭೬**

ಅ) ಸರ್ಕಾರ ಅರಣ್ಯೀಕರಣ ಮಾಡುವ ಕಡೆ, ತೋಟಗಾರಿಕೆ ಮತ್ತು ಹುಲ್ಲುಗಾವಲುಗಳನ್ನು ಅಭಿವೃದ್ಧಿ ಪಡಿಸುವ ಕಡೆಗಳಲ್ಲಿ ಆದಿವಾಸಿಗಳಿಗೆ ಕೃಷಿಭೂಮಿಯನ್ನು ಕೊಡಬೇಕು.

ಆ) ಕುಮ್ರಿ ಬೇಸಾಯ ಪದ್ಧತಿಯನ್ನು ನಿವಾರಿಸಲು ಆದಿವಾಸಿಗಳಿಗೆ ಅವರು ನೆಲೆ ನಿಲ್ಲಲು ಇಚ್ಛಿಸಿದ ಕಡೆ ಕೃಷಿ ಭೂಮಿಯನ್ನು ಕಾನೂನು ಬದ್ಧವಾಗಿ ಹಂಚಬೇಕು.

**೪. ಅರಣ್ಯ ಮತ್ತು ಆದಿವಾಸಿ ಅಭಿವೃದ್ಧಿ ಖಾತೆಯ ರಾಜ್ಯ ಮಂತ್ರಿಗಳ ಸಮ್ಮೇಳನದ ಶಿಫಾರಸ್ಸುಗಳು ೧೯೭೮**

ಅ. ಸಹಕಾರ ಸಂಘಗಳ ಅಭಿವೃದ್ಧಿ ಮತ್ತು ಸಂಶೋಧನಾ ಘಟಕಗಳಿಂದ, ಅರಣ್ಯದ ಪ್ರತಿಯೊಂದು ಉಪಉತ್ಪನ್ನಗಳ ಮಾಹಿತಿ ಸಂಗ್ರಹಿಸುವುದು ಮತ್ತು ಅರಣ್ಯಗಳ ಉಪಉತ್ಪನ್ನಗಳನ್ನು ಹೆಚ್ಚಾಗಿ ಸಂಗ್ರಹಿಸಿ ಅವುಗಳನ್ನು ಸಹಕಾರ ಸಂಘಗಳ ಮೂಲಕ ಮಾರಾಟ ಮಾಡುವ ವ್ಯವಸ್ಥೆಯನ್ನು ಸರಕಾರ ಮಾಡಬೇಕು. ಇದರಿಂದ ಬಂದ ಹಣವನ್ನು ಆದಿವಾಸಿಗಳ ಅಭಿವೃದ್ಧಿ ಯೋಜನೆಗಳಿಗೆ ಬಳಸಬೇಕು.

ಆ. ಹಾಡಿಗಳಲ್ಲಿ ವಾಸಿಸುವ ಆದಿವಾಸಿಗಳು ತಾವು ಸಾಗುಮಾಡಿಕೊಂಡು ಬಂದಿರುವ ಮತ್ತು ಪಾರಂಪರಿಕವಾಗಿ ಅವಲಂಬಿಸಿಕೊಂಡು ಬಂದಿರುವ ಕೃಷಿ ಭೂಮಿಯು ಕಾನೂನುಬದ್ಧವಾಗಿ

ಅವರಿಗೆ ಸಲ್ಲಬೇಕು. ಅಲ್ಲದೆ ಆದಿವಾಸಿಗಳ ಹಾಡಿಗಳು ಎಲ್ಲಾ ಮೂಲಭೂತ ಸೌಲಭ್ಯಗಳನ್ನು ಹೊಂದುವಂತಾಗಬೇಕು.

**೬. ರಾಯ್ ಬರ್ಮನ್ ಆಯೋಗದ ಶಿಫಾರಸ್ಸುಗಳು ೧೯೮೨**

ಅ. ಇಡೀ ವಾತಾವರಣವನ್ನು ಸಮತೋಲನದಲ್ಲಿಡುವ ಮಹತ್ವದ ಅರಣ್ಯ ಪ್ರದೇಶಗಳನ್ನು ರಕ್ಷಿತ ಅರಣ್ಯಗಳಾಗಿಸಬಹುದು. ಆದರೆ ಇಲ್ಲಿಂದ ಆದಿವಾಸಿಗಳನ್ನು ಒಕ್ಕಲೆಬ್ಬಿಸುವವಂತಿಲ್ಲ. ಆಕಸ್ಮಾತ್ ಆದಿವಾಸಿಗಳ ಸ್ಥಳಾಂತರ ಅನಿವಾರ್ಯವಾದಲ್ಲಿ ಅತ್ಯಂತ ತ್ವರಿತಗತಿಯಲ್ಲಿ ವೈಜ್ಞಾನಿಕವಾಗಿ ಮತ್ತು ಕಾನೂನುಬದ್ಧ ರೀತಿಯಲ್ಲಿ ಆದಿವಾಸಿಗಳನ್ನು ಸ್ಥಳಾಂತರಿಸಬೇಕು.

ಆ. ರಾಷ್ಟ್ರೀಯ ಉದ್ಯಾನ ಮತ್ತು ಅಭಯಾರಣ್ಯಗಳಿಂದ ಹೊರಬೀಳುವ ಆದಿವಾಸಿಗಳು ಸೂಕ್ತ ರೀತಿಯಲ್ಲಿ ಸ್ಥಳಾಂತರಗೊಳ್ಳಬೇಕು. ಹೀಗೆ ಸ್ಥಳಾಂತರಗೊಂಡವರಿಗೆ ಒಳ್ಳೆಯ ಪರ್ಯಾಯಗಳನ್ನು ಕಲ್ಪಿಸಿ ಅವರ ಜೀವನ ನಿರ್ವಹಣೆಗೆ ಸಹಕರಿಸಬೇಕು.

ಇ. ರಾಷ್ಟ್ರೀಯ ಉದ್ಯಾನಗಳು, ಅಭಯಾರಣ್ಯಗಳು ಮತ್ತು ಜೈವಿಕ ಉದ್ಯಾನಗಳು ಆದಿವಾಸಿಗಳ ನೆಲೆಗಳ ಸಮೀಪದಲ್ಲಿರುವಂತೆ ಸರಕಾರ ಯಾವುದೇ ಯೋಜನೆಗಳನ್ನು ರೂಪಿಸಕೂಡದು.

**೭. ಭೂರಿಯಾ ಆಯೋಗದ ಶಿಫಾರಸ್ಸುಗಳು ೧೯೯೬**

ಆದಿವಾಸಿಗಳ ಹಕ್ಕುಗಳನ್ನು ಕಾಪಾಡಲು ಅತ್ಯಂತ ದಿಟ್ಟ ನಿಲುವುಗಳನ್ನು ಪ್ರಕಟಿಸಿದ ಆಯೋಗವಿದು. ಪ್ರಜಾಪ್ರಭುತ್ವದ ವಿಕೇಂದ್ರಿಕರಣ ವ್ಯವಸ್ಥೆಯಡಿ, ಸರ್ಕಾರದ ಕಟ್ಟಕಡೆಯ ಆಡಳಿತ ಘಟಕಕ್ಕೆ ಸಹಜವಾಗಿ ದತ್ತವಾಗುವ ಅಧಿಕಾರಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡೇ, ಆದಿವಾಸಿ ಗ್ರಾಮಸಭೆಯನ್ನು ಸರ್ವಶಕ್ತ ಮತ್ತು ಸ್ವಯಂಪೂರ್ಣ ಆಡಳಿತದ ಘಟಕವನ್ನಾಗಿಸುವ ನಿಟ್ಟಿನಲ್ಲಿ ಈ ಆಯೋಗ ಹಲವು ಕ್ರಾಂತಿಕಾರಕ ಶಿಫಾರಸ್ಸುಗಳನ್ನು ಮಾಡಿದೆ.

ಅ. ಗ್ರಾಮಸಭೆಯೇ ಸರ್ವಶ್ರೇಷ್ಠ. ಹಾಡಿಯ ಸರ್ವಜನರು ಇದರಲ್ಲಿ ಭಾಗಿಗಳಾಗಿ ಹಾಡಿಯ ಆಳ್ವಿಕೆಯಲ್ಲಿ ಪಾಲ್ಗೊಳ್ಳುವ ಅಧಿಕಾರ.

ಆ. ಬುಡಕಟ್ಟು ಜನರು ತಮ್ಮ ಸಂಸ್ಕೃತಿಯ ಹಿನ್ನೆಲೆಯಲ್ಲಿ ಅಭಿವೃದ್ಧಿ ಹೊಂದಲು ತಮ್ಮ ಎಲ್ಲ ಸಾಂಪ್ರದಾಯಿಕ ನಡವಳಿಕೆಗಳನ್ನು ರಕ್ಷಣೆ ಮಾಡಿಕೊಂಡು ಮುಂದುವರಿಸಿಕೊಂಡು ಹೋಗುವ ಅಧಿಕಾರ.

ಇ. ಬುಡಕಟ್ಟು ಜನರಲ್ಲಿ ಮೂಡುವ ವೈಷಮ್ಯ, ಅಪರಾಧಗಳನ್ನು ಅವರ ಪದ್ಧತಿಯಂತೆ ಪರಿಹರಿಸಿಕೊಳ್ಳುವ ಅವರ ನ್ಯಾಯ ಪದ್ಧತಿಗೆ ಮನ್ನಣೆ ಕೊಡುವ ಅಧಿಕಾರವಿದೆ. ಇಂಥ ನ್ಯಾಯಾಲಯದಲ್ಲಿ ತೀರ್ಮಾನಿಸಿದ ತೀರ್ಮಾನವನ್ನು ಜಾರಿಗೆ ತರುವ ಅಧಿಕಾರ ಇದೆ. ಗ್ರಾಮದ ತೀರ್ಮಾನವನ್ನು ತಿರಸ್ಕರಿಸುವ ಅಧಿಕಾರ ನ್ಯಾಯಾಲಯಕ್ಕೆ ಇಲ್ಲವಾಗಿದೆ.

ಈ ಸರ್ಕಾರ ಬುಡಕಟ್ಟು ಜನರ ಸಾಮಾಜಿಕ, ಆರ್ಥಿಕ ಅಭಿವೃದ್ಧಿ ಯೋಜನೆಗಳನ್ನು ಜನರ

ಒಪ್ಪಿಗೆ ಪಡೆದು ಹಮ್ಮಿಕೊಳ್ಳಬೇಕು. ಬುಡಕಟ್ಟು ಜನರಿಗೆ ಬೇಕಾದ ಕಾರ್ಯ ಕ್ರಮಗಳನ್ನು ಪಡೆಯುವ ಅಧಿಕಾರ ಈ ಕಾಯಿದೆ ಅಡಿಯಲ್ಲಿದೆ.

ಉ. ಕೇಂದ್ರ ಸರ್ಕಾರವಾಗಲಿ ರಾಜ್ಯ ಸರ್ಕಾರವಾಗಲಿ, ಜಿಲ್ಲಾ ಪಂಚಾಯತ್ ಆಗಲಿ, ಯಾವುದೇ ಸರ್ಕಾರವಾಗಲಿ ಬುಡಕಟ್ಟು ಜನರನ್ನು ಕೇಳದೆ ಗ್ರಾಮದ ಸ್ಥಳೀಯ ಸಂಪನ್ಮೂಲಗಳ ಮೇಲೆ ಅತಿಕ್ರಮಣ ಮಾಡುವಂತಿಲ್ಲ. ಯೋಜನೆಗಳ ಬಗ್ಗೆ ಗ್ರಾಮಸಭೆಯಲ್ಲಿಯೇ ತೀರ್ಮಾನವಾಗಬೇಕು.

ಊ. ಬುಡಕಟ್ಟು ಜನರ ಒಪ್ಪಿಗೆಯಿಲ್ಲದೆ ಯಾರಾದರೂ ಭೂಮಿ ಮಾರಿದರೆ ಒತ್ತುವರಿ ಮಾಡಿದರೆ ಅದನ್ನು ವಾಪಸ್ಸು ಪಡೆಯುವ ಅಧಿಕಾರ. ಕುಟುಂಬದ ಸ್ವಂತ ವಸ್ತುಗಳನ್ನು ಬೇರೆಯವರಿಗೆ ಮಾರಾಟ ಮಾಡುವುದಾಗಲಿ ಮಾಡುವಂತಿಲ್ಲ. ಇದನ್ನೆಲ್ಲ ನಿಯಂತ್ರಿಸುವ ಅಧಿಕಾರ ಗ್ರಾಮಸಭೆಗೆ ಇದೆ.

ಅರಣ್ಯ ಮತ್ತು ಆದಿವಾಸಿಗಳ ನಡುವಿನ ಪಾರಂಪರಿಕ ಸಂಬಂಧಗಳನ್ನು ಕಾಪಾಡುವುದು, ಅರಣ್ಯದ ಉಪ ಉತ್ಪನ್ನಗಳ ಮೇಲೆ ಆದಿವಾಸಿಗಳಿಗೆ ಸಂಪೂರ್ಣ ಅಧಿಕಾರ ಹೊಂದಲು ಅವಕಾಶ ಮಾಡಿಕೊಡುವುದು, ಸಂಗ್ರಹಿಸಲ್ಪಟ್ಟ ಅರಣ್ಯದ ಉಪಉತ್ಪನ್ನಗಳಿಂದ ಬಂದ ಮತ್ತು ಆದಾಯವನ್ನು ಆದಿವಾಸಿಗಳ ಮತ್ತು ಅರಣ್ಯಗಳ ಅಭಿವೃದ್ಧಿಗೆ ಉಪಯೋಗಿಸುವುದು ಮತ್ತು ಆದಿವಾಸಿಗಳನ್ನು ಅರಣ್ಯದ ಉಳುವಿನ ಮತ್ತು ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪ್ರಧಾನ ಪಾತ್ರವಹಿಸುವಂತೆ ಪ್ರೋತ್ಸಾಹಿಸವುದೇ ಈ ಎಲ್ಲ ಆಯೋಗಗಳ ಶಿಫಾರಸ್ಸುಗಳ ಮುಖ್ಯ ಆಶಯಗಳಾಗಿವೆ.

ಸ್ವಾತಂತ್ರ್ಯದ ನಂತರ ಸರಕಾರವು ಪ್ರಥಮ ಬಾರಿಗೆ ಪರಿಶಿಷ್ಟ ಪಂಗಡಗಳ ಬಗೆಗಿನ ಒಂದು ರಾಷ್ಟ್ರೀಯ ನೀತಿಯನ್ನು ರೂಪಿಸಲು ಉದ್ಧೇಶಿಸಿದೆ. ಪರಿಶಿಷ್ಟ ಪಂಗಡಗಳನ್ನು ಅವರ ವಿಶಿಷ್ಟ ಸಂಸ್ಕೃತಿಗೆ ಧಕ್ಕೆ ಬಾರದಂತೆ ಅವರ ಸರ್ವಾಂಗೀಣ ಅಭಿವೃದ್ಧಿಗಾಗಿ, ವಿವಿಧ ಮಜಲುಗಳ ಮೂಲಕ ಸಮಾಜದ ಮುಖ್ಯವಾಹಿನಿಗೆ ತರಲು ಈ ನೀತಿ ಉದ್ದೇಶಿಸುತ್ತದೆ. ದೇಶದಲ್ಲಿ ೬೭.೮ ಮಿಲಿಯನ್ ಪರಿಶಿಷ್ಟ ಪಂಗಡಗಳಿಗೆ ಸೇರಿದ ಜನರಿದ್ದು, ಇವರು ದೇಶದ ಒಟ್ಟಾರೆ ಜನಸಂಖ್ಯೆ ೮.೦೮ ರಷ್ಟಿದ್ದಾರೆ. ದೇಶಾದ್ಯಂತ ೬೯೮ ಪರಿಶಿಷ್ಟ ಪಂಗಡಗಳು ಹರಡಿಕೊಂಡಿವೆ.

ಸ್ವಾತಂತ್ರ್ಯ ದೊರೆತಾಗಿನಿಂದ ಮಾನವನ ಸರ್ವಾಂಗೀಣ ಅಭಿವೃದ್ಧಿಗಾಗಿ, ಹಲವು ಆಂದೋಲನಗಳ ಹೊರತಾಗಿಯೂ ಔಪಚಾರಿಕ ಶಿಕ್ಷಣ ಪ್ರಧಾನವಾಗಿದೆ. ೧೯೯೧ರ ಜನಗಣತಿಯಂತೆ ದೇಶದ ಸಾಕ್ಷರತಾ ಪ್ರಮಾಣ ಶೇಕಡಾ ೫೨.೨೧ ಇದ್ದು ಅದರಲ್ಲಿ ಪರಿಶಿಷ್ಟ ಪಂಗಡಗಳ ಪ್ರಮಾಣ ಕೇವಲ ಶೇಕಡಾ ೨೯.೬೦ ರಷ್ಟಿದೆ. ರಾಷ್ಟ್ರೀಯ ಮಹಿಳಾ ಸಾಕ್ಷರತೆಯ ಸೌಕರ್ಯಗಳ ಕೊರತೆ, ಕಡುಬಡತನ ಮತ್ತು ಅಪ್ರಸ್ತುತ ಪಠ್ಯ ವಸ್ತುವಿನ ಬಗೆಗಿನ ನಿರಾಸಕ್ತಿಗಳು ಈ ಪಂಗಡದವರು ಔಪಚಾರಿಕ ಶಿಕ್ಷಣ ಪಡೆಯುವಲ್ಲಿ ಅಡ್ಡಿಯಾಗಿವೆ. ಈ ಪಂಗಡಗಳು ಶೈಕ್ಷಣಿಕ ಉದ್ದೇಶ ಸಾಧನೆಗಾಗಿ ರಾಷ್ಟ್ರೀಯ ನೀತಿಯು ಕೆಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿರುತ್ತದೆ.

ಬುಡಕಟ್ಟು ಜನಾಂಗದವರು ಶತಮಾನಗಳಿಂದ ಬೆಟ್ಟ, ಗುಡ್ಡ ಕಾಡು, ತೀರ ಪ್ರದೇಶ, ವಾಸಿಸುತ್ತಾ ಪರಿಸರದ ಕಷ್ಟ-ಕಾರ್ಪಣ್ಯಗಳನ್ನು ಎದುರಿಸುವ ವ್ಯಾಪಕ ಅನುಭವವನ್ನು ಹೊಂದಿದ್ದಾರೆ. ಜಲಸಂಪರ್ಕ ತಂತ್ರ, ದೇಶೀಯ ತಂತ್ರಕ್ಕನುಗುಣವಾಗಿ ಅಭಿವೃದ್ಧಿಪಡಿಸಿದ ನೀರಾವರಿ ಕಾಲುವೆಗಳು, ಬೆಟ್ಟಗಳಲ್ಲಿ ಬಿದಿರಿನ ಸೇತುವೆ ನಿರ್ಮಾಣ ಜೀವನಕ್ಕೆ ಹೊಂದಿಕೊಳ್ಳುವುದು, ಕಾಡಿನಲ್ಲಿನ ಗಿಡಮೂಲಿಕೆಗಳನ್ನು ಉಪಯೋಗಿಸುವ ಕಲೆಗಳಲ್ಲಿ ಅವರ ಜ್ಞಾನ ಪ್ರತಿಬಿಂಬಿಸುತ್ತದೆ. ರಾಷ್ಟ್ರೀಯ ನೀತಿಯು ಇಂತಹ ಸಾಂಪ್ರದಾಯಿಕ ಜ್ಞಾನವನ್ನು ಉಳಿಸಿ ಬೆಳೆಸಲು ಉದ್ದೇಶಿಸುತ್ತದೆ. ಸಾಂಪ್ರದಾಯಿಕ ಜ್ಞಾನದ ಕ್ಷೇತ್ರಗಳಲ್ಲಿ ತರಬೇತಿ ಕೇಂದ್ರ ತೆರೆಯಲು ಉದ್ದೇಶಿಸಿದೆ. ಇಂತಹ ಜ್ಞಾನಗಳನ್ನು ಇತರೆಡೆಗೆ ಪ್ರಸಾರ ಗೊಳಸುವುದಾಗಿದೆ.

ಬುಡಕಟ್ಟು ಜನಾಂಗದವರು ನಿಸರ್ಗದ ಮಡಿಲಲ್ಲಿ ನೆಲೆಸಿದವರು, ಪೌಷ್ಠಿಕಾಂಶದ ಕೊರತೆ, ಉತ್ತಮ ಕುಡಿಯುವ ನೀರು, ನೈರ್ಮಲ್ಯ, ಬಡತನಗಳ ಬಗ್ಗೆ ಕಾಳಜಿ ವಹಿಸುವುದು, ಕೈಗಾರಿಕೀಕರಣ, ಸಂಪರ್ಕ ಸಾಧನಗಳ ಸ್ಥಾಪನೆಯಿಂದಾಗಿ ಬುಡಕಟ್ಟು ಜನಾಂಗದವರಿಗೆ ರೋಗರುಜಿನ ಹರಡುವ ಸಾಧ್ಯತೆ ಇದೆ. ಲಭ್ಯವಿರುವ ಆರೋಗ್ಯ ಸೇವೆಗಳ ಸದುಪಯೋಗ ಪಡಿಸಿಕೊಳ್ಳುವಲ್ಲಿ ನಿರಾಸಕ್ತಿ, ಜ್ಞಾನಶೂನ್ಯತೆಯು ರೋಗಗಳ ಉಲ್ಬಣಕ್ಕೆ ಕಾರಣವಾಗಿದೆ. ಅವರು ಕ್ಯಾಲ್ಸಿಯಂ ವಿಟಾಮಿನ್ 'ಎ', ವಿಟಾಮಿನ್ 'ಸಿ'ಗಳ ಕೊರತೆಯಿಂದ ಬಳಲುತ್ತಾರೆ. ಬುಡಕಟ್ಟು ಮಹಿಳೆಯರು ಪೌಷ್ಟಿಕಾಂಶದ ಕೊರತೆಯಿಂದಾಗಿ ಸಂತಾನಶಕ್ತಿ, ಮಕ್ಕಳ ಪಾಲನೆ, ಬೆಳವಣಿಗೆಯಲ್ಲಿ ನಕಾರಾತ್ಮಕ ಪರಿಣಾಮ ಬೀರುತ್ತದೆ. ಸ್ಥಳೀಯವಾಗಿ ಲಭ್ಯವಿರುವ ಗಿಡಮೂಲಿಕೆಗಳನ್ನು ಅವರು ಬಳಸುತ್ತಾರೆ. ತಮ್ಮದೇ ಆದ ಆರೋಗ್ಯ ವಿಶ್ಲೇಷಣ ರೀತಿ ಅನುಸರಿಸುತ್ತಾರೆ. ಹಲವಾರು ನಿಷೇಧಾತ್ಮಕ ದೈವಶಕ್ತಿಗಳನ್ನು ನಂಬುತ್ತಾರೆ. ಇವುಗಳ ಆಧಾರದ ಮೆಲೆ ರಾಷ್ಟ್ರೀಯ ನೀತಿಯು ಹಲವಾರು ರಚನಾತ್ಮಕ ವಿಧಾನಗಳ ಮೂಲಕ ಅವರ ಆಯುರ್ವೇದಿಕ್ ಉಪಯೊಗದ ಮಹತ್ವ ಕುರಿತು ಯೋಜನೆ ಹಮ್ಮಿಕೊಂಡಿದೆ.

ಬುಡಕಟ್ಟುಗಳ ಸಾಂಪ್ರದಾಯಿಕ ನಿವಾಸಗಳ ಸ್ಥಳಾಂತರವು ಅವರಿಗೆ ಹಲವು ರೀತಿಯ ತೊಂದರೆ ಉಂಟು ಮಾಡುತ್ತದೆ. ಅಣೆಕಟ್ಟು, ರಸ್ತೆ, ಕಲ್ಲು ಕೋರೆ, ಗಣಿಗಾರಿಕೆ, ಕೈಗಾರಿಕೆಗಳ ಸ್ಥಾಪನೆ, ರಾಷ್ಟ್ರೀಯ ಉದ್ಯಾನವನ ನಿರ್ಮಾಣ ಮುಂತಾದ ಕಾರಣಗಳಿಂದಾಗಿ ಬುಡಕಟ್ಟು ಜನಾಂಗಗಳ ಭೂಮಿ ಕಬಳಿಕೆ ಅವರ ಜೀವನೋಪಾಯಕ್ಕೆ ಕುತ್ತು ತರುತ್ತಿದೆ.

ಬುಡಕಟ್ಟು ಜನಾಂಗದವರನ್ನು ಸ್ಥಳಾಂತರ ಮಾಡುವುದು ಸಂವಿಧಾನದ ೫ನೇ ಪರಿಚ್ಛೇದದ ಸ್ಪಷ್ಟ ಉಲ್ಲಂಘನೆಯಾಗುತ್ತದೆ. ಇದರಿಂದಾಗಿ ರಾಷ್ಟ್ರೀಯ ನೀತಿಯು ಗಿರಿಜನರ ಸ್ಥಳಾಂತರವನ್ನು ಕನಿಷ್ಟ ಪ್ರಮಾಣದಲ್ಲಿ, ಅತ್ಯವಶ್ಯಕತೆಯಿದ್ದಲ್ಲಿ ಮಾತ್ರ ನಿಗದಿಪಡಿಸಿರುತ್ತದೆ.

ಬುಡಕಟ್ಟು ಜನರು ಆದಿಕಾಲದಿಂದಲೂ ಅರಣ್ಯದೊಡನೆ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದು ಇದನ್ನು ಗಮನದಲ್ಲಿರಿಸಿ ಅವರ ರಕ್ಷಣೆಗಾಗಿ ರಾಷ್ಟ್ರೀಯ ಅರಣ್ಯ ನೀತಿಯನ್ನು ರೂಪಿಸುವುದು. ಅವರ ಅಭಿವೃದ್ಧಿಗಾಗಿ ಅರಣ್ಯ ಹಕ್ಕುಗಳನ್ನು ರೂಪಿಸುವುದು. ಸುಮಾರು ೫೦೦ ಅರಣ್ಯ ಗ್ರಾಮಗಳು

ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿವೆ. ಮಾನವೀಯ ದೃಷ್ಟಿಯಿಂದ ಬುಡಕಟ್ಟು ಜನರಿಗೆ ಜೀವನಾಂಶ ಅವಕಾಶಗಳನ್ನು ಕಲ್ಪಿಸಿ ಕೊಡುವುದಾಗಿದೆ.

ಬೃಹತ್ ಪ್ರಮಾಣದ ವಿವಿದೋದ್ದೇಶ ಸಂಘಗಳು, ಲ್ಯಾಂಪ್ಸ ಮತ್ತು ಅರಣ್ಯ ಅಭಿವೃದ್ಧಿ ಸಹಕಾರ ಸಂಸ್ಥೆಗಳ ವತಿಯಿಂದ ಸಾಮಾನ್ಯ ವ್ಯವಸಾಯಕ್ಕಾಗಿ ಕನಿಷ್ಟ ಯೋಜನೆಗಳನ್ನು ರೂಪಿಸುವುದು.

ಅರಣ್ಯಗಳನ್ನು ಅನೇಕ ಕಾರಣಗಳಿಗಾಗಿ ರಕ್ಷಿಸಬೇಕೆಂಬ ಉದ್ದೇಶದಿಂದ ಸರ್ಕಾರ ಒಂದು ಇಲಾಖೆಯನ್ನೇ ರೂಪಿಸಿದೆ. ಗೃಹ ಮತ್ತು ರಕ್ಷಣಾ ಸಚಿವಾಲಯದಷ್ಟೆ ಪ್ರಬಲವಾದ ಇಲಾಖೆಯಾಗಿ ಅರಣ್ಯ ಇಲಾಖೆ ಪರಿಗಣಿಸಲ್ಪಟ್ಟಿದೆ. ಈ ಮೊದಲೇ ಹೇಳಿದಂತೆ ಅರಣ್ಯ ಇಲಾಖೆಗೆ ಸಂಬಂಧಪಟ್ಟ ಕಾಯ್ದೆ ಕಾನೂನುಗಳು ವಸಾಹತು ಆಡಳಿತ ರಚಿಸಿದ ಅರಣ್ಯ ನೀತಿಗೆ ಪೂರಕವಾಗಿಯೇ ಇವೆ. ಸ್ವಾತಂತ್ರ್ಯನಂತರ ಭಾರತ ಸರ್ಕಾರ ವಸಾಹತುಶಾಹಿ ಕಾನೂನುಗಳನ್ನೇ ಸ್ವಲ್ಪ ಬದಲಿಸಿ ಜಾರಿಗೆ ತಂದಿತು.

ಒಟ್ಟಾರೆಯಾಗಿ ಈ ರಾಷ್ಟ್ರೀಯ ಆದಿವಾಸಿ ನೀತಿಯ ಮೇಲುನೋಟಕ್ಕೆ ಅತ್ಯಂತ ಪ್ರಗತಿದಾಯಕ ಎಂದು ಕಂಡಬಂದರೂ ಸಹ ಈ ನೀತಿಯಲ್ಲಿ ಆಳದಲ್ಲಿ ಸಾಂಪ್ರದಾಯಿಕ ಅಭಿವೃದ್ಧಿ ಮಾನದಂಡಗಳ ಯಜಮಾನ್ಯತೆಯು ಹೆಪ್ಪುಗಟ್ಟಿ ಕುಳಿತಿದೆ. ಆದಿವಾಸಿಗಳ ಸಂವೇದನೆಗಳ ಭಾಗವಾಗಿ ಈ ನೀತಿ ರೂಪುಗೊಳ್ಳಬೇಕಿತ್ತು. ಜೊತೆಗೆ ಅನುಷ್ಠಾನ ಮಾಧ್ಯಮದ ಕಾರ್ಯಚಟುವಟಿಕೆಗಳು ನೀತಿಯಲ್ಲಿ ಸ್ಪಷ್ಟವಾಗಬೇಕಿತ್ತು. ಆದರೆ ಎಂತಹುದೇ ಕ್ರಾಂತಿಕಾರಿ ಕಾರ್ಯಕ್ರಮಗಳು ಅನುಷ್ಟಾನದ ಹಂತದಲ್ಲಿ ಆಗುವ ಲೋಪಗಳಿಂದಾಗಿ ವಿಫಲವಾಗಿ ಬಿಡುತ್ತವೆ. ಜೊತೆಗೆ, ಆದಿವಾಸಿಗಳ ಸ್ವಯಂ ಆಡಳಿತ, ಸ್ಥಳೀಯ ರಾಜಕೀಯ ಪ್ರಾತಿನಿಧ್ಯ ಮತ್ತು ರಾಜಕೀಯ ಸ್ವಾವಲಂಬನೆಯ ಕುರಿತು ಭೂರಿಯ ಸಮಿತಿಯು ಅತ್ಯಂತ ಆರೋಗ್ಯಕರ ಶಿಫಾರಸ್ಸುಗಳನ್ನು ಮಾಡಿದ್ದರೂ, ಸದರಿ ನೀತಿಯಲ್ಲಿ ಆದಿವಾಸಿಗಳ ಸ್ವಯಂ ಆಡಳಿತ ಕುರಿತು ಸ್ಪಷ್ಟತೆ ಇಲ್ಲ. ಭೂರಿಯಾ ಸಮಿತಿಯ ಶಿಫಾರಸ್ಸುಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಾಗಿದೆ. ಮುಖ್ಯವಾಗಿ ಆದಿವಾಸಿಗಳು ಬಯಸುವ ಸ್ವಯಂ ಆಡಳಿತ ಮತ್ತು ಸ್ವಾತಂತ್ರ್ಯಗಳ ಕುರಿತು ರಾಷ್ಟ್ರೀಯ ನೀತಿಯಲ್ಲಿ ಯಾವ ಕಾರ್ಯಕ್ರಮಗಳೂ ನಿಖರವಾಗಿಲ್ಲ. ಆದಿವಾಸಿಗಳು ಪಾರಂಪರಿಕವಾಗಿ ಮುಕ್ತವಾಗಿ ಬದುಕಿದವರು. ಸ್ವಚ್ಛಂದ ಜೀವನ ನಿರ್ವಹಣೆ ಆದಿವಾಸಿ ಬದುಕಿನ ಮುಖ್ಯ ಲಕ್ಷಣಗಳಲ್ಲೊಂದು. ಆದರೆ ಆದಿವಾಸಿಗಳನ್ನು ಅಭಿವೃದ್ಧಿ ಪಡಿಸುವ ನೀತಿಯಲ್ಲಿ ಅವರ ರಾಜಕೀಯಾರ್ಥಿಕ ಮುಕ್ತ ಅವಕಾಶಗಳ ಕುರಿತ ಸ್ಪಷ್ಟ ಕಾರ್ಯ ಕ್ರಮಗಳೇನೂ ಇಲ್ಲ.

ಭಾರತದ ಸಂವಿಧಾನವು ನಿರ್ದಿಷ್ಟ ಪ್ರದೇಶಗಳ ಜನಗಳ ಹಿಂದುಳಿದಿರುವಿಕೆಯನ್ನು ಪರಿಗಣಿಸಿ ಅವುಗಳ ಆಡಳಿತಕ್ಕೆ ವಿಶೇಷ ನಿಯಮಾವಳಿಯನ್ನು ರೂಪಿಸಿ 'ಅನುಸೂಚಿತ ಪ್ರದೇಶ'ಗಳೆಂದು ಹೆಸರಿಸಿದೆ. ಸಂಸತ್ತಿನ ಶಾಸನಕ್ಕೆ ಒಳಪಟ್ಟು ಯಾವುದೇ ಪ್ರದೇಶವನ್ನು ಅನುಸೂಚಿತ ಪ್ರದೇಶವೆಂದು ಘೋಷಿಸುವ ಅಧಿಕಾರವನ್ನು ರಾಷ್ಟ್ರಾಧ್ಯಕ್ಷರಿಗೆ ನೀಡಲಾಗಿದೆ. ಇದರಂತೆ ರಾಷ್ಟ್ರಾಧ್ಯಕ್ಷರು ೧೯೫೦ರ

ಅನುಸೂಚಿತ ಪ್ರದೇಶಗಳ ಆದೇಶವನ್ನು ಘೋಷಿಸಿರುತ್ತಾರೆ. ಈ ಪ್ರದೇಶಗಳಲ್ಲಿ ಬುಡಕಟ್ಟುಗಳು ನೆಲೆಸಿದ್ದು ಅವನ್ನು ಶೆಡ್ಯೂಲ್ಡ ಟ್ರೈಬ್ಸ್ (ಅಸ್ಸಾಂ, ಮೇಘಾಲಯ, ತ್ರಿಪುರ ಮತ್ತು ಮಿಜೋರಾಂ ಹೊರತುಪಡಿಸಿ ೬ನೇ ಅನುಚ್ಛೇದ) ಎಂದು ಗುರುತಿಸಿ ಇವರ ಅಭಿವೃದ್ಧಿಗೆ ಸಂಬಂಧಿಸಿದ ವಿಶೇಷ ನಿಯಮಾವಳಿಗಳನ್ನು ಸಂವಿಧಾನದ ೫ನೇ ಅನುಚ್ಛೇದದಲ್ಲಿ ರೂಪಿಸಲಾಗಿದೆ.

ಈ ಕಾಯ್ದೆ ಕೇವಲ ೫ನೇ ಅನುಸೂಚಿತ ಪ್ರದೇಶಕ್ಕೆ ಮಾತ್ರ ಅನ್ವಯಿಸುತ್ತದೆ. ಆರನೇ ಅನುಸೂಚಿತ ಪ್ರದೇಶ ವ್ಯಾಪ್ತಿಗೆ ಇದು ಅನ್ವಯವಾಗುವುದಿಲ್ಲ. ಹಾಗೆಯೇ ದೇಶದ ಹಲವೆಡೆ ಕೆಲವು ಬುಡಕಟ್ಟು ಪ್ರದೇಶಗಳಿದ್ದು ಅವು ಯಾವುವು ೫ ಅಥವಾ ೬ನೇ ಅನುಸೂಚಿತ ಪ್ರದೇಶ ವ್ಯಾಪ್ತಿಗೆ ಸೇರದಿರುವುದು. ಇಂಥ ಸಂದರ್ಭದಲ್ಲಿ ಈ ಬುಡಕಟ್ಟುಗಳಿಗೆ ಸ್ಥಳೀಯ ಆಡಳಿತವನ್ನು ಹೇಗೆ ವಿಸ್ತರಿಸುವುದು. ಇಂಥ ಸೀಮಿತ ಚೌಕಟ್ಟಿನಿಂದ ಬುಡಕಟ್ಟುಗಳ ಸಾಂವಿಧಾನಿಕ ಅವಕಾಶಗಳನ್ನು ಕುಂಠಿತಗೊಳಿಸಿದಂತಾಗಿದೆ.

ಸ್ವತಂತ್ರ ಭಾರತದ ಸೌರ್ವಭೌಮ ಸರಕಾರ ಕೂಡ ವಸಹಾತುಶಾಹಿ ಅರಣ್ಯ ನೀತಿಯನ್ನು ಯಥಾವತ್ತಾಗಿ ಮುಂದುವರೆಸಿತು. ಉಚಿತವಾಗಿ ಪಾರಂಪಾರಿಕವಾಗಿ ಗಿರಿಜನರು ತಮ್ಮ ಭೂಮಿಯ ಮೇಲಿನ ಹಕ್ಕನ್ನಾಗಿ ಅರಣ್ಯ ಉತ್ಪನ್ನಗಳ ಮೇಲಿನ ಅಥವಾ ಅರಣ್ಯ ಸೇವೆಗಳ ಮೇಲಿನ ಹಕ್ಕನ್ನು ಪಡೆದುಕೊಳ್ಳಲಾಗಲಿಲ್ಲ. ೧೯೭೨ರ ವನ್ಯಜೀವಿ ಸಂರಕ್ಷಣಾ ಕಾಯ್ದೆ ೧೯೮೦ರ ಅರಣ್ಯ ಸಂರಕ್ಷಣಾ ಕಾಯ್ದೆಗಳು ಗಿರಿಜನರನ್ನು ಮತ್ತುಷ್ಟು ಅತಂತ್ರಗೊಳಿಸಿದವು. ಇವುಗಳಿಂದಾಗಿ ಅವರು ಶತಶತಮಾನ ಗಳಿಂದ ವಾಸಮಾಡುತ್ತಿದ್ದ ಪ್ರದೇಶಗಳ ಮೇಲೆ ಬೇಸಾಯ ಮಾಡುತ್ತಿದ್ದ ಹೊಲ, ಗದ್ದೆ, ತೋಟಗಳ ಮೇಲೆ ಹಾಗೂ ಅವರು ಸಂಗ್ರಹಿಸುತ್ತಿದ್ದ ಕಿರುಉತ್ಪನ್ನಗಳ ಮೇಲೆ ಅವರಿಗಿದ್ದ ಸಾಂಪ್ರದಾಯಿಕ ಹಕ್ಕುಗಳನ್ನು ಸಂಪೂರ್ಣವಾಗಿ ಅಲ್ಲಗಳೆದು ನಿರಾಕರಿಸಲಾಯಿತು. ಬೃಹತ್ ಅಣೆಕಟ್ಟುಗಳ ನಿರ್ಮಾಣ, ಗಣಿಗಾರಿಕೆ, ನೈಸರ್ಗಿಕ ಸಂಪನ್ಮೂಲಾಧಾರಿತ ಬೃಹತ್‌ಕೈಗಾರಿಕೆಗಳು ಅತಂತ್ರ ಗಿರಿಜನರ ಖರ್ಚನ್ನು ಮತ್ತುಷ್ಟು ಚೂರುಚೂರು ಮಾಡಿದವು. ಅರಣ್ಯ ಇಲಾಖೆ ಸರ್ವೋಚ್ಚ ನ್ಯಾಯಾಲಯದ ತೀರ್ಪೊಂದನ್ನು ನೆಪವಾಗಿರಿಸಿಕೊಂಡು ಮೇ ೨೦೦೨ರಲ್ಲಿ ಅರಣ್ಯಭೂ ಒತ್ತುವರಿದಾರರನ್ನೆಲ್ಲಾ ಅರಣ್ಯ ಪ್ರದೇಶದಿಂದ ಸಪ್ಟೆಂಬರ್ ೨೦೦೨ ರೊಳಗಾಗಿ ಎತ್ತಂಗಡಿ ಮಾಡಿಸಬೇಕೆಂದು ರಾಜ್ಯ ಸರ್ಕಾರಗಳಿಗೆ ಆದೇಶಿಸಿತ್ತು. ಗಿರಿಜನರ ನ್ಯಾಯಯುತ, ಪಾರಂಪರಿಕ ಹಕ್ಕುಗಳನ್ನು ಮಾನ್ಯ ಮಾಡಿ ಅವರಿಗೆ ನ್ಯಾಯವಾಗಿ ದೊರೆಯಬೇಕಾಗಿದ್ದ ಹಕ್ಕು ಪತ್ರಗಳನ್ನು ವಿತರಿಸಲು ಅಗತ್ಯಕ್ರಮ ಕೈಗೊಳ್ಳದಿದ್ದ ರಾಜ್ಯ ಅರಣ್ಯ ಇಲಾಖಾಧಿಕಾರಿಗಳು ೨೦೦೨ರ ಮೇ ಆದೇಶವನ್ನು ಜಾರಿಗೆ ತಂದರು. ಮೇ ೨೦೦೨ ರಿಂದ ೨೦೦೪ರ ಅವಧಿಯ ನಡುವೆ ೧.೫೨೦೦೦ ಹೆಕ್ಟೇರ್ ಅರಣ್ಯ ಪ್ರದೇಶದಿಂದ ಸುಮಾರು ೧ ಮಿಲಿಯನ್ ನಿರ್ಗತಿಕ ಅರಣ್ಯ ವಾಸಿಗಳನ್ನು ಅತ್ಯಂತ ಬರ್ಬರವಾಗಿ ಒಕ್ಕಲೆಬ್ಬಿಸಲಾಯಿತು. ಇಂತಹ ಕ್ರೂರ ಅರಣ್ಯ ಇಲಾಖಾ ಕ್ರಮದ ವಿರುದ್ಧ ದೇಶಾದ್ಯಂತ ಕರ್ನಾಟಕದಲ್ಲಿ ಅದರಲ್ಲೂ ಉತ್ತರಕನ್ನಡದಲ್ಲಿ ಗೌಳಿಗರು, ಸಿದ್ಧಿಯರು, ಕುಣುಬಿಗಳು, ಕರೆಒಕ್ಕಲಿಗರು, ಅನಿವಾರ್ಯವಾಗಿ ಹೋರಾಟಕ್ಕಿಳಿಯ ಬೇಕಾಯಿತು.

ಸ್ವಾತಂತ್ರ್ಯಾನಂತರದಲ್ಲಿ ಸರಿಸುಮಾರು ೨೦ರ ಅನಂತರದಲ್ಲಿ ಅರಣ್ಯವನ್ನೊಂದು ಕಚ್ಚಾ ಸರಕಿನ ಆಗರವನ್ನಾಗಿಸಿ, ಅರಣ್ಯಾಧಾರಿತ ಕೈಗಾರಿಕೆಗಳು ಆರಂಭಿಸಲ್ಪಟ್ಟವು. ಇದರಲ್ಲಿ ಕಾಗದ, ಪ್ಲೈವುಡ್, ಫಾಲಿಫೈಬರ್, ಬೆಂಕಿಪೊಟ್ಟಣದಂತಹವು ಸೇರಿಕೊಂಡಿದ್ದವು. ಇಂತಹದೇ ಒಂದು ಕಾರ್ಖಾನೆಯು ಉತ್ತರಕನ್ನಡ ಜಿಲ್ಲೆಯ ದಾಂಡೇಲಿಯಲ್ಲಿ ೧೯೫೮ರಲ್ಲಿ ಆರಂಭಿಸಲ್ಪಟ್ಟಿತ್ತು. ಯಾವಾಗ ಬುಟ್ಟಿ ಹೆಣೆಯುವವರ ಜೀವನದ ಆಧಾರವೇ ಆದ ಬಿದಿರು ನಾಶಕ್ಕೆ ಅವರೇ ಕಾರಣ ಎನ್ನಲಾಯಿತು. ಇಂತಹ ಕಿರುಕೊಳ ಬಳಕೆಯನ್ನೇ ನಿಷೇಧಿಸ ಹೊರಟ ಅರಣ್ಯ ಇಲಾಖೆಯು ಮಾತ್ರ ಸಮಗ್ರ ಉತ್ತರಕನ್ನಡದ ಬಿದಿರನ್ನೇ ದಾಂಡೇಲಿಯ ಕಾಗದ ಕಾರ್ಖಾನೆಗೆ ಮೀಸಲಾಗಿಟ್ಟಿತ್ತು. ಬಿದಿರಿನ ಅತಿರಂಜಿತ ದಾಸ್ತಾನು ಗುತ್ತೇದಾರ ಕಾರ್ಖಾನೆಯ ಮಾಲಿಕರುಗಳ ದಯಾ-ದಾಕ್ಷಿಣ್ಯವಿಲ್ಲದ ಕಡಿತಗಳಿಂದಾಗಿ ಬಿದಿರು ಸಮಗ್ರ ನಾಶದತ್ತ ತೊಡಗಿ, ಬಿದಿರಿನ ಮರದ ಸುತ್ತಲೂ ಬೇಲಿಯನ್ನು ಹಾಕಲಾಯ್ತು. ಇಂತಹ ಪ್ರದೇಶಗಳಿಂದ ಬಿದಿರು ದಾಂಡೇಲಿಯ ದಾನಿಗಳಿಗೆ 'ಬಿಸಾಕು ಬೆಲೆ' ಪ್ರತಿ ಟನ್ನಿಗೆ ಒಂದೂವರೆ ರೂ.ಗಳನ್ನು ನೀಡಲು ಒಪ್ಪಂದ ಮಾಡಿಕೊಂಡರೆ ಅಂದಿನ ಬಿದಿರಿನ ಮಾರುಕಟ್ಟೆಯ ಬೆಲೆ ಒಂದೂವರೆ ಸಾವಿರಕ್ಕೂ ಮೇಲ್ಪಟ್ಟಿತ್ತು. ಈ ಬೆಲೆಗೆ ಬಡ ಬುಟ್ಟಿ ಮಾಡಿ ಚರಿತಾರ್ಥ ಸಾಗಿಸುವವರ ಪಾಡೇನಾಗಬಹುದು ಅನ್ನುವ ಚಿಂತೆ ಆಡಳಿತಗಾರನಿಗೆ ಇಲ್ಲವಾಗಿತ್ತು.

ಜಂಟೀ ಅರಣ್ಯ ಯೋಜನೆ ಅಧಿಕೃತಗೊಂಡಿರುವುದು ೧೯೯೦ರ ಸರಕಾರ ಆದೇಶದಿಂದ ನಿಜ. ಭಾರತದ ೨೭ ರಾಜ್ಯಗಳಲ್ಲಿ ನಡೆಯುತ್ತಿರುವ ಜಂಟೀ ಅರಣ್ಯ ಯೋಜನೆ ಒಂದೇ ರೂಪದಲ್ಲಿ ಇಲ್ಲ. ಸ್ಥಳೀಯ ಭೂ ಸನ್ನಿವೇಶಗಳು, ಅರಣ್ಯ ಸಂಪನ್ಮೂಲದ ಲಭ್ಯತೆ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿ, ಸಾಂಸ್ಕೃತಿಕ ವೈವಿಧ್ಯತೆ ಇತ್ಯಾದಿ ಅಂಶಗಳು ವಿವಿಧ ರಾಜ್ಯಗಳಲ್ಲಿನ ಜಂಟೀ ಅರಣ್ಯ ಯೋಜನೆಯ ರೂಪವನ್ನು ಪ್ರಭಾವಿಸಿದೆ. ಅರಣ್ಯ ಇಲಾಖೆ ಮತ್ತು ಸ್ಥಳೀಯ ಸಮುದಾಯದ ನಡವಿನ ಒಪ್ಪಂದದ ವಿವರಗಳು, ಉತ್ಪನ್ನ ಮತ್ತು ಲಾಭಾಂಶದ್ದಲಿನ ಹಂಚಿಕೆ, ಸಂರಕ್ಷಣೆ, ನಿರ್ವಹಣೆಯ ವಿವಿಧ ವಿಧಾನಗಳು ಇತ್ಯಾದಿ ಅಂಶಗಳು ರಾಜ್ಯದಿಂದ ರಾಜ್ಯಕ್ಕೆ ಭಿನ್ನ. ಭಾರತ ಸರ್ಕಾರ ೧೯೯೦ರಲ್ಲಿ ನೀಡಿದ ಸುತ್ತೋಲೆ ಕೇವಲ ಮಾರ್ಗದರ್ಶಿ ಸೂತ್ರಗಳಾಗಿದ್ದವು. ನಿಖರ ಆದೇಶಗಳನ್ನು ನೀಡುವ ಜವಬ್ದಾರಿಯನ್ನು ಆಯಾ ರಾಜ್ಯ ಸರಕಾರಗಳಿಗೆ ನೀಡಿದ್ದರಿಂದ ವಿವಿಧ ರಾಜ್ಯಗಳ ಜಂಟೀ ಅರಣ್ಯ ಯೋಜನೆಗಳ ನಡುವೆ ಈ ಪ್ರಮಾಣದ ವ್ಯತ್ಯಾಸಗಳಾಗಿವೆ.

ಕರ್ನಾಟಕದಲ್ಲಿ ೧೯೯೨ ರಿಂದ ೨೦೦೦ರ ವರೆಗಿನ ಅವಧಿಯಲ್ಲಿ ಪಶ್ಚಿಮಘಟ್ಟ ಪರಿಸರ ಮತ್ತು ಅರಣ್ಯ ಯೋಜನೆ (ಫಾರೆಸ್ಟ್ರಿ ಆಂಡ್ ಎನ್‌ವೆಯರನಮೆಂಟ್ ಪ್ರಾಜೆಕ್ಟ್ ಫಾರ್ ವೆಸ್ಟ್ರರ್ನ್ ಘಾಟ್ಸ್) ಕಾರ್ಯಗತವಾಯಿತು. ಬ್ರಿಟನ್ನಿನ ಅಂತರಾಷ್ಟ್ರೀಯ ಅಭಿವೃದ್ಧಿ ಇಲಾಖೆ (ಡಿಪಾರ್ಟ್‌ಮೆಂಟ್ ಫಾರ್ ಇಂಟರ್ ನೇಶನಲ್ ಡೆವಲಫ್‌ಮೆಂಟ್) ಈ ಯೋಜನೆಗೆ ಸಹಾಯಧನ ನೀಡಿದೆ. ಹಣಕಾಸು ನೆರವು ನೀಡುವ ಸಂಸ್ಥೆ ಯೋಜನೆಯನ್ನು ಜಂಟೀ ಅರಣ್ಯ ಯೋಜನೆ ಮತ್ತು ನಿರ್ವಹಣೆಯ ಪರಿಕಲ್ಪನೆಗೆ ಅನುಗುಣವಾಗಿ ಅನುಷ್ಠಾನಗೊಳಿಸ ಬೇಕೆಂಬ ಶರತ್ತನ್ನು ವಿಧಿಸಿತು. ಅಂತರ್‌ರಾಷ್ಟ್ರೀಯ

ಸಂಸ್ಥೆಯ ಶರತ್ತಿಗೆ ಒಪ್ಪಿ ಕರ್ನಾಟಕ ಸರಕಾರ ೧೯೯೩ರಲ್ಲಿ ಜಂಟೀ ಅರಣ್ಯ ಯೋಜನೆಗೆ ಸಂಬಂಧಿಸಿದ ಆದೇಶವನ್ನು ಹೊರತುಪಡಿಸಿತು. ಆ ಸರಕಾರಿ ಆದೇಶದ ಮುಖ್ಯ ಅಂಶಗಳು ಇಂತಿವೆ. ಗ್ರಾಮ ಅಥವಾ ಗ್ರಾಮಗಳ ಸಮೂಹಗಳನ್ನು ಸೇರಿಸಿ ಗ್ರಾಮ ಅರಣ್ಯ ಸಮಿತಿಯನ್ನು ಸೊಸೈಟಿ ಕಾಯಿದೆ ಪ್ರಕಾರ ನೋಂದಾಯಿಸಬಹುದು.

ಜಂಟೀ ಅರಣ್ಯ ಯೋಜನೆಯ ಅನುಷ್ಠಾನಕ್ಕೆ ಪ್ರದೇಶವನ್ನು ಆಯ್ಕೆ ಮಾಡುವಾಗ ಶೇಕಡಾ ೦.೨೫ರಷ್ಟು ವೃಕ್ಷ ದಟ್ಟಣೆಯಿರಬೇಕೆಂಬ ಷರತ್ತನ್ನು ಬುಡಕಟ್ಟು ಜನರೇ ಪ್ರಮುಖವಾಗಿರುವ ಪ್ರದೇಶಗಳಲ್ಲಿ ಕೈ ಬಿಡಲಾಯಿತು. ಜಂಟೀ ಅರಣ್ಯ ನಿರ್ವಹಣಾ ಯೋಜನೆಗೆ ಶಾಸನ ಬದ್ಧ ಸ್ಥಾನಮಾನ ನೀಡುವ ಉದ್ಧೇಶದಿಂದ ಕರ್ನಾಟಕ ಅರಣ್ಯ ಅಧಿನಿಯಮಕ್ಕೆ ತಿದ್ದುಪಡಿ ತಂದು ಕರ್ನಾಟಕ ಅರಣ್ಯ ಅಧಿನಿಯಮದಲ್ಲಿ ಜಂಟೀ ಅರಣ್ಯ ನಿರ್ವಹಣಾ ಯೋಜನೆಯ ಪರಿಕಲ್ಪನೆ ಹಾಗೂ ಗ್ರಾಮ ಅರಣ್ಯ ಸಮಿತಿಗಳ ಸ್ಥಾಪನೆಯನ್ನು ಸೇರಿಸಲಾಯಿತು. ಜಂಟೀ ಅರಣ್ಯ ನಿರ್ವಹಣಾ ಯೋಜನೆಯಡಿಯಲ್ಲಿ ಕರ್ನಾಟಕ ಮೊಟ್ಟಮೊದಲ ಗ್ರಾಮ ಅರಣ್ಯ ಸಮಿತಿ ೧೯೯೩ರಲ್ಲಿ ಅಸ್ತಿತ್ವಕ್ಕೆ ಬಂತು. ಪ್ರಥಮ ಸೌಹಾರ್ದ ಒಡಂಬಡಿಕೆ ೧೯೯೫ ರಲ್ಲಿ ನಡೆಯಿತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಪಡೆದ ಅನುಭವದ ಆಧಾರದಲ್ಲಿ ಅರಣ್ಯ ಇಲಾಖೆ ಜಂಟೀ ಅರಣ್ಯ ಯೋಜನೆಯನ್ನು ಪಶ್ಚಿಮ ಘಟ್ಟ ಯೋಜನೆಯಡಿಯಲ್ಲಿ ಶಿವಮೊಗ್ಗ ವೃತ್ತಗಳು ಸೇರಿದಂತೆ ಪಶ್ಚಿಮ ಘಟ್ಟ ಪರಿಸರ ಮತ್ತು ಅರಣ್ಯ ಇಲಾಖೆಯಡಿಯಲ್ಲಿ ೨೦೦೦ದ ವೇಳೆಗೆ ೪೮೫ ಗ್ರಾಮ ಅರಣ್ಯ ಸಮಿತಿಗಳು ಅಸ್ತಿತ್ವಕ್ಕೆ ಬಂದವು. ಅದೇ ರೀತಿ ೩೭೫ ಸೌಹಾರ್ದ ಒಡಂಬಡಿಕೆಗಳು ಹಾಗೂ ೪೧೯ ಕಿರುಯೋಜನೆಗಳು ತಯಾರಾದವು.

ಒಂದು ಹಳ್ಳಿಗೆ ಅಥವಾ ಕೆಲವು ಹಳ್ಳಿಗಳನ್ನು ಸೇರಿಸಿ ಅರಣ್ಯ ಸಮಿತಿಗಳನ್ನು ರಚಿಸಬಹುದು. ಅರಣ್ಯ ಸಂರಕ್ಷಣೆ ಹಾಗೂ ಅಭಿವೃದ್ಧಿಯಲ್ಲಿ ಆಸಕ್ತಿಯುಳ್ಳ ಪ್ರತಿಯೊಬ್ಬ ವಯಸ್ಕ ಅರಣ್ಯ ಸಮಿತಿಯ ಸದಸ್ಯನಾಗಲು ಅರ್ಹ. ಹರಿಜನ/ಗಿರಿಜನರಿಗೆ ಸದಸ್ಯತ್ವ ರೂ. ೧ ಉಳಿದವರಿಗೆ ೨. ಈ ರೀತಿ ಸದಸ್ಯತ್ವ ತೆತ್ತು ಸದಸ್ಯರಾದವರೆಲ್ಲ ಸೇರಿ ಅರಣ್ಯ ಸಮಿತಿಯ ಮಹಾಸಭೆ (ಜನರಲ್ ಬಾಡಿ) ಆಗುತ್ತದೆ. ಈ ಮಹಾಸಭೆ ಸೇರಿ ಅರಣ್ಯ ನಿರ್ವಹಣಾ ಸಮಿತಿಯನ್ನು ಆಯ್ಕೆ ಮಾಡುತ್ತದೆ. ಅರಣ್ಯ ನಿರ್ವಹಣಾ ಸಮಿತಿಯಲ್ಲಿ ಒಟ್ಟು ಹದಿನೈದು ಮಂದಿ ಇರಬೇಕು. ಅದರಲ್ಲಿ ೧೧ ಮಂದಿ (ಅಧ್ಯಕ್ಷರನ್ನು ಸೇರಿಸಿ) ಮಹಾಸಭೆ ಯಿಂದ ಆಯ್ಕೆ ಆದರೆ ಉಳಿದ ನಾಲ್ವರು ಪದನಿಮಿತ್ತ ಸದಸ್ಯರಾಗಿ ಬಂದಿರುತ್ತಾರೆ.

ಹೀಗೆ ಜಂಟೀ ಅರಣ್ಯ ಯೋಜನೆಯಿಂದ ಬರುವ ಆದಾಯವನ್ನು ಗ್ರಾಮ ಅರಣ್ಯ ಸಮಿತಿ ಮತ್ತು ಅರಣ್ಯ ಇಲಾಖೆ ಈ ಕೆಳಗೆ ಸೂಚಿಸಿದಂತೆ ಹಂಚಿಕೊಳ್ಳುವುದು. ಚೌಬೀನೇತರ (ಕಿರು ಅರಣ್ಯ ಉತ್ಪನ್ನಗಳು) ಅರಣ್ಯ ಉತ್ಪನ್ನಗಳಿಂದ ಬರುವ ಆದಾಯದಲ್ಲಿ ಶೇಕಡಾ ೧೦ ರಷ್ಟು ಸರಕಾರಕ್ಕೆ ಮತ್ತು ಉಳಿದ ೯೦ ಗ್ರಾಮ ಅರಣ್ಯ ಸಮಿತಿಗೆ ಎಂದು ನಿರ್ಧರಿಸಲಾಯಿತು.

ಈ ಅರಣ್ಯ ನೀತಿಯಿಂದ ಅರಣ್ಯದ ಸುತ್ತಮುತ್ತಲಿರುವ ಸಮುದಾಯಗಳು ಅರಣ್ಯದ ಮೇಲಿನ ತಮ್ಮ ಸಂಪ್ರದಾಯಿಕ ಹಕ್ಕನ್ನು ಶಾಶ್ವತವಾಗಿ ಕಳೆದುಕೊಂಡವು. ಆದರೆ ಆ ಸಮುದಾಯಗಳಿಗೆ ಬದಲೀ ಬದುಕು ಸಾಧ್ಯವಾಗಲಿಲ್ಲ ಅಥವಾ ಅವರ ಬದುಕಿಗಾಗಿ ಅರಣ್ಯದ ಅವಲಂಬನೆ ಕಡಿಮೆ ಆಗಲಿಲ್ಲ. ಆದುದರಿಂದ ಅವುಗಳು ಅನಿವಾರ್ಯವಾಗಿ ತಮ್ಮ ಸಮೀಪದ ಅರಣ್ಯಗಳನ್ನು ಬಳಸುವುದು ಮುಂದುವರಿಯಿತು. ಇದರ ಜತೆ ಆಧುನೀಕರಣದ ಹರಿಕಾರರೆಂದು ಗುರುತಿಸಲ್ಪಡುವ ಕೈಗಾರಿಕೆಗಳು ಅರಣ್ಯ ಬೆಳಸುವ ತಮ್ಮ ಜವಾಬ್ದಾರಿಯನ್ನು ಪೂರೈಸಲೇ ಇಲ್ಲ. ಈ ಎಲ್ಲ ಕಾರಣಗಳಿಂದ ದಿನೇ ದಿನೇ ಅರಣ್ಯ ನಾಶವಾಗುತ್ತಾ ಬಂತು. ಸ್ಥಳೀಯ ಸಮುದಾಯಗಳನ್ನು ಅರಣ್ಯ ಸಂರಕ್ಷಣೆ ಹಾಗೂ ಅಭಿವೃದ್ಧಿಯಲ್ಲಿ ಪಾಲುಗೊಳ್ಳುವಂತೆ ಮಾಡುವುದೇ ಈ ಸಮಸ್ಯೆಗೆ ಸರಿಯಾದ ಪರಿಹಾರವೆಂದು ಮನಗಾಣಲಾಯಿತು. ೧೯೮೮ರ ಅರಣ್ಯ ನೀತಿ ಸ್ಥಳೀಯ ಸಮುದಾಯಗಳ ಸಹಭಾಗಿತ್ವಕ್ಕೆ ಅವಕಾಶ ಮಾಡಿಕೊಟ್ಟಿದೆ. ದೇಶದ ೨೭ ರಾಜ್ಯಗಳಲ್ಲಿ ಜಂಟೀ ಅರಣ್ಯ ಯೋಜನೆ ಜಾರಿಗೆ ಬಂದಿದೆ. ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲೂ ಈ ಯೊಜನೆ ಜಾರಿಗೆ ಬಂದಿದೆ.

ಇನ್ನೂ ಗಣಿಗಾರಿಕೆ ಮತ್ತು ರಾಷ್ಟ್ರೀಯ ಉದ್ಯಾನದೊಳಗೆ ಹಾಟಿ ಮಾಡಿಕೊಂಡು ಜೀವನ ನಡೆಸುವ ಗಿರಿಜನರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳದ ಹೊರತು ರಾಷ್ಟ್ರೀಯ ಉದ್ಯಾನ ನಿರ್ಮಾಣದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ೧೯೭೨ ರಲ್ಲಿ ವನ್ಯಜೀವಿ ಸಂರಕ್ಷಣಾ ಕಾನೂನು ಮತ್ತು ೧೯೮೦ರ ಕೆಲವು ಅರಣ್ಯ ಸಂರಕ್ಷಣ ಕಾಯ್ದೆ ಜಾರಿಯಲ್ಲಿರುತ್ತವೆ. ರಾಷ್ಟ್ರೀಯ ಉದ್ಯಾನಕ್ಕೆ ಮೀಸಲಿರಿಸಿದ ಪ್ರದೇಶಗಳಲ್ಲಿ ಆದಿವಾಸಿ ಸಮುದಾಯವರಾದ ಗೌಳಿಗರು, ಕುಣಬಿಗಳು, ಸಿದ್ದಿಯರು ಶತಶತಮಾನಗಳಿಂದ ಈ ಕಾಡಿನಲ್ಲಿ ವಾಸಿಸುತ್ತಾ ಬಂದಿದ್ದಾರೆ. ಜತೆಗೆ ಹಲವು ರೈತ ಕುಟುಂಬಗಳು, ಈ ಪ್ರದೇಶದ ವ್ಯಾಪ್ತಿಯಲ್ಲಿ ಬದುಕುತ್ತಿವೆ. ರಾಷ್ಟ್ರೀಯ ಉದ್ಯಾನ ಪ್ರದೇಶದಲ್ಲಿ ವಾಸಿಸುತ್ತಿರುವ ಜನರಿಗೆ ನೋಟಿಸ್ ಕೊಟ್ಟು ಅವರನ್ನೆಲ್ಲ ಎತ್ತಂಗಡಿ ಮಾಡಲು ಸರಕಾರ ನಿರ್ಧರಿಸಿದೆ. ರಾಷ್ಟ್ರೀಯ ಉದ್ಯಾನ ಆದೇಶದ ಮೇರೆಗೆ ಕಾಡಿನ ಉತ್ಪನ್ನಗಳಾದ ಕಾಡು ಉತ್ಪತ್ತಿ, ಜೇನನ್ನು ಮಾರಿ ಬದುಕುವ ಗೌಳಿಗರನ್ನು ಕಾಡಿಗೆ ಹೋಗದಂತೆ ಅರಣ್ಯ ಅಧಿಕಾರಿಗಳು ತಡೆದರು. ಅರಣ್ಯ ಇಲಾಖೆ ಆದಿವಾಸಿ ಗಳಿಗೆ ಕಾಡಿನಿಂದ ಹೊರಹೋಗದಂತೆ ಕಿರುಕುಳಗಳನ್ನು ನೀಡಿತು. ಬಲವಂತವಾಗಿ ಕಾಡಿನಿಂದ ಗೌಳಿಗರನ್ನು ಒಕ್ಕಲೆಬ್ಬಿಸಲು ಸರ್ವ ತಯಾರಿಕೆಯನ್ನು ನಡೆಸಿದೆ.

ಕಾನೂನುಗಳನ್ನು ಪಾಲನೆಮಾಡಬೇಕಾದ್ದು ಅರಣ್ಯ ಇಲಾಖೆ ಕರ್ತವ್ಯ ಆದರೆ ಗಿರಿಜನರ ಮಟ್ಟಿಗೆ ಅದು ಒತ್ತಡ. ಉದ್ಯಾನದ ಹೊರಗೆ ನಾಗರಿಕರು ಅನುಭವಿಸುತ್ತಿರುವ ಮೂಲ ಸೌಕರ್ಯಗಳು ಉದ್ಯನದೊಳಗೆ ಗಿರಿಜನರಿಗೆ ಸಿಗುವುದಿಲ್ಲ. ಇನ್ನೊಂದೆಡೆ ವನ್ಯಜೀವಿಗಳ ಒತ್ತಡ, ಪರಿಸ್ಥಿತಿ ಇದೇ ಮುಂದುವರೆದರೆ ಮುಂದಿನ ವರ್ಷಗಳಲ್ಲಿ ಪರಿಸ್ಥಿತಿ ಏನಾಯಿತು?

ಗೌಳಿಗರ ಪುನರ್ವಸತಿ ಕಾರ್ಯದ ಆಮೆ ನಡಿಗೆಯ ವೇಗಕ್ಕೆ ಸರ್ಕಾರ ಮತ್ತು ಅಧಿಕಾರಿ ವರ್ಗವೇ ಮುಖ್ಯ ಕಾರಣ ಸರ್ಕಾರದ ದ್ವಂದ್ವನೀತಿ ಹಾಗೂ ಇಚ್ಛಾ ಶಕ್ತಿಯ ಕೊರತೆಗೆ ಇನ್ಯಾರೋ

ಬಲಿಪಶು. ಸರ್ಕಾರದ ಧೋರಣೆಯಿಂದಾಗಿ ಅರಣ್ಯ ಇಲಾಖೆಗೂ ಪುನರ್‌ವಸತಿ ಪ್ರಕ್ರಿಯೆ ನಡೆಸಲು ಅಡೆಚಣೆಯಾಗುತ್ತಿದೆ. ಅರಣ್ಯ ಅಧಿಕಾರಿಗಳ ನಿರಂತರ ವರ್ಗಾವಣೆಯೂ ಈ ಪ್ರಕ್ರಿಯೆಗೆ ತಡೆಯಾಗಿದೆ.

ಉದ್ಯಾನದಿಂದ ಹೊರಬಂದ ಗೌಳಿಗರಿಗೆ ಪುನರ್ ವಸತಿ ಕಲ್ಪಿಸಿದ ಪ್ರದೇಶದಲ್ಲಿ ಎಲ್ಲವೂ ಸರಿಯಾಗಿಲ್ಲ. ಕೆಲವು ಮೂಲಸೌಲಭ್ಯ ಕಲ್ಪಿಸಿದ್ದರೂ ಸೂಕ್ತ ನಿರ್ವಹಣೆಯೇ ಇಲ್ಲದೆ ನಿವಾಸಿಗಳಿಗೆ ಕಿರಿಕಿರಿಯಾಗಿದೆ. ಸರ್ಕಾರ ಕೃಷಿಭೂಮಿಯನ್ನು ನೀಡಿದ್ದರೂ ಸರಿಯಾದ ಬಳಕೆ ಆಗುತ್ತಿಲ್ಲ. ಸರ್ಕಾರ ಗೌಳಿಗರಿಗೆ ನೀಡಿದ ಭೂಮಿಗೆ ಅರಣ್ಯ ಇಲಾಖೆ ಹಕ್ಕುಪತ್ರ ಮಾತ್ರ ನೀಡಿದೆ. ಅದಕ್ಕೆ ಯಾವುದೇ ಕಾನೂನಿನ ಭದ್ರತೆ ಇಲ್ಲ. ಗೌಳಿಗರ ಪುನರ್ ವಸತಿ ಪ್ರಕ್ರಿಯೆಗೆಂದು ಅರಣ್ಯ ಇಲಾಖೆಯಲ್ಲಿ ಪ್ರತ್ಯೇಕ ಉಪವಿಭಾಗ ರೂಪಿಸುವುದು ಒಳಿತು. ಆದರೆ ವಸಾಹತುಶಾಹಿನೀತಿ ಜಾರಿಮಾಡಿದ ಕಾನೂನುಗಳು, ಅರಣ್ಯ ನೀತಿಗಳು ಗೌಳಿಗರ ಬದುಕಿನಲ್ಲಿ ಯಾವತ್ತು ಮುಳ್ಳಾಗಿಯೇ ಪರಿಣಮಿಸಿದೆ. ಜಮೀನ್ದಾರರು, ಕಂಟ್ರಾಕ್ಟರುಗಳು, ಸರ್ಕಾರ, ಅರಣ್ಯ ಇಲಾಖೆ, ಆದಿವಾಸಿಗಳ ಬದುಕಿನಲ್ಲಿ ಕಂಟಕ ಪ್ರಾಯವಾಗಿ ಕಾರ್ಯ ನಿರ್ವಹಿಸುತ್ತಿವೆ. ದಾಂಡೇಲಿಯ ರಾಷ್ಟ್ರೀಯ ಉದ್ಯಾನ ಯೋಜನೆ ಅಡಿಯಲ್ಲಿ ಬರುವ ಗೌಳಿಗರು, ಕುಣಬಿಯರು,ಸಿದ್ದಿಯರು ಕೂಡಾ ಇದಕ್ಕೆ ಹೊರತಾಗಿಲ್ಲ. ಬದಲಾಗಿ ಇಲ್ಲಿನ ಸಮುದಾಯಗಳು ತಮ್ಮ ಅಸ್ತಿತ್ವಕ್ಕಾಗಿ ನಿರಂತರವಾಗಿ ಹೋರಾಟವನ್ನು ಮಾಡುತ್ತಲೆ ಭಯ ಆತಂಕಲ್ಲಿ ಬದುಕುತ್ತಿದ್ದಾರೆ.

ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬಂದು ಆರ್ಥಿಕ ಸ್ಥಿತ್ಯಂತರಕ್ಕೆ ಒಳಗಾಗುತ್ತಿದ್ದಾರೆ ಕಾಡುಗಳಲ್ಲಿ ಪಾರ್ಥೇನಿಯಂ ಗಿಡಗಳು ಹುಟ್ಟಿಕೊಂಡಾಗ ಗೌಳಿಗರು ಮೇವಿಗಾಗಿ ಪರದಾಡ ಬೇಕಾಯಿತು. ಪಾರ್ಥೇನಿಯಂ ಗಿಡಗಳ ಅಡಿಯಲ್ಲಿ ಹುಲ್ಲು ಹುಟ್ಟದೆ ಮೇವಿಗಾಗಿ ಕಾಡನ್ನೆ ಅವಲಂಬಿಸಿದ್ದ ಎಮ್ಮೆಗಳು ಚಡಪಡಿಸತೊಡಗಿದವು, ವರ್ಷದಿಂದ ವರ್ಷಕ್ಕೆ ಪಾರ್ಥೇನಿಯಂ ಹುಲುಸಾಗಿ ಬೆಳೆಯಿತು. ಮಳೆಯೂ ಕಡಿಮೆ ಆಯಿತು. ನೀರು, ಮೇವು ಕೊಡಲಾಗದ ಅಸಹಾಯಕತೆಗೊಳಗಾದ ಗೌಳಿಗರು ಜಾನುವಾರುಗಳನ್ನು ಒಂದೊಂದಾಗಿ ಮಾರುವ ಸ್ಥಿತಿ ಬಂದಿತು. ಇನ್ನೂ ಅರಣ್ಯ ಇಲಾಖೆ ಕಾಡಿಗೆ ಬೇಲಿ ಹಾಕುವ ಕಾರ್ಯವನ್ನು ಆರಂಭಿಸಿದಾಗ ಬದುಕಿನ ಆದಾರವೇ ಕಳಚಿಬೀಳುವ ಅನಿವಾರ್ಯದಿಂದ ಗೌಳಿಗರು ಗುದ್ದಲಿ, ಪಿಕಾಸಿ ಹಿಡಿದು ಭಟ್ಟರ ಮನೆಯ ತೋಟದಲ್ಲಿ ಗದ್ದೆಗಳಲ್ಲಿ ಕೂಲಿ ಕೆಲಸ ಆರಂಭಿಸಿದರು. ಗೌಳಿಗರ ಮೂಲ ಉದ್ಯೋಗವೆನಿಸಿದ ಪಶುಪಾಲನೆಯನ್ನು ನೆಮ್ಮದಿ ಯಿಂದ ನಡೆಸಲು ಸಾಧ್ಯವಾಗುತ್ತಿಲ್ಲ. ಈ ರೀತಿಯಾಗಿ ಗೌಳಿಗರ ಬದುಕು ಆಧುನಿಕ ಸಮಾಜದ ಸಂಪರ್ಕದೊಂದಿಗೆ ಸಂಘರ್ಷಾತ್ಮಕವಾದ ರೀತಿಯಲ್ಲಿ ಸಾಗಿವೆ.

ಪ್ರಾಚೀನ ಕಾಲದಲ್ಲಿ ಯಾರೊಬ್ಬರ ಒಡೆತನಕ್ಕೂ ಸೇರದ ಸಾರ್ವಜನಿಕ ಕಾಡಿನಲ್ಲಿ ನೆಲೆಸಿದ ಗಿರಿಜನರು ಕಾಡಿನ ಸ್ವಯಂ ಪ್ರಭುಗಳಾಗಿ ಕಾಡಿನ ಉತ್ಪನ್ನಗಳನ್ನು ಬಳಸಿ ಕಾಡುಪ್ರಾಣಿಗಳ ಬೇಟಿಮಾಡಿ, ತಿಂದುಂಡು ಬದುಕಿ ಬಾಳಿದರು. ಆಹಾರದ ಕೊರತೆ ಬಿದ್ದಾಗ, ಕಾಡಿನ ಸಮತಟ್ಟು ನೆಲನೋಡಿ, ಕಾಡಿನ ಗಿಡಗಂಟೆಗಳನ್ನು ಕಡಿದು ಸುಟ್ಟು, ಮಳೆಗಾಲದಲ್ಲಿ ನೆಲ ಮೆದುವಾದಾಗ, ನೆಲವನ್ನು ಕೆದರಿ ರಾಗಿ ಇಲ್ಲವೇ ಇನ್ನಿತರ ಧಾನ್ಯಗಳನ್ನು ಬಿತ್ತಿ ಬೇಸಾಯವನ್ನು ಮಾಡಿ,

ಹೊಟ್ಟೆಹೊರಕೊಂಡರು. ಬಿತ್ತಿ ಬೆಳೆದ ನೆಲದ ಕಸುವು ಕುಂದಿದಾಗ ಬೇರೊಂದೆಡೆಗೆ ನೆಲೆಸಿ, ಇದೇ ಬಗೆಯಲ್ಲಿ ಕೃಷಿ ಮಾಡಿದರು. ಈ ಬಗೆಯ ಬೇಸಾಯಕ್ಕೆ ಕುಂಬ್ರಿ ಬೇಸಾಯ ಇಲ್ಲವೇ ಎತ್ತಂಗಡಿ ಬೇಸಾಯವೆಂದು ಬೇರೆ ಬೇರೆಡೆ ಕರೆಯುತ್ತಾರೆ. ಈ ಬಗೆಯ ಬೇಸಾಯದಿಂದ ಕಾಡು ನಾಶವಾಗುವುದು. ಇವರ ಬೇಟೆಯಾಟದಿಂದ ಕಾಡು ಪ್ರಾಣಿಗಳು ನಶಿಸಿಹೋಗುವುದು ಪರಿಸರ ಸಮತೋಲನ ತಪ್ಪುವುದೆಂದು ಬಗೆದು ಸರಕಾರದವರು ಸಾರ್ವಜನಿಕ ಆಸ್ತಿಯಾದ ಕಾಡಿನ ಮೇಲೆಯೂ ತಮ್ಮ ಸ್ವಾಮಿತ್ವವನ್ನು ಸ್ಥಾಪಿಸಿ, ಕುಂಬ್ರಿ ಬೇಸಾಯ ಹಾಗೂ ಪ್ರಾಣಿ ಬೇಟೆಗೆ ನಿಷೇಧವನ್ನು ಹೇರಿದರು. ಈ ಬಗೆಯ ನಿಷೇಧದಿಂದಾಗಿ ಬುಡಕಟ್ಟುಗಳ ಜೀವನ ನಿರ್ವಹಣೆ ಕಷ್ಟವಾಗಿ ಅವರ ಬದುಕು ಅತಂತ್ರವಾಯಿತು. ಸರಕಾರ ಇವರ ಬೇಟೆ ಬೇಸಾಯಗಳಿಗೆ ನಿಷೇಧವನ್ನು ಹೇರುವಲ್ಲಿ ಕಾಳಜಿವಹಿಸಿದಂತೆ. ಇವರ ಬದುಕಿಗೆ ಬೇರೆಯ ಮಾರ್ಗವನ್ನು ಕಲ್ಪಿಸಲು ಹೆಚ್ಚಿನ ಮುತುರ್ವಜಿ ವಹಿಸದಿರುವುದು ದೊಡ್ಡ ದುರಂತವಾಗಿದೆ.

ನಮ್ಮ ಕಾಡಿನ ಗಿಡಮರ, ಕಲ್ಲುಗಳು ಹೆಚ್ಚಾಗಿ ಮಾಯಾವಾಗುತ್ತಿರುವುದು ಅರಣ್ಯ ವಾಸಿಗಳಿಂದಲ್ಲ. ಸರಕಾರದಿಂದ ಪರವಾನಿಗೆ ಪಡೆದ ಅರಣ್ಯ ಗುತ್ತಿಗೆದಾರರಿಂದ ಹಾಗೂ ಕಾಡುಗಳ್ಳರಿಂದ ಸಂಗ್ರಹ ಪ್ರವೃತ್ತಿಯನ್ನು ಗರಿಷ್ಠವಾಗಿ ಬೆಳೆಸಿಕೊಂಡ ಈ ಜನ ವರ್ತಮಾನದ ಲಾಭಕ್ಕಾಗಿ, ಭವಿಷ್ಯತ್ತನ್ನು ಮರೆತು, ತಮ್ಮ ಮುಂದಿನ ತಲೆ ಮಾರಿಗೆ ಬರಡು ನೆಲವನ್ನು ಬಿಟ್ಟುಹೋಗಲು ಮುಂದಾದಂತಿದೆ. ಬುಡಕಟ್ಟು ಜನಾಂಗದವರು ಹೆಚ್ಚಾಗಿ ಕಾಡಿನಲ್ಲಿಯೇ ನೆಲೆಸಿ, ಕಾಡಿನ ಉತ್ಪನ್ನಗಳ ಮೇಲೆಯೇ ಬದುಕನ್ನು ಬಾಳುತ್ತಿದ್ದರೂ, ಸಂಗ್ರಹ ಪ್ರವೃತಿಯ ಈ ಜನ ವರ್ತಮಾನದ ತುರ್ತಿಗೆ ಕಾಡನ್ನು ಎಷ್ಟು ಬಳಸಬೇಕೊ ಅಷ್ಟನ್ನೇ ಬಳಸಿದರು. ತಾನು ಬದುಕುವ ಪರಿಸರ ನಾಶವಾದರೆ, ಕೆಟ್ಟುಹೋದರೆ ತಮ್ಮ ಬದುಕು ದಾರುಣವಾಗುವುದೆಂದು ದೂರಾಲೋಚನೆ ಯನ್ನು ಮಾಡಿ, ತಮ್ಮ ಪರಿಸರ ಕೆಡದ ಹಾಗೆ ಎಚ್ಚರಿಕೆಯನ್ನು ವಹಿಸಿದರು. ಸರಕಾರ ಅರಣ್ಯದ ಕುಂಬ್ರಿ ಬೇಸಾಯ, ಬೇಟೆ ಹಾಗೂ ಕಾಡಿನ ಬೆಳೆಯನ್ನು ಸರಕಾರದ ಅನುಮತಿಯಿಲ್ಲದೇ ಬಳಸುವುದಕ್ಕೆ ನಿಷೇದ ಹೇರಿದ ಮೇಲೆ ಗಿರಿನಿವಾಸಿಗಳು ಹೇಗೆ ಬದುಕು ಮಾಡಬೇಕು? ಇವರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸದೆ, ಬಯಲು ಸೀಮೆಯಲ್ಲಿ ನಾಲ್ಕಾರು ಗುಂಟೆಗಳ ನಿವೇಶನಗಳನ್ನು ಒದಗಿಸಿದರೆ ಸರಕಾರದ ಕೆಲಸ ಮುಗಿಯಿತೆ? ಇಲ್ಲವೇ ಇಲ್ಲ. ಸರಕಾರದವರು ಅರಣ್ಯವಾಸಿಗಳಿಗೆ ನೆಲೆಯನ್ನು ಕಲ್ಪಿಸಿ ಕೊಡುವಾಗ, ಅವರ ಜಾಯಮಾನಕ್ಕೆ ಹೊಂದುವ ರೀತಿಯಲ್ಲಿ, ಮೂರು ನಾಲ್ಕು ಎಕರೆ ಅರಣ್ಯ ಭೂಮಿಯನ್ನು ಅವರ ಸ್ವಾಮಿತ್ವಕ್ಕೆ ಅಳವಡಿಸಿಕೊಟ್ಟಲ್ಲಿ ತೋಟಗಾರಿಕೆಯಿಂದ ಬದುಕು ಮಾಡಲು ಅನುಕೂಲವಾಗುತ್ತಿತ್ತು. ಕಾಡಿನಲ್ಲಿ ಗಿರಿನಿವಾಸಿಗಳು ಬದುಕು ಮಾಡಲು ಅನುಕೂಲ ವಾಗುತ್ತಿತ್ತು. ಕಾಡಿನಲ್ಲಿ ಗಿರಿನಿವಾಸಿಗಳು ಬದುಕುವ ಪರಿಸರವನ್ನು ಕಲುಷಿತ ಗೊಳಿಸುತ್ತ ಅವರ ದನಕರುಗಳ ಮೇವನ್ನು ನಾಶಗೊಳಿಸುತ್ತ ಬೇಕಾಬಿಟ್ಟಿಯಾಗಿ ಬೆಳೆಯುವ ಪಾರ್ಥೇನಿಯಂ ಕಳೆಯನ್ನು ಯಾರ ಆದೇಶಕ್ಕೂ ಕಾಯದೆ ಅವರೆ ನಿಯಂತ್ರಿಸುತ್ತಿದ್ದರು. ಇದರಿಂದ ಬುಡಕಟ್ಟು ಜನಾಂಗಕ್ಕೊಂದು ಭದ್ರ ನೆಲೆ ಹಾಗೂ ಪಾರ್ಥೇನಿಯಂ ನಿಯಂತ್ರಣ ಎರಡನ್ನೂ ಸಾಧಿಸಬಹುದಿತ್ತು.

ಬುಡಕಟ್ಟು ಮತ್ತು ಪರಿಸರಗಳ ನಡುವಿನ ಸಂಬಂಧವು ಜೈವಿಕವಾದುದು ಮತ್ತು ಸಾವಯವ ವಾದುದು. ಆದರೆ ಅಭಿವೃದ್ಧಿ ಮತ್ತು ಪರಿಸರಗಳ ನಡುವಿನ ಸಂಬಂಧ ಆಕ್ರಮಣಕಾರಿಯಾದುದಾಗಿದೆ. ಪ್ರಕೃತಿ ಪರಿಸರ ಇಲ್ಲಿ ಬದುಕಿನ ಅವಿಭಾಜ್ಯ ಅಂಗ. ಅವರು ಮತ್ತು ಪರಿಸರ ಬೇರೆ ಬೇರೆ ಅಲ್ಲ. ಇವೆರಡರ ನಡುವೆ ಹೊಕ್ಕಳುಬಳ್ಳಿ ಸಂಬಂಧ ಅಲ್ಲಿರುತ್ತದೆ. ಆಧುನಿಕತೆ–ಅಭಿವೃದ್ಧಿ ರಾಷ್ಟ್ರಪ್ರಭುತ್ವಗಳಿಗೆ 'ಬುಡಕಟ್ಟುಗಳು' ನಿವಾರಿಸಿಕೊಳ್ಳಬೇಕಾದ ಒಂದು ಸಂಗತಿಯಾಗಿದೆ. ಆಧುನಿಕತೆಯ ಒಂದು ದೃಷ್ಟಿಯಿಂದ ಬುಡಕಟ್ಟುಗಳು ಆಧುನಿಕಪೂರ್ವ ಸ್ಥಿತಿಗೆ ಸಂಬಂಧಿಸಿವೆ. ಅಭಿವೃದ್ಧಿ ದೃಷ್ಟಿಯಿಂದ ಅವು ಜೈವಿಕವಾಗಿಯೂ ವಾಣಿಜ್ಯೀಕವೂ ಆಗಿವೆ. ರಾಷ್ಟ್ರಪ್ರಭುತ್ವಕ್ಕೆ ಅವು ಏಕತೆಗೆ ಭಿನ್ನವಾದ ಸಂಗತಿಗಳಾಗಿವೆ. ಹೀಗೆ ಕಳೆದ ೨೦೦ ವರ್ಷಗಳಿಂದ ಬೆಳೆದುಕೊಂಡು ಬಂದ ಜ್ಞಾನಶಿಸ್ತುಗಳು ಅಲ್ಲಿ ರೂಪಿತವಾದ ಸಿದ್ಧಾಂತಗಳು ಬುಡಕಟ್ಟುಗಳನ್ನು ಬುಡಕಟ್ಟು ಸಮಾಜವನ್ನು, ಬುಡಕಟ್ಟು ಸಂಸ್ಕೃತಿಯನ್ನು ಆಧುನಿಕತೆಗೆ ಸವಾಲೆಂಬಂತೆ, ಅಭಿವೃದ್ಧಿಗೆ ಕಂಟಕವೆಂಬಂತೆ, ರಾಷ್ಟ್ರಪ್ರಭುತ್ವಕ್ಕೆ ವಿರುದ್ಧವಾದ ಸಂಗತಿಯೆಂಬಂತೆ ಪರಿಭಾವಿಸಿಕೊಂಡು ಬಂದಿವೆ. ಇಲ್ಲಿ ಬುಡಕಟ್ಟುತನವೆಂಬುದು ಬಿಟ್ಟು ಕೊಡಬೇಕಾದ ಒಂದು ಸಂಗತಿಯಾಗಿದೆ.

ಜಾಗತೀಕರಣ ಪ್ರವಾಹದಲ್ಲಿ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಅನನ್ಯತೆ ಅಳಿಸಿ ಹೋಗಬಾರದು ಎಂಬುದು ಎಷ್ಟು ಮುಖ್ಯವೋ, ಅವುಗಳು ರಾಷ್ಟ್ರಪ್ರಭುತ್ವವನ್ನು ಒಪ್ಪಿಕೊಂಡು ಜನ ತಾಂತ್ರಿಕ ಬಹುಸಂಸ್ಕೃತಿ ವ್ಯವಸ್ಥೆಯಲ್ಲಿ ಬದುಕನ್ನು ರೂಪಿಸಿಕೊಳ್ಳಬೇಕಾದುದು ಅಷ್ಟೇ ಮುಖ್ಯವಾದು ದಾಗಿದೆ. ಬುಡಕಟ್ಟುಗಳು ರಾಷ್ಟ್ರೀಯ ಪ್ರವಾಹದಲ್ಲಿ ಮುಳುಗಿ ಹೋಗಬೇಕು ಎಂಬುದೇ ಅಭಿವೃದ್ಧಿಯಲ್ಲ. ಅವುಗಳ ಅನನ್ಯತೆಯ ಒಡಲಲ್ಲೇ ಅವರ ಬದುಕು ಉತ್ತಮವಾಗುವಂತೆ ಮಾಡುವುದೇ ಅಭಿವೃದ್ಧಿ. ಬುಡಕಟ್ಟುಗಳ ಅನನ್ಯತೆಯನ್ನು ಜನತಂತ್ರದ ಪ್ರಕ್ರಿಯೆಗೆ ಮತ್ತು ಜನತಂತ್ರವನ್ನು ಸಾಂಸ್ಕೃತಿಕ ಪ್ರಕ್ರಿಯೆಗೆ ಒಳಪಡಿಸುವ ಅಗತ್ಯವಿದೆ.

ನಮ್ಮ ಸುತ್ತಲಿನ ಗುಡ್ಡ ಬೆಟ್ಟಗಳೆಡೆ ಕಣ್ಣೋಡಿಸಿದಾಗ ಖಾಸಗಿಯವರ ಒಡೆತನಕ್ಕೆ ಸೇರಿದ ಗುಡ್ಡ ಬೆಟ್ಟಗಳು ಮಾತ್ರ ವಿವಿಧ ಜಾತಿಯ ಗಿಡಮರಗಳಿಂದ ಹಸಿರಾಗಿದ್ದು, ಸರಕಾರದ ಸ್ವಾಮಿತ್ವದಲ್ಲಿದ್ದ ಗುಡ್ಡಬೆಟ್ಟಗಳು ಒಂದೋ ಬರಿದಾಗಿವೆ, ಇಲ್ಲದಿದ್ದರೆ ಜನ ಸಾಮಾನ್ಯರಿಗೆ ವನ್ಯಮೃಗ ಪಕ್ಷಿಗಳಿಗೆ ಹೆಚ್ಚಿನ ಪ್ರಯೋಜನವಿಲ್ಲದ ಅಕೇಶಿಯಾ ಇಲ್ಲವೆ ನೀಲಗಿರಿ ಹೀಗೆ ಒಂದೆರಡು ಜಾತಿಗಳ ಗಿಡಮರ ಗಳಿಂದ ಮಾತ್ರ ತುಂಬಿದೆ. ಈ ಬಗೆಯ ವನರಕ್ಷಣೆಯಿಂದ ಬುಡಕಟ್ಟು ಜನಾಂಗದವರ ಜೀವನಕ್ಕಷ್ಟೇ ಅಲ್ಲ, ವನ್ಯ ಜೀವಿಗಳ ಜೀವನಕ್ಕೂ ಗಂಡಾಂತರ, ಈ ದಿಶೆಯಲ್ಲಿ ಸರಕಾರ ಗಂಭೀರವಾಗಿ ಆಲೋಚಿಸಿ, ಕಾಡಿನ ಬುಡಕಟ್ಟು ಜೀವನ ಕ್ರಮಕ್ಕೆ ವ್ಯತ್ಯಯ ಬರದ ರೀತಿಯಲ್ಲಿ ರೂಪುಗೊಳ್ಳುವಂತೆ ಯೋಜನೆಗಳನ್ನು ರೂಪಿಸಿದಲ್ಲಿ ಮಾತ್ರ ಅವರ ಬದುಕಿಗೆ ಭದ್ರ ನೆಲೆಯನ್ನೊದಗಿಸಿದಂತಾಗುವುದು. ಸುಧಾರಣೆಯ ನೆಪದಲ್ಲಿ ಅವರ ಮನೋಧರ್ಮಕ್ಕೆ ಒಗ್ಗದ ಅವರ ಶಿಷ್ಟಾಚಾರಗಳಿಗೆ ವ್ಯತ್ಯಯ ತರುವಂಥ ಕಾರ್ಯಕ್ರಮಗಳನ್ನು ಸಂಯೋಜಿಸುವುದು ಸೂಕ್ತವಲ್ಲ. ಇಂದು ಸಾಮಾಜಿಕವಾಗಿ,

ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಈ ಜನಾಂಗಗಳು ಯಾವ ಯಾವ ಸವಲತ್ತುಗಳನ್ನು ಪಡೆದಿದ್ದಾರೆ? ಪಶ್ಚಿಮ ಘಟ್ಟದ ಅಭಿವೃದ್ಧಿಗೆ ಮೀಸಲಟ್ಟ ಹಣದಲ್ಲಿ ಬುಡಕಟ್ಟುಗಳ ಕಲ್ಯಾಣಕ್ಕಾಗಿ ವಿನಿಯೋಗವಾದ ಹಣವೆಷ್ಟು? ನಮ್ಮ ವಿಕೇಂದ್ರೀಕೃತ ಪ್ರಜಾತಂತ್ರ ವ್ಯವಸ್ಥೆಯ ಜಿಲ್ಲಾ ಪರಿಷತ್ತುಗಳು ಮಂಡಲ ಪಂಚಾಯತ್ತುಗಳು ಇವರ ಕಲ್ಯಾಣಕ್ಕಾಗಿ ಏನೆಲ್ಲ ಕಾರ್ಯಗಳನ್ನು ಮಾಡಿವೆ? ಎಂದು ಮುಂತಾಗಿ ಚಿಂತಿಸಿದರೆ ತೃಪ್ತಿಕರ ಉತ್ತರ ಸಿಗದು. ಇವರಿಗಾಗಿ ರೂಪಿತವಾದ ತೋಟಗಾರಿಕೆ, ಹೈನುಗಾರಿಕೆ, ಮೀನುಗಾರಿಕೆಯೇ ಮುಂತಾದ ಹಲವಾರು ಯೋಜನೆಗಳ ಅನುಷ್ಠಾನ ತೃಪ್ತಿಕರವಾಗಿಲ್ಲ, ನಿರೀಕ್ಷಿತ ಫಲವನ್ನೂ ನೀಡಿಲ್ಲ. ಶೈಕ್ಷಣಿಕವಾಗಿ ತೀರ ಹಿಂದುಳಿದ ಇವರು ಉದ್ಯೋಗದಿಂದಲೂ ವಂಚಿತರಾಗಿದ್ದಾರೆ. ಈ ಸಮುದಾಯದಲ್ಲಿ ಸಂಘಟನೆಯಾಗಬೇಕಾಗಿದೆ. ಈ ಜನರ ಸಂಘಟನೆ ಯಾಗದಿದ್ದಲ್ಲಿ ಇವರು ಬದುಕಿನಲ್ಲಿ ಬೆಳಕನ್ನು ಕಾಣದೆ ಕತ್ತಲೆಯಲ್ಲಿಯೇ ಕರಗಿ ಹೋಗಿಬಿಡುತ್ತಾರೆ. ಹಾಗಾಗಬಾರದು, ಇವರ ಬದುಕು ಚಿಗುರಬೇಕು, ಬೆಳಕು ನೋಡುವಂತಾಗಬೇಕು.

**ಆಧಾರಗಳು**

೧. ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಣ, ೧೯೯೧, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ಪು.೯೫-೧೦೭

೨. ಬೋರಲಿಂಗಯ್ಯ ಹಿ.ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ೨೦೦೧, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

೩. ಬೋರಲಿಂಗಯ್ಯ ಹಿ.ಚಿ., ನಮ್ಮೊಳಗೊಂದು ಪುಟ್ಟ ಆಫ್ರಿಕಾ, ೨೦೦೪, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ಪು.೮-೧೦

೪. ಬೋರಲಿಂಗಯ್ಯ ಹಿ.ಚಿ., ಕಾಡುಕಾಂಕ್ರಿಟ್ ಮತ್ತು ಜನಪದ, ೧೯೯೫, ಅಕ್ಷರ ಪ್ರಕಾಶನ, ಹೆಗ್ಗೊಡು, ಸಾಗರ.

೫. ಬೋರಲಿಂಗಯ್ಯ ಹಿ.ಚಿ., ಗಿರಿಜನರು, ೧೯೯೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಬೋರಲಿಂಗಯ್ಯ ಹಿ.ಚಿ., ಸಿದ್ಧಿಯರ ಸಂಸ್ಕೃತಿ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು.೨೭

೭ ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್. (ಸಂ), ಬುಡಕಟ್ಟು ಅಧ್ಯಯನ ಸಂ-೪, ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪ್ರಭಾಕರ ಎ.ಎಸ್., ರಾಷ್ಟ್ರೀಯ ಆದಿವಾಸಿ ನೀತಿ - ಒಂದು ಪ್ರತಿಕ್ರಿಯೆ, ಪು. ೧೨೯-೧೪೨, ೧೧೩-೧೧೮

೮. ಅದೇ ಪು. ೧೫೧-೧೫೨, ೧೭೦-೧೭೩

೯. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್. (ಸಂ), ಬುಡಕಟ್ಟು ಅಧ್ಯಯನ ಸಂ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪು. ೨೨೦-೨೨೧

೧೦. ಚಂದ್ರಪೂಜಾರಿ ಎಂ., ಜಂಟಿ ಅರಣ್ಯ ನಿರ್ವಹಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು. ೧೩-೨೭

೧೧. ಮಾಧವ ಗಾಡ್ಗಿಳ್ (ಪುಸ್ತಕ ಕನ್ನಡಕ್ಕೆ) ಆರ್.ವ್ಹಿ. ಲೇಖನ, ಧ್ಯೇಯನಿಷ್ಠ ಪತ್ರಕರ್ತ, ನಮ್ಮೆಲ್ಲರ ನಲಿದಾಡಲಿ ಅರಣ್ಯಗಳು, ಸಾಪ್ತಹಿಕ ದಿನಾಂಕ, ೩೧.೩.೧೦ ರಿಂದ ೧೯.೦೫.೨೦೧೦ರವರೆಗೆ

೧೨. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್. (ಸಂ), ಬುಡಕಟ್ಟು ಅಧ್ಯಯನ ಸಂ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೧೧೮

೧೩. ಅಂಬಳಿಕೆ ಹಿರಿಯಣ್ಣ, ಕಚ್ಚೆಗೌಳಿಗರು - ಉಪಸಂಸ್ಕೃತಿ ಮಾಲೆ, ೧೯೯೩, ಪು.೭-೧೫

೧೪. ಅನುಸೂಚಿತ ಪಂಗಡಗಳು ಮತ್ತು ಇತರ ಪಾರಂಪರಿಕ ವನವಾಸಿಗಳ (ಅರಣ್ಯ ಹಕ್ಕು ಮನ್ನಣೆ) ಅಧಿನಿಯಮ, ೨೦೦೬ ಸಂಖ್ಯೆ ೨.೨೦೦೭. ಲೇಖನ ಕೃಷ್ಣ ಮ. ಹೆಗಡೆ, ಧ್ಯೇಯನಿಷ್ಠ ಪತ್ರಕರ್ತ ಸಾಪ್ತಾಹಿಕ, ದಿನಾಂಕ ೧೯.೩.೨೦೦೮ ರಿಂದ ೪.೬.೨೦೦೮ರವರೆಗೆ

೧೫. ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೭-೧೦

# ಅಧ್ಯಾಯ ೨

## ಸಾಮಾಜಿಕ ವ್ಯವಸ್ಥೆ ಮತ್ತು ಮಹಿಳೆ

ಅಧ್ಯಾಯ - ಎರಡು

# ಸಾಮಾಜಿಕ ವ್ಯವಸ್ಥೆ ಮತ್ತು ಮಹಿಳೆ

**ಸಂ**ಸ್ಕೃತಿ ಎನ್ನುವುದು ಸಮಾಜದ ಎಲ್ಲ ಸಂಸ್ಥೆಗಳಲ್ಲೂ ಒಂದಲ್ಲ ಒಂದು ಬಗೆಯ ಲಿಂಗ ತಾರತಮ್ಯ ಸಾಂಸ್ಕೃತಿಕ ವ್ಯವಸ್ಥೆಯ ಮೂಲಕ ಬೇರೂರುತ್ತದೆ. ಕುಟುಂಬದಲ್ಲಿ ಗಂಡು ಮಗುವಿಗೆ ನೀಡುವ ಅತಿ ಪ್ರಾಶಸ್ತ್ಯ, ಹೆಣ್ಣು-ಗಂಡು ಮಕ್ಕಳಿಗೆ ಸಂಪನ್ಮೂಲಗಳ ಹಂಚಿಕೆಯಲ್ಲಿ ಕಂಡು ಬರುವ ತಾರತಮ್ಯ, ಸ್ತ್ರೀ ಸದಸ್ಯರ ಮೇಲೆ ನಡೆಯುವ ಕೌಟುಂಬಿಕ ದೌರ್ಜನ್ಯದ ವಿವಿಧ ಮುಖಗಳು- ಇವೆಲ್ಲಾ ಲಿಂಗ ವ್ಯವಸ್ಥೆಯ ಪೂರ್ವಗ್ರಹಗಳನ್ನು ಎಳೆಯ ವಯಸ್ಸಿನಿಂದಲೇ ರೂಢಿಸಿಕೊಳ್ಳುವಲ್ಲಿ ವ್ಯಕ್ತಿಗಳಿಗೆ ತರಬೇತಿಯನ್ನು ನೀಡುತ್ತವೆ. ಶಿಕ್ಷಣ, ಲಿಂಗಭೇದವನ್ನು ತೊಡೆದು ಹಾಕಲು ಅತ್ಯಂತ ಉಪಯುಕ್ತವಾದ ಸಾಧನ ಎನ್ನುವುದು ನಿಜವಾದರೂ, ಈ ಶಿಕ್ಷಣ ವ್ಯವಸ್ಥೆಯಲ್ಲಿಯೇ ಲಿಂಗ ತಾರತಮ್ಯ ಹಾಸುಹೊಕ್ಕಾಗಿದೆ. ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿ-ವಿದ್ಯಾರ್ಥಿನಿಯರ ನಡವಳಿಕೆ, ಶಿಕ್ಷಕರು ಲಿಂಗಸಂಬಂಧಿ ವಿಚಾರಗಳ ಬಗ್ಗೆ ತಳೆಯುವ ನಿಲುವುಗಳು, ಹೆಣ್ಣು-ಗಂಡು ಮಕ್ಕಳಿಗೆ ದೊರೆಯುವ ವಿಭಿನ್ನ ಅವಕಾಶಗಳು, ಅವರ ಮೇಲೆ ಹೇರುವ ವಿಭಿನ್ನ ನಿಬಂಧನೆಗಳು, ಆಧುನಿಕತೆಯ ಮೌಲ್ಯಗಳನ್ನು ಬಿತ್ತುವ ಶಿಕ್ಷಣದಂಥ ಒಂದು ವ್ಯವಸ್ಥೆ ಕೂಡ ಸಾಂಪ್ರದಾಯಿಕ ಸಾಂಸ್ಕೃತಿಕ ಸಂದರ್ಭಗಳ ಹಿಡಿತದಿಂದ ಹೊರಬಂದಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿದೆ.

ಮಹಿಳೆಯರು ಹೇಗೆ ಸಮರೂಪವಾದ ಒಂದು ವರ್ಗವಲ್ಲವೋ ಸಂಸ್ಕೃತಿ ಎನ್ನುವುದೂ ಒಂದು ಸಮರೂಪವಾದ ವ್ಯವಸ್ಥೆಯಲ್ಲ. ಸಂಸ್ಕೃತಿ ಎನ್ನುವುದು ಆಯಾ ಸಮಾಜದ ಒಟ್ಟು ಜನಜೀವನದ ಕ್ರಮವನ್ನೂ ಮೌಲ್ಯಗಳನ್ನೂ ಆಚರಣೆಗಳನ್ನೂ ಬಿಂಬಿಸುವಂಥ ಒಂದು ವ್ಯವಸ್ಥೆ. ಸಂಸ್ಕೃತಿಯಲ್ಲಿ

ನಿರಂತರತೆಯೂ ಇದೆ, ಬದಲಾವಣೆಯೂ ಇದೆ. ಕೆಲವು ಮೌಲ್ಯಗಳೂ ಆಚರಣೆಗಳು ಕಾಲಾತೀತವಾದುವು. ನಾಗರೀಕತೆಯ ಪ್ರಭಾವಕ್ಕೆ ಒಂದು ಸಂಸ್ಕೃತಿ ತನ್ನನ್ನು ತೆರೆದುಕೊಳ್ಳುತ್ತಾ ಹೋದ ಹಾಗೆಲ್ಲ, ಆ ಸಂಸ್ಕೃತಿಯ ಕೆಲವು ಅಂಶಗಳಲ್ಲಿ ಬದಲಾವಣೆಗಳು ಆಗುತ್ತಾ ಹೋಗುತ್ತವೆ ಎನ್ನುವುದು ನಿಜವಾದರೂ ಪ್ರತಿ ಸಂಸ್ಕೃತಿಯಲ್ಲೂ ಬಹುಕಾಲದಿಂದ ಅಸ್ತಿತ್ವದಲ್ಲಿರುವಂಥ ಧೋರಣೆಗಳೂ ಪದ್ಧತಿಗಳೂ ಕಂಡು ಬರುತ್ತವೆ.

ಪ್ರತಿ ಸಂಸ್ಕೃತಿಯೂ ಮಹಿಳೆಯರಿಗೆ ಆಯಾ ಸಂಸ್ಕೃತಿಯ ಪರಿಸರಕ್ಕೆ ಅನುಗುಣವಾಗಿ ಪಾತ್ರಗಳು ಹಾಗೂ ಜವಾಬ್ದಾರಿಗಳನ್ನು ವಹಿಸುತ್ತದೆ. ಮಹಿಳೆಯರ ಸಾಮಾಜಿಕ ಸ್ಥಾನವನ್ನು ಅಧ್ಯಯನ ಮಾಡುವಾಗ ಅವರು ಬೆಳೆದು ಬಂದಂಥ ಅಥವಾ ಜೀವನವನ್ನು ನಡೆಸುತ್ತಿರುವ ಸಾಂಸ್ಕೃತಿಕ ಪರಿಸರವನ್ನು ಹಿನ್ನೆಲೆಯನ್ನಾಗಿ ತೆಗೆದುಕೊಳ್ಳಬೇಕಾಗುತ್ತದೆ. ಆಯಾ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿರುವ ಲಿಂಗವ್ಯವಸ್ಥೆಯ ಮೌಲ್ಯಗಳು ಹಾಗೂ ಆ ಸಾಂಸ್ಕೃತಿಕ ಮಹಿಳೆಯರನ್ನು ಕುರಿತಂತೆ ತಳೆದಿರುವಂಥ ಧೋರಣೆಗಳು ಮಹಿಳೆಯರಿಗೆ ಆ ಸಂಸ್ಕೃತಿಯಲ್ಲಿ ಎಂಥ ಪರಿಸರವಿದೆ ಎಂಬುದನ್ನು ನಮಗೆ ತಿಳಿಸಿಕೊಡುತ್ತವೆ.

ಪ್ರತಿಯೊಂದು ಸಮಾಜದಲ್ಲೂ ವ್ಯಕ್ತಿಯ ಲಿಂಗ ಹಾಗೂ ವಯಸ್ಸಿನ ಆಧಾರಗಳ ಮೇಲೆ ಪಾತ್ರ ಹಂಚಿಕೆಯನ್ನು ಮಾಡುವಂಥ ಆಧಾರದ ಮೇಲೆ ಪಾತ್ರ ಹಂಚಿಕೆಯನ್ನು ಮಾಡುವಂಥ ವ್ಯವಸ್ಥೆ ಜಾರಿಯಲ್ಲಿದೆ. ಮಹಿಳೆಯರು ತಮ್ಮ ಜೈವಿಕ ರಚನೆಯ ಕಾರಣದಿಂದಾಗಿ ಶಿಶು ಜನನ ಹಾಗೂ ಶಿಶುವಿನ ಲಾಲನೆ ಪಾಲನೆಯ ಜವಾಬ್ದಾರಿಗಳನ್ನು ವಹಿಸಿಕೊಳ್ಳುತ್ತಾರೆ.

ಮಹಿಳೆಯರ ಸ್ಥಾನ-ಮಾನವನ್ನು ನಿರ್ಧರಿಸುವಲ್ಲಿ ಅವರ ಆರ್ಥಿಕ, ರಾಜಕೀಯ, ಸಾಮಾಜಿಕ ಅಂಶಗಳು ಮಹತ್ವದ ಪಾತ್ರವನ್ನು ವಹಿಸುತ್ತದೆ. ದೇಶದ ಯಾವ ಸಂಸ್ಕೃತಿಯನ್ನೇ ನೋಡಲಿ ಪುರಷರಿಗೆ ಮೊದಲ ಸ್ಥಾನವಿಟ್ಟು ಮಹಿಳೆಯರಿಗೆ ನಂತರದ ಸ್ಥಾನವಿದೆ. ಮಹಿಳೆಯರ ಲೋಕದಲ್ಲೂ ಮಹಿಳೆಯರ ಸ್ಥಾನಮಾನ ಏಕರೂಪವಾಗಿಲ್ಲ. ಮಹಿಳೆಯರ ಸ್ಥಾನಮಾನಗಳು ಆಯಾಜಾತಿ, ಸ್ತರ, ಸಮುದಾಯಗಳಿಗೆ ಅನುಸಾರವಾಗಿ ಹಂಚಿಹೋಗಿವೆ.

ಆದಿವಾಸಿ ಮಹಿಳೆಯರ ಜೀವನ ನಾಡಿನ ಮಹಿಳೆಯರ ಬದುಕಿಗಿಂತ ಭಿನ್ನವಾಗಿದ್ದು ಬಹುತೇಕ ಇವರದೆಲ್ಲಾ ಕಾಡು, ಕಾಡಂಚಿನ ವಾಸ. ಇವರ ವಾಸಿಸುವ ಸ್ಥಳಗಳನ್ನು ದೊಡ್ಡಿ, ಕೊಪ್ಪ ಹಾಡಿ, ಹಟ್ಟಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಪ್ರತಿ ಬುಡಕಟ್ಟು ಸಮುದಾಯಗಳಲ್ಲೂ ಜಾತಿ, ಕೀಳರಿಮೆ ಕಾಣಬಹುದು. ಈ ಸಮುದಾಯಗಳ ತಮ್ಮ ಭಾಷೆಯ ಜೊತೆಗೆ ಇತರ ಭಾಷೆಯನ್ನು ಮಾತಾಡುತ್ತಾರೆ. ಗೌಳಿಗ ಸಮುದಾಯದ ಜನ ಮರಾಠಿ ಭಾಷೆಯ ಜೊತೆಗೆ ಕನ್ನಡ ಉಪಭಾಷೆ ಹೊಂದಿದ್ದಾರೆ. ರೂಢಿ ಸಂಪ್ರದಾಯವನ್ನು ಚಾಚುತಪ್ಪದೆ ಪಾಲಿಸುತ್ತಾರೆ. ದೇವರು ಧರ್ಮಗಳಲ್ಲಿ ಅಪಾರವಾದ ನಂಬಿಕೆ ಉಳ್ಳವರಾಗಿದ್ದು ಪ್ರಕೃತಿಯ ಆರಾಧಕರು ಗಿಡಮರ ಭೂಮಿಯ ಮೇಲೆ ಅಪಾರ ಭಕ್ತಿ ಹಾಗೂ ಕಾಡಿನ ಬಗ್ಗೆ ಇವರಿಗೆ ಎಲ್ಲಿಲ್ಲದ ಪ್ರೀತಿ. ಮರಗಿಡಗಳನ್ನು ದೇವರು ಎಂದು ಪೂಜಿಸುತ್ತಾರೆ. ನಿಸರ್ಗದ ಸರಳ ಬದುಕು ಗೌಳಿಗರದ್ದಾಗಿದೆ.

ಒಟ್ಟಿನಲ್ಲಿ ಸಂಸ್ಕೃತಿ ಪರಿಸರ ಮಹಿಳೆಯರ ಸ್ಥಾನ, ಅವರಿಗಿರುವ ಅಥವಾ ಇಲ್ಲದಿರುವ ಅಭಿವೃದ್ಧಿ ಅವಕಾಶಗಳು ಹಾಗೂ ಅವರ ಜೀವನದ ವೈಖರಿ ಇವೇ ಮುಂತಾದ ಅಂಶಗಳನ್ನು ಬಹುಮಟ್ಟಿಗೆ ಪ್ರಭಾವಿಸುತ್ತದೆ. ಈ ಮೊದಲೇ ಸೂಚಿಸಿದ ಹಾಗೆ ಸಂಸ್ಕೃತಿಯಾಗಲಿ, ಮಹಿಳೆಯರಾಗಲಿ ಒಂದು ಸಮರೂಪವಾದ ಸಮಷ್ಠಿಯಲ್ಲ. ಹಾಗೆಯೇ ಸಂಸ್ಕೃತಿ ಒಂದು ತಟಸ್ಥವಾದ ವ್ಯವಸ್ಥೆಯೂ ಅಲ್ಲ. ಸಾಂಸ್ಕೃತಿಕ ಪರಿಸರಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುತ್ತವೆ. ಅಂತೆಯೇ ಮಹಿಳೆಯರ ಪರಿಸ್ಥಿತಿಗಳಲ್ಲಿಯೂ ಬದಲಾವಣೆಗಳಾಗಬಹುದು.

೨.೧ ಜನನ

ಹುಟ್ಟಿನಿಂದ ಸಾವಿನವರೆಗೆ ಗೌಳಿಗರ ಸಮಾಜದಲ್ಲಿ ಆಚರಿಸಲಾಗುವ ಸಂಸ್ಕಾರಗಳು ಹಲವಾರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ : ೧) ಮದುವೆ ೨) ದಿಂಡು ೩) ಬಸುರಿ (ಸೀಮಂತ) ೪) ಬಾಳಂತಿ ೫) ಹೆಸರಿಡುವುದು (ನಾಮಕರಣ) ೬) ಚೋಳಂಗಿ ೭) ಸಾವು ಮುಂತಾದವು. ಹುಟ್ಟಿನಿಂದ ಸಾಯುವವರೆಗೆ ಗೌಳಿಗರಲ್ಲಿ ಆಚರಿಸಲಾಗುವ ಈ ಸಂಸ್ಕಾರಗಳು ಆಚರಣಾ ವಿಧಿ ವಿಧಾನಗಳೆಲ್ಲ ಎಲ್ಲ ಕಾಲಘಟ್ಟಗಳಲ್ಲಿ ಒಂದೇ ಬಗೆಯಾಗಿ ಇದ್ದುವೆಂದು ಹೇಳಲಾಗದು. ಪ್ರಾಚೀನ ಕಾಲದಲ್ಲಿ ತಮ್ಮದೇ ಆದ ಒಂದೊಂದು ಗುಂಪು ಕಟ್ಟಿಕೊಂಡು ಬದುಕು ಬಾಳುತ್ತಿದ್ದ ಆದಿ ಮಾನವರ ಒಂದೊಂದು ಬುಡಕಟ್ಟು ಗುಂಪಿನ ಮಧ್ಯದಲ್ಲಿ, ಪ್ರತ್ಯೇಕ ಪ್ರತ್ಯೇಕವಾಗಿ ಉಗಮ ಪಡೆದಿರಬಹುದಾದ ಈ ಸಂಸ್ಕಾರ ವಿಧಿಗಳೆಲ್ಲ, ಗುಂಪಿನಿಂದ ಗುಂಪಿಗೆ ಭಿನ್ನವಾಗಿದ್ದವು.

ಗೌಳಿಗರ ಜನನ ಸಂಸ್ಕಾರ ಗರ್ಭಿಣಿಯಾದಂದಿನಿಂದ ಹಿಡಿದು ಮಗು ಬೆಳೆದು ೨, ೩ ತಿಂಗಳಾಗುವವರೆಗೂ ನಡೆಯುತ್ತದೆ. ಗರ್ಭಿಣಿ ಸ್ತ್ರೀ ಗಂಡನೊಡನೆ ಮಾತನಾಡುವದನ್ನು ನಿಲ್ಲಿಸಿ, ಯಾವುದೇ ಮಂಗಳಕಾರ್ಯದಲ್ಲಿ ಪಾಲ್ಗೊಳ್ಳುವುದಿಲ್ಲ. ಚೊಚ್ಚಲು ಹೆರಿಗೆ ತವರು ಮನೆಯಲ್ಲಿಯೇ ನಡೆಯುವದು ಸಾಮಾನ್ಯ. ತವರು ಮನೆಗೆ ೮ ತಿಂಗಳು ೫ ದಿನಗಳ ನಚಿತರ ಕರೆದೊಯ್ಯಲು ತಂದೆ ತಾಯಿಗಳು ಬರುತ್ತಾರೆ. ಬಸುರಿ ವಾಡದ ಪಂಚರ ಪೂಜೆ ನಿರ್ವಹಿಸಿ ಅವರ ಆಶೀರ್ವಾದ ಪಡೆದು ಅವಳ ಜೊತೆಗೆ ಮೊಸರನ್ನದ ಬುತ್ತಿಯನ್ನು ಉಡಿದುಂಬಿ ಕಳಸುವುದು ವಾಡಿಕೆಯಾಗಿದೆ.

ಹೆರಿಗೆ ಕಾಲದಲ್ಲಿ ಪ್ರತ್ಯೇಕ ಗುಡಿಸಲುಗಳನ್ನು ಗರ್ಭಿಣಿ ಸ್ತ್ರೀಗಾಗಿ ಸಜ್ಜು ಮಾಡಿ ಸ್ನಾನಕ್ಕೊಸ್ಕರ ವಾಗಿ ಚೆನ್ನಾಗಿ ಕಾಯಿಸಿರುವ ಬಿಸಿ ಬಿಸಿ ನೀರಿನ ವ್ಯವಸ್ಥೆಯನ್ನು ಕೂಡ ಪ್ರತ್ಯೇಕವಾಗಿಯೇ ಮಾಡಿರುತ್ತಾರೆ. ದಿನ ತುಂಬುವದಕ್ಕೆ ಮೊದಲೇ ಹೆರಿಗೆ ನೋವು ೭ ಅಥವಾ ೮ ನೇ ತಿಂಗಳನಲ್ಲಿ ಕಾಣಿಸಿಕೊಂಡರೇ ಹೊನ್ನೇಮರದ ತೊಗಟೆ ರಸ ಕುಡಿಸುವುದು ಹಾಗೂ ಅನೇಕ ಸಂದರ್ಭಗಳಲ್ಲಿ ಜೀರಿಗೆ ಪುಡಿಯ ಕಷಾಯ ಕುಡಿಸುವುದು ಕೂಡ ಉಂಟು. ಹೆರಿಗೆ ಸಮಯದಲ್ಲಿ ಬಾಣಗಿತ್ತಿಯನ್ನು ಕರೆತರುತ್ತಾರೆ. ಒಳ್ಳೆಣ್ಣೆ ಬಾಳೆಗಿಡದ ಬೇರನ್ನು ಹುರಿದು ಮಾಡಿದ ರಸ ಕೂಡ ಕುಡಿಯಲು ಕೊಡುತ್ತಾರೆ. ಹೆರಿಗೆಯ ನಂತರ ಮಾಸಲನ್ನು ಪ್ರಾಣಿ ಪಕ್ಷಿಗಳಿಂದ ಸುರಕ್ಷಿತವಾಗಿ ಒಂದು ಗಡಿಗೆಯಲ್ಲಿ ತುಂಬಿ ಹೂಳಿಡುತ್ತಾರೆ.

ಸೂತಕ ಮುಟ್ಟು ಮೈಲಿಗೆಗಳಿಗೆ ಮಹತ್ವ ಕೊಡುತ್ತಾರೆ. ಹೆರಿಗೆಯ ನಚಿತರ ೫ ದಿವಸದವರೆಗೆ ಗರ್ಭಿಣಿ ಸ್ತ್ರೀ ಯಾರನ್ನೂ ಸ್ಪರ್ಶಿಸುವಂತಿಲ್ಲ. ನಂತರ ೬ನೇ ದಿವಸ ಸೂತಕ ನಿವಾರಣೆ ಅಂಗವಾಗಿ ಬಾಣಂತಿ, ಮಗುವಿಗೆ ಸ್ನಾನ ಪೂಜೆ ಮಾಡಿಸಿ ಸಂಬಂಧಿಗಳಿಗೆ ಊಟ ಹಾಕುತ್ತಾರೆ, ದೇವರಿಗೆ ಪೂಜೆ ಮಾಡುವುದು ಆಕಳಿಗೆ ಎಡೆ ಇಡುವುದು ಸಾಮಾನ್ಯ. ಬಾಣಂತಿಯ ಶೂಶ್ರೂಷೆಗೈದ ಬಾಣಂತೆಗೆ ಅನ್ವಯಗೊಳ್ಳುವ ಎಲ್ಲ ಕಟ್ಟಳೆಗಳೂ ಬಾಣಂತಿಗಿತ್ತಿಗೆ ಅನ್ವಯವಾಗುತ್ತದೆ.

ನಾಮಕರಣ ಸಂದರ್ಭದಲ್ಲಿ ಕಡಲೆ, ಅಲಸಂದಿ, ಹೆಸರುಕಾಳು, ಹುರುಳಿ, ಅಕ್ಕಿ ಮುಂತಾದ ೫ ದಾನ್ಯಗಳಿಗೆ ಬಾಣಂತಿಯ ಕೈಯಿಚಿದ ನೀರು ಚಿಮುಕಿಸುವ ಮೂಲಕ ನೀರು ಹಾಕುವ ಶಾಸ್ತ್ರ ಮಾಡುತ್ತಾರೆ. ಆ ಕಾಳುಗಳನ್ನು ಮೊಳಕೆ ಬರಲು ಬಿಟ್ಟು ನಂತರ ಆಕಳಿಗೆ ಕಾಳುಗಳನ್ನು ತಿನ್ನಲು ಕೊಡುತ್ತಾರೆ. ತೊಟ್ಟಿಲಿಗೆ ಹಾಕುವ ದಿನ ಬಾಣಂತಿ ನದಿಯ ನೀರು ತಂದು ಗಂಗಾ ಪೂಜೆಯನ್ನು ನಿರ್ವಹಿಸಬೇಕು. ವಿಠೋಬ ದೇವರಿಗೆ ನೈವೇದ್ಯ ಮಾಡುವುದು ಮಗುವನ್ನು ಕೂಡ ಪಕ್ಕದಲ್ಲಿ ಮಲಗಿಸಿ ಪೂಜೆ ಮಾಡುತ್ತಾರೆ. ಮಗುವಿಗೆ ಅಜ್ಜ-ಅಜ್ಜಿಯರ ಸಮ್ಮುಖದಲ್ಲಿ ತೊಟ್ಟಿಲಿಗೆ ಹಾಕುತ್ತಾರೆ. ತೊಟ್ಟಿಲು ಹೊಸದಾಗಿರಬೇಕು ಇಲ್ಲವೇ ಮನೆತನದಾಗಿರಬೇಕು. ಆದರೆ ಬೇರೆಯ ಮನೆಯದಾಗಿರ ಬಾರದು. ಮಗುವಿಗೆ ಅಜ್ಜ, ಅಜ್ಜಿಯರು ತಮ್ಮ ಹಿರಿಯರ ಹೆಸರಿಡುವುದು ವಾಡಿಕೆ.

ಮಗುವಿಗೆ ಹಿರಿಯರ ಹೆಸರಿಡುವ ಸಂದರ್ಭದಲ್ಲಿ ಸತ್ತ ಹಿರಿಯರು ಮರುಜನ್ಮ ಪಡೆಯುವರೆಂಬ ನಂಬಿಕೆ. ಮಗು ಗಂಡಾಗಿದ್ದರೆ ಬೈರು, ದೂಳು, ದಾಕಲು, ಪಾಂಗು, ದುಂಡು, ಹಿಟ್ಟು, ದಾರು ಮುಂತಾಗಿ ಹೆಸರಿಟ್ಟರೇ ಹೆಣ್ಣಾಗಿದ್ದರೆ ಬಾಗಿ, ಗಂಗಿ, ನಕಲಾಬಾಯಿ, ದೊಂಡುಬಾಯಿ ದಾಕ್ಲುಬಾಯಿ, ಸಗ್ಗೂಬಾಯಿ, ಕೊಂಡುಬಾಯಿ, ನಾಗೂಬಾಯಿ, ಬೊಮ್ಮಾಬಾಯಿ, ಸಕ್ಕೂಬಾಯಿ ಮುಂತಾಗಿ ಹಿರಿಯರ ಹೆಸರಿಡುವ ಮೊದಲು ವಾಡೆದ ಪೂಜಾರಿಯ ಅನುಮತಿ ಪಡೆದಿರಬೇಕು. ಮಗುವಿಗೆ ತೊಟ್ಟಿಲ ಶಾಸ್ತ್ರದ ದಿನ ಸೋದರಮಾವ ಹಗ್ಗಕಟ್ಟಿ ಕೊಡಬೇಕು, ಮಗುವಿನ ತಂದೆ ಅವನ ತಲೆಗೆ ಪಾಗೋಡು ಕಟ್ಟಿ ಗೌರವ ತೋರಿಸುತ್ತಾನೆ.

ಮಗುವಿನ ಜನನದ ನಂತರ ಪಂಚ್ಚಿ ದೇವತೆಯ ಆರಾಧನೆ ಮಾಡುವುದು ಹಾಗೂ ಜನನದ ೧೨ನೇಯ ದಿನ ಹೆಸರು ಇಡುವುದು ಹಾಗೂ ಮೂರು ವರ್ಷ ತುಂಬುವದಕ್ಕೆ ಮೊದಲು ತಲೆಗೂದಲನ್ನು ಆ ದೇವತೆಯ ಮುಂದೆ ಕತ್ತರಿಸಲಾಗುವುದು. ಈ ಸಂದರ್ಭದಲ್ಲಿ ಕುರಿ ಬಲಿ ಕೊಡುತ್ತಾರೆ. ಮಗುವಿಗೆ ಮುಂದೆ ತಮ್ಮ ಅಥವಾ ತಂಗಿ ಹುಟ್ಟುವತನಕ ತಲೆಯ ಮೇಲೆ ಕೂದಲು ಬಿಡುತ್ತಾರೆ, ೭-೮ ವರ್ಷಗಳ ನಂತರ ಜುಟ್ಟು ತೆಗೆಸುತ್ತಾರೆ.

ಗೌಳಿಗರು ಒಂದು ವರ್ಷ ತುಂಬಿದಾಗ ಮಗುವಿನ ತಲೆಗೂದಲು ತೆಗೆಯುತ್ತಾರೆ ಇದಕ್ಕೆ ಜವಳಾ ಎನ್ನುತ್ತಾರೆ. ತಾಯಿಯ ತಮ್ಮ ಆ ಸಂದರ್ಭದಲ್ಲಿ ನೆಪಮಾತ್ರಕ್ಕೆ ಎರಡು ಕೂದಲುತೆಗೆಯುತ್ತಾನೆ. ಆಗ 'ದೂದಾತ್ತಲೆ ಭಾತ್' ಎಂಬ ವಿಶೇಷ ಅಡುಗೆಯನ್ನು ತಯಾರಿಸಿ ಅವನಿಗೆ ನೀಡುತ್ತಾರೆ. ಕೆಲವು ವಾಡಗಳಲ್ಲಿ ೩ ವರ್ಷ ತುಂಬಿದ ಮೇಲೆ ಎರಡನೇ ಬಾರಿ ಜಾವುಳಾ ತೆಗೆಸುವ ಪರಿಪಾಠ ಉಂಟು. ಕೂದಲು ಬೋಳಿಸಿದ ೨ನೇ ವಾರಕ್ಕೆ ಕಿವಿ, ಮೂಗು ಚುಚ್ಚುವ ಶಾಸ್ತ್ರ ನೆರವೇರಿಸುತ್ತಾರೆ.

ಸೀಮಂತಕಾರ್ಯ

ಗರ್ಭಿಣಿ ಸ್ತ್ರೀಗೆ ನಡೆಸುವ ಉಪಚಾರಗಳು ಆಚರಣೆಗಳು ಅಷ್ಟೇ ವಿಶಿಷ್ಟವಾಗಿವೆ. ಸಾಮಾನ್ಯವಾಗಿ ೮ನೇ ತಿಂಗಳನಲ್ಲಿ ಗಂಡನ ಮನೆಯಲ್ಲಿ ಸೀಮಂತನದ ಕಾರ್ಯಕ್ರಮ ಕೈಗೊಳ್ಳುತ್ತಾರೆ. ಮಡಿಲು ತಂಬುವುದು ಬೇಳೆ ಮತ್ತು ಬೆಲ್ಲ, ಬಾಳೆಹಣ್ಣು, ಅರಿಶಿನ ಕುಂಕುಮ, ರವಿಕೆ, ಎಲೆ ಅಡಿಕೆ, ತೆಂಗಿನಕಾಯಿ ಎಲ್ಲವೂ ಮಂಗಲದ್ರವ್ಯಗಳು ಇವೆಲ್ಲವುಗಳನ್ನು ಗಂಡನ ಕಡೆಯವರು ಸಂತಾನವನ್ನು ನಿರೀಕ್ಷಿಸುತ್ತಾ ಅರ್ಪಿಸುತ್ತಾರೆ. ಇವೆಲ್ಲವುಗಳು ಸಾಂಸ್ಕೃತಿಕವಾಗಿ ಮಹತ್ವನ್ನು ಪಡೆಯುತ್ತವೆ. ಸೀಮಂತದ ಮರುದಿನ ಗರ್ಭಿಣಿಯ ಓರಗೆಯವರೊಂದಿಗೆ ಅವಳನ್ನು ಕೂರಿಸಿ ಅವಳು ಬಯಸುವ ಎಲ್ಲ ಪದಾರ್ಥಗಳನ್ನು ಅಣಿಗೊಳಸುತ್ತಾರೆ. ಎಲ್ಲರಿಗೂ ಜೊತೆಗೆ ಊಟ ಬಡಿಸುತ್ತಾರೆ. ಆ ಸಮಯದಲ್ಲಿ ಅವಳೊಂದಿಗೆ ಕುಳತು ಊಟ ಮಾಡುತ್ತಿದ್ದಾಗ ಬಡಿಸುವವರು ಊಟ ಮಾಡುವವರ ಬೆನ್ನಿಗೆ ಬಡಿಯುವ ಶಾಸ್ತ್ರ ಮಾಡುತ್ತಾರೆ. ಈ ರೀತಿಯಾಗಿ ಮಾಡಿದರೆ ಬೇಗ ಋತುಮತಿಯಾಗುತ್ತಾರೆ ಮತ್ತು ಬಸುರಿಯಾಗದೆ ಇರುವವರು ಬಸುರಿಯಾಗುತ್ತಾರೆ ಎನ್ನುವುದು ನಂಬಿಕೆ. ಅಷ್ಟೇ ಅಲ್ಲ ಗರ್ಭಿಣಿ ಸ್ತ್ರೀಯ ಆಶೆ ಬಯಕೆಗಳನ್ನೆಲ್ಲ ಅವರು ಈಡೇರಿಸುತ್ತಾರೆ. ಹೀಗೆ ಮಾಡದಿದ್ದರೆ ಮಗು ಅಂಗವಿಕಲವಾಗಬಹುದು ಎನ್ನುವ ನಂಬಿಕೆ ಅವರದು ಹೆರಿಗೆ ಸನ್ನಿವೇಶ ಸ್ತ್ರೀಯು ಸಾವಿನ ದವಡೆಗೆ ಸಿಲುಕಿದಂತೆಯೇ ಎಂದು ನಂಬುವುದು ಹಾಗೂ ಈ ಹಿನ್ನೆಲೆಯಲ್ಲಿ ಅವರು ನಡೆಸುವ ಆಚರಣೆಗಳು ತುಂಬಾ ಸೂಕ್ತ ಎನಿಸುತ್ತವೆ.



ಗರ್ಭ ತಳೆದ ಏಳನೆಯ ಇಲ್ಲವೆ ಒಂಬತ್ತು ತಿಂಗಳಗೆ ಚೊಚ್ಚಲ ಬಸುರಿಗೆ ಬಯಕೆಯನ್ನು ಬಡಿಸುವ ಸಂಪ್ರದಾಯವಿದೆ. ಗರ್ಭವತಿಗೆ ಮೊದಲು ಬಯಕೆ ಬಡಿಸುವರು ಗಂಡಿನ ಕಡೆಯವರು. ಅಂದು ಬಸುರಿಗೆ ಸ್ನಾನ ಮಾಡಿಸಿ, ಮಂಡೆ ಬಾಚಿ, ಹೂ ಮುಡಿಸಿ, ಹಸಿರುಹೊಸ ಸೀರೆಯನ್ನುಡಿಸಿ, ಹಸಿರು ಬಳೆ ತೊಡಿಸಿ, ಆಭರಣಗಳನ್ನು ಹಾಕಿ ಅಲಂಕರಿಸುತ್ತಾರೆ. ಅನಂತರ ಸಿಂಗಾರಾದಿ ಐದು ಜಾತಿಯ ಹೂವು, ಐದು ತೊಂಡೆಕಾಯಿ, ಐದು ಬಾಳೆಹಣ್ಣು, ಎರಡು ಸಿದ್ದೆ ಅಕ್ಕಿ, ಒಂದು ತೆಂಗಿನ ಕಾಯಿಯನ್ನು ಹಾಕಿ, ತುಲಸಿಯ ಮುಂದೆ ಗರ್ಭವತಿಯ ಮಡಿಲು ತುಂಬುತ್ತಾರೆ. ಆಮೇಲೆ ಐದು ಬಗೆಯ ಕಜ್ಜಾಯಗಳನ್ನು ಮಾಡಿ, ಐದು ಮಂದಿ ಮುತ್ತೈದೆಯರ ಜೊತೆಗೆ ಗರ್ಭಿಣಿಗೆ ಬಯಕೆಯನ್ನು ಬಡಿಸುತ್ತಾರೆ. ಗಂಡಿನ ಸಂಬಂಧಿಕರೂ ಈ ಸಂದರ್ಭದಲ್ಲಿಯೇ ಬಯಕೆ ಬಡಿಸುವ ರಿವಾಜಿದೆ.

**ಬಾಣಂತಿ** : ಚೊಚ್ಚಲ ಬಸುರಿಯ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಹಾಗೂ ಆಕೆಯ ಹೆರಿಗೆ, ಬಾಣಂತನದ ಮೇಲುಸ್ತುವಾರಿಯನ್ನು ನೋಡಿಕೊಳ್ಳುವ ಜವಾಬ್ದಾರಿ ತವರಿನದ್ದಾಗಿರುತ್ತದೆ. ಹಿಂದಕ್ಕೆ ಡಾಕ್ಟರರಾಗಲೀ, ನರ್ಸುಗಳಾಗಲೀ, ಹೆರಿಗೆಯ ಆಸ್ಪತ್ರೆಯ ಸೌಕರ್ಯಗಳಾಗಲೀ ಬುಡಕಟ್ಟು ಜನಾಂಗಗಳಗೆ ದುರ್ಲಭವಾಗಿತ್ತು. ಬಸುರಿಯ ಹೆರಿಗೆ ಮಾಡಿಸುವವರು ಹಳ್ಳಿಯ ಸೂಲಗಿತ್ತಿ ಯರಾಗಿದ್ದರು. ಇವರನ್ನು ಬೆಜಗ್ತಿ(ವೈದ್ಯ+ಗಿತ್ತಿ)ಯರೆಂದೂ ಕರೆಯಲಾಗುತ್ತಿತ್ತು. ಬಸುರಿಗೆ ಹೊಟ್ಟೆ ಶೂಲೆ ಆರಂಭವಾದ ಕೂಡಲೇ, ಹೆರಿಗೆಗೆ ಅನುಕೂಲವಾಗುವಂತೆ, ಜಗುಲಿಯ ಮೇಲೆ ಒಂದು

ಬದಿಗೆ ಮರೆಯನ್ನು ಮಾಡಿ, ಬಸುರಿಯನ್ನು ಅಲ್ಲಿ ಇಡಲಾಗುತ್ತದೆ. ಮನೆಯವರು ಊರ ಸಮೀಪದ ಬೆಜಗ್ತಿಯನ್ನು ಕರೆತಂದು, ಅವಳ ನೇತೃತ್ವದಲ್ಲಿ ಹೆರಿಗೆ ಮಾಡಿಸುತ್ತಾರೆ. ಹೆರಿಗೆ ಕಷ್ಟದಾಯಕವಾಗಿ ಯಾತನೆ ತೀವ್ರವಾದಾಗ, 'ಅಮಿಯಜ್ಜಿ'ಯೆನ್ನುವ ಸಂತಾನ ರಕ್ಷಕ ದೇವತೆಗೆ ಮೊರೆಯಿತ್ತು, ಸುಖಪ್ರದ ಪ್ರಸವಕ್ಕಾಗಿ ಯಾಚಿಸುತ್ತಾರೆ. ಪ್ರಪಂಚದ ಹಲವಾರು ಸಂಸ್ಕೃತಿಗಳಲ್ಲಿ ಸುಖ ಪ್ರಸವಕ್ಕಾಗಿ ದೇವತೆಗಳನ್ನು ಪ್ರಾರ್ಥಿಸುವ ಸಂಪ್ರದಾಯವಿದ್ದುದನ್ನು ಈ ಸಂದರ್ಭದಲ್ಲಿ ನೆನೆಯಬೇಕು. ಸೂಲಗಿತ್ತಿಯ ನೆರವಿನೊಂದಿಗೆ ಮಗುವಿನ ಜನನವಾದ ಕೂಡಲೇ, ಮಗು ಅಳುವುದನ್ನು ಗಮನಿಸುತ್ತಾರೆ. ನವಜಾತ ಶಿಶು ಅಳಲೇಬೇಕು; ಅಳದಿದ್ದಲ್ಲಿ ಅದು ಅನಾರೋಗ್ಯದ ಲಕ್ಷಣವೆಂದು ಬಗೆಯುತ್ತಾರೆ. ಅಳದಿದ್ದಲ್ಲಿ ಚೂಟಿ ಅಳಿಸುತ್ತಾರೆ. ಗಂಟೆಯನ್ನು ಬಾರಿಸಿ, ಸದ್ದು ಮಾಡಿ ಮಗು ಅಳುವಂತೆ ಮಾಡುತ್ತಾರೆ.

ಮಗು ಹುಟ್ಟಿದ ಕೂಡಲೇ ಬಾಳಂತಿಯನ್ನು ಬೆಚ್ಚಗಿನ ಹುಲ್ಲಿನ ಮೇಲೆ ಕಂಬಳಿ ಹಾಸಿ ಮಲಗಿಸಿ, ಹೊದಿಸುತ್ತಾರೆ. ಶಿಶುವಿನ ಹೊಕ್ಕಳ 'ಚೊಟ್ಟ'ನ್ನು ಬೆಜಗ್ತಿ ಜಾಗರೂಕತೆಯಿಂದ ಕತ್ತರಿಸಿ ಮಗುವನ್ನು ಮಾಂಸಲ ಭಾಗದಿಂದ ಬೇರ್ಪಡಿಸಿ, ಮಗುವಿಗೆ ಸ್ನಾನವನ್ನು ಮಾಡಿಸುತ್ತಾಳೆ. ಆಮೇಲೆ ಸಂಬಂಧಿಕರಲ್ಲಿ ಯಾರಾದರೊಬ್ಬರು ಮಗುವಿನ ಬಾಯಿಗೆ ಬೆಲ್ಲ ಹಾಕಿ 'ಗೆರಸಿ'ಯಲ್ಲಿ (ಮೊರದಲ್ಲಿ) ಮಲಗಿಸುತ್ತಾರೆ.

ಮಗುವಿನ ಹೊಕ್ಕಳಿಂದ ಬೇರ್ಪಟ್ಟ ಹೊಕ್ಕಳುಬಳ್ಳಿ ಹಾಗೂ ಮಾಂಸಲ ಭಾಗವನ್ನು ಅಂಗಳದಲ್ಲೊಂದು ಹೊಂಡವನ್ನು ತೆಗೆದು ಅದರಲ್ಲಿ ಹಾಕಿ, ಹೊಂಡದ ಮುಕ್ಕಾಲು ಭಾಗವನ್ನು ಮುಚ್ಚುತ್ತಾರೆ. ಅಮೆ ಹೊಂಡವೆಂದು ಕರೆಯಲಾಗುವ ಇದರ ಮೇಲೆಯೇ ಮೂರು ದಿನಗಳವರೆಗೆ ಮಗುವಿನ ಹಾಗೂ ಬಾಣಂತಿಯ ಸ್ನಾನ ಮಾಡಿಸುತ್ತಾರೆ. ಹೆರಿಗೆಯಾದ ಮೂರು ದಿನಗಳ ವರೆಗೆ ಬಾಣಂತಿಯನ್ನು ಯಾರೂ ಮುಟ್ಟುವುದಿಲ್ಲ. ಮೂರನೆಯ ದಿನಕ್ಕೆ 'ಅಮೆ'ಯಿಂದ ಶುದ್ಧಿಯನ್ನು ಪಡೆದು ಉಡುಪು ಉಡುವ ಶಾಸ್ತ್ರ ಮಾಡುವರು. ಅಮೆ ಹೊಂಡದಲ್ಲಿ ಬಾಳೆಯ ಸಸಿಯೊಂದನ್ನು ಇಲ್ಲವೇ ಮುಳ್ಳುಗಳ್ಳಿಯನ್ನು ನೆಟ್ಟು, ಹೊಂಡವನ್ನು ಪೂರ್ತಿ ಮುಚ್ಚಿ, ಅಲ್ಲೊಂದು ಕಲ್ಲನ್ನು ನೆಟ್ಟು ಅಮಿಯಜ್ಜಿಯೆಂದು ಬಾಳಂತಿ ಪೂಜಿಸಿ, ಅಮಿಯಜ್ಜಿಗೆ ಮೂರು ಸುತ್ತು ತಿರುಗಿ, ಕೈಮುಗಿದು ಸಂತಾನ ಕ್ಷೇಮಕ್ಕಾಗಿ ಪ್ರಾರ್ಥಿಸುತ್ತಾಳೆ. 'ಅಮಿಯಜ್ಜಿ' ಬಾಣಂತಿ ಹಾಗೂ ಅವಳ ಮಗುವನ್ನು ರಕ್ಷಿಸುವ ದೇವತೆಯೆಂಬ ಕಲ್ಪನೆ ಗೌಳಿಗರಲ್ಲಿ ಸಾಮಾನ್ಯವಾಗಿದೆ.

**ತೊಟ್ಟಿಲಲ್ಲಿ ಹಾಕುವುದು (ನಾಮಕರಣ)** : ಮಗು ಹುಟ್ಟಿದ ಹನ್ನೊಂದನೆಯ ದಿನಕ್ಕೆ ಬಾಣಂತಿ ಅಮೆಯಿಂದ ಪೂರ್ಣಶುದ್ಧಿ ಪಡೆದ ನಂತರದಲ್ಲಿ, ಮಗುವನ್ನು ತೊಟ್ಟಿಲಲ್ಲಿ ಹಾಕುವ ಕಾರ್ಯಕ್ರಮ ಹನ್ನೆರಡನೆಯ ದಿನ ಜರುಗುತ್ತದೆ. ಹನ್ನೆರಡನೆಯ ದಿನಕ್ಕೆ ಏನಾದರೂ ತೊಂದರೆ ಘಟಿಸಿ, ಈ ಕಾರ್ಯಕ್ರಮವನ್ನು ಮಾಡಲಾಗದಿದ್ದಲ್ಲಿ ಇಪ್ಪತ್ತೈದನೆಯ ದಿನಕ್ಕೆ ತೊಟ್ಟಿಲು ತುಂಬುವ ಕಾರ್ಯಕ್ರಮ ಮಾಡುವುದೂ ಉಂಟು. ಮಗುವಿಗೆ, ಹೆಣ್ಣಿನ ತವರುಮನೆಯಲ್ಲಿ ತೊಟ್ಟಿಲಲ್ಲಿ ಹಾಕುವ ಕಾರ್ಯಕ್ರಮವನ್ನು ಮಾಡಿದರೂ, ಮಗುವಿಗೆ ಹೆಸರಿಡುವ ಕಾರ್ಯವನ್ನು ಮಾಡುವುದಿಲ್ಲ. ಮಗುವಿಗೆ

ಹೆಸರಿಡದೆ ಕೇವಲ ತೊಟ್ಟಿಲು ತುಂಬುವ ಶಾಸ್ತ್ರಕ್ಕೆ ಅವರು 'ಸಣ್ಣ ಅಮೆ' ಯೆಂದು ಕರೆಯುತ್ತಾರೆ. ಮಗುವಿಗೆ ಹೆಸರಿಡುವ 'ದೊಡ್ಡ ಅಮೆ'ಯ ಚಡಂಗವನ್ನು ಹೆಣ್ಣಿನ ಗಂಡನ ಮನೆಯವರು ಹಮ್ಮಿಕೊಳ್ಳುತ್ತಾರೆ.

ನಾಮಕರಣವಾದ ಮೇಲೆ ದೇವರ ಎದುರು ಬೆತ್ತದ ತೊಟ್ಟಿಲನ್ನಿಟ್ಟು, ಅದರೊಳಗೆ ಮೆತ್ತನೆಯ ಹಾಸಿಗೆಯನ್ನು ಹಾಸಿ, ಮನೆಯ ಅಜ್ಜಿಯು ಆ ತೊಟ್ಟಿಲನ್ನು ತೆಗೆದುಕೊಂಡು ಹೋಗಿ, ಮನೆಯ ಒಳದ ಒಳಗೆ ಕಟ್ಟುವಳು. ತೊಟ್ಟಿಲಿಗೆ ಸೇಡಿ ಬರೆಯುವಳು. ಒಂದು ಮಣೆಗೆ ಸೇಡಿ ಬರೆದು ಹೂವು, ಗಂಧ ಹಾಕಿ ತೊಟ್ಟಿಲ ಮುಂದಿಡುವಳು. ತೆಂಗಿನಕಾಯಿ ವೀಳ್ಯ ಹಾಗೂ ಹೂ ಹಣ್ಣುಗಳನ್ನರ್ಪಿಸುವಳು. ಮಗುವಿಗೆ ಎಣ್ಣೆ ಉದ್ದಿ ಸ್ನಾನ ಮಾಡಿಸಿ ಕಾಡಿಗೆಯನ್ನು ಹಚ್ಚಿ, ಹೊಸಬಟ್ಟೆಯನ್ನು ತೊಡಿಸಿ, ಮಗುವಿನ ತಾಯಿಯ ಹತ್ತಿರ ಕೊಡುವಳು. ಅವಳು ಮಗುವನ್ನು ತೊಟ್ಟಿಲಲ್ಲಿ ಹಾಕುವ ಮೊದಲು, ಮಗುವಿನ ಹೊಕ್ಕಳ 'ಚೊಟ್ಟು' ಹುಗಿದ ಸ್ಥಳದಲ್ಲಿ ನೆಟ್ಟ ಬಾಳೆಗಿಡದ ಮುಂದೆ ಮೂರು ಅನ್ನದ ಮುದ್ದೆಯನ್ನಿಟ್ಟು, ಮೂರು ಸುತ್ತು ಹಾಕುವಳು. ಅನಂತರ ತಂದೆ ತೊಟ್ಟಿಲಿಗೆ, ತೆಂಗಿನಕಾಯನ್ನು ಒಡೆದು ತೊಟ್ಟಿಲು ತೂಗುವನು. ಆಮೇಲೆ ಹರಿವಾಣದಲ್ಲಿ ಐದು ರೂಪಾಯಿ ಮುರಿ ಹಾಕುವನು; ನಾಮಕರಣ ಉತ್ಸವಕ್ಕೆ ನೆರೆದವರೂ ಅದೇ ಹರಿವಾಣದಲ್ಲಿ 'ಮುರಿ' ಹಾಕುವರು. ನೆರೆದ ಗರತಿಯರು ತೊಟ್ಟಿಲನ್ನು ತೂಗಿ, ಜೋಗುಳ ಹಾಡುವರು.

### ೨.೨ ಮೈನೆರೆಯುವುದು

ಋತುಮತಿ ಹೊಂದಿದ ಹೆಣ್ಣನ್ನು ಗೌಳಗರು ಋಷ್ಯಂತಿ ಎನ್ನುತ್ತಾರೆ. ಅವಳಿಗೆ ಪ್ರತ್ಯೇಕವಾದ ಒಂದು ಗುಡಿಸಲನ್ನು ನಿರ್ಮಿಸುತ್ತಾರೆ. ಆ ಪ್ರತ್ಯೇಕವಾದ ಹಸಿರು ಗುಡಿಸಲಿನಲ್ಲಿ ೧೧ ದಿನಗಳವರೆಗೆ ಅವಳು ಅಲ್ಲಿಯೇ ವಾಸಿಸಬೇಕು. ಆ ಸಮಯದಲ್ಲಿ ತಂದೆ, ತಾಯಿಗಳು ಅವಳಿಗೆ ಪೌಷ್ಟಿಕ ಆಹಾರವನ್ನು ಕಾಳಜಿ ವಹಿಸಿ ನೀಡುತ್ತಾರೆ. ದೊಡ್ಡವಳಾದ ಹೆಣ್ಣನ್ನು 'ದಾಂತಿದಾಲಿ' ಎಂದು ಕರೆಯುತ್ತಾರೆ. ನೆರೆದಿದ್ದಾಳೆ ಎಂದು ಹೇಳುವುದುಂಟು. ಈ ಸಮಯದಲ್ಲಿಯೂ ಕೂಡ ಅವರು ೧೧ ದಿನಗಳವರೆಗೆ ಅವಳನ್ನು ಯಾರು ಸ್ಪರ್ಶಿಸುವುದಿಲ್ಲ ಅವಳು ಅಶುದ್ಧಳು ಎಂದು ಆ ಸಮಯದಲ್ಲಿ ಅವಳನ್ನು ದೂರವಿಡುತ್ತಾರೆ. ೧೨ ನೇಯ ದಿವಸ ಅವಳಿಗೆ ನೀರು ಹೊಯ್ಯುವ ಶಾಸ್ತ್ರ ಮಾಡುತ್ತಾರೆ. ಈ ಕೆಲಸವನ್ನು ಸುಮಂಗಲೆಯರ ಕೈಯಿಂದ ಮಾಡಿಸುತ್ತಾರೆ.

ಸುಮಂಗಲೆಯೊಬ್ಬಳು ತನ್ನ ಎಡಗೈಯ ೫ ಬೆರಳುಗಳ ಮೇಲೆ ಬಿಲ್ಲೆಯಾಕಾರದ ೫ ರಾಗಿರೊಟ್ಟಿಗಳನ್ನಿಟ್ಟುಕೊಂಡು ಹುಡುಗಿಯ ತಲೆಯ ಮೇಲೆ ಕೈ ಚಾಚಿ ನಿಲ್ಲಬೇಕು ಇನ್ನೊಬ್ಬ ಸುಮಂಗಲೆ ರೊಟ್ಟಿಗಳ ಮೇಲೆ ನೀರು ಹೊಯ್ಯುತ್ತಾಳೆ. ಸಮೀಪದ ಬಂಧುಗಳು ಕೂಡ ನೀರು ಹೊಯ್ಯುವ ಶಾಸ್ತ್ರ ಮಾಡುತ್ತಾರೆ. ನಂತರ ಅವಳನ್ನು ಹೊಸ ಉಡುಗೆಗಳಿಂದ ಸಿಂಗರಿಸಿ ಮಡಿಲುತುಂಬಿ ದೃಷ್ಟಿ ತೆಗೆಯುತ್ತಾರೆ. ವಾಡದ ಜನರು, ಬಂಧುಗಳು ಈ ಸಮಯದಲ್ಲಿ ಹುಡುಗಿಗೆ ಮುಯ್ಯಿ ನೀಡುವುದು ವಾಡಿಕೆ. ಇದೆಲ್ಲ ಆದಮೇಲೆ ಹುಡುಗಿಯ ತಂದೆತಾಯಿಗಳು ಎಲ್ಲರಿಗೂ ಸಿಹಿ ಊಟವನ್ನು ನೀಡಿ ಆದರಿಸುತ್ತಾರೆ.

ಮುಂದೆ ಋತುಮತಿಯಾದ ಹುಡುಗಿ ಮುಟ್ಟಾದಾಗ ಪ್ರತಿತಿಂಗಳು ೪ ದಿನ ಪ್ರತ್ಯೇಕವಾಗಿ ಕೊಟ್ಟಿಗೆಯಲ್ಲಿ ಇರಬೇಕಾಗುತ್ತದೆ. ಅದಕ್ಕಾಗಿ ಅವರು ಪ್ರತ್ಯೇಕ ವ್ಯವಸ್ಥೆ ಮಾಡಿರುತ್ತಾರೆ. ಈ ಅವಧಿಯಲ್ಲಿ ಅವಳು ಯಾರನ್ನೂ ಮುಟ್ಟಕೂಡದು ಈ ವೇಳೆಯಲ್ಲಿ ಅವಳು ಕೊಟ್ಟಿಗೆ ಕೆಲಸ ಮಾತ್ರ ಮಾಡತಕ್ಕದ್ದು. ಮನೆಯೊಳಗೆ ಬರುವದಿನ ಅವಳು ಕೊಟ್ಟಿಗೆಯನ್ನು ಶುಚಿಗೊಳಿಸಬೇಕು, ನಂತರ ವಯೋವೃದ್ಧ ಸ್ತ್ರೀಯೊಬ್ಬಳು ಬಂದು ತಲೆಗೆ ನೀರು ಹಾಕುವ ಶಾಸ್ತ್ರ ಮಾಡುತ್ತಾಳೆ. ಈ ರೀತಿ ಸ್ನಾನ ಮಾಡಿದ ಮೇಲೆ ಅವಳು ದೇವರಿಗೆ ದೀಪ ಬೆಳಗಿಸಿ ಪ್ರಾರ್ಥನೆ ಮಾಡುವಳು.

ಹುಡುಗಿ ಮೈನೆರೆದ ಮೊದಲ ರಾತ್ರಿ ಸಮಾಜದ ೫ ಜನ ಸ್ತ್ರೀಯರು ಸೇರಿ ಅವಳಿಗೆ ನೀರು ಹಣಿಸುತ್ತಾರೆ. ಇದಕ್ಕೆ ಕಳಸ ನೀರು ಎನ್ನುವುದುಂಟು. ಆಮೇಲೆ ೫ ಬಿಲ್ಲೆಯಾಕಾರದ ರಾಗಿ ರೊಟ್ಟಿಗಳನ್ನಿಟ್ಟುಕೊಂಡು ಜರಡಿಯಾಗಿ ಹುಡುಗಿಯ ತಲೆಯ ಮೇಲಿಟ್ಟು ನೀರು ಹಾಕುವ ಕ್ರಿಯೆಗೆ ಋತುಕ್ರಿಯೆ ಎನ್ನುವರು. ಮಡಿಲು ತುಂಬುವಾಗ ಕೂಡ ತೆಂಗಿನಕಾಯಿ ಅಡಿಕೆ, ಅಕ್ಕಿ, ಕಲಶ, ಬಾವಿ, ಕೊಡ ಇವೆಲ್ಲ ಫಲವಂತಿಕೆಯ ಘಟಕಗಳೇ ಆಗಿವೆ. ಅವಳನ್ನು ಕೆಲವು ಸಾರಿ ಹಾಲು ಬರುವ ಮರದ ಕೆಳಗೆ ಅಥವಾ ಫಲ ಬಿಡುವ ಗಿಡದ ಕೆಳಗೆ ಕೂರಿಸುವದೂ ಉಂಟು. ಅವಳು ಪರ ಪುರುಷನನ್ನು ಹೊಸ್ತಿಲಲ್ಲಿ ನಿಂತು ನೋಡಬಾರದು. ಫಲವಂತಿಕೆಯನ್ನು ಕಾಯ್ದಿಡುವ ಹಾಗೂ ಅದನ್ನು ರಕ್ಷಿಸುವ ಸಲುವಾಗಿ ಈ ರೀತಿಯ ಕಟ್ಟಳೆಗಳನ್ನು ಹಾಕುವದು ಅವರ ಪದ್ಧತಿ. ಈ ರೀತಿಯಾಗಿ ಋಷ್ಯಂತಿ ಹೆಣ್ಣಿನ ಪ್ರಥಮ ಸಂಭ್ರಮದ ಘಟ್ಟವಾಗಿ ಗೌಳಿಗರು ತುಂಬಾ ಆದರ ಪೂರ್ವಕವಾಗಿ ಶ್ರದ್ಧೆಯಿಂದ ವಿಧಿನಿಯಮಪೂರ್ವಕವಾಗಿ ಪಾಲಿಸುತ್ತಾರೆ.

**೨.೩ ವಿವಾಹದಲ್ಲಿ ಬದಲಾವಣೆ**

ವಿವಾಹವು ಜಗತ್ತಿನಾದ್ಯಂತ ಅಸ್ತಿತ್ವದಲ್ಲಿರುವಂಥ ಒಂದು ಸಾಮಾಜಿಕ ಸಂಸ್ಥೆ. ಮೂಲಭೂತವಾಗಿ ವಿವಾಹವು ಸ್ತ್ರೀ ಮತ್ತು ಪುರುಷ ಈ ಇಬ್ಬರು ವ್ಯಕ್ತಿಗಳ ನಡುವೆ ಏರ್ಪಡುವ ಒಂದು ಸಂಬಂಧ. ಹಲವು ವಿಶೇಷ ಸಂದರ್ಭಗಳಲ್ಲಿ ವಿವಾಹವೆನ್ನುವ ಸಂಬಂಧದಲ್ಲಿ ಒಬ್ಬರಿಗಿಂತ ಹೆಚ್ಚು ಸಂಖ್ಯೆಯ ಮಹಿಳೆಯರು ಅಥವಾ ಪುರುಷರು ಭಾಗಿಗಳಾಗಬಹುದು. ವಿವಾಹ ಎನ್ನುವ ಸಂಬಂಧದಿಂದ ಸ್ತ್ರೀ-ಪುರುಷ ಸಂಬಂಧಕ್ಕೆ ಸಾಮಾಜಿಕ ಮಾನ್ಯತೆ ದೊರೆಯುವುದರಿಂದಲೂ, ಆ ಸಂಬಂಧ ಏರ್ಪಡುವಾಗ ಹಲವಾರು ನಿಯಮಗಳು ಹಾಗೂ ಧಾರ್ಮಿಕ ಕ್ರಿಯಾವಿಧಿಗಳನ್ನು ಅನುಸರಿಸುವುದರಿಂದಲೂ ಅದನ್ನು ಒಂದು ಸಾಮಾಜಿಕ ಸಂಸ್ಥೆ ಎಂದು ಗುರುತಿಸಲಾಗಿದೆ. ವಿವಾಹವೆಂದರೆ ಗಂಡು-ಹೆಣ್ಣಿನ ನಡುವೆ ಏರ್ಪಡುವ ಲೈಂಗಿಕ ಸಂಬಂಧ ಅಥವಾ ಆ ಸಂಬಂಧದಿಂದ ಜನಿಸುವ ಮಕ್ಕಳಿಗೆ ಸಾಮಾಜಿಕ ಅಂಗೀಕಾರ ನೀಡುವಂಥ ಒಂದು ಸಂಸ್ಥೆ ಎನ್ನುವುದು ನಿಜವಾದರೂ, ಪ್ರತಿಯೊಂದು ಸಮಾಜದಲ್ಲಿ ವಿವಾಹಕ್ಕೆ ಇತರ ಸಾಮಾಜಿಕ, ಆರ್ಥಿಕ ಹಾಗೂ ಭಾವನಾತ್ಮಕ ಕಾರ್ಯಗಳೂ ಇವೆ.

ಬಹುಪತ್ನಿತವು ಜಾತಿ-ಧರ್ಮದ ಕಟ್ಟಲೆಗಳನ್ನು ಮೀರಿ ನಿಂತಂಥ ಒಂದು ಪ್ರವೃತ್ತಿ. ಜಗತ್ತಿನಾದ್ಯಂತ ಏಕಸಂಗಾತಿ ವಿವಾಹಕ್ಕೆ ಅತ್ಯಂತ ಹೆಚ್ಚಿನ ಮನ್ನಣೆ ದೊರೆತಿದ್ದರೂ, ಅನೇಕ

ಕುಟುಂಬಗಳಲ್ಲಿ ದ್ವಿಪತ್ನಿತ್ವ ಅಥವಾ ಹಲವು ಸಂದರ್ಭಗಳಲ್ಲಿ ಇನ್ನೂ ಹೆಚ್ಚಿನ ಸಂಖ್ಯೆಯ ಮಹಿಳೆಯರೊಡನೆ ವೈವಾಹಿಕ ಸಂಬಂಧವನ್ನು ಪುರುಷರು ಹೊಂದಿರುವಂಥ ಪ್ರಸಂಗಗಳು ಹೆಚ್ಚಾಗುತ್ತಿವೆ. ಬಹುಪತ್ನಿತ್ವಕ್ಕೆ ಭಾರತೀಯ ಸಮಾಜದಲ್ಲಿ ಒಂದು ಹಳೆಯ ಇತಿಹಾಸವೇ ಇದೆ. ಸ್ತ್ರೀ–ಪುರುಷ ಸಮಾನತೆ ಮತ್ತು ಸ್ವಾತಂತ್ರ್ಯಗಳನ್ನು ಕುರಿತಂತೆ ದ್ವಿಮುಖ ಮೌಲ್ಯಗಳನ್ನೇ ಪ್ರತಿಪಾದಿಸುತ್ತಾ ಬಂದಿರುವ ಈ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷನಿಗೆ 'ಜೀವನದಲ್ಲಿ ಒಂದೇ ಬಾರಿ ವಿವಾಹ' ಎಂಬ ನಿಯಮ ಹಿಂದೆಯೂ ಅನ್ವಯಿಸುತ್ತಿರಲಿಲ್ಲ, ಇಂದಿಗೂ ಅನ್ವಯಿಸುತ್ತಿಲ್ಲ. ಹಿಂದೂ ವಿವಾಹವನ್ನು ಒಂದು 'ಪವಿತ್ರ ಬಂಧನ'ವೆಂದು ಕರೆದಿರುವುದು, ೧೯೫೫ರಲ್ಲಿ ಜಾರಿಗೆ ಬಂದ ಹಿಂದೂ ವಿವಾಹ ಕಾಯಿದೆ 'ಏಕ ಸಂಗಾತಿ ವಿವಾಹವನ್ನು ಕಡ್ಡಾಯ ಮಾಡಿದ್ದು– ಇವು ಯಾವುದೂ ಸ್ತ್ರೀ–ಪುರುಷರಿಗೆ ಏಕ ಪ್ರಕಾರವಾಗಿ ಅನ್ವಯಿಸುತ್ತಿಲ್ಲ. ಏಕಸಂಗಾತಿ ವಿವಾಹ ಅತ್ಯಂತ ಸಮ್ಮತವಾದ ವಿವಾಹ ಪ್ರಕಾರವೆಂದು ಅಂಗೀಕೃತವಾಗಿದ್ದರೂ, ಅನೇಕ ಪುರುಷರು ಎಲ್ಲ ಕಾಲಗಳಲ್ಲೂ ಬಹುಪತ್ನಿತ್ವ ಪದ್ಧತಿಯನ್ನು ಅನುಸರಿಸುತ್ತಿರುವುದನ್ನು ನಾವು ಕಾಣಬಹುದು. ಭಾರತದಲ್ಲಂತೂ, ನೈತಿಕತೆಯನ್ನು ಕಾಪಾಡುವ ಹೆಸರಿನಲ್ಲಿ ಸ್ತ್ರೀಯರಿಗೇ ಒಂದು ಮಾಪನ ದಂಡ, ಪುರುಷರಿಗೆ ಒಂದು ಮಾಪನ ದಂಡವನ್ನು ಬಳಸುತ್ತಿರುವುದು ಬಹುಕಾಲದಿಂದಲೂ ನಡೆದುಕೊಂಡು ಬಂದಿರುವಂಥ ಒಂದು ಆಚರಣೆ, ಬಹು ಹಿಂದೆಯೇ, ಸಾಮಾಜಿಕ ಅಂತಸ್ತು, ಸ್ವಜಾತಿಯಲ್ಲೇ ವಿವಾಹವಾಗಬೇಕೆಂಬ ಕಾರಣಗಳನ್ನು ಮುಂದಿಟ್ಟು, ದೇಶದ ಕೆಲವು ಭಾಗಗಳಲ್ಲಿ ಬಹುಪತ್ನಿತ್ವ ಪದ್ಧತಿ ಜಾರಿಯಲ್ಲಿದುದ್ದನ್ನು ವಿಷಯ ಮೂಲಗಳಿಂದ ತಿಳಿಯಬಹುದಾಗಿದೆ. ಗೌಳಿಗರಲ್ಲೂ ಬಹುಪತ್ನಿತ್ವ ಅಸ್ತಿತ್ವದಲ್ಲಿದೆ.

ನಮ್ಮ ದೇಶದ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಲ್ಲಿ ಪ್ರತಿಶತ ೪೦.೦೭ರಷ್ಟು ಜನ ೧೫–೧೯ನೇ ವಯಸ್ಸಿನಲ್ಲಿ ಮದುವೆಯಾಗಿರುತ್ತಾರೆ. ಭಾರತೀಯ ಕಾನೂನು ಹೆಣ್ಣು ಮದುವೆಯಾಗಲು ಕನಿಷ್ಠ ೧೮ ವರ್ಷ ಆಗಬೇಕು ಎನ್ನುತ್ತವೆ. ಕಾಡು, ಗುಡ್ಡಗಳಲ್ಲಿ ವಾಸಿಸುವ ಗೌಳಿಗ ಸಮುದಾಯದಲ್ಲಿ ಮದುವೆ ವಿಚಾರದಲ್ಲಿ ಕಾನೂನಿಗೆ ಮಹತ್ವ ಮತ್ತು ಸಂಪ್ರದಾಯ ಪಾಲನೆ ಮಾಡುತ್ತಾರೆ.

ಗೌಳಿ ಸಮುದಾಯದಲ್ಲಿ ವಿವಾಹದ ಬಗೆಗೆ ಪವಿತ್ರವಾದ ಭಾವನೆ ಇದ್ದು ಸಗೋತ್ರ ಮದುವೆ ನಿಷಿದ್ಧ. ತಮ್ಮ ಒಳಗೋತ್ರಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುವುದಿಲ್ಲ. ಒಂದೇ ಗೋತ್ರಕ್ಕೆ ಸೇರಿದವರು ಪರಸ್ಪರ ಸಹೋದರ ಸಂಬಂಧಿಗಳೆಂದು ಭಾವಿಸುತ್ತಾರೆ. ವಧುದಕ್ಷಿಣೆ ಇವರಲ್ಲಿ ರೂಢಿಯಲ್ಲಿದೆ. ಹೆಣ್ಣುಮಕ್ಕಳು ರಜಸ್ವಲೆ ಆಗುವುದರೊಳಗೆ ಮದುವೆ ಮಾಡುವುದು ಇವರ ಪ್ರಕಾರ ಪವಿತ್ರ ಮದುವೆ ೬–೧೪ ವರ್ಷದೊಳಗೆ ಮದುವೆ ಮಾಡಿ ತಮ್ಮ ಜವಾಬ್ದಾರಿ ಪೂರೈಸುವುದು ಪ್ರಧಾನವಾಗಿರುತ್ತದೆ. ಮದುವೆಯ ವಿಚಾರದಲ್ಲಿ ಹಿರಿಯರ ತೀರ್ಮಾನವೇ ಅಂತಿಮವಾಗಿರುತ್ತದೆ.

ಹೀಗೆ ಗೌಳಿಗರ ಈ ವಿವಾಹ ಪದ್ಧತಿ ಹಾಗೂ ಸಮಾಜ ಸಂಪ್ರದಾಯಗಳು ನಾಗರಿಕರ ದೃಷ್ಟಿಯಲ್ಲಿ ಸ್ವಲ್ಪ ವಿಚಿತ್ರವೆನ್ನಿಸಬಹುದಾದರೂ ಕಟ್ಟಾಭಿಮಾನಿಗಳಾದ ಗೌಳಿಗರು ತಮ್ಮ ಪೂರ್ವಜರಿಂದ ಬಂದ ಎಲ್ಲಾ ಕಟ್ಟಾಚರಣೆಗಳನ್ನು, ಸಂಪ್ರದಾಯಗಳನ್ನು ಉಳಿಸಿಕೊಂಡು ಅಲ್ಪಸ್ವಲ್ಪ ಬದಲಾವಣೆ

ಯೊಂದಿಗೆ ಮುನ್ನಡೆದಿದ್ದಾರೆ. ವಿವಾಹಕ್ಕೆ ಸಂಬಂಧಪಟ್ಟ ಯಾವುದೇ ವಿಧಿ-ವಿಧಾನಗಳಿಗೆ ಚ್ಯುತಿ ಬಾರದಂತೆ ನಡೆದುಕೊಳ್ಳುತ್ತಿದ್ದಾರೆ.

ಗೌಳಿಗರಲ್ಲಿ ಮದುವೆಯ ವಿಧಿನಿಷೇದಗಳು ವಿಶಿಷ್ಟವಾದ ಬುಡಕಟ್ಟಿನ ಲಕ್ಷಣಗಳನ್ನು ಸೂಚಿಸುವ ಅಂಶಗಳಾಗಿವೆ. ಪುರುಷ ಮೂಲದಿಂದ ನಿಷ್ಪನ್ನಗೊಳ್ಳುವ ಗೌಳಿಗರ ಕುಟುಂಬ ವ್ಯವಸ್ಥೆ ತನ್ನೊಳಗೇ ಕೆಲವು ವಿಧಿ-ನಿಷೇಧಗಳನ್ನು ಹೇರಿಕೊಂಡು ವಂಶೋತ್ಪತ್ತಿಯನ್ನು ನಿಯಂತ್ರಿಸುವ ಆ ಮೂಲಕ ಬುಡಕಟ್ಟಿನ ಅನನ್ಯತೆಯನ್ನು ಕಾಪಾಡಿಕೊಂಡು ಬರುವ ಕಾರ್ಯವನ್ನು ಮಾಡುತ್ತದೆ. ಗೌಳಿಗರು ತಮ್ಮ ಸೋದರ ಕುಳಿಗಳಲ್ಲಿ ವಿವಾಹವನ್ನು ನಿಷೇಧಿಸುವ ಮೂಲಕ ವಂಶೋತ್ಪತ್ತಿಯನ್ನು ಕಾಪಾಡಿಕೊಂಡು, ರಕ್ತ ಸಂಬಂಧದ ತೊಂದರೆಗಳನ್ನು ನಿವಾರಿಸಿಕೊಂಡು ಬರುತ್ತಿವೆ. ತಂದೆಯ ತಂಗಿಯ ಮಗಳನ್ನು ಇವರು ವಿವಾಹ ಅಗಬಹುದು ಅಲ್ಲದೆ ತಾಯಿಯ ತಮ್ಮ ಅಥವಾ ಅಣ್ಣನ ಮಗಳನ್ನು ಮದುವೆಯಾಗುವ ಸಂಪ್ರದಾಯ ಕೂಡ ಗೌಳಿಗರಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಸೋದರಿಕೆ ಸಂಬಂಧದಲ್ಲಿ ಹೆಚ್ಚು ಮದುವೆಯಾಗುವ ಈ ಬುಡಕಟ್ಟಿನಲ್ಲಿ ಒಬ್ಬ ವ್ಯಕ್ತಿ ನಾಲ್ಕನೇ ಮದುವೆಯಾಗುವ ಅವಕಾಶವನ್ನು ಹೊಂದಿರುತ್ತಾನೆ. ನಾಲ್ಕನೆ ಮದುವೆಗೆ ಪಾಟ್ ಎಂದು ಕರೆಯುವ ಗೌಳಿಗರು ಗಂಡ ಸತ್ತನಂತರ ಆ ಹೆಣ್ಣನ್ನು ಮದುವೆಯಾಗುವ ಸೀರುಡುಕೆ ಪದ್ಧತಿಯನ್ನು ಮುಂದು ವರಿಸಿಕೊಂಡು ಬಂದಿದ್ದಾರೆ. ಕೆಲವು ಗೌಳಿಗರು ತೊಟ್ಟಿಲ ಹೆಣ್ಣುಕೂಸಿಗೆ ವಿವಾಹ ಮಾಡುತ್ತಿದ್ದ ಪದ್ದತಿಯ ಬಗ್ಗೆ ಹೇಳುತ್ತಾರಾದರೂ ಹುಡುಗಿ ಋತುಮತಿಯಾಗುವ ಪೂರ್ವದಲ್ಲೇ ಅವಳ ವಿವಾಹವನ್ನು ಮಾಡುವುದು ಇವರಲ್ಲಿ ವಾಡಿಕೆಯಾಗಿದೆ. ಇದು ಒಂದು ಅರ್ಥದಲ್ಲಿ ಬಾಲ್ಯ ವಿವಾಹವೇ ಆಗಿದೆ. ಏಳು ವರ್ಷದಿಂದ ಹದಿನಾಲ್ಕು ವರ್ಷದ ಪ್ರಾಯದ ಮಕ್ಕಳಿಗೆ ಮದುವೆ ಮಾಡಲಾಗುತ್ತದೆ.

ಈಗಾಗಲೇ ವಿವರಿಸಿದಂತೆ ಸೋದರಿಕೆ ಸಂಬಂಧದ ಕುಳಿಗಳಲ್ಲಿ ಹಾಗೂ ಒಂದೇಕುಳಿಗಳಲ್ಲಿ ವಿವಾಹ ನೆರವೇರುವುದಿಲ್ಲ. ಕಾತ್ರಾಟ್ ಕುಳಿಗೆ ಸೇರಿದ ಗಂಡು ಕಾತ್ರಟ್ ಕುಳಿಯ ಹೆಣ್ಣನ್ನು ವಿವಾಹ ಆಗುವುದಿಲ್ಲ. ಕಾತ್ರಟ್ ಕುಳಿಗೆ ಸೇರಿದ ಗಂಡು ಜೋರೆ ಕುಳಿಯ ಹೆಣ್ಣನ್ನು ವಿವಾಹ ಅಗಬಹುದು. ಅಲ್ಲದೇ ಇತರ ಧರ್ಮಗಳಲ್ಲಿ ಇರುವಂತೆ ಅಕ್ಕನ ಮಗಳನ್ನು ತಮ್ಮ ವಿವಾಹ ಆಗುವುದಿಲ್ಲ. ಆದರೆ ಅಕ್ಕನ ಮಗನಿಗೆ ತಮ್ಮನ ಮಗಳನ್ನು ಕೊಟ್ಟು ವಿವಾಹ ನಡೆಸುವ ರೂಢಿ ಇದೆ. ಅಕ್ಕತಂಗಿಯರನ್ನು ಒಬ್ಬ ಗಂಡು ಮದುವೆಯಾಗುವುದು ಸಾಮಾನ್ಯ ಪದ್ಧತಿಯಾಗಿದೆ. ವಂಶೋತ್ಪತ್ತಿಯನ್ನು ನಿರಂತರ ವಾಗಿಸುವ, ವರ್ಣಸಂಕರದ ಭೀಕರ ಪರಿಣಾಮಗಳನ್ನು ಎದುರಿಸಲು ಬುಡಕಟ್ಟುಗಳು ತಮ್ಮದೇ ಆದ ಕಟ್ಟು ಪಾಡುಗಳನ್ನು ವಿಧಿ-ನಿಷೇಧಗಳನ್ನು ರೂಪಿಸಿಕೊಂಡಿರುತ್ತಾರೆ. ಗೌಳಿಗರಲ್ಲಿ ಒಂದೇ ಕುಳಿಗೆ ಸೇರಿದವರ ನಡುವೆ ವಿವಾಹ ನಿಷಿದ್ಧ ಹಾಗೂ ಸೋದರ ಕುಳಿಗಳ ನಡುವೆಯೂ ಕೂಡ ವಿವಾಹ ನಿಷಿದ್ಧವಾಗಿರುತ್ತದೆ.

**ವಿವಾಹದ ವಿಧಗಳು**

ವಿವಾಹ ಸಮಾರಂಭ ವಾಡದ ಹಿರಿಯರ ಸಮಕ್ಷಮದಲ್ಲಿ ನಡೆಯುತ್ತದೆ. ಪುರಷ ತನ್ನ ಹೆಂಡತಿ ತೀರಿಕೊಂಡಾಗ ಅವಿವಾಹಿತ ಹೆಣ್ಣನ್ನು ಮದುವೆಯಾಗುವುದಿಲ್ಲ. ಎಲ್ಲ ಬುಡಕಟ್ಟುಗಳಲ್ಲೂ ಕಂಡು

ಬರುತ್ತದೆ. ಇದನ್ನು ಗೌಳಿಗರು "ಬಿಪ್ಯೋರ" ಎಂದು ಕರೆಯುತ್ತಾರೆ. ಇಂತಹ ಮದುವೆಯಲ್ಲಿ ಗಂಡು ಎರಡನೆ ಮದುವೆಯಾಗುವ ಕಾರಣದಿಂದ ಹೆಣ್ಣಿಗೆ ಬಾಸಿಂಗವನ್ನು ಧರಿಸುವುದಿಲ್ಲ. ಗಂಡು ಅವಿವಾಹಿತ ಹೆಣ್ಣನ್ನು ಮೊದಲು ಮದುವೆಯಾಗುವ ಸಂದರ್ಭದಲ್ಲಿ ಭಾಸಿಂಗ ಧರಿಸಿ ಹಸೆಮಣೆಯಲ್ಲಿ ಇಬ್ಬರನ್ನೂ ಕೂಡಿಸುತ್ತಾರೆ. ಒಂದು ಸಲ ಮದುವೆಯಾದ ಗಂಡು ತನ್ನ ಹೆಂಡತಿ ಬದುಕಿರುವಾಗಲೇ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕಾಗಿ ಇನ್ನೊಬ್ಬ ಹೆಣ್ಣನ್ನು ವರಿಸಿ ಮದುವೆಯಾದರೆ ಇಂತಹ ವಿವಾಹ ವನ್ನು 'ಗ್ಯಾಟ್' ಎನ್ನುತ್ತಾರೆ. ಸಾಮಾನ್ಯವಾಗಿ ವಾಡದ ಹಿರಿಯರ ಅನುಮತಿ ಪಡೆದೇ ಇಂತಹ ವಿವಾಹ ನಡೆಯುತ್ತದೆ. ಸೀರುಡುಕೆ ಅಥವಾ ವಿಧವಾ ವಿವಾಹ ಕೂಡ ಗೌಳಿಗರಲ್ಲಿದೆ. ಯಾವುದೇ ಮದುವೆ ಇರಲಿ ಊರಿನ ಹಿರಿಯರು ಅಥವಾ "ಜಾಂತ್ಯಾಲೊಕ್": ಮತ್ತು ಪೂಜಾರಿಗಳು ಇರಲೇಬೇಕು. ಪೂಜಾರಿ ಸ್ಥಾನವನ್ನು ಯಡ್ಯಗ್ಯ ಅಥವಾ ಲಾಂಬೋರ್ ಕುಳಿಗೆ ಸೇರಿದ ವ್ಯಕ್ತಿ ವಹಿಸಿಕೊಂಡು ಕಾರ್ಯಕ್ರಮ ನೆರವೇರಿಸುತ್ತಾನೆ. ಸೀರುಡಿಕೆ ಅಥವ ವಿಧವಾವಿವಾಹ ನೆರವೇರಿಸುವಾಗ ಹೆಣ್ಣಿಗೆ ಇತರ ವಿವಾಹ ವಿಧಿಗಳಂತೆ ಅರಿಶಿಣ ಹಚ್ಚುವುದು ಮತ್ತು ಬಾಸಿಂಗ ಕಟ್ಟುವುದು ಇರುವುದಿಲ್ಲ. ವಿಧವೆಯನ್ನು ಗೌಳಿಗರಲ್ಲಿ ಒಂದು ವಿವಾಹ ಆಗಿರುದ ಪುರುಷ ಮದುವೆಯಾಗುವಂತಿಲ್ಲ. ಅವನು ಮೊದಲು ಮದುವೆಯಾಗಿರಬೇಕೆಂಬ ಕಡ್ಡಾಯವಿದೆ. ಸೀರುಡಿಕೆಯನ್ನು ಮಾಡಿಕೊಳ್ಳುವ ಹೆಣ್ಣು ತನ್ನ ಮೊದಲ ಗಂಡ ಕಟ್ಟಿದ ತಾಳಿ, ಕಾಲುಂಗರ ಹಾಗೂ ಕೈಪಾಟಿ, ಮೂಗುತಿ ಹಾಗೂ ನತ್ತು ಬುಗುಡಿಗಳನ್ನು ಮರಣಹೊಂದಿದ ಪತಿಯ ಸಂಬಂಧಿಕರಿಗೆ ಕೊಟ್ಟು ಅವರ ಅನುಮತಿ ಪಡೆದು ಮದುವೆಯಾಗಬೇಕು. ಕೆಲವು ಪತಿಯ ಕಡೆಯ ಬಂಧುಗಳು ಹೆಣ್ಣಿನ ಕಡೆಯಿಂದ ಸೀರೆ ತರಬೇಕು. ಹಾಗೂ ಹೆಣ್ಣು ಗಂಡಿಗೆ ಧೋತರ ತರಬೇಕೆಂಬ ನಿಯಮವಿದೆ. ಸೀರುಡಿಕೆಯ ಸಂದರ್ಭದಲ್ಲಿ ಪೂಜಾರಿಯು ಗಂಡುಹೆಣ್ಣಿಗೆ ಗ್ಯಾಟ್‌ಮಾರೋಚ್" ಮಾಡುವುದು ವಾಡಿಕೆಯಾಗಿದೆ. ವಾಡದ ಹಿರಿಯರ ಎದುರು ಗ್ಯಾಟ್ ಮದುವೆಯಾದ ದಂಪತಿಗಳು ಮಾಂಸದೂಟವನ್ನು ನೆರೆದ ಜನರಿಗೆ ಹಾಕಿಸಬೇಕು. ಮರುಮದುವೆಯಾದ ಹೆಣ್ಣಿಗೆ ಯಾವುದಾದರೂ ಮುತ್ತೈದೆ ಕುಂಕುಮ ಅರಿಶಿಣವನ್ನು ಹಣೆಗೆ ಹಚ್ಚಿ ಅವಳನ್ನು ಸುಮಂಗಲೆಯನ್ನಾಗಿ ಮಾಡುತ್ತಾರೆ. ಕೆಲವು ಸಲ ಗಂಡ ಬದುಕಿದ್ದಾಗಲೂ ಯಾವುದೋ ಕಾರಣದಿಂದ ಗಂಡನಿಂದ ತಿರಸ್ಕರಿಸಲ್ಪಟ್ಟ ಹೆಣ್ಣನ್ನೂ ವಿಧುರರು ಮದುವೆಯಾಗುವಾಗ ಈ ರೀತಿಯ 'ಗ್ಯಾಟ್' ಪದ್ಧತಿಯಿಂದಲೇ ವಿವಾಹ ನಡೆಯುತ್ತದೆ. ಈ ರೀತಿ ಮದುವೆಯಾಗಲು ಕೆಲವು ವಿಧಿ–ನಿಷೇದಗಳನ್ನು ಬುಡಕಟ್ಟು ಕಲ್ಪಿಸಿಕೊಂಡಿರುವುದನ್ನು ಗಮನಿಸಬಹುದು. ಅಂದರೆ ಮರಣ ಹೊಂದಿದ ಗಂಡನ ವಂಶಕ್ಕೆ ಸೇರಿದವರನ್ನು ಮದುವೆಯಾಗಬಾರದೆಂಬ ನಿಷೇಧದ ಜೊತೆಗೆ ತನ್ನ ತಂದೆಯ ಕುಳಿಗೆ ಸೇರಿದವರನ್ನೂ ಹಾಗೂ ಅವರ ರಕ್ತ ಸಂಬಂಧಿಗಳನ್ನು ಮದುವೆಯಾಗಬಾರದೆಂಬ ನಿಷೇಧವೂ ಗೌಳಿಗರಲ್ಲಿ ಇದೆ.

ಸಾಮಾನ್ಯವಾಗಿ ಹೋಳಿ ಹುಣ್ಣಿಮೆಯಾದ ನಂತರ ಮದುವೆಯ ಕಾರ್ಯಕ್ರಮಗಳು ಎರಡು ತಿಂಗಳವರೆಗೆ ನಡೆಯುತ್ತದೆ. ಸಂಪ್ರದಾಯದಂತೆ ಯಡ್ಯಗ್ಯಾ ಮದುವೆಯ ಆಚರಣೆಗಳನ್ನು ನೆರವೇರಿಸಿದರೂ ಮದುವೆಯ ಮೂಹೂರ್ತಗಳನ್ನು ಇಟ್ಟುಕೊಡುವವರು ಹಿಂದೂಧರ್ಮದ ಬ್ರಾಹ್ಮಣ

ಪುರೋಹಿತರೇ ಆಗಿರುತ್ತಾರೆ. ಗೌಳಿಗರಲ್ಲಿ ತೆರ ಸಾವಿರದ ಐದನೂರು ರೂಪಾಯಿಗಳಿಂದ ಮೂರು ಸಾವಿರದ ರೂಪಾಯಿವರೆಗೂ ಇರುತ್ತದೆ. ಗೌಳಿಗರು ತೆರವನ್ನು ಜಾಜ್ ಎನ್ನುತ್ತಾರೆ.

ನಿಶ್ಚಯ ಮಾಡುವುದನ್ನು 'ಸಾಕರ ಸಾಡೆ' ಎನ್ನುತ್ತಾರೆ. ಇದರರ್ಥ ಸಕ್ಕರಿ ನಿಶ್ಚಯ ಎಂದಾಗುತ್ತದೆ. ನಿಶ್ಚಯಮಾಡುವಾಗ ತೆಂಗಿನ ಕಾಯಿ, ದಬುಸದ ಕಣ, ಅಡಿಕೆ, ಸಕ್ಕರಿ ವೀಳೆದೆಲೆ ಮುಂತಾದುವನ್ನು ಒಂದು ಕುಕ್ಕೆಯಲ್ಲಿಟ್ಟು ಗಂಡಿನ ಕಡೆಯ ಐದು ಜನ 'ಜಾಂತೆಲೋಕ್' ಹೆಣ್ಣಿನ ಮನೆಗೆ ಬರುತ್ತಾರೆ. ಹೆಣ್ಣಿನವರಿಗೆ ಕೊಡ ಬೇಕಾದ 'ಜಾಜ್'ನ್ನು ಒಂದು ಬುಟ್ಟಿಯಲ್ಲಿ ಕಟ್ಟಿ ಹೂವಿನೊಂದಿಗೆ ಹೆಣ್ಣಿನ ತಂದೆಗೆ ಒಪ್ಪಿಸುತ್ತಾರೆ. 'ಜಾಜ್' ಬಂದನಂತರ ಹೆಣ್ಣಿನ ಕಡೆಯವರಿಗೆ ಕನ್ಯಾಪಿತೃವು 'ಜಾಜ್' ಬಂದಿರುವುದನ್ನು ಗಟ್ಟಿಯಾಗಿ ಹೇಳುತ್ತಾನೆ. ಹೀಗೆ ಹೆಣ್ಣು ಗಂಡಿನ ವಿವಾಹದ ನಿಶ್ಚಿತಾರ್ಥ ಹೆಣ್ಣಿನ ಮನೆಯಲ್ಲಿ ಪರಸ್ಪರ ಸಿಹಿಯನ್ನು ಹಂಚುವುದರ ಮೂಲಕ ಮುಕ್ತಾಯವಾಗುತ್ತದೆ. ಜವುಳ ತರುವಾಗ ತಾಳಿ, ಕಿವಿಯ ಬುಗುಡಿ, ಕಾಲುಂಗರ ಹಾಗೂ ಕಾಲ್ಗಡಗಳನ್ನು ತಪ್ಪದೇ ತರುವುದು ಸಂಪ್ರದಾಯ ವಾಗಿದೆ. ಕೆಲವು ಗೌಳಿಗರು ಜವುಳ ಕೊಂಡುಕೊಂಡ ಐದು ರಾತ್ರಿಯೊಳಗೆ ಮದುವೆ ನಡೆಯಲೇಬೇಕು ಎಂದು ನಂಬುತ್ತಾರೆ. ಮದುವೆಗಳು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ನಡೆಯುವುದು ವಾಡಿಕೆ.

ಮದುವಣಿಗ ಮಾತ್ರ ಹೊಸದಾಗಿ ಹಾಕಿರುವ ಚಾಪೆಯ ಮೇಲೆ ಕುಳಿತುಕೊಳ್ಳಬೇಕು. ಹಾಗೂ ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗುವಾಗ ಈ ಚಾಪೆಯನ್ನು ತನ್ನ ಮನೆಗೆ ತೆಗೆದುಕೊಂಡು ಹೋಗಬೇಕೆಂಬ ಸಂಪ್ರದಾಯವಿದೆ. ಈ ಚಾಪೆಯನ್ನು ಮದುವೆಯಾದ ಮೇಲೆ ಗಂಗೆ ಪೂಜೆಗೆ ತೆಗೆದುಕೊಂಡು ಹೋಗಿ ಅದನ್ನು ನೀರಿನಲ್ಲಿ ಮುಳುಗಿಸಿ ಮೀನುಗಳನ್ನು ಹಿಡಿಯುತ್ತಾರೆ. ಮೀನುಗಳು ಫಲವಂತಿಕೆಗೆ ಸಂಕೇತವಾದುದರಿಂದ ಈ ಶಾಸ್ತ್ರ ಅರ್ಥಪೂರ್ಣವಾಗಿದೆ. ಗೌಳಿಗರು ಮದುವೆ ನಡೆಯುವ ಮನೆಯ ಮುಂದಿನ ಹಂದರವನ್ನು ಮದುವೆ ನಡೆಯುವ ಹಿಂದಿನ ದಿನ ವಾಡೆಯ ಪ್ರಮುಖರೆಲ್ಲ ಸೇರಿ ನಿರ್ಮಿಸುತ್ತಾರೆ, ಕಾಡಿನಲ್ಲಿ ದೊರೆಯುವ ಕಂಬ ಹಾಗೂ ಕವೆಗೂಟಗಳಿಂದ ಹಂದರೆ ನಿರ್ಮಿಸಿ ಅದಕ್ಕೆ ಹಲಸು, ಅತ್ತಿ ಹಾಗೂ ತೊಂಡೆಯ ಸೊಪ್ಪನ್ನು ಹೊದಿಸುತ್ತಾರೆ. ಸಾಮಾನ್ಯವಾಗಿ ಹನ್ನೆರಡು ಕಂಬಗಳಿರುವ ಹಂದರವನ್ನು ನಿರ್ಮಿಸುತ್ತಾರೆ. ಈ ಹಂದರವನ್ನು ಗಂಡಿನ ದಿಬ್ಬಣ ಪ್ರವೇಶಿಸಿದಾಗ ಹೆಣ್ಣಿಗೆ ಸೀರೆ ಹಾಗೂ ಬಂಗಾರ, ಬೆಳ್ಳಿಯ ಆಭರಣಗಳು ಹಾಗೂ ತೆರವನ್ನು ಕೊಟ್ಟು ಪ್ರವೇಶಿಸಬೇಕೆಂಬ ನಿಯಮವಿದೆ.

ಮದುವೆಯ ದಿನ ಗಂಡು ಹಾಗೂ ಹೆಣ್ಣನ್ನು ದೇವರ ಎದುರಿಗೆ ಕೂಡಿಸಿ ಅರಿಶಿನ ಎಣ್ಣೆಯನ್ನು ಬೆರೆಸಿ ಮೊದಲು ದೇವರಿಗೆ ಹಚ್ಚಿ ನಂತರ ಇಬ್ಬರಿಗೂ ಹಚ್ಚುತ್ತಾರೆ. ನಂತರ ನೀರನ್ನು ಹಾಕಿ ಸ್ನಾನ ಮಾಡಿಸುವ ಕ್ರಮವನ್ನು 'ಹುಂಬೋರ್' ಎನ್ನುತ್ತಾರೆ. ಸ್ನಾನದ ನಂತರ ಗೌಳಿಗ ಬುಡಕಟ್ಟಿನಲ್ಲಿ ಮಹತ್ವವಾದ ಆಚರಣೆಯೊಂದು ನಡೆಯುತ್ತದೆ. ಅದು ಫಲವಂತಿಕೆಯ ಸಂಕೇತವಾದ ಅತ್ತಿ ಮರವನ್ನು ಮದುವೆಯಾಗುವ ಗಂಡು ಹೆಣ್ಣು ಸುತ್ತುತ್ತಾ ಹಾಡುವುದು "ಹುಂಬರಾಬಾಯಿ, ತಲಕಾಯಿಮನ ತಲಕಾಯಿಸ" ಎಂದು ಹಾಡುತ್ತಾ ಗಂಡು ಹೆಣ್ಣು ಭಕ್ತಿಯಿಂದ ಸುತ್ತುತ್ತಾರೆ. ಮದುಮಕ್ಕಳಿಗೆ

'ಹುಂಬೋರ್' ಶಾಸ್ತ್ರ ಮುಗಿದ ನಂತರ ಹೆಣ್ಣು ಗಂಡಿನ ಕೂದಲನ್ನು ಹಣೆಗೆ ಬಾಚಬೇಕು ಮತ್ತು ಗಂಡು ಹೆಣ್ಣಿನ ಕೂದಲನ್ನು ಬಾಚಬೇಕೆಂಬ ಕಡ್ಡಾಯ ನಿಯಮವಿದೆ. ತದನಂತರ ಮದುಮಕ್ಕಳನ್ನು ಬುಡಕಟ್ಟಿನ ಸಂಪ್ರದಾಯದಂತೆ ಶೃಂಗರಿಸುತ್ತಾರೆ. ಗಂಡಿನ ವಿಶೇಷ ಉಡುಗೆಯೆಂದರೆ ಲಂಗೋಟಿಯ ಮೇಲೆ ಕಚ್ಚೆ ಪಂಚೆ ಹಾಕಿಕೊಂಡು ಅದರ ಮೇಲೆ ನಿಲುವಂಗಿ ಹಾಕಿಕೊಂಡು ಮೇಲೆ ಶಲ್ಯ ಹಾಕಿ ಕೊಳ್ಳುತ್ತಾನೆ. ಹೆಣ್ಣು ಹೊಸ ಸೀರೆ ರವಿಕೆ ಉಟ್ಟು ಆಭರಣಗಳನ್ನು ತೊಟ್ಟುಕೊಂಡು ಅಲಂಕೃತ ಳಾಗುತ್ತಾಳೆ. ಗಂಡು ಹೆಣ್ಣಿನ ಮೊದಲ ವಿವಾಹವಾದರೆ ತಲೆಗೆ ಬೆಂಡಿನ ಬಾಸಿಂಗ ಕಟ್ಟಿ ಮುಸುಕು ಹಾಕುತ್ತಾರೆ. ನಂತರ ಗಂಡು ಮತ್ತು ಹೆಣ್ಣನ್ನು ಸುಮಂಗಲೆಯರು ಆರತಿ ಬಟ್ಟಲುಗಳೊಂದಿಗೆ ಹಂದರದಲ್ಲಿ ಕರೆತಂದು ಕಂಬಳಿಯ ಮೇಲೆ ನಿಲ್ಲಿಸಿ ಆರತಿ ಬೆಳಗುತ್ತಾರೆ. ನಂತರ ಮದುವೆಯ ಕಾರ್ಯ ಪ್ರಾರಂಭವಾಗುತ್ತದೆ.

ಕುಲದ ಮುಖ್ಯಸ್ಥನಾದ ಯಡಿಗ್ಯನು ಮದುವೆಯ ವಿಧಿಗಳನ್ನು ಪ್ರಾರಂಭಿಸುತ್ತಾನೆ. ಒಂದರ್ಥದಲ್ಲಿ ಗೌಳಿಗರ ಮದುವೆ ತೀರ ಸರಳವಾದ ವಿಧಾನದ ಮೂಲಕ ನಡೆಯುತ್ತದೆ. ಯಡಿಗ್ಯನು ಗಂಡು ಹೆಣ್ಣುಗಳನ್ನು ಹಸೆಯ ಮೇಲೆ ಕೂರಿಸಿ ಕರಿಮಣಿಯ ತಾಳಿಯನ್ನು ಪೂಜಿಸಿ ಗಂಡಿನ ಕೈಗೆ ಕೊಡುತ್ತಾನೆ. ಗಂಡು ತಾಳಿಯನ್ನು ತಲೆ ಕೆಳಗೆ ಮಾಡಿ ಹುಡುಗಿಗೆ ಕಟ್ಟುವುದರ ಮೂಲಕ ಸತಿಪತಿಗಳಾಗುತ್ತಾರೆ. ಯಡಿಗ್ಯ ಮರಾಠಿ, ಸಂಸ್ಕೃತ ಮಿಶ್ರಿತ ಭಾಷೆಯಲ್ಲಿ ಲಗ್ನದ ಮಂತ್ರಗಳನ್ನು ಹೇಳುತ್ತಾನೆ. ಸುಸಾವದಾನ, ಸುಲಗ್ಗಿದಾನ, ಸುಸಾಬುದಾನ್, ಈಸೋರ್ ಪಾರೋತಿ ಲಗ್ನ ಜಾಲೆ ಸುಸಾಬೋದಾನ್, ಆಗಸೆ ಮಂಟಪ್ ದರತರ ಭಾವುಲೆ, ಈಸೂರ್ ಪಾರೋತಿಲಗೀರ್ ಲಾಗ್ಲೆ ಸುಏಳೆಸು ಸಾಬುದಾನ್, ಲಗೀರ್ ಲಾಗ್ಲೆ ಅಬೇದಾನ್ ಮುಂತಾಗಿ ಎಲ್ಲರಿಗೂ ಕೇಳುವಂತೆ ಯಡಿಗ್ಯ ಹೇಳುತ್ತಾನೆ. ನಂತರ ಹಿರಿಯರ ಸಮ್ಮುಖದಲ್ಲಿ ಹುಡುಗನನ್ನು ತನ್ನ ಹೆಂಡತಿಯನ್ನು ಯಾವುದೇ ತೊಂದರೆ ಇಲ್ಲದೆ ಕಾಪಾಡುವುದಾಗಿಯೂ ಹಾಗೂ ಹುಡುಗಿಯು ಗಂಡನ ಜೊತೆಗೆ ಸಹಕರಿಸಿಕೊಂಡು ಅವನೊಡನೆ ಒಂದಾಗಿ ನಡೆಯುವುದಾಗಿಯೂ ಪ್ರಮಾಣ ಮಾಡಿಸುತ್ತಾರೆ. ಲಗ್ನವಾಗುವಾಗ ಅಕ್ಕಿಯಕಾಳನ್ನು ಹಾಕುವ ಮೂಲಕ ಶಾಸ್ತ್ರ ನೆರವೇರಿಸುವ ರೂಢಿ ಕೆಲವು ಕಡೆ ಇದೆ. ದೇವರನ್ನು ಎರಡೂ ಕಡೆಯವರು ಮುಚ್ಚಿಡುವ ಹಾಗೂ ಅದನ್ನು ಹುಡುಕುವ ಆಟ ಗೌಳಿಗರಲ್ಲಿ ವಿಶಿಷ್ಟವಾಗಿದೆ. ಅಕ್ಕಿಯನ್ನು ತಾಟಿಗೆ ಹಾಕಿ ಅದರಲ್ಲಿ ಉಂಗುರ ಹಾಗೂ ನಾಣ್ಯವನ್ನು ಮುಚ್ಚಿಡುವುದು ಹಾಗೂ ಪಾತ್ರೆಯಲ್ಲಿ ಅರಿಶಿನ ಕುಂಕುಮದ ಓಕುಳಿ ಹಾಕಿ ಅದರಲ್ಲಿ ಉಂಗುರ ಹಾಗೂ ನಾಣ್ಯವನ್ನು ಹಾಕಿ ಹುಡುಕುವ ಆಟ ಎಲ್ಲ ಬುಡಕಟ್ಟುಗಳಂತೆ ಇಲ್ಲಿಯೂ ಸಾಮಾನ್ಯವಾಗಿದೆ.

ವಾಡದ ಬೀದಿಗಳಲ್ಲಿ ಮದುವೆಯಾದ ಗಂಡು-ಹೆಣ್ಣುಗಳ ಮೆರವಣಿಗೆ ಮಾಡುತ್ತಾ ಹುಡುಗಿಯನ್ನು ಅವಳ ಸೋದರಮಾವ ಮತ್ತು ಹುಡುಗನನ್ನು ಅವನ ಸೋದರಮಾವ ಹೆಗಲ ಮೇಲೆ ಹೊತ್ತುಕೊಂಡು ವಾಡದಲ್ಲಿ ಮೆರವಣಿಗೆ ಮಾಡುತ್ತಾರೆ, ದೈವದವರಿಗೆ ಗೌರವಸೂಚಕವಾಗಿ ಹೆಣ್ಣಿನ ಹಾಗೂ ಗಂಡಿನ ಕಡೆಯವರು ಕಾಯಿ, ನಾಲ್ಕಾಣೆ ಹಾಗೂ ಪಾಗೋಟಗಳನ್ನು ಉಡುಗೊರೆಯಾಗಿ ಕೊಡುತ್ತಾರೆ. ದೈವದವರು ಇದರಿಂದ ಸಂಪ್ರೀತರಾಗಿ ವಧೂವರರನ್ನು ಹರಸುತ್ತಾರೆ ಎಂಬ ನಂಬಿಕೆ.

ಹುಡುಗಿ ಮೈನೆರದಿದ್ದರೆ ಮದುವೆಯಾದ ದಿನವೇ ಐದು ಜನ ಸೇರಿ ಹುಡುಗಿಯನ್ನು ತವರುಮನೆಗೆ ಕಳಸುತ್ತಾರೆ. ಕೆಲವು ಕಡೆ ಮದುವೆಯಾದ ಮರುದಿನ ಮುಂಜಾನೆ ಹುಡುಗ ಮತ್ತು ಹುಡುಗಿಯ ಸೋದರಮಾವಂದಿರು ಹುಡುಗ ಹುಡುಗಿಯನ್ನು ಹೆಗಲ ಮೇಲೆ ಹೊತ್ತುಕೊಂಡು ಗಂಡು ವಾಸಿಸುವ ವಾಡಕ್ಕೆ ಬರುತ್ತಾರೆ. ಸಾಮಾನ್ಯವಾಗಿ ಹೆಣ್ಣನ್ನು ಗಂಡನ ಮನೆಗೆ ಕಳಸುವಾಗ ಉಡಿಯಕ್ಕಿಯನ್ನು ಹಾಕಿ ಕಳಸಿಕೊಡುವುದು ವಾಡಿಕೆ. ಉಡಿ ತುಂಬುವಾಗ ಐದು ನಾಣ್ಯಗಳು, ಕರ್ಜೂರ, ಕೊಬ್ಬರಿ, ಕುಂಕುಮ ಅರಿಶಿನ ಬೇರುಗಳನ್ನು ಹಾಕಿ ಉಡಿತುಂಬಿ ಗಂಡನ ಮನೆಗೆ ಕಳಸುತ್ತಾರೆ. ಸಂಪ್ರದಾಯ ದಂತೆ ಹುಡುಗಿಯನ್ನು ಹೆತ್ತ ತಂದೆ-ತಾಯಿ ಸೋದರ ಸೋದರಿಯರು ಅವಳನ್ನು ಕಳಸಿ ಬರಲು ಹೋಗುತ್ತಾರೆ.

ಮದುವೆಯಾದ ಐದು ದಿನಕ್ಕೆ ತಾಮ್ರದ ಬಿಂದಿಗೆಯೊಂದಿಗೆ ಹೆಣ್ಣು ವಾಡದ ಇತರ ಸುಮಂಗಲೆ ಯರೊಂದಿಗೆ ಗಂಗೆ ಪೂಜೆ ಮಾಡಿ ಆ ನೀರಿನಿಂದ ಭತ್ತವನ್ನು ಭೂಮಿಯ ಮೇಲೆ ಬಿತ್ತಿ ನೀರನ್ನು ಹೊಯ್ಯುತ್ತಾಳೆ. ಮದುವೆಯುದ್ದಕ್ಕೂ ಇರುವ ಇಂತಹ ಫಲವಂತಿಕೆಯನ್ನು ಪೋಷಿಸುವ ಆಚರಣೆಗಳು ಇನ್ನೂ ಬುಡಕಟ್ಟುಗಳಲ್ಲಿ ಜೀವಂತವಾಗಿದೆ.

ಬಾಲ್ಯವಿವಾಹ ಗೌಳಿಗರಲ್ಲಿ ಈಗಲೂ ಮುಂದುವರಿದಿದೆ. ನಾವು ನೋಡಿದ ಒಂದು ಮದುವೆಯಲ್ಲಿ ಗಂಡಿಗೆ ೧೪, ಹೆಣ್ಣಿಗೆ ೧೦ ವರ್ಷ. ಹೆಣ್ಣು ಮತ್ತು ಗಂಡು ಮಕ್ಕಳಿಬ್ಬರಿಗೂ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡುವ ಪರಂಪರೆ ಭಾರತೀಯ ಸಮಾಜಕ್ಕೆ ಹೊಸದೇನಲ್ಲ. ಅತಿ ಸಣ್ಣ ವಯಸ್ಸಿನಲ್ಲಿಯೇ ಹೆಣ್ಣು ಮಗುವನ್ನು ಮನೆಯ ಹೊಸಿಲು ದಾಟಿಸುವುದಕ್ಕೆ ಅವರಿಗೆ ಯಾವ ಮುಜುಗರವೂ ಇರಲಿಲ್ಲವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಹೆಣ್ಣು ಮಕ್ಕಳು ಪ್ರಾಪ್ತ ವಯಸ್ಸಿಗೆ ಬರುವ ಮುನ್ನವೇ ಅವರಿಗೆ ವಿವಾಹ ಮಾಡಬೇಕು ಎನ್ನುವುದು ಅವರ ನಂಬಿಕೆ ಆಗಿತ್ತು.

ಗೌಳಿಗ ಹೆಣ್ಣು ಮಕ್ಕಳನ್ನು ಸಣ್ಣ ವಯಸ್ಸಿನಲ್ಲೇ ವಿವಾಹ ಮಾಡುವುದರಿಂದ ಆಗುವ ದುಷ್ಪರಿಣಾಮಗಳು ಅನೇಕ. ವಿವಾಹ ಎನ್ನುವ ಒಂದು ವ್ಯವಸ್ಥೆಯೊಳಗೆ ವ್ಯಕ್ತಿಗಳು ಪ್ರವೇಶಿಸಬೇಕಾದರೆ ಅವರ ದೇಹ ಮತ್ತು ಮನಸ್ಸುಗಳೆರಡೂ ಅದಕ್ಕೆ ಸಿದ್ಧವಿರಬೇಕು. ಭಾರತೀಯ ಸಮಾಜದಲ್ಲಿ ಬಹುತೇಕ, ಯಾವಾಗ ವಿವಾಹವಾಗಬೇಕು ಇವೇ ಮುಂತಾದ ನಿರ್ಣಯಗಳನ್ನು ತೆಗೆದುಕೊಳ್ಳುವುದು ವಿವಾಹ ವಾಗಲಿರುವ ಸ್ತ್ರೀ ಅಥವಾ ಪುರುಷನಲ್ಲ. ವಿವಾಹ ಎನ್ನುವುದು ಕುಟುಂಬದ ನಿರ್ಧಾರಕ್ಕೆ ಒಳಪಟ್ಟಂಥ ಒಂದು ವಿಚಾರವೇ ಹೊರತು, ಖಾಸಗಿ ವಿಷಯವಲ್ಲ ಎಂಬ ತತ್ವಕ್ಕೆ ಬದ್ಧರಾಗಿರುವ ಅನೇಕ ಪೋಷಕರು ತಮ್ಮ ಹೆಣ್ಣು ಮಕ್ಕಳಿಗೆ ಸಣ್ಣ ವಯಸ್ಸಿನಲ್ಲಿಯೇ ವಿವಾಹ ಮಾಡುತ್ತಾರೆ. ಹೆಣ್ಣು ಮಕ್ಕಳನ್ನು ಹೆಚ್ಚುದಿನ ಮನೆಯಲ್ಲಿಟ್ಟುಕೊಂಡರೆ ಅವರ ಮಾನಭಿಮಾನಗಳಿಗೆ ಭಂಗ ಬರುವಂಥ ಪ್ರಸಂಗಗಳು ನಡೆಯಬಹುದು, ಆದುದರಿಂದ ಅವರ ಜವಾಬ್ಧಾರಿಯನ್ನು ಗಂಡನಾದವನಿಗೆ ವಹಿಸಿ, ತಮ್ಮ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳುವುದೇ ಕ್ಷೇಮ ಎನ್ನುವುದು ಅನೇಕ ಪೋಷಕರ ವಾದ.

ಗೌಳಿಗರಲ್ಲೂ ಅಂತರ್ ಜಾತಿ ಅಥವಾ ಅಂತರ್ ಧರ್ಮಿಯ ವಿವಾಹಗಳಲ್ಲಿ ತಮ್ಮ ಮಗಳು ಅಥವಾ ಮಗನೊಡನೆ ಸಂಬಂಧವನ್ನೇ ಕುಟುಂಬಗಳು ಕಡಿದು ಹಾಕಿಕೊಂಡಿರುವಂಥ

ನಿದರ್ಶನಗಳನೇಕವಿದೆ. ಜೈವಿಕ ಮತ್ತು ಭಾವನಾತ್ಮಕ ಸಂಬಂಧಗಳಿಗಿಂತ ಜಾತಿ ಅಥವಾ ಧರ್ಮದ ಬಾಂಧವ್ಯವೇ ಹೆಚ್ಚು ಎನ್ನುವ ಪೋಷಕರಿಗೆ ತಮ್ಮ ಮಕ್ಕಳು ತೆಗೆದುಕೊಂಡ ನಿರ್ಧಾರವನ್ನು ಗೌರವಿಸುವಂಥ ಮನೋಭಾವಗಳು ಇರುವುದಿಲ್ಲ. ಇಂದಿಗೂ ಸ್ವಜಾತಿ ಅಥವಾ ತಮ್ಮ ಉಪಜಾತಿಗಳಲ್ಲೇ ವಿವಾಹ ಸಂಬಂಧಿಗಳನ್ನು ಬೆಳೆಸಲು ಇಚ್ಛೆಪಡುವವರೇ ಹೆಚ್ಚು. ಸಮುದಾಯದಿಂದ ಹೊರಗೆ ವಿವಾಹವಾದವರನ್ನು ಬಹಿಷ್ಕಾರ ಹಾಕುವ ಪದ್ಧತಿ ಗೌಳಿಗರಲ್ಲಿದೆ.

ಇಂಡಿಯಾದ ಇತ್ತೀಚಿನ ವರ್ಷಗಳಲ್ಲಿ ಅದರಲ್ಲಿಯೂ ಸ್ವಾತಂತ್ರ್ಯಾನಂತರದಲ್ಲಿ ಸಾಮಾಜಿಕ ಪದ್ಧತಿಗಳಲ್ಲಿ ಪ್ರಮುಖವಾದ ವಿವಾಹ ಪದ್ಧತಿಗಳಲ್ಲಿ ಗಣನೀಯವಾದ ಪರಿವರ್ತನೆಗಳಾಗಿವೆ. ಭಾರತೀಯ ವಿವಾಹ ಪದ್ಧತಿಗಳ ಮೂಲ ಸ್ವರೂಪ ಮತ್ತು ಅದರ ಹಿಂದಿನ ಮೂಲಭೂತ ಭಾವನೆಗಳು ಹಾಗೂ ನಂಬಿಕೆಗಳು ಬದಲಾಗದೇ ಇದ್ದರೂ ಅದಕ್ಕೆ ಸಂಬಂಧಿಸಿದ ಆಚರಣೆ ಹಾಗೂ ನಿಯಮಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ವಿವಾಹದ ವಯಸ್ಸಿಗೆ ಸಂಬಂಧಿಸಿದಂತೆ ಮಹತ್ವದ ಬದಲಾವಣೆಗಳಾಗಿವೆ. 'ಬಾಲ್ಯವಿವಾಹ'ಗಳು ಕಾನೂನಿನ ಪ್ರಕಾರ ಮರೆಯಾಗಿವೆ ಎಂದು ಹೇಳಬಹುದು. ಆರ್ಥಿಕ ಒತ್ತಡ, ಸಾಮಾಜಿಕ ಅಗತ್ಯತೆ ಹಾಗೂ ಶಾಸನಾತ್ಮಕ ನಿಯಂತ್ರಣದಿಂದಾಗಿ ಬಾಲ್ಯವಿವಾಹದ ಬದಲು ಪ್ರೌಢ ವಿವಾಹಗಳೇ ಹೆಚ್ಚಾಗಿ ಕಾಣಬರುತ್ತಿವೆ. ಕಾನೂನಿನ ಕಣ್ಣಿಗೆ ಬೀಳದಂತೆ ಅನಕ್ಷರಸ್ಥರಲ್ಲಿ, ಪರಿಶಿಷ್ಟ ಜನಾಂಗಗಳಲ್ಲಿ ಮತ್ತು ಬುಡಕಟ್ಟು ಜನಾಂಗಗಳಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದು ಜಾರಿಯಲ್ಲಿದೆ.

ಸಾಮಾಜಿಕ ಬದಲಾವಣೆಗಳು ನಮ್ಮ ಸಮಾಜದಲ್ಲಿ ಉಂಟಾಗಿದ್ದರೂ, ಇಂದಿಗೂ ಗೌಳಿಗ ಹೆಣ್ಣು ಮಕ್ಕಳನ್ನೂ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡುವ ಪ್ರವೃತ್ತಿಯೇನೂ ನಶಿಸಿಹೋಗಿಲ್ಲ. ಗ್ರಾಮೀಣ ಪ್ರದೇಶಗಳಲ್ಲಂತೂ ಹೆಣ್ಣು ತನ್ನ ೧೮ನೇ ವಯಸ್ಸನ್ನು ತಲುಪುವ ಮೊದಲೇ ವಿವಾಹವೆಂಬ ಬಂದನದೊಳಗೆ ತಳ್ಳಲ್ಪಟ್ಟು, ಜೀವನವಡೀ ಅದರ ಪರಿಣಾಮಗಳನ್ನು ಎದುರಿಸಬೇಕಾಗಿ ಬರುವುದು ಇಂದಿಗೂ ಸಾಮಾನ್ಯ. ಅಪ್ರಾಪ್ತ ವಯಸ್ಸಿನಲ್ಲೇ ವಿವಾಹವಾಗುವ ಹೆಣ್ಣು ಮಕ್ಕಳು, ಎಳೆಯ ವಯಸ್ಸಿನಲ್ಲಿಯೇ ತಾಯ್ತನದ ಜವಾಬ್ದಾರಿಯನ್ನು ಪದೇ ಪದೇ ಹೊರಬೇಕಾಗುತ್ತದೆ. ಇದರಿಂದ ಅವರ ಆರೋಗ್ಯದ ಮೇಲೆ ಹಲವಾರು ದುಷ್ಪರಿಣಾಮ ಉಂಟಾಗಿ ರಕ್ತಹೀನತೆ, ಶಾರೀರಿಕ ದೌರ್ಬಲ್ಯ ಇವೇ ಮುಂತಾದ ತೊಂದರೆಗಳಿಗೆ ಅವರು ಬಲಿಯಾಗುತ್ತಾರೆ. ಪದೇ ಪದೆ ಗರ್ಭಧಾರಣೆ, ಮಕ್ಕಳ ಪಾಲನೆ–ಪೋಷಣೆ ಜವಾಬ್ದಾರಿ, ಮನೆಯಲ್ಲಿ ಅವಿರತ ದುಡಿಮೆ– ಇದೊಂದು ವಿಷವರ್ತುಲ. ಈ ವಿಷವರ್ತುಲದೊಳಗೆ ಸಿಲುಕಿರುವ ಅನೇಕ ಸ್ತ್ರೀಯರು ತಮ್ಮ ಹೆಣ್ಣುಮಕ್ಕಳ ವಿಚಾರಕ್ಕೂ ಇದೇ ತಪ್ಪನ್ನು ಮಾಡುತ್ತಿರುವುದು ವಿಷಾದನೀಯ, ಶರವೇಗದಲ್ಲಿ ಉಲ್ಬಣಿಸುತ್ತಿರುವ ಭಾರತದ ಜನಸಂಖ್ಯೆಗೂ ಸಣ್ಣ ವಯಸ್ಸಿನ ವಿವಾಹಗಳು ಮುಖ್ಯ ಕಾರಣಗಳಲ್ಲೊಂದು ಎಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ.

ಸಣ್ಣ ವಯಸ್ಸಿನಲ್ಲೇ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದರಿಂದ ಅವರ ಭವಿಷ್ಯತ್ತಿನ ಅಭಿವೃದ್ಧಿಗೆ ಎಲ್ಲ ವಿಧದಲ್ಲೂ ಅಡ್ಡಿಯುಂಟಾಗುತ್ತದೆ. ಆಡಿ–ಓದಿ ಬೆಳೆಯುವ ಮಕ್ಕಳನ್ನು ಸಂಸಾರವೆಂಬ ನೊಗಕ್ಕೆ

ಕಟ್ಟಿ ಹಾಕಿ, ಅವರನ್ನು ಶಿಕ್ಷಣದಿಂದ ವಂಚಿಸಿ, ಅವರ ಇಡೀ ಬದುಕನ್ನು ಅಜ್ಞಾನದ ಅಂಧಕಾರ ಕೂಪದಲ್ಲಿ ಅದ್ದುವುದರಿಂದ ಆರೋಗ್ಯವಂತರಾದ ಸ್ತ್ರೀ ಸಂತತಿಯ ಸೃಷ್ಟಿಗೇ ಒಂದು ತಡೆಗಲ್ಲನ್ನು ಒಡ್ಡಿದಂತಾಗುತ್ತದೆ. ಬಡತನದಲ್ಲಿ ಇರುವಂಥ ಕುಟುಂಬಗಳಲ್ಲಂತೂ, ದೈಹಿಕ-ಮಾನಸಿಕ ತೊಂದರೆ ಗಳೊಡನೆ ಅಪೌಷ್ಟಿಕತೆ, ಅನಾರೋಗ್ಯ ಹಾಗೂ ಅಜ್ಞಾನಗಳೆಂಬ ಸಮಸ್ಯೆ ಸೇರಿದಾಗ ಆ ಹೆಣ್ಣು ಮಕ್ಕಳಿಗೆ ಎಂಥ ಭವಿಷ್ಯವಿದೆ ಎಂಬುದನ್ನು ನಾವು ಊಹೆ ಮಾಡಬಹುದು. ಅಪ್ರಾಪ್ತ ವಯಸ್ಸಿನ ವಿವಾಹಗಳು ಸೃಷ್ಟಿಸುವ ಸಮಸ್ಯೆಗಳು ಇಂದು ದೇಶದಾದ್ಯಂತ ಮಹಿಳಾ ಅಭಿವೃದ್ಧಿಗೆ ಒಂದು ಬೃಹತ್ ಸವಾಲನ್ನೊಡ್ಡಿವೆ. ಈ ವಿಷಯದಲ್ಲಂತೂ ಕಾನೂನು ಪಾಲನಾ ವ್ಯವಸ್ಥೆ ಸಂಪೂರ್ಣವಾಗಿ ನಿಷ್ಕ್ರೀಯ ವಾಗಿರುವುದರಿಂದ ಪರಿಸ್ಥಿತಿ ಮತ್ತಷ್ಟು ಗಂಬೀರವಾಗಿದೆ.

ಭಾರತೀಯ ವಿವಾಹಗಳಲ್ಲಿ ಇಂದಿಗೂ ಜಾತಿಯ ಪ್ರಭಾವ ಗಾಢವಾಗಿದೆ. ಬಹುತೇಕ ವಿವಾಹಗಳು 'ಒಳಪಂಗಡ' ವಿವಾಹಗಳೇ ಆಗಿವೆ. ಜಾತಿಯ ಚೌಕಟ್ಟಿನ ಹೊರಗೆ ವಿವಾಹವಾಗುವುದು ಇಂದಿಗೂ ಸಾಮಾನ್ಯ ಅಂಶವಾಗಿಲ್ಲ. ಗೌಳಿಗರಲ್ಲಿ ವಿವಾಹದಲ್ಲಿ ಬದಲಾವಣೆ ಎನ್ನುವುದು ವಯಸ್ಸಿನಲ್ಲಿ ಆಗಿದೆ ಮತ್ತು ಪುರೋಹಿತರನ್ನು ಕರೆಯಿಸುತ್ತಿರುವುದನ್ನು ಉಳಿದಂತೆ ಅವರ ಸಂಪ್ರದಾಯಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಅವರ ವೈವಾಹಿಕ ಆಚರಣೆಯನ್ನು ಕಾಣುತ್ತೇವೆ.

**೨.೮ ಒಳಾಡಳಿತ ವ್ಯವಸ್ಥೆ ಕುಲಪಂಚಾಯತಿ**

ಗೌಳಿಗರು ತಮ್ಮತಮ್ಮೊಳಗೆ ನ್ಯಾಯನಿರ್ಣಯ ಮಾಡಿಕೊಳ್ಳುತ್ತಾರೆ. ಬುಡಕಟ್ಟುಗಳಲ್ಲಿ ನ್ಯಾಯ ನಿರ್ಣಯ ಪದ್ಧತಿ ತೀರ ಸರಳವಾದ ವ್ಯವಸ್ಥೆಯಾಗಿರುತ್ತದೆ. ತಮ್ಮ ಸಮುದಾಯದ ಬೇಕುಬೇಡಗಳನ್ನು ಅರ್ಥಮಾಡಿಕೊಳ್ಳುವ ಸಾಮಾಜಿಕ ಕಾರ್ಯಗಳಿಗೆ ವಿಧಿ-ನಿಷೇಧಗಳನ್ನು ಹೇರುವ ನ್ಯಾಯ ಪಂಚಾಯಿತಿಗಳು ೨೦ನೇ ಶತಮಾನದ ಪ್ರಾರಂಭವರೆಗೆ ಗ್ರಾಮೀಣ ಬದುಕಿನ ಅಂಗಗಳಾಗಿದ್ದವು.

ಗೌಳಿಗರ ನ್ಯಾಯ ಪಂಚಾಯಿತಿ ವಾಡೆಯ ಹಿರಿಯರನ್ನೊಳಗೊಂಡಿರುತ್ತದೆ. ಇವರನ್ನು ಗೌಳಿಗರು 'ಜಾಂತೆ ಲೋಕ್' ಎಂದು ಕರೆಯುತ್ತಾರೆ. ಇವರನ್ನು ಕೆಲವುಕಡೆ 'ಪಂಚರೂ' ಎಂದೂ ಕರೆಯುತ್ತಾರೆ. ಗೌಳಿಗರ ಕುಳಿಗಳಲ್ಲಿ ಶ್ರೇಷ್ಠ ಕುಳಿಗಳೆನಿಸಿದ ಯಡಿಗ್ಯ, ಶೆಳಕ್ಯ, ಕೋಕರೆ, ಬೋಡಿಕಾರ್, ಪಾಂಡ್ರಮಿಷೆ ಕುಳಿಗಳಿಗೆ ಸೇರಿದ ಐದು ಜನರ ನ್ಯಾಯಮಂಡಳಿ ನ್ಯಾಯನಿರ್ಣಯದ ಕಾರ್ಯ ಮಾಡುತ್ತದೆ. ಈ ಕುಳಿಗಳು ಜನರು ಇಲ್ಲದ ಪಕ್ಷದಲ್ಲಿ ಕ್ರಮವಾಗಿ ನಂತರದ ಸ್ಥಾನಗಳಿಗೆ ಸೇರಿದ ಹಿರಿಯರು 'ಜಾಂತೆ ಲೋಕ್' ಕಾರ್ಯನಿರ್ವಹಿಸಿದ್ದಾರೆ.

ವಾಡೆಯ ಆಗುಹೋಗುಗಳಿಗೆ ವಿಧಿ ಆಚರಣೆಗಳಿಗೆ ದೈವದವರ ಅಗತ್ಯ ಇರುತ್ತದೆ. ಹುಟ್ಟಿನಿಂದ ಹಿಡಿದು ಸಾವಿನವರೆಗೆ ನಡೆಯು ಜೀವನ ಚಕ್ರದ ಎಲ್ಲ ಕಾರ್ಯಗಳೂ ಪಂಚರ ಪ್ರಸ್ತುತತೆ ಅಗತ್ಯ ವಾಗಿದೆ. ಬುಡಕಟ್ಟುಗಳ ಪ್ರಧಾನ ಗುಣವಾದ ಸ್ವನ್ಯಾಯನಿರ್ಣಯ ಗೌಳಿಗರಲ್ಲಿ ಪ್ರಬಲವಾಗಿ ಕಾರ್ಯ ನಿರ್ವಹಿಸುತ್ತದೆ. ಈ ದೈವದವರು ತಮ್ಮೊಳಗೆ ಒಬ್ಬ ಹಿರಿಯನನ್ನು 'ಜಾಂತಾಗಡಿ'ಯಾಗಿ ಅಂದರೆ ನ್ಯಾಯಪಂಚಾಯಿತಿಯ ಮುಖ್ಯಸ್ಥನನ್ನಾಗಿ ನೇಮಿಸಿಕೊಳ್ಳುತ್ತರೆ ಅವನಿಗೆ ಗೌಳಿಗರು 'ಜಾಂತಾ'

ಎಂದೂ ಕರೆಯುತ್ತಾರೆ. ಜಾಂತಾನ ಜೊತೆಗೆ ಸಹಾಯಮಾಡಲು ವಾಡೆಗೊಬ್ಬ 'ಪಟೇಲ್' ಇರುತ್ತಾನೆ. ಪಟೇಲ್ ಸಾಮಾನ್ಯವಾಗಿ 'ಕೋಳಿಕಾರ್' ಕುಳಿಗೆ ಸೇರಿದವನಾಗಿರುತ್ತಾನೆ. ಅಂತೆಯೇ ಪಾಂಡ್ರ ಮಿಷೆ ಕುಳಿಗೆ ಸೇರಿದ ಹಿರಿಯವ್ಯಕ್ತಿ ಗೌಡನಾಗಿ ಕಾರ್ಯನಿರ್ವಹಿಸುತ್ತಾನೆ. ವಾಡೆಯ ತಪ್ಪು ಒಪ್ಪುಗಳನ್ನು ಮೊದಲು ಪರಿಶೀಲಿಸುವನು 'ಜಾಂತ್ಯಾ' ಇವನನ್ನು ಗೌಳಿಗರು 'ಗೌಡಯ್ಯ' ಎಂದೂ ಕರೆಯುತ್ತಾರೆ. ಇವನು ನಂತರ ದೈವದವರನ್ನು ಕರೆದು ಸಮಸ್ಯೆಯನ್ನು ವಿವರಿಸುತ್ತಾನೆ. ಸಾಮಾನ್ಯವಾಗಿ ನ್ಯಾಯಪಂಚಾಯಿತಿ ಯಡಿಗ್ಯ ಮನೆಯಲ್ಲಿ ನಡೆಯುತ್ತಿತ್ತು. ಈಗ ಊರಿನ ಗುಡಿಯ ಮುಂದೆ ನಡೆಯುತ್ತಿದೆ.

**ಪಂಚಾಯಿತಿ ಕಾರ್ಯಗಳು**

ಗೌಳಿಗರ ವಾಡೆಗಳಲ್ಲಿ ಅಸ್ತಿತ್ವಕ್ಕೆ ಬಂದಿರುವ ನ್ಯಾಯ ಪಂಚಾಯಿತಿ ವಾಡೆಯ ಜನಗಳ ಸಮಸ್ಯೆಗಳನ್ನು ಬಗೆಹರಿಸುವ ಕಾರ್ಯವನ್ನು ಮಾಡುತ್ತದೆ. ವಾಡೆಯಲ್ಲಿ ನಡೆಯುವ ವ್ಯಕ್ತಿಗಳ ಕುಟುಂಬದ ನ್ಯಾಯಗಳು, ವಿವಾಹ, ವ್ಯಭಿಚಾರ, ಕಳ್ಳತನ, ಮೋಸಗಳಿಗೆ ಸಂಬಂಧಿಸಿದ ಅಹವಾಲು ಗಳನ್ನು ನ್ಯಾಯ ಪಂಚಾಯಿತಿ ನಿಭಾಯಿಸುತ್ತದೆ. ಶಾಂತಿಯಿಂದ ನೆಮ್ಮದಿಯಿಂದ ಜೀವನ ಸಾಗಿಸು ವಂತೆ ಮಾಡಲು ಪಂಚಾಯಿತಿ ಸದಾ ಕಾರ್ಯನಿರತವಾಗಿರುತ್ತದೆ. ಬುಡಕಟ್ಟಿನ ನಿಯಮಗಳನ್ನು ಪಾಲಿಸುವ ಬಹುಮುಖ್ಯ ಜವಾಬ್ದಾರಿ ನ್ಯಾಯಪಂಚಾಯಿತಿಯ ಮೇಲೆ ಇರುತ್ತದೆ. ತಮ್ಮ ವಾಡೆಯಲ್ಲಾದ ಜಗಳಗಳನ್ನು ಇತರರಿಗೆ ತಿಳಿಸದಂತೆ ನೋಡಿಕೊಳ್ಳುವ ಹಿರಿಯರು ಸಮಾಧಾನ ಹಾಗೂ ಎಲ್ಲರಗೂ ಒಪ್ಪಿಗೆಯಾಗುವ ರೀತಿಯಲ್ಲಿ ವರ್ತಿಸುತ್ತಾರೆ.

**ನ್ಯಾಯನಿರ್ಣಯ ಮತ್ತು ಶಿಕ್ಷೆ**

ಜಗಳಗಳು ಅನೇಕ ಸ್ವರೂಪದ್ದಿರುತ್ತವೆ. ಅದು ಗಂಡ ಹೆಂಡತಿಯ ಮಧ್ಯೆ ಉಂಟಾಗಿರಬಹುದು. ಅಪ್ಪ ಮಗನ ನಡುವೆ ಜಗಳ ವಾಗಿರಬಹುದು. ಅಣ್ಣ ತಮ್ಮಂದಿರ ಮಧ್ಯೆ ಜಗಳವಾಗಿರಬಹುದು, ಇಲ್ಲ ಬಂಧುಗಳ ಮಧ್ಯೆ ನಡೆದ ಜಗಳವಾಗಿರಬಹುದು ಹೀಗೆ ಅನೇಕ ಸ್ವರೂಪದ ಮನೆ ಜಗಳಗಳಿಂದ ಹಿಡಿದು ವಾಡೆಗೆ ಸಂಬಂಧಿಸಿದ, ಧಾರ್ಮಿಕ-ಆಚರಣೆಗೆ ಸಂಬಂಧಿಸಿದ ಜಗಳಗಳಾಗಿರಬಹುದು. ಈ ಎಲ್ಲ ಸಂದರ್ಭದಲ್ಲೂ ನ್ಯಾಯ ನಿರ್ಣಯ ಮತ್ತು ಶಿಕ್ಷೆ ದೈವದವರಿಗೆ ಸಂಬಂಧಿಸಿರುತ್ತದೆ.

ನ್ಯಾಯ ನಿರ್ಣಯ ವಾಡೆಯ ದೈವವಾದ ವಿಠೋಬನ ಗುಡಿಯ ಪ್ರಾಂಗಣದಲ್ಲಿ ಪಂಚಾಯಿತಿ ಜರುಗುತ್ತದೆ. ನ್ಯಾಯನಿರ್ಣಯ ಮಾಡುವ ಪಂಚರು ಕಟ್ಟೆಯ ಮೇಲೆ ಕುಳಿತುಕೊಳ್ಳುತ್ತಾರೆ, ಊರಿನ ಪುರುಷರೆಲ್ಲ 'ಜಾಂತೆಲೋಕ್'ದ ಎದುರಿಗೆ ಕುಳಿತುಕೊಳ್ಳುತ್ತಾರೆ. ಆದರೆ ಹೆಂಗಸರು ಪಕ್ಕದಲ್ಲಿ ಕುಳಿತು ಕೊಂಡು ನ್ಯಾಯ ಪಂಚಾಯಿತಿಯ ಕಾರ್ಯಗಳನ್ನು ವೀಕ್ಷಿಸುತ್ತಾರೆ. ಕೆಲವು ಸಲ ಊರಿನ ಜನಗಳೂ ಸೇರಿ ಪಂಚರಿಗೆ ಸಲಹೆ ನೀಡುತ್ತಾರೆ. ವಾದ-ವಿವಾದದಲ್ಲಿ, ಸಾಕ್ಷಿ ಪುರಾವೆಗಳಲ್ಲಿ ವಾಡದ ಸಮಸ್ತರೂ ಭಾಗವಹಿಸುತ್ತಾರೆ. ಒಂದು ಸಲ ದೈವದವರಿಂದ ತೀರ್ಪು ಬಂದನಂತರ ನ್ಯಾಯ ಯಾಚಿಸಿದ್ರು, ಅನ್ಯಾಯ ಅಥವಾ ದೌರ್ಜನ್ಯ ಮಾಡಿದವರು ಹಿರಿಯರ ತೀರ್ಮಾನವನ್ನು ಗೌರವಿಸಬೇಕಾಗುತ್ತದೆ.

ಅದನ್ನು ಪ್ರಶ್ನಿಸಿಬಾರದೆಂಬ ನಿಯಮವಿರುತ್ತದೆ. ಪಂಚಾಯಿತಿಯವರು ಸಂಬಂಧಿಸಿದ ಜಗಳಗಳನ್ನು ತಲಸ್ಪರ್ಶಿಯಾಗಿ ಪರಶೀಲಿಸಿ ಬುಡಕಟ್ಟಿನ ಪರಂಪರೆ, ಹಿಂದೆ ನಡೆದ ತೀರ್ಮಾನಗಳ ಹಿನ್ನೆಲೆಯಲ್ಲಿ ದಂಡ ಹಾಗೂ ಶಿಕ್ಷೆಗಳನ್ನು ನೀಡುತ್ತಾರೆ.

ತಪ್ಪು ಮಾಡಿದವರಿಗೆ ದಂಡವಿಧಿಸುವ ಅಧಿಕಾರ ನ್ಯಾಯ ಪಂಚಾಯಿತಿಗೆ ಇದೆ. ಬುಡಕಟ್ಟಿನ ಅತ್ಯಂತ ದೊಡ್ಡ ಶಿಕ್ಷೆಯಾದ ಬಹಿಷ್ಕರಿಸುವದೇ ಆಗಿದೆ. ಮದುವೆಯಾದ ಹೆಣ್ಣು ಮದುವೆಯಾಗದ ಗಂಡನ್ನು ಇಷ್ಟಪಟ್ಟರೆ ಆಕೆಗೆ ದಂಡವಿಧಿಸಿ, ಶುದ್ಧೀಕರಣಮಾಡುತ್ತಾರೆ. ಆಕೆಗೆ ಸಗಣಿ ನೀರನ್ನು ಚಿಮುಕಿಸಿ ಚಪ್ಪಲಿಯಿಂದ ಹೊಡೆದು ನಂತರ ನೀರಿನಲ್ಲಿ ಮುಳುಗಿಸಿ ಕರೆತಂದು ಯಡಿಗ್ಯನ ಎದುರಿಗೆ ನೆಲದ ಮೇಲೆ ಊಟಮಾಡಿ ಶುದ್ಧಳಾಗಬೇಕಾಗುತ್ತದೆ. ಬಹುತೇಕ ನ್ಯಾಯಗಳು ಬುಡಕಟ್ಟಿನ ನಿಯಮ ವನ್ನು ಉಲ್ಲಂಘಿಸುವವರ ವಿರುದ್ಧ ನಡೆಸುವ ಶಿಕ್ಷೆಗಳ ತೀರ್ಮಾನಗಳೇ ಆಗಿರುತ್ತದೆ. ವಿಧವೆ ಬೇರೆಯವರಿಗೆ ಬಸುರಾದರೆ ಹುಟ್ಟುವ ಮಗುವನ್ನು ಕೆಳಜಾತಿಯವರಿಗೆ ದಾನ ಮಾಡಿ ತಾನು ಶುದ್ಧಳಾಗಬೇಕೆಂಬ ನಿಯಮವಿದೆ. ದೇವರೊಡನೆ, ಯಡಿಗ್ಯಾನೊಡನೆ ಅಸಭ್ಯ ವಾಗಿ ವರ್ತಿಸಿದರೆ ದಂಡ ತೆರಬೇಕಾಗುತ್ತದೆ. ತಲೆಯ ಜುಟ್ಟನ್ನು ಬೋಳಿಸಿಕೊಳ್ಳುವ ಅವಮಾನಕ್ಕೊಳಗಾಗುವುದರಿಂದ ಹಿಡಿದು ಅನೇಕ ರೀತಿಯ ಶಿಕ್ಷೆಗೆ ಒಳಗಾಗಬೇಕಾಗುತ್ತದೆ. ಪೂರ್ವಿಕರ ನ್ಯಾಯಪದ್ಧತಿಯನ್ನು ಅರಿತ ಪಂಚರು ನೀಡುವ ತೀರ್ಮಾನಗಳು ಬುಡಕಟ್ಟಿನ ಪಾವಿತ್ರ್ಯತೆಯನ್ನು ಕಾಪಾಡುವ ಕಟ್ಟುಪಾಡು ಗಳನ್ನು ಮುಂದುವರಿಸಿಕೊಂಡು ಹೋಗಿ ಬುಡಕಟ್ಟಿನ ಜೀವನದ ನೆಮ್ಮದಿಯನ್ನು ಕಾಪಾಡುವುದೇ ಆಗಿದೆ.

ಈಗ ಹಿಂದಿನ ಈ ಬಗೆಯ ಬುಡಕಟ್ಟು ನ್ಯಾಯಾಡಳಿತ ಕ್ರಮ ಗೌಳಿಗರ ಬುಡಕಟ್ಟಿನಲ್ಲಿ ಸಂಪೂರ್ಣ ಶಿಥಿಲವಾಗಿ ಹೋಗಿದೆ. ಗೌಳಿಗರ ವಾಸಿಸುವ ಯಾವ ಯಾವ ಸೀಮೆಯಲ್ಲಿ ಯಾವ ಯಾವ ಹಳ್ಳಿಗಳು ಬರುತ್ತವೆಯೆನ್ನುವ ಕಲ್ಪನೆ ಸೀಮಾ ಮುಖಂಡರಾದಿಯಾಗಿ ಅನೇಕರಿಗೆ ಗೊತ್ತೇ ಇಲ್ಲ. ಕೆಲವು ಹಿಂದಿನ ತಲೆಮಾರಿನವರು ಮೂರು ಸೀಮೆಗಳ ಉಲ್ಲೇಖವನ್ನು ಮಾಡಿ, ತಮ್ಮಲ್ಲಿಯ ಆಡಳಿತ ಕ್ರಮವನ್ನು ನೆನಪಿಸಿಕೊಂಡು ಹೇಳುತ್ತಾರೆ. ಸೀಮಾ ಮಟ್ಟದ ಆಡಳಿತ ಕುಸಿದರೂ ಸಹ ಕೆಲವೆಡೆ ಗ್ರಾಮ ಮಟ್ಟದಲ್ಲಿ ಸಂಘಟನೆ ಇನ್ನೂ ಉಳಿದುಕೊಂಡಿದೆ. ಈಗ ಜಾತಿಯ ಕೂಟವನ್ನು ಸಂಘಟಿಸಲು, ರಾಜಕೀಯವಾಗಿ ಎಚ್ಚೆತ್ತುಕೊಳ್ಳಲು ಹಲವರು ಪ್ರಯತ್ನಿಸುತ್ತಿರುವುದು ಕಂಡು ಬರುತ್ತದೆ.

**೨.೫ ಕುಟುಂಬ ವ್ಯವಸ್ಥೆ**

ಕುಟುಂಬವು ಅತ್ಯಂತ ಮೂಲಭೂತವೂ, ಚಿಕ್ಕದು, ಆದಂಥ ಸಾಮಾಜಿಕ ಸಂಸ್ಥೆ. ಸಾಮಾನ್ಯ ವಾಗಿ ಪ್ರತಿಯೊಬ್ಬ ವ್ಯಕ್ತಿಯೂ ಕುಟುಂಬದ ವ್ಯವಸ್ಥೆಯ ಒಳಗೆ ಜನಿಸುತ್ತಾನೆ/ಳೆ. ವ್ಯಕ್ತಿಗೆ ದೊರೆಯುವ ಪ್ರಪ್ರಥಮದ ಸಾಮಾಜಿಕ ಪರಿಸರ ಕುಟುಂಬದ್ದೇ ಆಗಿದ್ದು ಆತ ಅಥವಾ ಆಕೆಯ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಕುಟುಂಬ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಮಾನವ ಶಿಶು ಜನಿಸಿದಾಗ, ಆ ಶಿಶುವಿಗೂ ಪ್ರಾಣಿಗಳಿಗೂ ಹೆಚ್ಚಿನ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಈ ಎರಡು ಜೀವಿಗಳೂ

ಹಸಿವು, ನೀರಡಿಕೆ, ನಿದ್ದೆ ಮುಂತಾದ ಜೈವಿಕ ಅವಶ್ಯಕತೆಗಳ ಪೂರೈಕೆಗಾಗಿ ಮಾತ್ರ ಜೀವಿಸಿರುವಂತೆ ತೋರುತ್ತದೆಯಾದರೂ, ಕಾಲಕ್ರಮೇಣ ಮಾನವ ಶಿಶು ತನ್ನ ಸುತ್ತಮುತ್ತಣ ಪರಿಸರದೊಡನೆ ತನ್ನನ್ನು ಗುರುತಿಸಿಕೊಳ್ಳಲು ಆರಂಭಿಸುತ್ತದೆ. ಹಾಗೆಯೇ, ಬೆಳೆಯುತ್ತಿರುವ ಆ ಶಿಶುವಿಗೆ ಭಾವಾನಾತ್ಮಕ ಭದ್ರತೆಯ ಅವಶ್ಯಕತೆಯೂ ಕಂಡುಬಂದು, ಆ ಭಧ್ರತೆಯನ್ನು ಅದು ತನ್ನೊಡನಿರುವ ವ್ಯಕ್ತಿಗಳಿಂದ ನಿರೀಕ್ಷಿಸುತ್ತದೆ. ಈ ವ್ಯಕ್ತಿಗಳಲ್ಲಿ ಶಿಶುವಿಗೆ ಬಹು ಹತ್ತಿರವಾಗುವವಳು ತಾಯಿ. ಮಗುವಿನ ಪಾಲನೆ ಪೋಷಣೆಗೆ ತಾಯಿಯೇ ಜವಾಬ್ದಾರಳು ಎಂಬುದನ್ನು ಎಲ್ಲ ಸಮಾಜಗಳಲ್ಲಿಯು ಒಪ್ಪಿಕೊಂಡಂಥ ಒಂದು ವ್ಯವಸ್ಥೆಯಾಗಿದ್ದು, ಮಗು ಹೆಚ್ಚಾಗಿ ತಾಯಿಯ ಸಾಮೀಪ್ಯವನ್ನೇ ಬಯಸುತ್ತದೆ. ಆದರೆ ವರ್ಷಗಳು ಉರುಳಿದಂತೆ ಮಗುವಿನ ಸಂಬಂಧಗಳ ಸಂಖ್ಯೆ ಹೆಚ್ಚುತ್ತಾ ಹೋಗಿ ತಂದೆ, ಅಕ್ಕ-ತಂಗಿಯರು, ಅಣ್ಣಂದಿರು ಹಾಗೂ ಇತರ ಬಂಧುಗಳೊಡನೆಯೂ ಅದರ ಸಂಪರ್ಕ ಸ್ಥಾಪನೆಯಾಗುತ್ತದೆ. ಭಾಷೆಯ ಬಳಕೆಯನ್ನು ಅರಿತ ಮೇಲಂತೂ ಮಗುವಿನ ಪ್ರಾಪಂಚಿಕ ಜ್ಞಾನ ಮತ್ತಷ್ಟು ವಿಸ್ತರಿಸಿ, ಭಾಷೆಯನ್ನು ಬಳಸುವ ಅಥವಾ ಇನ್ನಿತರ ಕ್ರಿಯೆಗಳಲ್ಲಿ ತೊಡಗುವಾಗ ಬೆಳೆಯುತ್ತಿರುವ ಮಗು ತನ್ನ ಕುಟುಂಬದ ಇತರ ಸದಸ್ಯರನ್ನು ಅನುಕರಿಸಲು ಪ್ರಾರಂಭಿಸುವುದು. ಈ ಹಂತದಲ್ಲಿಯೇ ಮಗುವಿನ ಕಲಿಕಾ ಪ್ರಕ್ರಿಯೆ ಕೂಡ ಆರಂಭವಾಗುವುದು. ವಸ್ತುಗಳು ಹಾಗೂ ವ್ಯಕ್ತಿಗಳ ಬಗ್ಗೆ ಹೊಸ-ಹೊಸ ವಿಚಾರಗಳನ್ನು ತಿಳಿದುಕೊಳ್ಳುತ್ತಾ ಹೋದ ಹಾಗೆಲ್ಲಾ ಮಗುವಿಗೆ ತಾನು ಯಾರು, ತನ್ನ ಸಂಬಂಧಿಗಳು ಯಾರು, ಯಾರ-ಯಾರ ಜೊತೆ ಹೇಗೆ-ಹೇಗೆ ನಡೆದುಕೊಳ್ಳಬೇಕು, ಯಾವ-ಯಾವ ಸಂದರ್ಭಗಳಲ್ಲಿ ಯಾವ-ಯಾವ ರೀತಿಯಲ್ಲಿ ವರ್ತಿಸಬೇಕು ಇವೇ ಮುಂತಾದ ವಿಷಯಗಳ ಬಗ್ಗೆ ಅರಿವು ಮೂಡತ್ತಾ ಹೋಗುತ್ತದೆ. ಸಂಘ ಜೀವನಕ್ಕೆ ಆಧಾರವಾದ ಮೂಲ ಪ್ರವೃತ್ತಿಯು ಮಾನವರಲ್ಲಿ ಇದೆಯಾದರೂ, ಸಾಮಾಜಿಕ ನಡವಳಿಕೆ ಎನ್ನುವುದು ರೂಪಿತವಾಗುವುದು ಬಹುತೇಕ ಸಂದರ್ಭಗಳಲ್ಲಿ ಕುಟುಂಬದಲ್ಲಿಯೇ ಎಂದರೆ ತಪ್ಪಾಗಬಾರದು.

ವ್ಯಕ್ತಿಯ ಹುಟ್ಟಿನಿಂದ, ಸಾವಿನವರೆಗೆ ಆತನ/ಆಕೆಯ ಜೊತೆಯಲ್ಲಿಯೇ ಇರುವ ಕುಟುಂಬದ ಕಾರ್ಯ ಕೇವಲ ಸಂತಾನೋತ್ಪತ್ತಿಗಾಗಲಿ, ಆರ್ಥಿಕ-ಭಾವನಾತ್ಮಕ ಭದ್ರತೆಯನ್ನು ಒದಗಿಸಲಾಗಲಿ ಸೀಮಿತವಾಗಿಲ್ಲ. ಕುಟುಂಬ ಸಮಾಜದ ಆಧಾರ ಸ್ತಂಭದಂತಿದ್ದು, ಆಯಾ ಕಾಲದಲ್ಲಿ, ಆಯಾ ಸಮಾಜದ ಮೌಲ್ಯಗಳನ್ನೂ, ನಂಬಿಕೆಗಳನ್ನೂ, ಆಚರಣೆಗಳನ್ನೂ ಒಟ್ಟಿನಲ್ಲಿ, ಆ ಸಮಾಜದ ಸಂಸ್ಕೃತಿಯನ್ನು ತನ್ನ ಸದಸ್ಯರಿಗೆ ಪರಿಚಯಿಸುವಂಥ ಒಂದು ಸಾಮಾಜಿಕ ಸಂಸ್ಥೆ. ಈ ಸಾಮಾಜಿಕ ಸಂಸ್ಥೆಯಲ್ಲಿಯೇ ಗಂಡು-ಹೆಣ್ಣುಗಳು ತಮ್ಮ ಪಾತ್ರಗಳು, ಜವಾಬ್ದಾರಿಗಳು ಹಾಗೂ ಭವಿಷ್ಯದ ಅವಕಾಶಗಳನ್ನು ಕುರಿತಂತೆ ಅರಿವನ್ನು ಮೂಡಿಸಿ ಕೊಳ್ಳುವುದು.

ಕುಟುಂಬದ ವ್ಯವಸ್ಥೆಯ ಒಳಗೆ ಪ್ರಥಮ ಭಾರಿಗೆ ವ್ಯಕ್ತಿಗಳಿಗೆ ತಾವು ನಿರ್ವಹಿಸಬೇಕಾದ ಜವಬ್ದಾರಿಗಳನ್ನು ಕುರಿತು ಅರಿವು ಮೂಡುತ್ತದೆ. ಸಾಮಾನ್ಯವಾಗಿ ಹೆಣ್ಣು-ಗಂಡು ಮಕ್ಕಳಿಬ್ಬರಿಗೂ ದೈಹಿಕವಾಗಿ ಸ್ವಲ್ಪ ಮಟ್ಟಿನ ಶಕ್ತಿಯಾದರೂ ಬರುವವರೆಗೆ ಯಾವ ಜವಾಬ್ದಾರಿಗಳನ್ನೂ ಕೊಡುವುದಿಲ್ಲ. ಕುಟುಂಬದ ನಿರ್ವಹಣೆ ಬಹುಮಟ್ಟಿಗೆ ವಯಸ್ಕ ಸದಸ್ಯರಿಂದ ನಡೆಯುತ್ತದೆ. ಕುಟುಂಬದ ಉದ್ಯೋಗ

ಯಾವುದೇ ಇರಲಿ, ಇಂದಿಗೂ ಬಹುತೇಕ ಕುಟುಂಬಗಳಲ್ಲಿ ಮಕ್ಕಳ ಪಾಲನೆ-ಪೋಷಣೆ, ಅಡುಗೆ ಮಾಡುವುದು ಹಾಗೂ ಉಣಬಡಿಸುವುದು, ಗೃಹಕೃತ್ಯಗಳನ್ನು ಸಂಭಾಳಿಸುವುದು-ಇವೆಲ್ಲಾ ಮಹಿಳೆಯರ ಪಾಲಿನ ಕೆಲಸಗಳೇ ಆಗಿರುತ್ತವೆ. ಕೃಷಿ ಕುಟುಂಬಗಳಲ್ಲಿ ಮಹಿಳೆಯರು ಮನೆಯ ಹೊರಗೂ ದುಡಿಯುತ್ತಾರೆ. ಕೃಷಿ ವ್ಯವಸ್ಥೆಯಲ್ಲಿ ಹಲವು ಬಗೆಯ ಕೆಲಸಗಳು ಹೆಚ್ಚು-ಕಡಿಮೆ ಮಹಿಳೆಯರ ಕೆಲಸಗಳೆಂದೇ ಗುರುತಿಸಲ್ಪಟ್ಟಿವೆ. ಗಂಡು ಉತ್ಪಾದಕ, ಕುಟುಂಬದ ನಿರ್ವಹಣೆಗಾಗಿ ದುಡಿಯುವವನು, ಅವನ ಗಳಿಕೆಯಿಂದಲೇ ಜೀವನ ನಿರ್ವಹಣೆ ನಡೆಯುವುದು- ಇವೇ ಮುಂತಾದ ಕಲ್ಪನೆಗಳು ಜಗತ್ತಿನಾದ್ಯಂತ ಅಸ್ತಿತ್ವದಲ್ಲಿವೆ.

ಕುಟುಂಬ ಎನ್ನುವ ಸಾಮಾಜಿಕ ಸಂಸ್ಥೆಗೆ ಸಾರ್ವತ್ರಿಕತೆ ಇದ್ದರೂ ಕುಟುಂಬಗಳ ಸ್ವರೂಪ, ಕಾರ್ಯಗಳು ಹಾಗೂ ಪ್ರಕಾರಗಳಲ್ಲಿ ಕಾಲದಿಂದ ಕಾಲಕ್ಕೆ ಸಮಾಜದಿಂದ ಸಮಾಜಕ್ಕೆ ಭಿನ್ನತೆ ಇದೆ. ಕೌಟಂಬಿಕ ಕ್ಷೇತ್ರದಲ್ಲಿ ಇದು ಮಹಿಳೆಯರ ನಿಜವಾದ ಕಾರ್ಯಕ್ಷೇತ್ರ. ಕಾಲಮಾನ ಪದ್ಧತಿಗನುಸರಿಸಿ ಅವಳ ಒಡನಾಟ ಹೆಚ್ಚು ಕಡಿಮೆಯಾಗಿರಬಹುದು. ಅವಳ ಸ್ಥಾನ ಮಹತ್ವ ಏರಿಳಿತಗಳನ್ನು ಕಂಡಿರಬಹುದು. ಆದರೆ ಇಲ್ಲಿ ಮಾತ್ರ ಅವಳ ಅಸ್ತಿತ್ವ ಅನಿವಾರ್ಯವಾಗಿರಬಹುದು. ಅವಳನ್ನು ಕಾಣುವ ಕಣ್ಣಿನಲ್ಲಿ ನಡೆಸಿಕೊಳ್ಳುವ ರೀತಿಯಲ್ಲಿ ಕೊಡುವ ಗೌರವದಲ್ಲಿ ವ್ಯತ್ಯಾಸವಾಗಿರಬಹುದು. ಎಲ್ಲಿ ಅವಳು ಪೂಜೆಗೊಳ್ಳುವಳೋ ಅಲ್ಲಿ ದೇವತೆಗಳು ವಾಸಿಸುತ್ತಾರೆ. ಮತ್ತು ಜೀವನದುದ್ದಕ್ಕೂ ಇನ್ನೊಬ್ಬರ ರಕ್ಷಣೆಯಲ್ಲಿರಬೇಕು. ಸ್ವಾತಂತ್ರ್ಯಕ್ಕೆ ಅನರ್ಹಳು ಎಂದಿತು ಮಗದೊಮ್ಮೆ. ಈ ಎಲ್ಲ ಸ್ಥಿತ್ಯಂತರಗಳಲ್ಲೂ ಆಧುನಿಕ ಮಹಿಳೆ ಇರಬಹುದು. ಅಥವಾ ಬುಡಕಟ್ಟು ಸಮುದಾಯದ ಮಹಿಳೆ ಇರಬಹುದು. ಕೌಟುಂಬಿಕ ಕ್ಷೇತ್ರಗಳಲ್ಲಿ ತನ್ನದೇ ಆದ ವ್ಯಕ್ತಿತ್ವವನ್ನು ಕಾಪಾಡಿಕೊಂಡು ಬಂದಿದ್ದಾಳೆ ಎನ್ನಬಹುದು.

ಅದೇ ರೀತಿಯಾಗಿ ಧರ್ಮ ಸಮಾಜೀಕರಣದ ಅತ್ಯಂತ ಪ್ರಮುಖವಾದ ನಿಯೋಗಿಯಾಗಿದೆ. ಧರ್ಮ ಎನ್ನುವ ಸಂಸ್ಥೆ ಸಾಮಾಜಿಕ ಮೌಲ್ಯಗಳನ್ನು ರೂಪಿಸುವಲ್ಲಿ ಹಾಗೂ ಆಚರಣೆಗಳನ್ನು ನಿರ್ದೇಶಿಸುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುವುದರಿಂದ ಮಹಿಳೆಯರನ್ನು ಕುರಿತ ಸಮಾಜದ ಧೋರಣೆಗಳು ಯಾವ ಸ್ವರೂಪವನ್ನು ಪಡೆಯುತ್ತವೆ ಎಂಬುದನ್ನು ಪ್ರಭಾವಿಸುತ್ತವೆ. ಧರ್ಮಗಳೂ ಮಾನವೀಯ ಮೌಲ್ಯಗಳಿಗೆ ಮಹತ್ವದ ಸ್ಥಾನವನ್ನು ನೀಡಿದ್ದರೂ ವಾಸ್ತವ್ಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ಅನೇಕ ದೌರ್ಜನ್ಯಗಳಿಗೆ ಧರ್ಮದ ಪ್ರತ್ಯಕ್ಷ ಅಥವಾ ಪರೋಕ್ಷವಾದ ಬೆಂಬಲವಿರುವುದು ಕಂಡು ಬರುತ್ತವೆ. ಮಹಿಳೆಯರಿಗೆ ಪ್ರಶ್ನೆಗಳನ್ನು ಕೇಳುವ ಹಾಗೂ ಪ್ರತಿಭಟನೆಯನ್ನೂ ಸೂಚಿಸುವ ಹಕ್ಕು ಇಲ್ಲವೆಂಬ ತತ್ವವನ್ನೇ ಎಲ್ಲ ಧರ್ಮಗಳು ಒಂದಲ್ಲ ಒಂದು ರೀತಿಯಲ್ಲಿ ಸಾರಿ ಹೇಳುತ್ತವೆ.

**ಮಾತೃಮೂಲೀಯ ಕುಟುಂಬ (Matrinial Family)** : ಈ ವ್ಯವಸ್ಥೆಯಲ್ಲಿ ವಂಶದ ಮೂಲವನ್ನು ತಾಯಿಯ ತವರಿನ ಸಂಬಂಧಾತ್ಮಕ ನೆಲೆಯಿಂದ ಗುರುತಿಸಲಾಗುತ್ತದೆ. ಮಾತೃ ಪ್ರಧಾನ ಕುಟುಂಬದಲ್ಲಿ (Matriarchal Family) ತಾಯಿಯು ಕುಟುಂಬದ ಒಡತಿ. ಕುಟುಂಬದ

ಎಲ್ಲ ವಿಷಯ ವ್ಯವಹಾರಗಳಲ್ಲಿಯೂ ಸ್ತ್ರೀಗೆ ಪ್ರಾಮುಖ್ಯ ಇರುತ್ತದೆ. ಮಕ್ಕಳು ತಾಯಿಯ ವಂಶಕ್ಕೆ ಸೇರುತ್ತಾರೆ. ತಾಯಿ, ಅವಳ ಸೋದರ, ಸೋದರಿಯರು, ಅವರ ಮಕ್ಕಳು ಮತ್ತು ರಕ್ತ ಸಂಬಂಧಿಗಳು ಮಾತೃ ಪ್ರಧಾನ ಕುಟುಂಬಕ್ಕೆ ಸೇರುತ್ತಾರೆ. ಈ ಕುಟುಂಬ ಪದ್ಧತಿಯಲ್ಲಿ ಸ್ತ್ರೀಯು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಹೆಚ್ಚಿನ ಪಾತ್ರ ವಹಿಸುತ್ತಾಳೆ. ಸ್ತ್ರೀಗೆ ಆಸ್ತಿಯ ಮೇಲಿನ ಹಕ್ಕಿರುತ್ತದೆ. ಉತ್ತರಾಧಿಕಾರವು ಸ್ತ್ರೀ ಕುಲವನ್ನೇ ಅನುಸರಿಸಿ ಬರುತ್ತದೆ. ಇದರಿಂದಾಗಿ ಮಕ್ಕಳನ್ನು ಮಾತೃವಂಶೀಯರೆಂದೆ ಕರೆಯುತ್ತಾರೆ. ಸಾಮಾನ್ಯವಾಗಿ ಆಸ್ತಿಯು ತಾಯಿಯಿಂದ ಹೆಣ್ಣುಮಕ್ಕಳಿಗೆ ವರ್ಗಾವಣೆಗೊಳ್ಳುತ್ತದೆ. ಹಿರಿಯ ಮಗಳು ಆಸ್ತಿಯ ವಾರಸುದಾರಳಾಗುತ್ತಾಳೆ.

ಗೌಳಿಗ ಸಮುದಾಯದಲ್ಲಿ ಮರುವಿವಾಹ ವಿಚ್ಛೇದನ ಮುಂತಾದವುಗಳನ್ನು ಸಮಾಜದ ಒಪ್ಪಿಗೆಗೆ ಕಾಯದೆ ಮಾಡಿಕೊಳ್ಳಬಹುದು. ಅದಿವಾಸಿ ಸಮುದಾಯಗಳಲ್ಲಿ ವಧುದಕ್ಷಿಣೆ ಚಾಲ್ತಿಯಲ್ಲಿದ್ದು ಮಹಿಳೆಗೆ ಇರುವ ಗೌರವ ಮೌಲ್ಯಗಳನ್ನು ಸೂಚಿಸುತ್ತದೆ. ಈ ಬಗೆಯ ಕುಟುಂಬಗಳಲ್ಲಿ ಮಹಿಳೆ ಯಾವ ಧಾರ್ಮಿಕ ಆಚರಣೆಯಲ್ಲೂ ಪಾಲ್ಗೊಳ್ಳಬಹುದು. ಗೌಳಿಗರಲ್ಲಿ ಮಹಿಳೆಯರಿಗೆ ಅತಿಯಾದ ಗೌರವವಿದೆ. ಧರ್ಮ ಮತ್ತು ಆರ್ಥಿಕ ವಿಷಯಗಳಲ್ಲಿ ಇಬ್ಬರೂ ಭಾಗಿಯಾಗುತ್ತಾರೆ. ಆದರೆ ಗೌಳಿಗರಲ್ಲಿ ಮಾತೃ ಪ್ರಧಾನತೆ ಕಂಡುಬರುವುದಿಲ್ಲ.

**ಪಿತೃಮೂಲೀಯ ಕುಟುಂಬ (Patrinial Family)** : ಪ್ರಾಚೀನ ಹಾಗೂ ಆಧುನಿಕ ಸಮಾಜಗಳಲ್ಲಿ ಪಿತೃಮೂಲೀಯ ಕುಟುಂಬ ಬಹುಮಟ್ಟಿಗೆ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಪಿತೃಮೂಲೀಯ ವ್ಯವಸ್ಥೆ ಹಲವು ಅರ್ಥಗಳಲ್ಲಿ ಪಿತೃಪ್ರಧಾನ ವ್ಯವಸ್ಥೆ. ಆಸ್ತಿಯ ಕೇಂದ್ರೀಕರಣ, ಬೇಸಾಯದ ಪ್ರಗತಿ, ಅಧಿಕಾರದ ಸರ್ವಾಧಿಕಾರತ್ವ, ಕೈಗಾರಿಕೆ ಮತ್ತು ತಾಂತ್ರಿಕ ಬೆಳವಣಿಗೆ ಮತ್ತು ಅವುಗಳಲ್ಲಿನ ನೈಪುಣ್ಯಗಳು ಸ್ತ್ರೀಯ ಪ್ರಾಮುಖ್ಯವನ್ನು ಕುಗ್ಗಿಸಿ ಪಿತೃಪ್ರಧಾನ ಕುಟುಂಬದ ಹುಟ್ಟಿಗೆ ಕಾರಣವಾದವೆಂದು ಹಲವು ಮಾನವಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಪಿತೃಮೂಲೀಯ ಕುಟುಂಬದಲ್ಲಿ ಹಿರಿಯ ಪುರುಷನೇ ಮನೆಯ ಯಜಮಾನ, ನಿರಂಕುಶಪ್ರಭು, ಸರ್ವಾಧಿಕಾರಿ. ತನಗೆ ಇಷ್ಟ ಬಂದ ರೀತಿಯಲ್ಲಿ ನಡೆದುಕೊಳ್ಳುವ ಹಕ್ಕು ಆತನಿಗೆ ಇದೆ. ಕುಟುಂಬಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲಿ ಅವನದೇ ಅಂತಿಮ ತೀರ್ಮಾನ. ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಆತನಿಗೆ ಸ್ವತಂತ್ರವಾದ ಅಧಿಕಾರವಿರುತ್ತದೆ. ಹಾಗೆಂದು ಈ ಕುಟುಂಬಗಳಲ್ಲಿ ಮನೆಯ ಯಜಮಾನ ತನ್ನ ಅಧಿಕಾರವನ್ನು ದುರುಪಯೋಗ ಪಡಿಸುತ್ತಿದ್ದನೆಂದು ಇದರ ಅರ್ಥವಲ್ಲ.

ಪಿತೃಪ್ರಧಾನ ಕುಟುಂಬಗಳಲ್ಲಿ ಮಕ್ಕಳು ತಂದೆಯ ವಂಶಕ್ಕೆ ಸೇರುತ್ತಾರೆ. ಕುಟುಂಬದ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಮಾತ್ರ ಪಾಲು ಪಡೆಯುವ ಹಕ್ಕಿರುತ್ತದೆ. ಅನುವಂಶೀಯ ಅಧಿಕಾರ ಮತ್ತು ಸ್ಥಾನಮಾನಗಳು ಗಂಡು ಸಂತತಿಗೆ ಮೀಸಲಾಗಿರುತ್ತದೆ. ಈ ಕುಟುಂಬದಲ್ಲಿ ವಿವಾಹಿತ ಹೆಣ್ಣು ಆಕೆಯ ಗಂಡನ ಮನೆಯಲ್ಲಿ ವಾಸಿಸುತ್ತಾಳೆ. ಅವಳಿಗೆ ತವರಿನಲ್ಲಿ ಅಧಿಕಾರ ಮತ್ತು ಜವಾಬ್ದಾರಿಗಳು ಕಡಿಮೆ ಇರುತ್ತವೆ. ಈ ಸಮಾಜದಲ್ಲಿ ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬುದು ಅನಿವಾರ್ಯ

ವಾಗುತ್ತದೆ. ಅಂದರೆ ಮದುವೆಯಾಗಿ ಗಂಡಿನ ಮನೆ ಸೇರುವ ಹೆಣ್ಣು, ತನ್ನ ಗಂಡನ ಮೂಲಕ ಗುರುತಿಸಿಕೊಳ್ಳುವಂಥ ವ್ಯವಸ್ಥೆ ಇದು. ಆದುದರಿಂದ ಮದುವೆ ಆದ ನಂತರ ಹುಟ್ಟಿದ ಮನೆಯ ಸಂಬಂಧವಾಗಲೀ, ತಂದೆಯ ಮೂಲಕ ಗುರುತಿಸಿಕೊಳ್ಳುವ ವ್ಯವಸ್ಥೆಯಾಗಲೀ ಮುಂದುವರಿಯುವಂತೆ ಇರುವುದಿಲ್ಲ. ಕುಟುಂಬದ ಅರ್ಥ ಪರಿಕಲ್ಪನೆಯ ಸ್ಪಷ್ಟತೆಗಾಗಿ ಸ್ತ್ರೀ/ಪುರುಷಮೂಲ ಕುಟುಂಬಗಳೆಂದು ಅಧ್ಯಯನ ಅನುಕೂಲತೆಯ ನೆಲೆಯಲ್ಲಿ ಪ್ರತ್ಯೇಕ-ಗೊಳಸಬಹುದು. ಆದರೆ ಸಮಾಜಗಳಲ್ಲಿ ಈ ಎರಡರ ಛಾಯೆ ಲಕ್ಷಣಗಳನ್ನು ಒಳಗೊಂಡಿರುವ ಬೇರೆ ಬೇರೆ ಬಗೆಯ ಕುಟುಂಬ ರಚನೆಗಳಿವೆ. ಕುಟುಂಬ ಎಲ್ಲ ಕಾಲ'ಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಅಸ್ತಿತ್ವದಲ್ಲಿರುವ ಶಾಶ್ವತವಾದ ಒಂದು ಸಾಮಾಜಿಕ ಸಂಸ್ಥೆ.

ಪರಿವರ್ತನಾಶೀಲ ಸಾಮಾಜಿಕ ಸನ್ನಿವೇಶದಲ್ಲಿ ಗೌಳಗರ ಕೂಡು-ಕುಟುಂಬಗಳು ಅನೇಕ ಸವಾಲುಗಳು ಮತ್ತು ಬದಲಾವಣೆಗಳನ್ನು ಎದುರಿಸಿದೆ. ಇದರ ರಚನೆ ಮತ್ತು ಕಾರ್ಯಗಳಲ್ಲಿ ಅನೇಕ ಬದಲಾವಣೆಗಳಾಗಿವೆ. ಹಲವು ತಲೆಮಾರಿನ ರಕ್ತ ಸಂಬಂಧಿಗಳು ಒಟ್ಟಿಗೆ ವಾಸಿಸುತ್ತಿದ್ದ ಕೂಡು ಕುಟುಂಬಗಳು, ಸ್ವತಂತ್ರ ಜೀವನದ ಬಯಕೆ, ಕೂಡುಕುಟುಂಬದ ಯಜಮಾನನ ಸ್ವಾಮ್ಯತ್ವದ ಹಿಡಿತದಿಂದ ವಿಮೋಚನೆ, ಗಳಿಕೆಯನ್ನು ತನ್ನ ಹೆಂಡತಿ ಮತ್ತು ಮಕ್ಕಳಿಗೆ ಖರ್ಚು ಮಾಡಬೇಕೆನ್ನುವ ಸ್ವಾರ್ಥ, ಪರಿವಾರದ ಜನತೆಯಲ್ಲಿನ ಭಾವನಾಪರ ಸಂಬಂಧದ ಕೊರತೆ ಇವುಗಳೆಲ್ಲವೂ ಕೂಡು ಕುಟುಂಬದ ಶಿಥಿಲತೆಗೆ ಮತ್ತು ಸರಳ ಕುಟುಂಬದ ಉಗಮಕ್ಕೆ ಕಾರಣಗಳಾಗಿವೆ.

**ಬಂಧುತ್ವ**

ಇನ್ನೂ ಕೌಟುಂಬಿಕ ವ್ಯವಸ್ಥೆಯಲ್ಲಿ ಬಂಧುತ್ವ ಹೆಚ್ಚಾಗಿ ಪಿತೃ ಪ್ರಧಾನತೆಯನ್ನು ನೋಡುತ್ತೇವೆ. ಇವರಲ್ಲಿ ಅವಿಭಕ್ತ ಕುಟುಂಬ ಹೆಚ್ಚಾಗಿ ಕಂಡು ಬರುತ್ತದೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹಿರಿಯ ಪುರುಷನೇ ಮನೆಯ ಯಜಮಾನ. ಇಡೀ ಕುಟುಂಬಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲಿ ಅವನದೇ ತೀರ್ಮಾನ. ಪಿತೃಪ್ರಧಾನ ಕುಟುಂಬಗಳಲ್ಲಿ ಮಕ್ಕಳು ತಂದೆಯ ವಂಶಕ್ಕೆ ಸೇರಿರುತ್ತಾರೆ. ಕುಟುಂಬದ ಆಸ್ತಿಯಲ್ಲಿ ಗಂಡುಮಕ್ಕಳಿಗೆ ಪಾಲುಪಡೆಯುವ ಹಕ್ಕನ್ನು ನೀಡಲಾಗುತ್ತದೆ. ವಿವಾಹವಾಗಿ ಹೋದ ಹೆಣ್ಣುಮಕ್ಕಳಿಗೆ ಅವಳ ತವರಿನಲ್ಲಿ ಅಧಿಕಾರ ಮತ್ತು ಜವಾಬ್ದಾರಿಗಳು ಕಡಿಮೆ ಇರುತ್ತವೆ. ಅಂದರೆ ಮದುವೆಯಾಗಿ ಗಂಡಿನ ಮನೆ ಸೇರುವ ಹೆಣ್ಣು ತನ್ನ ಗಂಡನ ಮೂಲಕ ಗುರುತಿಸಿಕೊಳ್ಳುತ್ತಾಳೆ. ಇನ್ನೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಎಂದರೆ ಅಪರೂಪವಾಗಿ ಕಂಡು ಬರುತ್ತವೆ. ಪಶುಪಾಲನೆ ಗೌಳಿಗ ಸ್ತ್ರೀಯರು ಮಾಡಿಕೊಂಡು ಬಂದಿರುವ ಮುಖ್ಯ ಉದ್ಯೋಗವೇ ಆಗಿದ್ದರೂ ಮನೆಯ ಒಳಗಡೆ ಪುರುಷನೇ ಪ್ರಧಾನವಾಗಿರುತ್ತಾನೆ. ಗೌಳಿಗ ಸಮುದಾಯದಲ್ಲಿ ಮಾತೃ ಪ್ರಧಾನ ವ್ಯವಸ್ಥೆ ಅಸ್ತಿತ್ವದಲ್ಲಿ ಇಲ್ಲ ಎನ್ನಬಹುದು. ಇನ್ನು ಬಂಧುತ್ವ ಎನ್ನುವುದು ಕುಲ-ಬಳಿ-ಬೆಡಗುಗಳ ಮೂಲಕ ಗುರುತಿಸಲ್ಪಟ್ಟಿರುತ್ತದೆ.

ಗೌಳಿಗರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಾದುದರಿಂದ ತಂದೆಯ ಕಡೆಯಿಂದ ಕುಲಸಂಬಂಧಿ ಅಂಶಗಳು ನಿರ್ಧರಿಸಲ್ಪಡುತ್ತವೆ. ಹೊರ ರಾಜ್ಯದಿಂದ ವಲಸೆ ಬಂದ ಗೌಳಿಗರಲ್ಲಿ ಕುಲಸಂಬಂಧಿಯಾದ

ಆಚರಣೆಗಳು ಇಂದಿಗೂ ಉಳಿದುಕೊಂಡು ಬಂದಿವೆ. ಇವರ ರೀತಿ ನೀತಿ ಸಂಪ್ರದಾಯಗಳು ಮಹಾರಾಷ್ಟ್ರದ ಧನಗರ್ ಗುಂಪಿನ ಜನರ ಆಚರಣೆ, ರೀತಿ, ನೀತಿಗಳಿಗೆ ಸರಿ ಹೊಂದುವುದು ಇವರು ಅದೇ ಮೂಲದಿಂದ ಬಂದವರೆಂದು ಹೇಳಲು ಸಾಕಷ್ಟು ಪುರಾವೆಗಳನ್ನು ನೀಡುತ್ತದೆ.

ಗೌಳಿಗರು ಕುಲ, ಗೋತ್ರಗಳನ್ನು "ಕುಳ" ಎಂದು ಕರೆಯುತ್ತಾರೆ. ಅನೇಕ ಕುಳಗಳನ್ನು ಹೊಂದಿರುವ ಇವರ ಆಚಾರ ವಿಚಾರಗಳು ಕುಳಗೆ ಸಂಬಂಧಿಸಿದಂತೆ ನಿರ್ಧರಿಸಲ್ಪಡುತ್ತವೆ.

| | | |
|---|---|---|
| ೧. ಜ್ವೋರೆ | ೨. ಯಡಿಗ | ೩. ಲಾಂಬೂರ್ |
| ೪. ಬಾಜಾರಿ | ೫. ತೋರುವತ್ | ೬. ಕಾತ್ರೋಟ್ |
| ೭. ಕೋಕರೆ | ೮. ಕೊಳಾಪ್ಮಿ | ೯.ಜಾನ್ಕೂರ್ |
| ೧೦. ಶೆಕ್ಕೈ | ೧೧. ಗಂಗೆವರ್ಕಿ | ೧೨. ಪಾಂಡರ್‌ಮಿಷೆ |
| ೧೩. ಇಟ್ಟೂಖರಾತ್ | ೧೪. ಡೂಯಿಪಡೆ | ೧೫. ಸಾಕ್ರೂಹುಂಬಿ |
| ೧೬. ರಾಮೂಕಾಳಿ | ೧೬. ಅಡೊಳ್ಕರ್ | ೧೭. ಸಾಕ್ರೂಹುಂಬಿ |
| ೧೮. ಬೋಡ್ಕರ್ | ೧೯. ಪಟ್ಕಾರಿ | ೨೦. ಮಲಗುಂಡ್ |
| ೨೧. ಕರಾತ್ | ೨೨. ಜಂಗ್ಲಿ | ೨೩. ದೊಂಡು |
| ೨೪. ಕೊಳೆಕಾರ್ | ೨೬. ಬರಾಗೋಡಿ | ೨೮. ಕೊಳೆಕಾರ್ |
| ೨೯. ಧೂಳು | ೩೦ ಗಂಗಾರಾಮ್ | ೩೧. ಉಂಟ್ |
| ೩೨. ಪಿಂಗಳ್ಯ | ೩೩. ಯಮ್ಕರ್ | ೩೪. ಶಿಂಧೆ |
| ೩೫ ಟಾಕೆಕರ್ | ೩೬. ಶಳಕೆ | |

ಮುಂತಾದ ಕುಳಗಳು ಗೌಳಿಗರಲ್ಲಿ ಹೆಚ್ಚು ಪ್ರಚಲಿತವಾಗಿದೆ. ಈ ಕುಳಗಳೇ ನಂತರ ವ್ಯಕ್ತಿಗಳ ಅಡ್ಡೆಹೆಸರಿನಲ್ಲಿ ಸೇರ್ಪಡೆಯಾಗಿರುವುದು ವಿಶೇಷ. ಈ ಕುಳಗಳಿಂದ ಪ್ರಾರಂಭವಾಗುವ ಅಡ್ಡ ಹೆಸರುಗಳು ಗೌಳಿಗರ ವಿಶಿಷ್ಟತೆಗೆ ಸಂಕ್ಷೇತವಾಗಿದೆ. ಭೈರು, ಜೋರೆ, ನಕ್ಕುಬಾಯಿ ಭೈರೊ ಕಾತ್ರಟಿ ಗಂಗಾರಾಮ್ ದೊಂಡು, ಗಂಗೂ ಜಂಗ್ಲಿ, ಕುಂಡೂ ಪಿಂಗಳ್ಯ, ಚಮ್ನಾಬಾಯಿ, ಡೊಫಡೆ, ಚುಚ್ಚುಭಾಗ ಯಡಿಗ್ಯ, ದೋಳೂ ಸಾಕ್ರೂಹುಂಟಿ, ನಾಗುನ್ ಇಟ್ಟೊಖರಾತ್ ಜಾನು ಬೈರು ಯಮ್ಕಾರ್ ಮುಂತಾದ ಸಾಮಾನ್ಯ ಹೆಸರುಗಳು ಬಳಕೆಯಾಗುತ್ತವೆ.

ಗೌಳಿಗರ ಅಡ್ಡ ಹೆಸರುಗಳಲ್ಲಿ ವ್ಯಕ್ತಿನಾಮ ಮತ್ತು ಗಂಡನ ಹೆಸರು ಕುಳಿಯ ಹೆಸರಿನ ರಚನೆ ಸಾಮಾನ್ಯವಾಗಿ ಮದುವೆಯಾದ ಹೆಣ್ಣುಮಕ್ಕಳಿಗೆ ಬರುತ್ತದೆ. ಉದಾಹರಣಗೆ ಗಂಗೂಬಾಯಿ ಭೈರೊ ಕಾತ್ರೋಟಿ, ಚುಚ್ಚಬಾಗ ಸಿದ್ದೂ ತೋರುವತ್ ಇತ್ಯಾದಿ. ಕೆಲವು ವ್ಯಕ್ತಿಗಳಿಗೆ ಸುಲಭವಾಗಿ ವ್ಯಕ್ತಿನಾಮ

ಮತ್ತು ಕುಳಿಯ ಅಡ್ಡಹೆಸರು ಬರುತ್ತದೆ. ಉಹಾಹರಣೆಗೆ ದೂಳು ಕೋಕ್ರೆ, ಜಾನು ಬೈರು ಯಡಿಗ್ಯ ಇತ್ಯಾದಿ. ಗೌಳಿಗರು ತಮ್ಮ ಕುಲಗೋತ್ರಗಳನ್ನು ವ್ಯಕ್ತಿಯ ಹೆಸರಿನಲ್ಲಿ ಸೇರಿಸಿಕೊಂಡು ಅಡ್ಡ ಹೆಸರಿನಲ್ಲಿ ಕರೆಯಲ್ಪಡುವ ವಿಶಿಷ್ಟ ಸಮುದಾಯವಾಗಿದೆ. ಅಲ್ಲದೆ ಕೋಕರೆ, ತೋರುವತ್, ಲಾಂಬೂರ್, ಜಾನ್ಕರ್ ಮತ್ತು ಪಾಟೀಲ ಕುಳಿಗಳ ಸಮೂಹವನ್ನು ಪಂಚಕುಳಿಗಳೆಂದು ಗೌಳಿಗರು ಪರಿಗಣಿಸುತ್ತಾರೆ.

ಗೌಳಿಗರು ತಮ್ಮ ವಂಶಮೂಲವನ್ನು ಕಂಡುಕೊಳ್ಳುವ ಕುಳಿಗಳು ಪ್ರಾಣಿ ಸಂಕೇತಗಳಾಗಿ ಸಸ್ಯ ಸಂಕೇತಗಳಾಗಿ ಬಳಕೆಯಾಗುತ್ತವೆ. ಉಹಾಹರಣೆಗೆ 'ವಾಗ್ಮಡೆ" ಎಂಬುದು ವ್ಯಾಘ್ರ ಸಂಕೇತವಾದ ಹುಲಿಯನ್ನು ಸೂಚಿಸಿದರೆ "ವಾನೇರಾಯ" ಎಂಬುದು ಹಾವನ್ನು ಸೂಚಿಸುತ್ತದೆ. "ಕೋಕರೆ" ಎಂಬುದು ಪಕ್ಷಿಯನ್ನು ಸೂಚಿಸುತ್ತದೆ. ಯಾವುದೇ ಬುಡಕಟ್ಟಿನಲ್ಲಿ ಕಂಡುಬರುವ ಪ್ರಾಚೀನ ರೂಪಗಳು ಗೌಳಿಗರಲ್ಲಿ ಕಂಡುಬರುವುದು ಪರಿವರ್ತನೆಯಾಗದ ಅವರ ಪ್ರಾಚೀನರೂಪವನ್ನು ತಿಳಿಸುತ್ತದೆ.

ಕುಳಿಗಳ ಸ್ಥಾನಮಾನಗಳನ್ನು ಗಮನಿಸಿದಾಗ ಗೌಳಿಗರಲ್ಲಿ "ಜೋಗಿ'ಕುಳಿಯೇ ಈ ಬುಡಕಟ್ಟಿನ ಹಿರಿಯ ಕುಳಿಯಾಗಿದೆ. ಗೌಳಿಗರ ಸಂಪ್ರದಾಯ ಆಚರಣೆಗಳಲ್ಲಿ ಈ ಕುಳಿಗೆ ವಿಶಿಷ್ಟ ಸ್ಥಾನವಿರುವದು ಕಂಡುಬರುತ್ತದೆ. ಮದುವೆ, ಪೂಜಾಕಾರ್ಯ ಕ್ರಮಗಳಲ್ಲಿ ಈ ಕುಳಿಗೆ ಸೇರಿದ ವ್ಯಕ್ತಿಯೇ ಪ್ರಧಾನ ಪಾತ್ರವಹಿಸುದು ಮುಖ್ಯವಾಗಿದೆ. ಸಾಮಾನ್ಯವಾಗಿ ಈ ಬುಡಕಟ್ಟಿನಲ್ಲಿ ಕುಳಿಗಳನ್ನು ಪುರುಷಮೂಲದಿಂದ ಗುರುತಿಸುವುದು ಪಿತೃಪ್ರಧಾನ ಕುಟುಂಬವ್ಯವಸ್ಥೆಗೆ ದ್ಯೋತಕವಾಗಿದೆ. ಜೋಗಿ ಕುಳಿಗೆ ಸೇರಿದ ವ್ಯಕ್ತಿಗಳು ಅಲೆಮಾರಿಗಳಾಗಿ ಎಲ್ಲ ಕಡೆ ತಿರುಗುತ್ತಾ ಜೀವನ ಸಾಗಿಸಬೇಕೆಂಬ ನಂಬಿಕೆ ಇವರಲ್ಲಿದೆ. ಇವರು ಮೂಲಕಸುಬಾದ ಹೈನುಗಾರಿಕೆ ಮಾಡಿ ಜೀವನ ನಡೆಸುವುದಿಲ್ಲ. ಬದಲಾಗಿ ಬುಡಕಟ್ಟುಗಳು ವಾಸವಾಗಿರುವ ವಾಡೆಗಳಿಗೆ ಹೋಗಿ ಅವರ ಧಾರ್ಮಿಕ ಹಾಗೂ ಆರಾಧನ ಕಾರ್ಯದಲ್ಲಿ ಭಾಗವಹಿಸಿ ಕಾಣಿಕೆಪಡೆದು ಜೀವನ ಸಾಗಿಸುತ್ತಾರೆ. ಮತ್ತು ಕಾಣಿಕೆಯಿಂದ ಬಂದ ಕೆಲವು ಭಾಗವನ್ನು ತಮ್ಮ ಬುಡಕಟ್ಟಿನ ಸಂಘಟನಾಕಾರ್ಯಗಳಿಗೆ ಉಪಯೋಗಿಸುತ್ತಾರೆ. ಗುರುಪ್ರಧಾನ ಸ್ಥಾನದಲ್ಲಿ ಇರುವ ಜೋಗಿ ಕುಳಿಯ ಪೂಜಾರಿಗಳು ಯಾವುದೇ ವಾಡೆಗಳಲ್ಲಿ ದೀರ್ಘಕಾಲ ನೆಲಸದೆ ಕೇವಲ ಒಂದೆರಡು ವಾರ ಮಾತ್ರ ನೆಲಸುವುದು ಇದರ ವಿಶೇಷವಾಗಿದೆ. ಜೋಗಿ ಕುಳಿಯ ನಂತರದ ಸ್ಥಾನ ಗೌಳಿಗರಲ್ಲಿ ಯಡಿಗ್ಯ ಕುಳಿಯವರಿಗೆ ಸಲ್ಲುತ್ತದೆ. ಯಡಿಗ್ಯ ಕುಳಿಗೆ ಸೇರಿದ ವ್ಯಕ್ತಿಗಳು ಗೌಳಿಗರ ವಾಡೆಗಳಲ್ಲಿ ನೆಲೆನಿಂತು ಧಾರ್ಮಿಕ ವಿಧಿ ಆಚರಣೆ ನಡೆಸುತ್ತಾ ಜೀವನ ಸಾಗಿಸುತ್ತಾರೆ. ಯಡಿಗ್ಯ ಕುಳಿಗೆ ಸೇರಿದ ಪುರಷ ಪೂಜಾರಿ ಸ್ಥಾನದಲ್ಲಿ ನಿಂತು ಮದುವೆ ಮುಂತಾದ ಆಚರಣೆಗಳಲ್ಲಿ ಭಾಗವಹಿಸುತ್ತಾನೆ. ತಲೆಯ ಕೂದಲನ್ನು ಕತ್ತರಿಸದೆ ಜಡೆಯೋಪಾದಿಯಲ್ಲಿ ಬಿಟ್ಟು ಉಪವಾಸ ಮುಂತಾದ ವೃತಗಳನ್ನು ಮಾಡುತ್ತಾ ವಿಧಿ ಕ್ರಿಯೆಗಳನ್ನು ನಡೆಸುತ್ತಾನೆ. ಒಂದು ವೇಳೆ ವಾಡೆಗಳಲ್ಲಿ ಯಡಿಗ್ಯ ಕುಳಿಗೆ ಸೇರಿದ ಪುರುಷ ದೊರೆಯದಿದ್ದರೆ ನಂತರದ ಸ್ಥಾನ-'ಲಾಂಬೋರ್' ಕುಳಿಯ ವ್ಯಕ್ತಿಗೆ ದೊರೆ ಯುತ್ತದೆ. ಸಾಮಾನ್ಯವಾಗಿ ಜೋಗಿ ಕುಳಿಗೆ ಸೇರಿದ ಪೂಜಾರಿಗಳಿಗೆ ಟಗರಿನ ಲಾಂಛನದ ಸಂಕೇತ ವಿರುತ್ತದೆ. ಹಿತ್ತಾಳೆಯಲ್ಲಿ ಮಾಡಿದ ಈ ಲಾಂಛನವನ್ನು ಕೆಂಪು ಮುಂಡಾಸಿಗೆ ಸಿಗಸಿಕೊಂಡಿರುತ್ತಾರೆ.

**ವಂಶ** : ಕುಳಿಗಳು ಭಿನ್ನ ಭಿನ್ನ ಬುಡಕಟ್ಟುಗಳಲ್ಲಿ ನಾಮ ನಿರ್ದೇಶನದ ಸಂಕೇತಗಳಾಗಿ ಬಳಕೆಗೊಳ್ಳದೆ ರಕ್ತ ಸಂಬಂಧವನ್ನು ಸೂಚಿಸುವಂತಹ ಸಂಕೇತಗಳಾಗಿಯೂ ಬಳಕೆಗೊಳ್ಳುತ್ತವೆ. ಗೌಳಿಗರಲ್ಲಿ ಸಾಮಾನ್ಯವಾಗಿ ವ್ಯಕ್ತಿಗಳ ಹೆಸರುಗಳಿಂದಲೇ ಅವರು ಮನೆತನದ ವಿವರವನ್ನು ಅರಿಯಲು ಸಾಧ್ಯವಾಗುತ್ತದೆ. ಯಾವ ವಂಶಕ್ಕೆ ಸೇರಿದವನಾಗಿದ್ದಾನೆ ಎಂಬುದು ಅವರ ಉಪ ಹೆಸರುಗಳಿಂದಲೇ ವೇದ್ಯವಾಗುತ್ತದೆ. ಗೌಳಿಗರು ತಮ್ಮ ವಂಶದ ಬಗ್ಗೆ ವಿಶೇಷ ಅಭಿಮಾನ ಇರಿಸಿಕೊಂಡು ಅದನ್ನು ಉಳಿಸಿಕೊಂಡು ಹೋಗುವ ಪ್ರಯತ್ನ ಮಾಡುತ್ತಿರುತ್ತಾರೆ. ದೈವಗಳ ಹೆಸರುಗಳೊಂದಿಗೆ ತಮ್ಮ ವಂಶದ ಅವಿನಾಭಾವ ಸಂಬಂಧವಿದೆ ಎಂದು ನಂಬಿಕೊಂಡಿರುವ ಗೌಳಿಗರು ಬದಲಾಗದ ಸ್ಥಿರ ನಂಬಿಕೆಯಿಂದ ತಮ್ಮ ವಂಶದ ಬೆಳವಣಿಗೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಪಿತೃಪ್ರಧಾನತೆ ಭಾರತದ ಸಮಾಜದಲ್ಲಿ ಕಂಡು ಬರುವ ಮುಖ್ಯಲಕ್ಷಣಗಳಲ್ಲೊಂದು. ಭಾರತ ಸಮಾಜ ರೂಪಾಂತರಗೊಳ್ಳುತ್ತಾ ತನ್ನ ಅದಿಮ ಮತ್ತು ಅನನ್ಯತೆಗಳನ್ನು ಉಳಿಸಿಕೊಳ್ಳುತ್ತಲೇ ಬಂದಿದೆ. ಉತ್ಪಾದನಾ ವಿಧಾನವನ್ನು ಪುರುಷ ನಿಯಂತ್ರಿಸಲು ತೊಡಗಿದ ಮೇಲೆ ಮಾತೃಪ್ರಧಾನತೆ ಎನ್ನುವುದು ನಾಶವಾದರೂ ಕೂಡ ಕೆಲವು ದುಡಿವ ವರ್ಗಗಳಲ್ಲಿ ಮತ್ತು ಆದಿವಾಸಿ ಸಮಾಜಗಳಲ್ಲಿ ಮಾತೃ ಪ್ರಧಾನತೆಯು ಇನ್ನು ಒಂದು ಜ್ವಲಂತ ಮೌಲ್ಯವಾಗಿ ಉಳಿದುಕೊಂಡು ಬಂದಿವೆ. ಪಿತೃಪ್ರಧಾನವೇ ಇರಲಿ, ಮಾತೃಪ್ರಧಾನವೇ ಇರಲಿ ಒಟ್ಟಾರೇ ಇಡೀ ಸಮಾಜವೇ ರೂಪಾಂತರಗೊಳ್ಳುತ್ತಿವೆ. ಇಂತಹ ಬದಲಾವಣೆಯ ಹಾದಿಯಲ್ಲಿ ಆದಿವಾಸಿ ಸಮುದಾಯಗಳು ಒಂದು. ಅಂತಹ ಸಮುದಾಯಗಳಲ್ಲಿ ಗೌಳಿಗ ಸಮುದಾಯವೂ ಒಂದು.

ಬದಲಾವಣೆಯು ನಿಸರ್ಗದ ನಿಯಮ. ಜೀವಂತಿಕೆಯ ಲಕ್ಷಣ. ಪರಿಸರ ಬದಲಾದಂತೆ ಸಮಾಜ ಬದಲಾಗುತ್ತದೆ. ಈ ಬದಲಾವಣೆಯು ನಿರಂತರವಾಗಿ ನಡೆದಿರುತ್ತದೆ. ಈ ಬದಲಾವಣೆಯು ಒಂದು ಘಟ್ಟವನ್ನು ತಲುಪಿದಾಗ ಗೋಚರವಾಗುತ್ತದೆ ಎನ್ನಬಹುದು.

ಸಾಮಾಜಿಕ ಬದಲಾವಣೆಗೆ ಒಂದೇ ಸಮುದಾಯದ ಹಲವು ಜನರು ಯಾವ ಬಗೆಯಲ್ಲಿ ಸ್ಪಂದಿಸುತ್ತಾರೆ. ಬದಲಾವಣೆಗಳಗಿರುವ ಗತಿಯು ಯಾವ ಯಾವ ಭೌತಿಕ ಅಂಶಗಳನ್ನು ಅವಲಂಬಿಸಿರುತ್ತದೆ. ಪಾರಂಪರಿಕ ಲೌಕಿಕ ಬದುಕಿಗೆ ಸಂಬಂಧಿಸಿದ ಸ್ಥಿತ್ಯಂತರಗಳು ಸಾಮಾಜಿಕ ಬದಲಾವಣೆಯ ಮುಂದುವರೆಯುವಿಕೆ, ಸಾಮಾಜಿಕ ಬದಲಾವಣೆಯು ಮುಂದುವರೆಯಲು ಆ ಸಮುದಾಯ ತನ್ನ ಸಮಕಾಲೀನತೆಗೆ ತಾನು ತೆಗೆದುಕೊಳ್ಳುವ ಮತ್ತು ವರ್ತಮಾನಕ್ಕೆ ಅನುಗುಣವಾಗಿ ಒಟ್ಟು ಸಮಾಜದ ವಾಹಿನಿಯಲ್ಲಿ ಅವಕಾಶಗಳನ್ನು ಪಡೆಯುವ ಮತ್ತು ಅವಕಾಶಗಳಿಂದ ವಂಚಿತವಾಗುವ ಪ್ರಕ್ರಿಯೆಯನ್ನು ಅವಲಂಬಿಸಿರುತ್ತವೆ.

ಬೇಟೆ ಹಂತದಿಂದ ಹಿಡಿದು ಪಶುಪಾಲನೆ ಮತ್ತು ಕೃಷಿಹಂತದ ಪ್ರಾರಂಭದ ಮೊದಲ ಹಂತದಲ್ಲಿಯೇ ರೂಪಾಂತರಗೊಳ್ಳಲು ಪ್ರಾರಂಭವಾಯಿತು. ಕೃಷಿ ಹಂತಗಳಲ್ಲಿ ಹೊಸ ಅವಿಷ್ಕಾರಗಳು ಆಗುವುದರ ಮೂಲಕ ಇಡೀ ಜಗತ್ತಿನಲ್ಲಿ ಸಂಚಲನೆ ಉಂಟಾಯಿತು. ಅದರಲ್ಲಿ ಮುಖ್ಯವಾಗಿ ಸ್ತ್ರೀಯರ ಸ್ಥಾನ-ಮಾನ ಸ್ಥಿತಿ-ಗತಿಗಳೆರಡರಲ್ಲೂ ಅಗಾಧ ಬದಲಾವಣೆಗಳದವು.

ಗೌಳಿಗ ಮಹಿಳೆಯರು ಕೃಷಿ ಸಂಬಂಧವಾದ ಕಾರ್ಯಗಳಲ್ಲಿ ಅಂತೆಯೇ ಕರಕುಶಲಕಲೆ, ಅರಣ್ಯಮೂಲ ಸಂಪತ್ತಿನ ಸಂಗ್ರಹಣೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಾರೆ. ಒಂದು ಬುಡಕಟ್ಟಿನಿಂದ ಮತ್ತೊಂದು ಬುಡಕಟ್ಟಿಗೆ ಮಹಿಳೆಯ ಸ್ಥಿತಿ ಬದಲಾಗುತ್ತದೆ. ಒಂದೊಂದು ಸಮೂಹದ ಸಾಮಾಜಿಕ ವ್ಯವಸ್ಥೆ ಬದಲಾಗಿರುವುದೇ ಇದಕ್ಕೆ ಕಾರಣ.

**೨.೭ ಆಭರಣಗಳಲ್ಲಿನ ಬದಲಾವಣೆ**

ಪ್ರಾಚೀನ ಕಾಲದಿಂದಲೂ ಮಹಿಳೆ ತನ್ನ ತಲೆ ಮತ್ತು ಕುರುಳ ಶೃಂಗಾರಕ್ಕೆ ಪ್ರಾಧಾನ್ಯತೆ ನೀಡಿ, ಅದರ ಅಲಂಕಾರಕ್ಕಾಗಿ ಹಲವಾರು ಆಭರಣಗಳನ್ನು ಧರಿಸುತ್ತಿದ್ದಳು. ತಲೆಗೆ ನಾಗರ, ಜಡೆಬಿಲ್ಲೆ, ಚಂದ್ರಬಿಲ್ಲೆ, ಕಮಲದ ಹೂ, ರಾಗ್ಟೆ, ಮೇಟಿ, ಚವುರಿ, ಸುತ್ತು, ಮಿಂಚು, ಬೈತಲೆ ಬಳ್ಳಿ, ಮೊಗ್ಗೆಯ ಮಾಲೆ, ಪಿಂಪಣಿ, ಸೇವಂತಿಗೆ ಹೂ, ಕಮಲದ ಹೂ ಮುಂತಾದವುಗಳನ್ನು ಧರಿಸುತ್ತಿದ್ದಳು. ನಗರಗಳಲ್ಲಿ ಅವುಗಳ ಅಸ್ತಿತ್ವ ಸಿಗದೇ ಇದ್ದರೂ ಹಳ್ಳಿಗಳಲ್ಲಿ ಇನ್ನೂ ಇವುಗಳ ಜೀವಂತ ಸೆಲೆಗಳನ್ನು ಗುರುತಿಸಬಹುದು.

ಆಭರಣಗಳ ಸೃಷ್ಟಿಗೂ ಮೊದಲು ಮಾನವನು ತಾಯತಗಳನ್ನು ತೊಟ್ಟನೆಂದು ಹೇಳಲಾಗುತ್ತದೆ. ಸುಮಾರು ಹನ್ನೆರಡು ಸಾವಿರ ವರ್ಷಗಳ ಪೂರ್ವದಲ್ಲಿ ಮನುಷ್ಯ ಹಲ್ಲು, ಕವಡೆ, ಸಿಂಬ್ರ, ಶಂಖಗಳ ಸರ ಧರಿಸಿದರೆ, ಸುಮಾರು ಎಂಟು ಸಾವಿರ ವರ್ಷಗಳ ಹಿಂದೆ ತಾಯತಗಳನ್ನು ತೊಟ್ಟನೆಂದು ತಿಳಿಯುತ್ತದೆ. ತಾಯತಗಳನ್ನು ಗೌಳಿಗರು ಮೂರು ರೀತಿಯಲ್ಲಿ ಕಟ್ಟಿಕೊಳ್ಳುವುದು ಕಂಡು ಬರುತ್ತದೆ. ವಿಲವು, ರೋಮ, ಬೇರು ಮುಂತಾದ ಸುಲಭ ವಸ್ತ್ರಗಳನ್ನು ಇದ್ದಕ್ಕಿದ್ದಂತೆ ದೇಹಕ್ಕೆ ಕಟ್ಟಿಕೊಳ್ಳುವುದು ಹಾಗೂ ತೊಗಟೆ ಅಥವಾ ಧಾತುವಿನ ಕರಂಡಕದಲ್ಲಿ ಬಂಧಿಸಿ ಧರಿಸುವುದು ಮತ್ತು ಸಸ್ಯ ಹಾಗೂ ಪ್ರಾಣಿಗಳ ಅಂಗಾಂಗಗಳನ್ನು ಬಂಗಾರ ಬೆಳ್ಳಿಯಲ್ಲಿ ಕಟ್ಟಿಸಿ ತೊಡುಗೆಯಂತೆ ತೊಡುವುದು.

ಶೃಂಗಾರ ಪ್ರಿಯರಾದ ಗೌಳಿ ಹೆಂಗಸರು ಕಿವಿಗೆ ಕಾಪು, ಮೇಲ್ಗಿವಿಗೆ ಬುಗುಡಿ. ಮೂಗಿಗೆ ಮೂಗುತಿ, ತೋಳಿಗೆ ತೋಳವತ್, ತೋಳಬಂದಿ, ಕಾಲಿಗೆ ಸರಳ (ಕಡಗದ ಮಾದರಿ)ವನ್ನು ತೊಡುತ್ತಾರೆ. ಕೈತುಂಬ ಬಣ್ಣ ಬಣ್ಣದ ಗಾಜಿನ ಬಳೆ, ಬೆಳ್ಳಿಯ ಪಾಟ್ಲ ಹಾಗೂ ಕೊರಳಲ್ಲಿ ಮಣಿ ಸರಗಳನ್ನು ಧರಿಸುತ್ತಾರೆ. ಮುತ್ತೈದೆಯರು ಬೆಳ್ಳಿಯ ಹಾವಿನಾಕೃತಿಯ ತೋಲ್ಮನೆಯನ್ನು ತೋಳಿನಲ್ಲಿ ಧರಿಸುವರಲ್ಲದೆ, ಕೊರಳಲ್ಲಿ ವಿವಿಧ ಬಣ್ಣಗಳ ಮಣಿಸರಗಳನ್ನು ಹಾಕಿಕೊಳ್ಳುತ್ತಾರೆ. ಕಾಲ್ಬೆರಳಿಗೆ ಕಾಲುಂಗುರ, ಮೇಲ್ಗಿವಿಗೆ 'ಬಾಳೆ', ಕೆಳಗಿವಿಗೆ 'ಮುರಿ' ಮತ್ತು ಕೆನ್ನೆಗೆ ಸರಪಣಿಗಳನ್ನು ಧರಿಸುವುದು ವಿಶೇಷವಾಗಿದೆ. ಇವರು ಯಾವಾಗಲೂ ಮೂಗಿಗೆ ಮೂಗುತಿ, ತೋಳಿಗೆ ವಂಕಿ ಹಾಗೂ ಕಾಲಿಗೆ ಕಡಗ ಹಾಕಿಕೊಂಡಿರುತ್ತಾರೆ.

ಹುಟ್ಟಿದ ಮಗುವಿನ ಕಿವಿಗೆ ಮುರುವು ಚುಚ್ಚುವ ಮೂಲ ಉದ್ದೇಶದ ಹಿಂದಿರುವುದು ನಂಬಿಕೆ. ಮುಟ್ಟುದೋಷ ತಟ್ಟುವುದಿಲ್ಲ, ಬಾಲಗ್ರಹದೋಷವಾಗುವುದಿಲ್ಲ. ಹುಟ್ಟಿದ ತಕ್ಷಣ ಮಕ್ಕಳು ಮರಣ ಹೊಂದಬಹುದೆಂಬ ನಂಬಿಕೆಯಿಂದ ಕೆಲವರು, ಜನ್ಮಪಡೆದ ತಕ್ಷಣವೇ ಮುರುವು ಹಾಕಿಸುವ

ಸಂಪ್ರದಾಯವನ್ನಿಟ್ಟುಕೊಂಡಿದ್ದಾರೆ. ಇದಲ್ಲದೆ ಮುರು ಹಾಕಿಸದ ಮಕ್ಕಳಿಗೆ ಹಾವು ಚೇಳುಗಳು ಕಚ್ಚುತ್ತವೆ ಎಂಬ ನಂಬಿಕೆಯೂ ಉಂಟು. ಮಕ್ಕಳ ರಕ್ಷಣೆಗೆಂದು ಹಾಕುವ ಆಭರಣ 'ಹನುಮಂತನ ತಾಳಿ; ಇದನ್ನು ಕೆಲವೊಮ್ಮೆ ಹಿರಿಯರೂ ಧರಿಸುವುದುಂಟು. ಹೆಣ್ಣುಕೂಸುಗಳಿಗೆ ಅಳ್ಳೀಯಲೆ, ಮಾವಿನಕಾಯಿಗೆಜ್ಜೆ, ಕೊರಳಿಗೆ ಗಾಜಿನ ಮಣಿಸರ, ಬೆಳ್ಳಿಯ ತಾಲೆ, ಬೆಳ್ಳಿಯ ಕಾಲಂದುಗೆ, ಕಿವಿಗೆ ಚಿನ್ನದ ಸಣ್ಣ ಕೊಂಡಿಗಳು ಇತ್ಯಾದಿ ಒಡವೆಗಳನ್ನು ಧರಿಸುತ್ತರೆ. ಗಂಡು ಕೂಸುಗಳಾದರೆ ಬೆಳ್ಳಿಯ ಉಡಿದಾರ, ತಾಲೇಕಾಯಿ, ಕಿವಿಗೆ ಚಿನ್ನದ ಉಂಗುರ, ಕಾಲಿಗೆ ಬೆಳ್ಳಿಯ ಕಾಲಂದುಗೆ, ಇತ್ಯಾದಿಗಳನ್ನು ಹಾಕುತ್ತಾರೆ.

ಹುಟ್ಟಿದ ಕೂಸಿಗೆ ಪಂಚಲೋಹದ ತಾಯತವನ್ನು ಕಟ್ಟುವುದರಿಂದ ಬಾಲಗ್ರಹ, ದೃಷ್ಟಿದೋಷ, ಮುಟ್ಟು ದೋಷ ಹಾಗೂ ರೋಗ ರುಜಿನಗಳು ತಟ್ಟುವುದಿಲ್ಲವೆಂದು ಬುಡಕಟ್ಟಿನ ಜನರು ನಂಬಿದ್ದಾರೆ. ಸಾಮಾನ್ಯವಾಗಿ ಎಲ್ಲ ಬುಡಕಟ್ಟಿನ ಜನರು ಈ ತಾಯತಗಳನ್ನು ಕಟ್ಟಿಕೊಳ್ಳುತ್ತಾರೆ. ಈ ತಾಯತಗಳ ವಿನ್ಯಾಸ ಸಾಮಾನ್ಯವಾಗಿ ಆಯತಾಕಾರ ಇಲ್ಲವೆ ಸಿಲಿಂಡರಿನ ರೂಪದಲ್ಲಿರುವುದು ಕಂಡುಬರುತ್ತದೆ. ಇವುಗಳ ಮೇಲೆ ಹನುಮಂತನ ಇಲ್ಲವೆ ಇಷ್ಟದೇವರ ಚಿತ್ರ ಬಿಡಿಸಲಾಗಿರುತ್ತದೆ. ಕೆಲವು ತಾಯತಗಳ ಮೇಲೆ ಬಾಲಚಂದ್ರನ ಚಿತ್ರವಿರುವುದನ್ನು ಕಾಣಬಹುದು.

ಗೌಳಿಗರು ಬಳಸುವ ಆಭರಣಗಳಲ್ಲಿ ವೃತ್ತಾಕಾರದ ಆಭರಣಗಳ ಸಂಖ್ಯೆಯೇ ಹೆಚ್ಚು. ಬೆರಳುಂಗುರ, ಕಾಲುಂಗುರ, ಕೈಬಳೆ, ಕಾಲ್ಬಳೆ, ಕಾಲ್ಗಡಗ, ಟೊಂಕಪಟ್ಟಿ, ಡಾಬು, ಬೆಳ್ಳಿಯ ಉಡಿದಾರ, ಮುರುವು ಮುಂತಾದ ಆಭರಣಗಳು ವೃತ್ತಾಕಾರದಲ್ಲಿರುತ್ತವೆ.

ಗೌಳಿಗರು ಧರಿಸುವ ಆಭರಣಗಳು ದುಂಡು, ಅರ್ಧ ದುಂಡು ಆಗಿರುವಂತೆ ಅಂಕುಡೊಂಕಿನ ಆಕಾರದಲ್ಲಿಯೂ ಇರುವುದುಂಟು. ಕಚ್ಚೆಗೌಳಿ ಹೆಂಗಸರು ತೋಳಲ್ಲಿ ಧರಿಸುವ 'ತೋಳ್ಮನೆ'ಯು ಹಾವಿನಾಕೃತಿ ಯಾಗಿರುವುದುಂಟು. ಇದನ್ನು ಬೆಳ್ಳಿಯಿಂದ ಮಾಡಿಸಿದ್ದು ಮುತ್ತೈದೆತನದ ಸಂಕೇತವಾಗಿ ಬಳಸುತ್ತಾರೆ. ಗೌಳಿಗರು ಮದುವೆಯ ಸಂದರ್ಭದಲ್ಲಿ ಧಾರ್ಮಿಕ ಪರಂಪರೆಯನ್ನು ಹೊಂದಿರುವ ವಿಶಿಷ್ಟವಾದ ಆಭರಣಗಳನ್ನು ಧರಿಸುವುದುಂಟು.

ಗೌಳಿಗರು ಸೌಂದರ್ಯಕ್ಕಿಂತಲೂ ಶರೀರದ ಪೋಷಣೆ ಹಾಗೂ ಮಾನಮರ್ಯಾದೆ ಮುಚ್ಚಿಕೊಳ್ಳುವ ಒಡವೆಗಳನ್ನು ತೊಡುವುದೇ ಹೆಚ್ಚು. ಹುಲಿಯುಗುರು, ಕರಡಿಯ ಕೂದಲು ಮುಂತಾದುವುಗಳನ್ನು ಮಕ್ಕಳ ಕೊರಳಲ್ಲಿ ಇಲ್ಲವೆ ಉಡುದಾರದಲ್ಲಿ ಕಟ್ಟುವುದರಿಂದ ಮಕ್ಕಳು ಇವುಗಳಿಗೆ ಹೆದರದೆ ಇರಲು ಸಾಧ್ಯವೆಂಬ ನಂಬಿಕೆ ಅವರಲ್ಲಿದೆ. ಅಂದರೆ ಹುಲಿ, ಕರಡಿ ಈ ಕ್ರೂರ ಪ್ರಾಣಿಗಳ ಬಗೆಗಿನ ಭಯ ಅವರ ಮನಸ್ಸಿನಿಂದ ದೂರವಾಗುತ್ತದೆಂಬ ಮನೋವೈಜ್ಞಾನಿಕ ಅಂಶ ಗಮನಿಸುವಂತಿದೆ. ಅದೇ ರೀತಿಯಲ್ಲಿ ತಾಮ್ರದ ಕಡಗ ಇಲ್ಲವೆ ಉಂಗುರವನ್ನು ಕೈ, ಕಾಲು ಕೊರಳಲ್ಲಿ ಹಾಕಿಕೊಳ್ಳುವುದರಿಂದ ದೇಹದ ಉಷ್ಣತೆ ಕಡಿಮೆಯಾಗುತ್ತದೆ. ಅಲ್ಲದೆ ಗುಡುಗು ಸಿಡಿಲುಗಳಿಂದ ರಕ್ಷಿಸಿಕೊಳ್ಳಬಹುದೆಂಬ ನಂಬಿಕೆ ಅವರಲ್ಲಿದೆ. ಕೈಕಾಲುಗಳಲ್ಲಿ ತಾಮ್ರ ಧರಿಸುವುದರಿಂದ ಮೂಲವ್ಯಾಧಿ, ಬಿಳಿಚಿಬ್ಬು, ಕರಿಚಿಬ್ಬು ಮುಂತಾದ ವ್ಯಾಧಿಗಳ ನಿವಾರಣೆಯಾಗುತ್ತದೆಂಬ ಭಾವನೆಯಿದೆ.

ಗೌಳಿಗರು ಆಭರಣಗಳಿಗೆ ಸಾಮಾಜಿಕ ಹಾಗೂ ಧಾರ್ಮಿಕ ಹಿನ್ನೆಲೆಯುಂಟು. ಬದಲಾದ ಸಂದರ್ಭಗಳಲ್ಲಿ ತಮ್ಮ ಆಚರಣೆಗೆ ಸಾಂಪ್ರದಾಯಿಕ, ಸಾಮಾಜಿಕ ಒಪ್ಪಿಗೆಯನ್ನು ನೀಡುತ್ತಾರೆ. ರಕ್ಷಣೆ ಹಾಗೂ ಸೌಭಾಗ್ಯದ ಸಂಕೇತವಾಗಿ ಇವು ತಲೆತಲಾಂತರದಿಂದ ನಡೆದು ಬಂದಿವೆ. ತೋಳಬಂದಿ, ನಾಗಬಂದಿ, ಬಾಜೂಬಂದ, ನಾಗಮುರಗಿ ಮುಂತಾದ ಒಡವೆಗಳಿವೆ.

ಇತಿಹಾಸ ಪೂರ್ವದಿಂದಲೂ, ಬಳ್ಳಿಗಳನ್ನು ಔಷಧೀಯ ಪರಿಣಾಮಗಳಿಗಾಗಿ ಸುತ್ತಿಕೊಳ್ಳುತ್ತಿದ್ದ ರೂಢಿ ಇತ್ತು. ಕೈ ಕಡಕಗಳು ಸಾಧಾರಣವಾಗಿ ಬೆಳ್ಳಿಯವಾಗಿ ಕ್ರಮೇಣ ವಿಕಸನಗೊಂಡಿರಬೇಕು.

ಮೊಸರ ಮಾರುತ ಬಂದಳೀಕಿ
ಕುಸಲಗಢದ ಗೊಲ್ಲತೀ
ಮೊಸರಿನ ಸುಂಕ ಬೇಡಿದರ
ಕುಸಲಗಡಗವ ತೋರುವಳ

ಎಂಬ ಜನಪದರ ಗೀತೆ ವಿವಿಧ ವಿಧಗಳನ್ನು ನಿರೂಪಿಸುತ್ತದೆ. ಉತ್ತರ ಕರ್ನಾಟಕದಲ್ಲಿ ಗೌಳಿಗರು, ಕೊರಳಿಗೆ ಕಡಗ ಹಾಕಿಕೊಳ್ಳುವುದು ರೂಢಿಯಲ್ಲಿದೆ. ಕಬ್ಬಿಣದ ಕಡಗವೂ ಬಳಕೆ ಯಲ್ಲಿತ್ತೆಂಬುದು ಚರಿತ್ರೆಯಲ್ಲಿ ದಾಖಲಾಗಿದೆ. ಕಂಚಿನ ಬಳೆ ಬುಡಕಟ್ಟು ಜನಾಂಗದಲ್ಲಿ ಹೆಚ್ಚಾಗಿ ಚಾಲ್ತಿಯಲ್ಲಿದೆ.

ಬೆಳ್ಳಿಯ ಉಂಗುರ ಬೆರಳಿಗೆ ಶೋಭೆ. ಇದರಲ್ಲೂ ನಾಗರ, ಸುತ್ತುಂಗುರ ಮುಂತಾದವು ಇವೆ. ಬೆಳ್ಳಿ, ಬಂಗಾರ, ತಾಮ್ರ, ಹಿತ್ತಾಳೆ, ತವರುಗಳೆಂಬ ಐದು ಲೋಹಗಳಿಂದ ಪಂಚಲೋಹದ ಉಂಗುರ ಗಳನ್ನು ತಯಾರಿಸುತ್ತಾರೆ. ಹಳ್ಳಿಗರು ಮೂಲವ್ಯಾಧಿ ಮುಂತಾದ ರೋಗ ನಿವಾರಣೆಗೆ ತಾಮ್ರದುಂಗುರ ಬಳಸುವುದು ರೂಢಿಯೊಳಗಿದೆ.

ಪರಸ್ಪರಾಕರ್ಷಣೆ ಹಾಗೂ ಚಿಕಿತ್ಸೆಯ ಕಾಳಜಿಯಿಂದ ಸ್ತ್ರೀಪುರುಷರಿಬ್ಬರಿಗೂ ಸಮಾನ ಒಡವೆಗಳಿವೆ. ಒಂಟಿ, ಬಾವುಲಿ, ಕಡುಕು, ಕುಂಡಲಗಳು, ಕಿವಿಯ ಆಭರಣಗಳು. ಇನ್ನು ಹಸ್ತಾಭರಣಗಳಲ್ಲಿ, ಉಂಗುರ, ಸ್ತ್ರೀಪುರುಷರಿಗೆ ಸಮಾನ. ಬೆಳ್ಳಿ, ಕಡಗ, ತಾಮ್ರದಬಳೆ ಕೂಡ ಒಂದೇ ರೀತಿಯದ್ದು. ಉದ್ದೇಶ ಕೂಡ ಒಂದೇ ಆಗಿದೆ.

ಬುಡಕಟ್ಟುಗಳ ಜೀವನದಲ್ಲಿ ಹಾಸುಹೊಕ್ಕಾಗಿರುವ ಕಟ್ಟುವುದು, ಮುಡಿಯುವುದು, ಹಬ್ಬುವುದು, ಉಡುವುದು, ತೊಡುವುದು ಇವುಗಳನ್ನು ವಿಶ್ಲೇಷಿಸಿ ನೋಡಲಾಗಿದೆ. ವೈವಿಧ್ಯಪೂರ್ಣ ಆಭರಣಗಳನ್ನು ತೊಡುವ ಕಲೆಯನ್ನು ಬುಡಕಟ್ಟುಗಳ ನಂಬಿಕೆ, ಸಂಪ್ರದಾಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ನೋಡಲಾಗಿದೆ. ಶೃಂಗಾರಪ್ರಿಯರಾದ ಗೌಳಿ ಮಹಿಳೆಯರು ಕಿವಿಗೆ ಕಾಪು, ಮೂಗುತಿ, ತೋಳ್‌ವಲ್, ತೋಳಬಂದಿ, ಕಾಲುಸರವನ್ನು ತೊಡುತ್ತಾರೆ. ಗಾಜಿನಬಳೆ, ಬೆಳ್ಳಿಯ ಪಾಟ್ಲ, ಹಾಗೂ ಕೊರಳಲ್ಲಿ ಮಣಿಸರವನ್ನು ಧರಿಸುತ್ತಾರೆ. ಕೆಳಗಿವಿಗೆ ಉರಿ ಮತ್ತು ಕೆನ್ನೆಗೆ ಸರಪಣಿಗಳನ್ನು ಧರಿಸುವುದು

ವಿಶೇಷವಾಗಿದೆ. ಹೆಚ್ಚಾಗಿ ಬಂಗಾರದ ಆಭರಣಗಳಗಿಂತ ಬೆಳ್ಳಿಯ ಆಭರಣಗಳನ್ನು ಧರಿಸುವುದು ಗೌಳಿಗರಲ್ಲಿ ಕಂಡುಬರುತ್ತವೆ. ಆದರೆ ಆಭರಣಗಳಲ್ಲಿ ಬದಲಾವಣೆ ಕಂಡುಬರುತ್ತಿದೆ. ನಾಗರಿಕತೆಯ ಗಾಳಿ ವಿಶೇಷವಾಗಿರದ ಹಾಡಿಯ ಹಳೆಯ ಹೆಂಗಸರು ಸಾಂಪ್ರದಾಯಿಕ ಆಭರಣಗಳನ್ನು ಹಾಕಿಕೊಂಡಿದ್ದಾರೆ. ಆದರೆ ಇವತ್ತಿನ ಮಹಿಳೆಯರು ಪಾರಂಪರಾಗತ ಆಭರಣಗಳ ಆಕರ್ಷಣೆ ಅವರಿಂದ ದೂರವಾಗುತ್ತಿವೆ. ಪೇಟೆಯ ಆಭರಣಗಳ ವ್ಯಾಮೋಹ ಅವರಲ್ಲಿ ಹೆಚ್ಚಾಗುತ್ತಿವೆ. ಅಂತೆಯೇ ಅವರು ನೆಕಲೇಸ್, ಜುಮುಕಿ, ಮುತ್ತು ಮುಂತಾದ ಒಡವೆಗಳನ್ನು ಹಾಗೂ ಸ್ನೋ, ಪೌಡರ್, ಲಿಪಸ್ಟಿಕ್ ಮುಂತಾದ ಸೌಂದರ್ಯವರ್ಧಕಗಳನ್ನು ಬಳಸಲು ಮುಂದಾಗಿದ್ದಾರೆ. ಇನ್ನೊಂದೆಡೆ ಸಮುದಾಯಗಳಲ್ಲಿ ಬಳಕೆಯಲ್ಲಿರುವ ಆಭರಣಗಳ ಅನುಕರಣೆ ಪೇಟೆಗೆ ಬರುತ್ತಿವೆ.

**೨.೭ ಉಡುಗೆ ತೊಡುಗೆಗಳಲ್ಲಿನ ಬದಲಾವಣೆ**

ಮಾನವನು ಧರಿಸುವ ವೇಷ ಭೂಷಣಗಳು ಅವನ ಮನಸ್ಸಿನ ಅಭಿವ್ಯಕ್ತಿಗೆ, ವ್ಯಕ್ತಿತ್ವದ ಪ್ರಕಟಣೆಗೆ ಪೂರಕವಾಗಿರುತ್ತವೆ. ಸಂಸ್ಕೃತಿಯ ಪ್ರಮುಖ ಅಂಗವಾಗಿರುವ ಇವುಗಳ ಅಧ್ಯಯನ, ಸಂಸ್ಕೃತಿಯ ಅಧ್ಯಯನಕ್ಕೆ ಸಹಾಯಕಾರಿಯಾಗುತ್ತದೆ. ಬುಡಕಟ್ಟಿನ ಜನರು ಧರಿಸುವ ವೇಷಭೂಷಣಗಳು ಇದಕ್ಕೆ ಹೊರತಾಗಿಲ್ಲ.

ಅನನ್ಯವಾದ ಸಂಸ್ಕೃತಿ ಮತ್ತು ಪರಂಪರೆಯನ್ನು ಹೊಂದಿರುವ ಈ ಜನರನ್ನು ಕಚ್ಚೆ ಗೌಳಿಗರು, ಧಂಗರ್ ಮರಾಠರು, ಕಚ್ಚೆ ಮರಾಠರು, ಕಚ್ಚೆ ಧಂಗರರು ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಕಚ್ಚೆ ಧರಿಸುವುದರಿಂದಲೂ ಎಮ್ಮೆ ಸಾಕಾಣಿಕೆಯನ್ನು ಅವಲಂಬಿಸಿರುವುದರಿಂದಲೂ ಇವರಿಗೆ ಕಚ್ಚೆ ಗೌಳಿಗ ಎಂಬ ಹೆಸರು ಬಂದಿದೆ. ಬೇರೆ ಬೇರೆ ಜಿಲ್ಲೆಗಳಿಗೆ ಪಸರಿಸಿದ್ದರೂ, ಸಾಮಾನ್ಯವಾಗಿ ಒಂದೇ ಬಗೆಯ ವೇಷಭೂಷಣಗಳನ್ನು ಇವರು ಉಳಿಸಿಕೊಂಡು ಬಂದಿದ್ದಾರೆ. ಜೊತೆಗೆ ಬೇರೆ ಯಾವ ಬುಡಕಟ್ಟಿನ ಜನರಲ್ಲಿ ಕಂಡು ಬರದ ವೇಷಭೂಷಣಗಳು ಇವರಲ್ಲಿರುವುದು ಗಮನಾರ್ಹವಾದ ಅಂಶವಾಗಿದೆ. ತಮ್ಮ ವಿಶಿಷ್ಟವಾದ ಈ ವೇಷ ಭೂಷಣಗಳಿಂದಾಗಿ ಇವರು ಇತರ ಬುಡಕಟ್ಟುಗಳಿಂದ ಪ್ರತ್ಯೇಕವಾಗಿ ಕಾಣಿಸಿಕೊಳ್ಳುವುದುಂಟು.

**ಮಕ್ಕಳ ಉಡುಗೆ ತೊಡುಗೆಗಳು** : ಮೂರ್ನಾಲ್ಕು ವರ್ಷದ ಮಕ್ಕಳು ಬಟ್ಟೆ ಧರಿಸದೇ ಬರಿಮೈಯಲ್ಲೇ ಓಡಾಡುತ್ತವೆ. ಐದಾರು ವರ್ಷದ ಮಕ್ಕಳು ಲಂಗೋಟಿ ಬಿಗಿದುಕೊಂಡು ಸೊಂಟಕ್ಕೆ ಉಡುದಾರ ಕಟ್ಟಿಕೊಳ್ಳುತ್ತವೆ. ತಲೆಗೆ ನಾರಿನಿಂದ ಮಾಡಿದ ಟೋಪಿ ಹಾಕಿಕೊಳ್ಳುತ್ತಾರೆ.

ಇವರ ಉಡುಪು ಮತ್ತು ಒಡವೆ ವಸ್ತ್ರಾಲಂಕಾರ ಕೂಡ ಕರ್ನಾಟಕದವರಿಗಿಂತ ಭಿನ್ನ. ಹದಿನಾರು ಮೊಳದ ಇಳಕಲ್ ತರದ ಸೀರೆಯನ್ನು ಕಾಸೆ ಕಚ್ಚೆ ಹಾಕಿ ಬಿಗಿದು ಕಟ್ಟುವ ಹೆಂಗಸರು ಮೊಣಕಾಲು ಮತ್ತು ತೊಡೆಯ ಬಹುಭಾಗವನ್ನು ನಗ್ನವಾಗಿಯೇ ಬಿಡುತ್ತಾರೆ. ರವಿಕೆ ಇತ್ತೀಚೆಗೆ ಸೇರ್ಪಡೆಯಾಗಿದೆ. ಕಿವಿಗೆ ಅತ್ತಕಡಕು, ಮೂಗುಬೊಟ್ಟು, ಕಡಗ, ಬಳೆ, ವಿವಿಧ ಮಣಿಸರ ಹೆಂಗಸರ ರೂಪಕ್ಕೆ ಮತ್ತಷ್ಟು ಇಂಬು ಕೊಡುತ್ತದೆ. ಚಿಕ್ಕ ಹುಡುಗಿಯರ ಬಗಲಿಗೂ ಎಲೆ-ಅಡಿಕೆ ಚೀಲ. ಗಂಡಸರು ಮೊದಲಿಗೆ

ಕೌಪೀನ ಮಾತ್ರ ಧರಿಸುತ್ತಿದ್ದವರು ಈಗ ಎಲ್ಲರಂತೆ ಅಂಗಿ, ಚಡ್ಡಿ, ಕಚ್ಚೆಗಳಿಗೆ ಒಗ್ಗಿಹೋಗಿದ್ದಾರೆ. ದಷ್ಟಪುಷ್ಟ ದೇಹ, ಪೊದೆಮೀಸೆ, ತಲೆಗೆ ರುಮಾಲು, ಕೈಗೆ ಬೆಳ್ಳಿಯ ಕಪ್ಪು, ಕಿವಿಗೆ ಅತ್ತಕಡಕು. ಸಾಮಾನ್ಯವಾಗಿ ಗೋಧಿ ಮೈಬಣ್ಣದವರಾದ ಈ ಜನಾಂಗದಲ್ಲಿ ಮುದುಕರಿಂದ ಮಕ್ಕಳವರೆಗೆ ಯಾರ ಮುಖದಲ್ಲೂ 'ಜೀವಕಳೆ' ನಳನಳಿಸುತ್ತದೆ. ಬಹುಶಃ ಇವರು ಸೇವಿಸುವ ಗಾಳಿ, ಕುಡಿಯುವ ಸ್ವಚ್ಛನೀರು, ದಿನನಿತ್ಯ ಬಳಸುವ ಹಾಲಿನ ಪ್ರಮಾಣ ಇವರನ್ನು ಇಂಥ ದೃಢಕಾಯರನ್ನಾಗಿ ಇಟ್ಟಿರಬಹುದು.

ಹುಟ್ಟಿದ ಮಕ್ಕಳನ್ನು ಕುಕ್ಕಿಯಲ್ಲಿ ಹುಲ್ಲಿನ ಮೇಲೆ ಮೃದುವಾದ ಸೀರೆ ಹಾಕಿ ಮಲಗಿಸುತ್ತಾರೆ. ಮಗುವಿಗೆ ಯಾವುದೇ ಬಟ್ಟೆಯನ್ನು ತೊಡಿಸದೆ ಆಡು ಅಥವಾ ಕುರಿಗಳ ಮರಿಗಳನ್ನು ಹಾಡುವಂತೆ ಸಣ್ಣ ಮಕ್ಕಳನ್ನು ಕುಕ್ಕೆಯಲ್ಲಿ ಹಾಕಿ ಇಡುವ ಸಂಪ್ರದಾಯ ಇವರ ಪ್ರಾಚೀನ ನಡವಳಿಕೆಯನ್ನು ತೋರಿಸುತ್ತದೆ. ಐದು ದಿನದ ನಂತರ ಮಗುವಿಗೆ ಬಟ್ಟೆ ತೊಡಿಸುತ್ತಾರೆ. ಸಾಮಾನ್ಯವಾಗಿ ಎಲ್ಲ ಕಡೆ ವಾಸಿಸುವ ಗೌಳಿಗರಲ್ಲಿ ವೇಷಭೂಷಣ ಒಂದೇ ತೆರನಾಗಿದೆ. ಸಾಮಾನ್ಯವಾಗಿ ಬೇರೆ ಯಾವ ಜನಾಂಗದವರೂ ಇವರ ವೇಷ-ಭೂಷಣಗಳಿಂದಲೇ ಇವರನ್ನು ಪ್ರತ್ಯೇಕವಾಗಿ ಗೌಳಿಗರೆಂದು ಗುರುತಿಸುವಷ್ಟು ವಿಶಿಷ್ಟವಾಗಿ ಇವರ ವೇಷ-ಭೂಷಣ ಪದ್ಧತಿ ಕಂಡು ಬರುತ್ತದೆ.

ಗೌಳಿ ಸ್ತ್ರೀಯರು ಸಾಮಾನ್ಯವಾಗಿ ಎಮ್ಮೆಕರುಗಳ ಕೊಟ್ಟಿಗೆ ಕೆಲಸದಲ್ಲಿ ನಿರತರಾಗಿರುವ್ಯದರಿಂದ ಕಚ್ಚೆ ಧರಿಸುವುದು ಅನಿವಾರ್ಯವಾಗುತ್ತದೆ. ಕಚ್ಚೆಯನ್ನು ಹಾಕಿಕೊಳ್ಳುವ ಬಗ್ಗೆ ಸ್ತ್ರೀಯರು ಕತೆಯನ್ನು ಹೇಳುತ್ತಾರೆ. ಹಿಂದಿನ ಕಾಲದಲ್ಲಿ ಹೆಂಗಸರೇ ಎಮ್ಮೆ, ಕರುಗಳಿಗೆ ಮೇವನ್ನು ತರಬೇಕಾಗುತ್ತಿತ್ತು. ಮೇವನ್ನು ತರಲು ಹೋದ ಗರ್ಭಿಣಿ ಹೆಂಗಸೊಬ್ಬಳು ಮರದ ಮೇಲೆ ಹತ್ತಿ ಸೊಪ್ಪನ್ನು ಗಿಡದಿಂದ ಸವರುತ್ತಿರುವಾಗ ಹೆರಿಗೆಯ ಬೇನೆ ಬಂದು ಮಗುವನ್ನು ಮರದ ಮೇಲೆ ಕುಳಿತುಕೊಂಡೇ ಹೆತ್ತಳು. ಆಗ ಮಗು ಮರದಿಂದ ಕೆಳಗೆ ಬಿದ್ದು ಪ್ರಾಣ ಬಿಟ್ಟಿತು. ಒಂದು ವೇಳೆ ಅ ಹೆಂಗಸು ಕಚ್ಚೆಯನ್ನು ಹಾಕಿಕೊಂಡಿದ್ದರೆ ಮಗು ಕೆಳಗೆ ಬೀಳುವ ಅಪಾಯು ಸಂಭವಿಸುತ್ತಿರಲಿಲ್ಲ. ಅಂದಿನಿಂದ ಗೌಳಿ ಸ್ತ್ರೀಯರು ಕಚ್ಚೆ ಹಾಕಿಕೊಂಡು ಕೆಲಸ ಮಾಡಲು ಪ್ರಾರಂಭಿಸಿದರು.

ಗೌಳಿಗರು ತಮ್ಮ ಮಕ್ಕಳಿಗೆ ಚಿಕ್ಕವರಿದ್ದಾಗಲೆ ಲಂಗೋಟಿ ಹಾಕಿಕೊಳ್ಳುವುದನ್ನು ಹೇಳಿಕೊಡುತ್ತಾರೆ. ಅತಿ ಚಿಕ್ಕವಯಸ್ಸಿನಲ್ಲಿ ಗಂಡು ಹಾಗೂ ಹೆಣ್ಣು ಮಕ್ಕಳ ಮದುವೆ ಮಾಡುತ್ತಾರೆ. ಹುಡುಗನಿಗೆ ಬಿಳಿಯ ಕಚ್ಚೆ ಪಂಚೆ ತೊಡಿಸಿ ಬಿಳಿ ನಿಲುವಂಗಿಯನ್ನು ಹಾಕಿ ನಚಿತರ ಪಾಗೋಟು ಹಾಕುತ್ತಾರೆ. ಕೈಗೆ ಬೆಳ್ಳಿಯ ಕೈಗಡಗ ಹಾಕಿ ಬೆರಳಿಗೆ ಉಂಗುರನ್ನು ಇಡುತ್ತಾರೆ, ಬಾಲ್ಯ ವಿವಾಹ ಕೆಲವು ಕಡೆ ಇನ್ನೂ ಪ್ರಚಲಿತವಿರುವ ಗೌಳಿಗರಲ್ಲಿ ನಾಲ್ಕಾರು ವರ್ಷದ ಹೆಣ್ಣುಮಕ್ಕಳನ್ನು ಮದುವೆ ಮಾಡುತ್ತಾರೆ. ಮದುಮಗಳಿಗೆ ಬಣ್ಣದ ಸೀರೆ ಉಡಿಸಿ ರವಿಕೆ ತೊಡಿಸುತ್ತಾರೆ. ತಲೆಗೆ ಜಡಿಬಿಲ್ಲೆ, ಕಿವಿಗೆ ಬೆಂಡೋಲೆ, ಬುಗುಡಿ ಮೂಗಿಗೆ ನತ್ತು ಮುಕ್ರವನ್ನು ಹಾಕಿ ಕೊರಳಿಗೆ ಮಣಿಸರಗಳನ್ನು ಹಾಕಿ ಸಿಂಗರಿಸುತ್ತಾರೆ. ಕಾಲಿಗೆ ಕಾಲುಂಗರ ತೊಡಿಸುತ್ತಾರೆ.

ಗೌಳಿಗರ ಬದುಕು ಬದಲಾಗಿರುವುದು ಅವರ ಉಡುಗೆ-ತೊಡುಗೆಗಳಲ್ಲಿ. ಈಗ ಮೊದಲಿನ ಹಾಗೇ ಯಾರು ಕಚ್ಚೆ ಹಾಕಿ ಸೀರೆಯನ್ನು ಉಡುವುದಿಲ್ಲ. ಯಾಕೆಂದರೆ ಈಗ ಮೊದಲಿನ ಹಾಗೇ

ಪಶುಪಾಲನೆಯೇ ಮುಖ್ಯ ಉದ್ಯೋಗವಾಗಿ ಉಳಿದಿಲ್ಲ. ಎರಡನೇಯದಾಗಿ ೪೦ ವರ್ಷದ ಒಳಗಿನ ಮಹಿಳೆಯರನ್ನು ಮಾತನಾಡಿಸಿದಾಗ ನಮಗೆ ನಾಚಿಕೆ ಆಗುತ್ತದೆ. ಹೊರಗಡೆ ಸಮಾಜದಲ್ಲಿ ಓಡಾಡಲು ಮುಜುಗರ ಎನಿಸುತ್ತದೆ ಎಂದು ಹೇಳುತ್ತಾರೆ. ಅದಕ್ಕಾಗಿ ಇಂದು ಆಧುನಿಕ ಸ್ತ್ರೀಯರು ಉಡುವ ತರಹ ಸೀರೆಯನ್ನು ಉಡುತ್ತಿದ್ದಾರೆ. ನೈಟಿ ಬಂದಿದೆ, ಚೂಡಿ, ಲಂಗ-ದಾವಣಿ ಈ ತರಹದ ಉಡುಗೆಗಳನ್ನು ಕಾಣಬಹುದು. ಮೊದಲಿನ ಹಾಗೇ ಮಣಿಸರಗಳನ್ನು ಹಾಕಿಕೊಳ್ಳುವುದಿಲ್ಲ. ಒಂದು ಕರಿಮಣಿಸರ ಹಾಕಿ ಉಳಿದ ಸರ ಏನಾದರೂ ಹಾಕಿಕೊಂಡರೆ ಆಧುನಿಕ ಮಾದರಿಯ ಸಂಬಂಧ ಪಟ್ಟಿರುವುದಾಗಿದೆ.

### ೨.೮ ಹಬ್ಬಗಳ ಆಚರಣೆ

ಗೌಳಿಗರ ನಡೆ, ನುಡಿ, ಆಚಾರ, ವಿಚಾರ, ಆಚರಣೆ, ಸಂಪ್ರದಾಯ ಕಲೆ ಕಸುಬುಗಳೆಲ್ಲ ದೈವಿಕ ಉಪಾಸನೆಯ ಚೌಕಟ್ಟಿಗೆ ಒಳಪಟ್ಟವೆ. ಪ್ರಕೃತಿಯ ಮಡಿಲಲ್ಲಿ ಬೆಳೆದ ಮುಗ್ಧ ಗೌಳಿಗರ ಮನಸ್ಸಿನ ಮೇಲೆ ಪ್ರಕೃತಿ ಬೀರಿದ ಪ್ರಭಾವ ಬಹುಮುಖವಾಗಿದೆ. ಹುಲುಸಾದ ಬೆಳೆಯನ್ನು ನೀಡುವ ಭೂಮಿತಾಯಿ, ಬೆಳಕನ್ನು ದಯಪಾಲಿಸುವ ಸೂರ್ಯ ಚಂದ್ರರು, ಜಲಧಾರೆಯನ್ನುಣಿಸುವ ಮೇಘ, ಬದುಕಿಗೆ ಸಹಾಯಕಾರಿಗಳಾದ ಎಮ್ಮೆ, ದನಕರುಗಳು ಹೀಗೆ ದೇವತೆಗಳನ್ನು ಹಲವು ಬಗೆಯಲ್ಲಿ ಕಲ್ಪಿಸಿ, ರೂಪಿಸಿ, ಪೂಜಿಸುವಲ್ಲಿ ತಮ್ಮ ಭಕ್ತಿಯ ಸಾರ್ಥಕತೆಯನ್ನು ಕಂಡುಕೊಂಡರು.

ಇವರು ದೇವತೆಗಳ ಪ್ರೀತ್ಯರ್ಥವಾಗಿ ತೇರು, ಜಾತ್ರೆ, ಹಬ್ಬಗಳನ್ನು ವರ್ಷಕ್ಕೊಮ್ಮೆ ಆಚರಿಸಿ, ಆ ಹಬ್ಬಗಳ ಒಂದಂಗವಾಗಿ ವಿವಿಧ ಬಗೆಯ ಕಲೆ, ಕ್ರೀಡೆಗಳನ್ನು ದೇವತೆಗಳ ಅನುಗ್ರಹಕ್ಕಾಗಿ ಆಚರಿಸಿಕೊಂಡು ಬರುತ್ತಿದ್ದಾರೆ.

ಗಿರಿವನ, ನದಿಗಳ ಒಡಲಾಳದಲ್ಲಿಯೇ ಕಷ್ಟಮಯ ಬದುಕು, ಬಾಳುತ್ತಿರುವ ಗೌಳಿಗರ ಮೇಲಾದ ಪ್ರಕೃತಿಯ ಗೋಚರ ಹಾಗೂ ಅಗೋಚರ ಶಕ್ತಿಗಳ ಪ್ರಭಾವ ಬಹುಮುಖಿಯಾದುದು. ಭೂತ, ಪಿಶಾಚಾದಿ ಅಗೋಚರ ಶಕ್ತಿ ಮುಂದಾವನ್ನೆಲ್ಲ ನೆನೆದು, ಅದಕ್ಕೊಂದು ಮೂರ್ತರೂಪವನ್ನು ಕೊಟ್ಟು ಗೌಳಿಗರು ಆರಾಧಿಸುತ್ತಿದ್ದಾರೆ.

ಇವರು ನಂಬಿದ ಭೂತ ಹಾಗೂ ದೇವತೆಗಳ ಸಂತೃಪ್ತಿಗಾಗಿ ತಮ್ಮ ಬಿಡುವಿರದ ದುಡಿಮೆಯಲ್ಲಿ ವಿರಾಮವನ್ನು ಪಡೆಯಲು ತಮ್ಮ ಬದುಕಿನ ಏಕತಾನತೆಯನ್ನು ಹೋಗಲಾಡಿಸಿಕೊಳ್ಳಲು ತಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವಾರ್ಷಿಕ ಹಬ್ಬ, ಜಾತ್ರೆ, ಮುಂತಾದ ಧಾರ್ಮಿಕ ಅಚರಣೆಗಳನ್ನು ಒಂದು ಸಮೃದ್ಧ ಸಂಪ್ರದಾಯವಾಗಿ ಬೆಳೆಸಿಕೊಂಡು ಬಂದಿದ್ದಾರೆ.

ಹಿಂದೂ ಧರ್ಮಚರಣೆಯಂತೆ ವಿವಿಧ ಹಬ್ಬಗಳನ್ನು ಆಚರಿಸುವ ಗೌಳಿಗರು ವರ್ಷಾವರ್ತುಲದ ಎಲ್ಲ ಹಬ್ಬ ಆಚರಣೆಗಳನ್ನು ಸಂಪ್ರದಾಯದಂತೆ ಆಚರಿಸುತ್ತಾರೆ. ಅಲೆಮಾರಿ ಬದುಕಿನ ಕಷ್ಟ ಸಂಕಟಗಳ ಮಧ್ಯೆ ಬದುಕುವ ಗೌಳಿಗರಿಗೆ ದೈವರಾಧನೆಯ ಅಂಗವಾಗಿ ಹಬ್ಬಗಳನ್ನು ಆಚರಿಸುವುದು ಸರ್ವೇ ಸಾಮಾನ್ಯವಾಗಿದೆ.

**ಯುಗಾದಿ**

ಯುಗಾದಿ ವರ್ಷಾವರ್ತುಲದ ಪ್ರಾರಂಭದ ಹಬ್ಬ. ಹೊಸದಾಗಿ ಬಂದ ದವಸ ಧಾನ್ಯಗಳ ಫಲವನ್ನುಂಡು ತಮಗೆ ಅನುಗ್ರಹಿಸಿದ ಪ್ರಕೃತಿಗೆ ಕೃತಜ್ಞತೆ ಸಲ್ಲಿಸುವ ಹೊಸ ಉಡುಗೆ ತೊಡುಗೆಯುಟ್ಟು ಸಂಭ್ರಮ ಪಡುವ ಹಬ್ಬ. ಬುಡಕಟ್ಟುಗಳ ಹಬ್ಬದ ಆಚರಣೆಗಳು ಮೂಲತಃ ತೀರ ಸರಳವಾದ ಆಚರಣೆಗಳು. ಯುಗಾದಿಯ ದಿನ ಪಕ್ಕದ ಅಡವಿಯಲ್ಲಿ ಸುತ್ತಾಡಿ ಬಿದರಿನ ಸೆಳವಿಯನ್ನು ತರುತ್ತಾರೆ. ತಮ್ಮ ಮನೆ ಮುಂದೆ ಚಿಕ್ಕ ಗೂಡೊಂದನ್ನು ಮಾಡಿ ಅದರ ಪಕ್ಕದಲ್ಲಿ ಬಿದಿರಿನ ಸೆಳವಿಯನ್ನು ನೆಟ್ಟು ತಾಮ್ರದ ತಂಬಿಗೆಗೆ ಅರಿಶಿಣ, ಕುಂಕುಮ ಹಚ್ಚಿ ಮಾವಿನ ಎಲೆಗಳನ್ನು ಸಿಗಿಸಿ ಹೊಸ ದೋತರ ಅಥವಾ ಕಡವನ್ನು ಮಡಚಿ ಬಿದಿರಿನ ಸೆಳವಿಗೆ ಸಿಗಿಸುತ್ತಾರೆ. ನಂತರ ತಾಮ್ರದ ಬಿಂದಿಗೆಯನ್ನು ಪೂಜೆ ಮಾಡಿ ಪಾಯಸವನ್ನು ಎಡೆ ಹಿಡಿಯುತ್ತಾರೆ. ಆ ಮೇಲೆ ಮನೆಯ ಕುಳಿ ದೈವವನ್ನು ಪೂಜಿಸಿ ನೇವೇದ್ಯ ಮಾಡಿ ಬೇವು ಮತ್ತು ಬೆಲ್ಲವನ್ನು ತಿನ್ನುತ್ತಾರೆ.

**ಭೂಯಿ ಪೂಜಾ**

ಭೂಮಿ ಹುಣ್ಣಿಮೆಯನ್ನೇ ಭೂಯಿಪೂಜಾ ಎಂದು ಕರೆಯುತ್ತಾರೆ. ಭೂಮಿಯ ಫಲವತ್ತತೆಗೆ ವಂದಿಸುವ, ತಮಗೆ ಅನ್ನ ನೀಡಿದ ತಾಯಿಯನ್ನೂ ನಮ್ರತೆಯಿಂದ ಪೂಜಿಸುವ ಹಬ್ಬವೇ ಭೂಮಿ ಹುಣ್ಣಿಮೆ. ಕುಮ್ರಿ ಬೆಳೆಯುವ ಕಾಡಿಗೆ ಹೋಗಿ ಈ ಪೂಜೆ ಸಲ್ಲಿಸುತ್ತಾರೆ. ಹೊಲದಲ್ಲಿ ಐದುಕಲ್ಲುಗಳನ್ನು ಇಟ್ಟು ಅದಕ್ಕೆ ಅರಿಶಿಣ, ಕುಂಕುಮ ಹಚ್ಚಿ ಪೂಜೆ ಮಾಡುತ್ತಾರೆ. ಇದು ಪಾಂಡವರು ಎಂದು ನಂಬುವ ಗೌಳಿಗರು ಭೂಮಿ ಹಾಗೂ ೫ ಕಲ್ಲುಗಳನ್ನು ಪೂಜಿಸಿ ನೇವೇದ್ಯ ಮಾಡುತ್ತಾರೆ. ಅಲ್ಲದೆ ಎಲೆ ಹಾಗೂ ಭತ್ತದ ತೆನೆಗಳಿಂದ ಮಾಡಿದ 'ಲಹಿ' ಯನ್ನು ತವೆಯಲ್ಲಿ ಹುರಿದು ತಾವು ಬೆಳೆಯುವ ಕುಮ್ರಿ ಹೊಲದಲ್ಲಿ ಚರಗ ಚೆಲ್ಲುತ್ತಾರೆ. ಎಲ್ಲ ಕೂಡಿ ಊಟ ಮಾಡುತ್ತಾರೆ.

**ಹೋಳಿ ಹುಣ್ಣಿಮೆ**

ಹೋಳಿ ಹುಣ್ಣಿಮೆ ಅತವಾ "ಕಾಮನ ಹಬ್ಬ" ಗೌಳಿಗರ ಪ್ರಮುಖ ಹಬ್ಬಗಳಲ್ಲಿ ಒಂದಾಗಿದೆ. ಮನೋರಂಜನೆ ಹಾಗೂ ಕಾಮದಹನ ಕ್ರಿಯೆಯಲ್ಲಿ ಹುಟ್ಟಿಕೊಳ್ಳುವ ಈ ಹಬ್ಬ ಗೌಳಿಗರಿಗೆ ಅಚ್ಚುಮೆಚ್ಚು. ಕಾಮನ ಮೂರ್ತಿ ಮಾಡಿ ಅದನ್ನು ಸುಡುವಾಗ ಗೌಳಿಗರಲ್ಲಿ ಎಲ್ಲಿಲ್ಲದ ಸಂಭ್ರಮ ಇರುತ್ತದೆ. ಮಕ್ಕಳಿಂದ ಹಿರಿಯರವರೆಗೆ ವಾಡೆಯ ಸಮಸ್ತರೂ ಸೇರಿ ಕಾಮದಹನದ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಐದು ದಿನಗಳವರೆಗೆ ನಡೆಯುವ ಈ ಹಬ್ಬದಲ್ಲಿ ವಾಡದ ಅನೇಕ ನೃತ್ಯತಂಡಗಳು ಮನೆ ಮನೆಗಳ ಎದುರು ತಿರುಗಾಡಿ ನೃತ್ಯ ಮಾಡುತ್ತಾರೆ. ಬಿಳಿಯ ನಿಲುವಂಗಿ, ಪಾಗೋಟ ಹಾಗೂ ಸೊಂಟಕ್ಕೆ ಪಟ್ಟಿಯನ್ನು ಕಟ್ಟಿಕೊಂಡು ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ. ತಾಳ ಹಾಗೂ ದೊಳ್ಳುಗಳನ್ನು ಲಯಬದ್ಧವಾಗಿ ಬಾರಿಸುತ್ತಾ ಕುಣಿಯುವ ಗೌಳಿಗರು ಮನೆಮನೆಯ ಮುಂದೆ ಪ್ರದರ್ಶನ ನೀಡಿ ಸಂಭಾವನೆ ಸಂಗ್ರಹಿಸುತ್ತಾರೆ. ಇಂತಹ ತಂಡಗಳಲ್ಲಿ ಕುಣಿಯುವ ಹುಡುಗರನ್ನು ವಾಡದ ಜನ ಸಂಭ್ರಮದಿಂದ ಊಟ ನೀಡಿ ಉಪಚರಿಸುತ್ತಾರೆ. ಕೆಲವು ಊರುಗಳಲ್ಲಿ ಕುಣಿತದ ತಂಡಗಳು ಅನೇಕ ಬಗೆಯ ವೇಷ ಹಾಕಿಕೊಂಡು ವಾಡೆವಾಡೆಯನ್ನು ಅಲೆಯುತ್ತವೆ. ಸೊಂಟಕ್ಕೆ ದೋತ್ರ

ಉಟ್ಟುಕೊಂಡು ಹೆಗಲ ಮೇಲೆ ಅಡ್ಡ ದೋತ್ರ ಹಾಕಿಕೊಮಡು ಕೊರಳಿಗೆ ಮಾಲೆ ಹಾಕಿಕೊಂಡು ಐದು ವಾಡೆಗಳನ್ನು ಸುತ್ತಿ ಅಕ್ಕಿ ಹಾಗೂ ಹಣವನ್ನು ಸಂಗ್ರಹ ಮಾಡುತ್ತವೆ. ಈ ಹೋಳಿಯ ತಂಡ ಬಂದಾಗ ವಾಡೆಯ ಜನರು ಕಾಲುತೊಳೆದು ಆರತಿ ಮಾಡಿ ಕುಂಕುಮ ಹಚ್ಚಿ ಸ್ವಾಗತಿಸುತ್ತಾರೆ. ನೃತ್ಯ ಮಾಡುತ್ತಾ ನಾಲ್ಕು ದಿನ ವಾಡೆಗಳನ್ನು ತಿರುಗಾಡುವ ಹೋಲಿ ಕುಣಿತದ ತಂಡಗಳು ಐದನೆಯ ದಿನ ತಮ್ಮ ವಾಡಕ್ಕೆ ಹಿಂತಿರುಗಿ ಹೋಳಿ ಹುಣ್ಣಿಮೆಯ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಹೋಳಿ ಹಬ್ಬದಲ್ಲಿ ಆಚರಣೆಯ ಅಂಗವಾಗಿ ಊರಿನ ಬಯಲಿನಲ್ಲಿ ಕಾಡುಕಲ್ಲನ್ನು ಇಟ್ಟಿರುತ್ತಾರೆ. ಇದನ್ನೇ "ಶಿಲೆಂಗನ" ಆಚರಣೆಗೆ ಉಪಯೋಗಿಸುತ್ತಾರೆ. ಕಾಡುಕಲ್ಲಿನ ಸುತ್ತಮುತ್ತ ಸಗಣಿಯಿಂದ ಸಾರಿಸಿ ಸ್ವಚ್ಛಮಾಡುತ್ತಾರೆ. ನಂತರ ಹೋಳಿಗೆ ಸಂಬಂಧಿಸಿದ ಆಚರಣೆಗಳು ಶಿಲೆಂಗನ ಸುತ್ತಮುತ್ತ ನಡೆಯುತ್ತದೆ. ಬಯಲಿನಲ್ಲಿ ಪ್ರತಿಷ್ಟಾಪಿಸಿದ ಈ ಕಾಮಣ್ಣನ ಕಲ್ಲಿನ ಎದುರಿಗೆ ಕಾಮಣ್ಣನ ಗಣೆಯನ್ನು ನೆಡುತ್ತಾರೆ. ಈ ಗಣೆಯನ್ನು ಕಾಡಿನ ಮರದಿಂದ ರೂಪಿಸಿ ಹಬ್ಬ ಮುಗಿದನಂತರ ಇದನ್ನು ಮಾರಿ ಅದರಿಂದ ಬರುವ ಹಣದಿಂದ ಊರಿನ ಕೆಲಸಕ್ಕೆ ಉಪಯೋಗಿಸುತ್ತಾರೆ. ಗಂಡಸರು ಹೊಸ ಧೋತರ, ಕೆಂಪು ರುಮಾಲು ಅಂಗಿ ಹಾಕಿಕೊಂಡು ಕಾಮಣ್ಣನನ್ನು ಇಟ್ಟಿರುವ ಜಾಗ್ಕಕೆ ಬರುತ್ತಾರೆ. ಹೆಂಗಸರು ಕಳಸ, ಕನ್ನಡಿ ತೆಗೆದುಕೊಂಡು ಬೆಲ್ಲದ ಹುಗ್ಗಿ ಹೋಳಿಗೆ ಮಾಡಿಕೊಂಡು ಕಾಮನಕಲ್ಲಿಗೆ ಎಡೆಹಿಡಿಯಲು ತರುತ್ತಾರೆ. ಹಾಗೂ ದೀಪ ಬೆಳಗಿ ಅರಿಶಿಣ ಕುಂಕುಮವನ್ನು ಕಲ್ಲಿಗೆ ಹಚ್ಚುತ್ತಾರೆ. ಹೋಳಿ ಹಬ್ಬದ ಆಚರಣೆಯ ಸಂದರ್ಭದಲ್ಲಿ ಯಡಿಗ್ಯನ ಮನೆಯಲ್ಲಿ ಇರುವ 'ತಲ್ವಾರ್'ನ್ನು ತಂದು ಪೂಜೆಮಾಡಿ ಎಲ್ಲರೂ ಅದನ್ನು ಮುಟ್ಟುತ್ತಾರೆ. ತಲ್ವಾರ್ ಹಿಡಿದ ವ್ಯಕ್ತಿಯ ಮೈಮೇಲೆ ದೈವ ಆಹ್ವಾನೆಯಾಗುತ್ತದೆ. ಆ ವ್ಯಕ್ತಿ ಮೈನಡಿಗಿಸುತ್ತಾ ತಲ್ವಾರ್ ಹಿಡಿದು ಕುಣಿಯುತ್ತಾ ತಿರುಗುತ್ತಾನೆ. ಯಡಿಗ್ಯ ಅಥವಾ ಜೋಗಿ ಕುಳಿಯ ಪೂಜಾರಿಗಳು ಹುಡುಗರೊಂದಿಗೆ ಅಷ್ಟೆ ಮರದ ಪೂಜೆಮಾಡಿ ಬರುತ್ತಾರೆ. ನಂತರ ಕಾಮನನ್ನು ಸುಡುವ 'ಶಿಲ್ಗೋ' ಆಚರಣೆ ಜರುಗುತ್ತದೆ. ವಾಡದ ಹಿರಿಕಿರಿಯರು ಈ ಆಚರಣೆಯಲ್ಲಿ ಭಾಗವಹಿಸಿ ಕಾಮದಹನ ಮಾಡಿ ಖುಷಿ ಪಡುತ್ತಾರೆ. ಹೆಂಗಸರು 'ಪುಗಡಿ' ನೃತ್ಯ ಮಾಡುತ್ತಾರೆ. ಗಂಡಸರು 'ಜಗಾ' ಕುಣಿತಮಾಡುತ್ತಾರೆ. ನಂತರ ಬೇಟೆಯಾಡಿಕೊಂಡು ಬಂದ ಮೊಲ ಮುಂತಾದವುಗಳ ಜೊತೆಗೆ ಕುರಿಯ ಮಾಂಸದ ಊಟವನ್ನು ವಾಡೆಯ ಸಮಸ್ತರು ಸೇರಿ ಮಾಡುವುದು ಮತ್ತು ಮುಂಜಾನೆ ಓಕಳಿಯ ಎರಚಾಟ ಹಾಗೂ ವಾಡದ ಓಣಿಗಳ ಹುಡಿಮಣ್ಣಿನ ತೂರಾಟ ನಡೆಯುತ್ತದೆ. ಹುಡುಗರು ಗಂಡಸರು ಹಾಗೂ ಕೆಲವು ಹೆಂಗಸರು ಕಳ್ಳು ಕುಡಿಯುತ್ತಾರೆ. ಹುಡುಗರು ಹೋಳಿ ಹುಣ್ಣಿಮೆಯ ಹಾಡುಗಳನ್ನು ಹಾಡುತ್ತಾ ಕೋಳಿಯ ಮಾಂಸ ಭೋಜನವನ್ನು ಇದೇ ಸಂದರ್ಭದಲ್ಲಿ ಹೆಚ್ಚು ಇಷ್ಟ ಪಡುತ್ತಾರೆ.

**ವರ್ಕೂತ ಹಬ್ಬ**

ಮನೆದೇವರಿಗೆ ಪೂಜೆಸಲ್ಲಿಸುವ ಹಬ್ಬವನ್ನು ವರ್ಕೂತ ಹಬ್ಬವೆಂದು ಕರೆಯುತ್ತಾರೆ. ಗೌಳಿಗರು ತಮಗೆ ಅನುಕೂಲವಾದ ದಿನದಂದು ತಮ್ಮ ತಮ್ಮ ಮನೆದೈವವನ್ನು ಭಕ್ತಿ ಆದರಗಳಿಂದ ಪೂಜಿಸುವ ಹಬ್ಬ ವರ್ಕೂತ. ಸಸಿ ಬಾಳೆಯ ಗಿಡಗಳನ್ನು ಕಡಿದು ದೇವರ ಪಕ್ಕದಲ್ಲಿ ನಿಲ್ಲಿಸಿ ತಳಿರುತೋರಣಗಳಿಂದ

ಅಲಂಕರಿಸಿ ಹಬ್ಬವನ್ನು ನೆರವೇರಿಸುತ್ತಾರೆ. ವಾಡದ ಪೂಜಾರಿಯಾದ ಯಡಿಗ್ಯ ಅಥವಾ ಲಾಂಬೂರ್ ಪೂಜಾವಿಧಿಯನ್ನು ನಿರ್ವಹಿಸುತ್ತಾನೆ. ಕೆಲವರು ಗೌಳಿಗರು ತಮ್ಮ ಅನುಕೂಲಕ್ಕೆ ತಕ್ಕಂತೆ ಎರಡು ಅಥವಾ ಮೂರು ವರ್ಷಗಳಿಗೊಮ್ಮೆಯೂ ವರ್ಕೂತ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬದ ಕೊನೆಯ ಭಾಗವಾಗಿ ದೇವರಿಗೆ ಕುರಿಯನ್ನು ಬಲಿಕೊಟ್ಟು ಅದರಿಂದ ಸಿದ್ಧಪಡಿಸಿದ ಆಹಾರವನ್ನು ಊಟಮಾಡಿ ಸಂತಸಪಡುವ ಹಬ್ಬ ಇದಾಗಿದೆ.

**ಮಾನವಮಿ (ಮಹಾನವಮಿ)**

ಗೌಳಿಗರು ಸಂಭ್ರಮದಿಂದ ಆಚರಿಸುವ ಹಬ್ಬಗಳಲ್ಲಿ ಮಾನವಮಿ ಅಥವಾ ದಸರಾ ಹಬ್ಬವು ಒಂದು. ಗೌಳಿಗರು ಹೊಸಬಟ್ಟೆ ಬರೆಗಳನ್ನು ಹಾಕಿಕೊಂಡು ಸಂಭ್ರಮಪಡುವ ಹಬ್ಬ ಇದು. ಈ ಹಬ್ಬ ಸಾಮಾನ್ಯವಾಗಿ ಹನ್ನೊಂದು ದಿನಗಳವರೆಗೆ ನಡೆಯುತ್ತದೆ, ಗೌಳಿಗರು ಉಪವಾಸದ ವ್ರತಾಚರಣೆ ಹಾಗೂ ಮಡಿ ನೇಮಗಳ ಮೂಲಕ ಆಚರಿಸುವ ಬಹು ಮುಖ್ಯವಾದ ಹಬ್ಬ. ಈ ಸಂದರ್ಭದಲ್ಲಿ ಮಾಂಸಾಹಾರ ಹಾಗೂ ಕುಡಿಯುವುದನ್ನು ಬಿಟ್ಟು ವೃತವನ್ನು ಆಚರಿಸುತ್ತಾರೆ. ಮಜ್ಜಿಗೆ, ಮೊಸರು, ಹಾಲು, ಜೇನುತುಪ್ಪವನ್ನು ಸೇವಿಸುತ್ತಾರೆ. ಹಾಗೂ ಹಣ್ಣು-ಹಂಪಲನ್ನು ತಿನ್ನುತ್ತಾರೆ. ಮನೆಯ ದೈವದ ಜೊತೆಗೆ ವಿಠೋಬನನ್ನೂ ಪೂಜಿಸಿ ಪಾಯಸ, ಕಾಯಿಹಾಲು ಬೆಲ್ಲ ಸೇರಿಸಿ ಮಾಡಿದ ಅಂಬಲಿಯನ್ನು ದೇವರಿಗೆ ಸಲ್ಲಿಸುತ್ತಾರೆ. ಗಂಗಾಪೂಜೆ ಮಾಡುತ್ತಾರೆ. ತಮ್ಮ ಮನೆಯ ದೈವಗಳನ್ನು ಅವುಗಳ ಮೂರ್ತಿಗಳನ್ನು ಹೊಳೆಗೆ ತೆಗೆದುಕೊಂಡು ಹೋಗಿ ತಾಮ್ರದ ಬಿಂದಿಗೆಯಲ್ಲಿ ನೀರನ್ನು ತುಂಬಿಕೊಂಡು ಬಂದು ಪೂಜಿಸುತ್ತಾರೆ.

ಬನ್ನಿತರಲು ಪಕ್ಕದ ಕಾಡಿಗೆ ಯಡಿಗ್ಯ ಮತ್ತು ಗಂಡಸರು ಹಾಗೂ ಗಂಡುಮಕ್ಕಳು ಹೋಗುತ್ತಾರೆ. ಈ ಕಾರ್ಯಕ್ರಮಕ್ಕೆ 'ಮಾರ್ಗಿಪಾಟಿ' ಎಂದು ಕರೆಯುತ್ತಾರೆ. ಢೋಲ್, ತಾಳ, ಗಂಗಾಳ ಬಾರಿಸುತ್ತಾ ಖಡ್ಗ ಹಿಡಿದ ಯಡಿಗ್ಯನನ್ನು ವಾಡೆಯ ಜನರು ಹಿಂಬಾಲಿಸುತ್ತಾರೆ, ಬನ್ನಿಮರದ ಸುತ್ತು ಬಿಳಿದಾರವನ್ನು ಐದು ಸುತ್ತು ಸುತ್ತಿ ಮರವನ್ನು ಸುತ್ತುತ್ತಾರೆ. ಬನ್ನಿಮರವನ್ನು ಗೌಳಿಗರು ಬಂಗಾರದ ಮರವೆಂದೂ ಕರೆಯುತ್ತಾರೆ. ತೆಂಗಿನಕಾಯಿಯನ್ನು ಗಿಡದ ಹತ್ತಿರ ಇಟ್ಟು ವೀಳ್ಯೆದ ಎಲೆ, ಭಂಡಾರ ಹಾಕಿ ದೊಡ್ಡ ಅಡಿಕೆ ಇಡುತ್ತಾರೆ, ನಂತರ ಮಜ್ಜಿಗೆಯ ಕೊಡವನ್ನು ಇಟ್ಟು ಚಂಡಿಹೂವನ್ನು ಅದರ ಮೇಲಿಟ್ಟು ಪೂಜಿಸುತ್ತರೆ. ಬನ್ನಿಮರಕ್ಕೆ ಅರಿಶಿಣ ಕುಂಕುಮ ಹಚ್ಚಿ ನಂತರ ದಾರ ಸುತ್ತುತ್ತಾರೆ. ಕೊನೆಗೆ ಯಡಿಗ್ಯನು ಬನ್ನಿಗಿಡದ ಟೊಂಗೆಯನ್ನು ತನ್ನ ಖಡ್ಗದಿಂದ ಕತ್ತರಿಸುತ್ತಾನೆ. ಅದು ನೆಲಕ್ಕೆ ಬೀಲದಂತೆ ಪಂಚೆಯಿಂದ ಹಿಡಿದು ಬನ್ನಿಯನ್ನು ತರುತ್ತಾರೆ. ಯಡಿಗ್ಯ ಹಾಗೂ ಇತರ ಜನರು ವಾಡೆಗೆ ವಾಪಾಸು ಬಂದನಂತರ ಇತರ ಕಾರ್ಯಕ್ರಮಗಳು ಜರುಗುತ್ತವೆ.

ಗೌಳಿಗಳ ಕುಳಿಯ ಮುಖ್ಯಸ್ಥನಾದ ಯಡಿಗ್ಯನ ಮನೆಯಲ್ಲಿ ಕಾರ್ಯಕ್ರಮಗಳು ಜರುಗುತ್ತವೆ. ಮಜ್ಜಿಗೆಯ ಕುಂಭ ಹೊತ್ತ ಮಹಿಳೆಯರು ವಾಡೆಯ ಎಲ್ಲ ಮನೆಗಳಿಂದ ಯಡಿಗ್ಯನ ಮನೆಗೆ ಬರುತ್ತಾರೆ. ಹೈನುಗಾರಿಕೆಯೇ ಬೆನ್ನೆಲುಬಾದ ಗೌಳಿಗರಲ್ಲಿ ನೇವೇದ್ಯಕ್ಕೆ ಮಜ್ಜಿಗೆಗೆ ಪ್ರಥಮ

ಪ್ರಾಶಸ್ತವಿರುತ್ತದೆ. ಎಲ್ಲರೂ ಸಾಲಾಗಿ ಕುಂಬ ಹೊತ್ತುಕೊಂಡು ಬಂದು ಯಡಿಗ್ಯನ ಮನೆಯ ಮುಂದಿಟ್ಟಿರುವ ಮಣ್ಣಿನ ದೊಡ್ಡ ಹರವಿಗೆ ಸುರಿಯುತ್ತಾರೆ. ಮಹಿಳೆಯರು ಕುಂಬ ಹೊತ್ತು ಯಡಿಗ್ಯನ ಮನೆಗೆ ಬರುವಾಗ ಮನೆಯ ಮುಂಬಾಗಿಲಿನಲ್ಲಿ ಮಹಿಳೆಯರ ತಲೆಯ ಮೇಲೆ ಇಬ್ಬರು ಪುರುಷರು ಬಿಳಿಪರದೆ ಹಿಡಿದು ಅವರು ಯಡಿಗ್ಯನ ಮನೆ ಪ್ರವೇಶಿಸುವಂತೆ ಮಾಡುತ್ತಾರೆ. ಯಡಿಗ್ಯನ ಮನೆಯಲ್ಲಿ ತಾಮ್ರದ ತಂಬಿಗೆ ತುಂಬಿ ಅದರ ಮೇಲೆ ಕಾಯಿಗಳನ್ನು ಇಟ್ಟು ಬಂಡಾರ ಕುಂಕುಮ ಹಚ್ಚಿ ಪೂಜಿಸುತ್ತಾರೆ. ಚೌಕಾಕಾರವಾಗಿ ಕಂಬಳಿಯನ್ನು ಹಾಕಿ ಅದರ ಮೇಲೆ ಐದು ತೆಂಗಿನಕಾಯಿ ಗಳನ್ನಿಟ್ಟು ತಾಮ್ರದ ತಂಬಿಗೆಯ ಕಳಸವನ್ನಿಟ್ಟು ಅಕ್ಕಿಯನ್ನು ಹಾಕಿ, ಕುಂಕುಮ ಭಂಡಾರದ ರಂಗೋಲಿ ಹಾಕಿ ಚಂಡಿಹೂವುಗಳಿಂದ ಪೂಜಿಸುತ್ತಾರೆ. ಯಡಿಗ್ಯನ ಸಾಂಪ್ರದಾಯಿಕ ತಲ್ವಾರ್‌ನ್ನು ಪೂಜೆಯ ಸ್ಥಳದಲ್ಲಿಟ್ಟಿರುತ್ತಾರೆ. ಪೂಜೆ ನಡೆಯುವಾಗ ಜಾಂತೆಲೋಕ್‌ಗಳನ್ನೊಳಗೊಂಡಂತೆ ವಾಡೆಯ ಜನ ಮಜ್ಜಿಗೆ ಹಾಗೂ ಬೆಣ್ಣೆಯನ್ನು ಮನೆಯ ಬೆಂಗಟಿಗೆ ಹಾಗೂ ಎಮ್ಮೆ ಕಟ್ಟುದೊಡ್ಡಿಗೆ ಉಗ್ಗುತ್ತಾರೆ. ತಾವು ಉಪಯೋಗಿಸುವ ಉಪಕರಣಗಳ ಪೂಜೆಯನ್ನು ಮಾಡಿ ದೈವಾರಾಧನಾ ಕಾರ್ಯಕ್ರಮಕ್ಕೆ ಬರುತ್ತಾರೆ, ಮನೆಯ ಮಕ್ಕಳಾದಿಯಾಗಿ ಯಡಿಗ್ಯನ ಮನೆಗೆ ಬರುತ್ತಾರೆ. ಎಲ್ಲ ಕುಳಿತುಕೊಂಡು ಕಾರ್ಯಕ್ರಮ ವೀಕ್ಷಿಸುತ್ತಾರೆ. ಹುಡುಗರು, ನಡುವಯಸ್ಕರು ದೋಲ್, ತಾಳ, ಗಂಗಾಳ ಬಾರಿಸುತ್ತಾ ಲಯಬದ್ಧವಾಗಿ ಕುಣಿಯುತ್ತಾರೆ. ಕುಣಿತ ಹಾಗೂ ವಾದ್ಯಗಳ ಲಯಬದ್ಧ ಧ್ವನಿಯ ಮಧ್ಯೆ ಯಡಿಗ್ಯ ಹಾಗೂ ಅವನ ಪಕ್ಕದಲ್ಲಿ ಕುಳಿತ ಕೆಲವರ ಮೇಲೆ ದೈವ ಆಹ್ವಾನೆಗೊಳ್ಳುತ್ತದೆ. ನಡುಗುತ್ತಾ ಚೀರುತ್ತಾ, ದೈವ ಆವರಿಸಿಕೊಂಡ ಯಡಿಗ್ಯ ಹಾಡಿನೋಪಾದಿಯಲ್ಲಿ ಮಾತನಾಡುತ್ತಾ ಊರಿನ ಆಗುಹೋಗುಗಳ ಭವಿಷ್ಯ ನುಡಿಯುತ್ತಾನೆ. ಎಲ್ಲರೂ ಭಯ ಹಾಗೂ ಶ್ರದ್ಧೆಗಳಿಂದ ಯಡಿಗ್ಯನ ಮಾತನ್ನು ಕೇಳುತ್ತಾರೆ. ನಂತರ ನೆರೆದ ವಾಡೆಯ ಜನ ವಿಶೇಷವಾಗಿ ನಿರ್ಮಿಸಿದ ಚಪ್ಪರದಲ್ಲಿ ಸಾಲಾಗಿ ಕುಳಿತು ಮಜ್ಜಿಗೆ ಅನ್ನ ಊಟಮಾಡುತ್ತಾರೆ. ಯಡಿಗ್ಯನ ಮನೆಯಲ್ಲಿ ಸಂಗ್ರಹಿಸಿದ ಮಜ್ಜಿಗೆಯನ್ನೇ ಉಪಯೋಗಿಸಿ ಎಲ್ಲರಿಗೂ ಊಟಕ್ಕೆ ಬಡಿಸುತ್ತಾರೆ. ತಲ್ವಾರಿನಿಂದ ಹೊಟ್ಟೆಗೆ ಹೊಡೆದುಕೊಳ್ಳುವ ಮೈಗೆ ಇರಿದುಕೊಳ್ಳುವ ಆವೇಶಭರಿತವಾದ ಕೆಲವು ಆಚರಣೆಗಳು ನಡೆಯುತ್ತವೆ. ಇಡೀ ವಾಡೆಯ ಜನ ಈ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ.

ದೀಪಾವಳಿ

ದೀಪಾವಳಿ ಕೂಡ ಗೌಳಿಗರು ಆಚರಿಸುವ ಪ್ರಮುಖ ಹಬ್ಬಗಳಲ್ಲಿ ಒಂದಾಗಿದೆ. ಪಾಡ್ಯದ ದಿನ ಮನೆಯ ದೈವಕ್ಕೆ ಪೂಜೆ ಸಲ್ಲಿಸುತ್ತಾರೆ. ಆಕಳು ಎಮ್ಮೆಗಳನ್ನು ಪೂಜೆ ಮಾಡುತ್ತಾರೆ. ಮನೆ ಹಾಗೂ ಎಮ್ಮೆ ಕಟ್ಟುವ ದಡ್ಡಿಯ ನೆಲವನ್ನು ಸಗಣಿಯಿಂದ ಸಾರಿಸಿ ಎಮ್ಮೆಗಳ ಮೈ ತೊಳೆದು ಕೋಡುಗಳಿಗೆ ಬಣ್ಣ ಹಚ್ಚಿ ಸಿಂಗಾರ ಮಾಡುತ್ತಾರೆ. ತಾವು ಸಾಕುವ ಪ್ರಾಣಿಗಳನ್ನು ಪೂಜಿಸುವ ಕಾರ್ಯಕ್ರಮ ದೀಪಾವಳಿಯ ಮಹತ್ವದ ಕಾರ್ಯಕ್ರಮವಾಗಿದೆ. ಮೊಸರು ಅಕ್ಕಿಯನ್ನು ಬೆರೆಸಿ ಅಕ್ಷತೆ ಮಾಡಿಕೊಂಡು ಸಿಂಗರಿಸಿದ ಪ್ರಾಣಿಗಳ ಪಾದಪೂಜೆ ಮಾಡುವ ಆಚರಣೆ ನಡೆಯುತ್ತದೆ. ಕೊಟ್ಟಿಗೆಗಳ ಕಂಬಗಳಿಗೂ ತಾವು ಉಪಯೋಗಿಸುವ ಉಪಕರಣಗಳಿಗೂ ಅಂದು ಪೂಜೆ ನೆರವೇರಿಸುತ್ತಾರೆ. ಸಾಮಾನ್ಯವಾಗಿ

ಶ್ರೇಣಿಯಲ್ಲಿ ಉನ್ನತ ಕುಳಗಳೆಂದು ಗೌರವಿಸುವ ಯಡಿಗ್ಯ, ಲಾಂಬೋರ್, ತೋರುವತ್ ಕುಳಗಳಿಗೆ ಸೇರಿದ ಮನೆಯವರು ಬೆಳಿಗ್ಗೆ ಎಮ್ಮೆ ಆಕಳ ಪೂಜೆ ಮಾಡಿದರೆ ಉಳಿದ ಕುಳಗಳಿಗೆ ಸೇರಿದವರು ಗೋಧೂಳಿಯ ಸಮಯದಲ್ಲಿ ಪೂಜಿಸುತ್ತಾರೆ. ಗೌಳಿಗರು ದೀಪಾವಳಿಯಿಂದ ತಮ್ಮ ಹಟ್ಟಿಯ ದನಗಳನ್ನು ಸಿಂಗರಿಸಿ ಓಡಿಸುತ್ತಾರೆ. ಇದಕ್ಕೆ 'ಪಳವಾಜಿ' ಎಂದು ಕರೆಯುತ್ತಾರೆ. ಈವರೆಗೆ ವಿವರಿಸಿದ ಹಬ್ಬಗಳಲ್ಲದೆ ಶಿವರಾತ್ರಿ, ನಾಗರ ಪಂಚಮಿಯ ಬೆಂದೂರ್, ಹಾಗೂ ರಕ್ಷಾಬಂಧನದ 'ಪವತೇ' ಗೌಳಿಗರ ಹಬ್ಬಗಳು ನೆರವೇರುತ್ತವೆ. ಗೌಳಿಗರು ಸಾಮಾನ್ಯವಾಗಿ ಎಲ್ಲಾ ಹಬ್ಬಗಳನ್ನೂ ಆಚರಿಸುತ್ತಾರೆ. ಸಾಮಾನ್ಯವಾಗಿ ಗೌಳಿಗರ ಎಲ್ಲ ಹಬ್ಬಗಳೂ ಸಾಮೂಹಿಕ ಸ್ವರೂಪದವುಗಳಾಗಿದ್ದು ಅವುಗಳಲ್ಲಿ ವಾಡೆಯ ಸಮಸ್ತರೂ ಪಾಲ್ಗೊಳ್ಳುವ ಮೂಲಕ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಂಡು ಬರುವ ಪ್ರಯತ್ನ ಮಾಡುತ್ತಿದ್ದಾರೆ.

**ಹಿರಿಯಹಬ್ಬ**

ದೀಪಾವಳಿಗೆ ಎರಡುವಾರ ಮೊದಲು ಗೌಳಿಗರು ಆಚರಿಸುವ ಹಬ್ಬ ಹಿರಿಯರ ಹಬ್ಬ. ಸಾಮಾನ್ಯವಾಗಿ ಅಮಾವಾಸ್ಯೆಯ ದಿನ ಒಂದು ವರ್ಷ ಈ ಹಬ್ಬವನ್ನು ಆಚರಿಸಿದರೆ ಮುಂದಿನ ಸಲ ಹುಣ್ಣಿಮೆಯಾದ ನಂತರದ ಐದು ದಿನಗಳಿಗೆ ಈ ಹಬ್ಬವನ್ನು ಆಚರಿಸುತ್ತಾರೆ. ಪ್ರತಿವರ್ಷವೂ ಈ ಹಬ್ಬವನ್ನಾಚರಿಸುವ ತಿಥಿಗಳು ಬೇರೆ ಬೇರೆಯಾಗಿರುತ್ತವೆ. ಒಂಬತ್ತು ಹತ್ತು ಹನ್ನೆರಡು ದಿನಗಳನ್ನು ಬಿಟ್ಟು ಬರುವ ವರ್ಷಗಳಲ್ಲಿ ಈ ಹಬ್ಬವನ್ನು ಆಚರಿಸುವುದು ಸಂಪ್ರದಾಯ. ತಮ್ಮೊಂದಿಗಿಲ್ಲದ ತಮ್ಮ ಕುಲದ ಹಿರಿಯರನ್ನು ನೆನಪಿಸಿಕೊಳ್ಳುವ, ಆ ಮೂಲಕ ತನ್ನ ಕುಲದ ಹೆಚ್ಚುಗಾರಿಕೆಯನ್ನು ಸಂಭ್ರಮಿಸುವ ಹಬ್ಬ ಹಿರಿಯರ ಹಬ್ಬವಾಗಿದೆ. ಈ ಹಬ್ಬವನ್ನು ಆಚರಿಸುವಾಗ ಗೌಳಿಗರು ತಮ್ಮ ಬಂಧುಬಾಂದವರನ್ನು ಕರೆತಂದು ಸಂಭ್ರಮ, ಸಡಗರಗಳಿಂದ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಹಬ್ಬಕ್ಕೆ ಬರುವ ಸಂಬಂಧಿಕರ ಪೂಜೆ ನಡೆಯುತ್ತದೆ. ಮನೆಯ ಹಿರಿಯ ಆಚರಣೆಗೆ ಬಂದ ಬಂಧುಗಳ ಕಾಲನ್ನು ಕೈಬೆರಳುಗಳನ್ನು ತೊಳೆದು ಮನೆಯ ಪ್ರವೇಶದ ಹೊಸ್ತಿಲಲ್ಲಿ ಕುಳ್ಳಿರಿಸಿ ಪೂಜಿಸುತ್ತಾನೆ. ಸ್ತ್ರೀ ಪುರುಷರು ಈ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಸೊಪ್ಪುಗಳ ಪಲ್ಯವನ್ನು ಮಾಡುವುದು ಹಾಗೂ ಅಕ್ಕಿಗೆ ಮೊಸರನ್ನು ಕಲೆಸಿ ಮನೆಯ ಮೇಲೆ ಇಟ್ಟು ಕಾಗೆಯನ್ನು ಕರೆಯುವುದು ಕಾಗೆ ಮೊಸರು ಅಕ್ಕಿಯನ್ನು ತಿಂದು ಹೋದರೆ ತಮ್ಮ ಕುಲದ ಹಿರಿಯರು ಕಾಗೆಯ ರೂಪದಲ್ಲಿ ಬಂದು ಹೋಗುತ್ತಾರೆ ಎಂದು ನಂಬುತ್ತಾರೆ.

ಒಂದು ವೇಳೆ ಕಾಗೆ ಬಂದು ಆಹಾರವನ್ನು ಸೇವಿಸದಿದ್ದರೆ ಏನೋ ತಪ್ಪು ಸಂಭವಿಸಿತೆಂದು ತಿಳಿದು ಊರಿನ ಜಾಂತೆಲೋಕ್ ಅವರಿಗೆ ತಪ್ಪು ಕಾಣಿಕೆ ಸಲ್ಲಿಸುತ್ತಾರೆ. ನಂತರ ಕಾಗೆ ಬಂದು ಆಹಾರ ಸೇವಿಸುತ್ತದೆ ಎಂಬ ನಂಬಿಕೆ ಅವರಿಗೆ. ಸಂಜೆ ಮನೆಯ ದೇವರುಗಳ ಪೂಜೆ ಮಾಡಿ ಕಾಯಿ ಹಣ್ಣು ಮೊಸರನ್ನದ ನೈವೇದ್ಯ ಮಾಡಿ ಕಾಡಿನ ಸೊಪ್ಪಿನ ಪಲ್ಯವನ್ನು ಎಡೆ ಹಾಕುತ್ತಾರೆ. ರಾತ್ರಿ ಬಂಧುಬಳಗದವು ಸೇರಿ ಊಟ ಮಾಡಿ ಕಳ್ಳನ್ನು ಕುಡಿದು ಸಂತಸ ಪಡುವರು.

## ೨.೯ ಮಹಿಳೆಯರ ನಂಬಿಕೆಗಳು ಮತ್ತು ಆಚರಣೆಗಳು

ನಂಬಿಕೆಗಳು ಸಮುದಾಯದ ಭಾವನಾತ್ಮಕ ಮುಖವಾದರೆ ಆಚರಣೆಗಳು ಅದರ ಕ್ರಿಯಾತ್ಮಕ ಮುಖ. ಆದ್ದರಿಂದ ನಂಬಿಕೆ ಮತ್ತು ಆಚರಣೆಗಳಿಗೆ ಅನ್ಯೋನ್ಯ ನಂಟು. ಅವು ಪರಸ್ಪರ ಒಂದರ ಬೆನ್ನಿಗೆ ಮತ್ತೊಂದು ಇರುತ್ತವೆ. ನಂಬಿಕೆಗಳು ಸಾರ್ವತ್ರಿಕ. ಆದರೂ ಪ್ರಾದೇಶಿಕ ಗುಣಲಕ್ಷಣಗಳನ್ನು ಹೊಂದಿರುತ್ತವೆ. ಹಾಗೆಯೇ ಭಿನ್ನತೆ, ಸಮಾನತೆ ಮತ್ತು ಪರಸ್ಪರ ವೈರುಧ್ಯಗಳನ್ನು ಹೊಂದಿರಲು ಸಾಧ್ಯ. ಆಯಾ ಪ್ರದೇಶದ ಭೌಗೋಳಿಕ ಹಿನ್ನೆಲೆ, ಸಾಮಾಜಿಕ ಒತ್ತಡ, ಜೀವನ ಪರಿಸರ, ಆಲೋಚನಾ ವಿಧಾನಗಳು ನಂಬಿಕೆ ಮತ್ತು ಆಚರಣೆಗಳ ಮೇಲೆ ಪ್ರಭಾವ ಬೀರುತ್ತವೆ. ಮಲೆನಾಡಿನ ಜನಪದ ನಂಬಿಕೆ ಆಚರಣೆಗಳು ಈ ಸಂಗತಿಗಳಿಂದ ಹೊರತಾಗಿ ಉಳಿದಿಲ್ಲ.

ಮಲೆನಾಡಿನ ಗೌಳಿಗ ಸಮುದಾಯಗಳಲ್ಲಿ ಮಗುವಿನ ಹುಟ್ಟು, ಯೌವನಾವಸ್ಥೆ, ಮದುವೆ, ಸಾವು, ಬೇಸಾಯ, ಬೇಟೆ, ದೇವರು, ದೆವ್ವ ಮತ್ತಿತರ ವಿಧಿ ನಿಷೇಧಗಳಿಗೆ ಸಂಬಂಧಿಸಿದ ನಂಬಿಕೆ ಮತ್ತು ಆಚರಣೆಗಳು ಪರಂಪರಾಗತವಾಗಿ ಬೆಳೆದು ಬಂದಿವೆ. ಇವು ವಿಶ್ವದ ಅನೇಕ ಮೂಲನಿವಾಸಿಗಳು ಹಾಗೂ ದ್ವೀಪಸ್ತೋಮದಲ್ಲಿ ವಾಸಿಸುವ ಬುಡಕಟ್ಟು ಜನಾಂಗದವರ ನಂಬಿಕೆಗಳನ್ನು ಹೋಲುವಂತಿವೆ. ಪ್ರಾಚೀನ ಮಾನವನ ಬೌದ್ಧಿಕ ಶೈಶವಾವಸ್ಥೆ ಮತ್ತು ತರ್ಕಹೀನ ನಂಬಿಕೆಗಳ ಮೇಲೆ ಇವು ಬೆಳಕು ಚೆಲ್ಲುವಂತಿವೆ.

ಭೂತಪ್ರೇತಗಳು ಗೌಳಿಗರ ಬದುಕಿನಲ್ಲಿ ಅನೇಕ ಭಯಮೂಲವಾದ ನಂಬಿಕೆಗಳ ಹುಟ್ಟಿಗೆ ಕಾರಣವಾಗಿವೆ. ತೀರಿಕೊಂಡ ಹಿರಿಯರು ಭೂತವಾಗಿ ಕುಟುಂಬದ ರಕ್ಷಣೆಯ ಕಾರ್ಯದಲ್ಲಿ ನಿರತ ರಾಗಿರುತ್ತಾರೆ. ತೋಟ ಗದ್ದೆಗಳಲ್ಲಿನ ಫಸಲು ರಕ್ಷಣೆಯಲ್ಲಿ, ಅವುಗಳು ಕಳ್ಳತನವಾಗದಂತೆ ತಡೆಯುವಲ್ಲಿ ಭೂತಗಳ ಪಾತ್ರವಿರುತ್ತದೆ. ರಾತ್ರಿಯ ಕಾಲದಲ್ಲಿ ಅದು ಎಚ್ಚರವಾಗಿದ್ದು ಮನೆಯ ಯಜಮಾನನಿಗೆ ಮುಂದೊದಗುವ ಆಪತ್ತುಗಳ ಸೂಚನೆ ಕೊಡುತ್ತದೆಂದು ನಂಬಲಾಗುತ್ತದೆ. ಈ ನಂಬಿಕೆಗಳ ಸಾಕ್ಷ್ಯರೂಪವಾಗಿ 'ಭೂತದ ನಡೆ'ಯ ಜಾಗಗಳು, ಭೂತದ ಬನ, ಭೂತಾರಾಧನೆಗಳು ರೂಢಿಯಲ್ಲಿವೆ. ಕುಟುಂಬದ ಆಗುಹೋಗುಗಳಲ್ಲಿ ಭೂತದ ಕೈವಾಡ ವಿಶೇಷವಾಗಿರುತ್ತದೆ. ಗರ್ಭಿಣಿಯರಾದ ಹೆಣ್ಣುಮಕ್ಕಳ ಶರೀರವನ್ನು ಭೂತ ಹೊಕ್ಕಿರುತ್ತದೆಂಬ ಭಯದಿಂದ ಅದನ್ನು ಸಂತೃಪ್ತಿಗೊಳಿಸಲು ಐದು ಅಥವಾ ಏಳನೆಯ ತಿಂಗಳನಲ್ಲಿ ವಿಶೇಷ ಅಡುಗೆ ತಯಾರಿಸಿ 'ಸೀಮಂತ' ಆಚರಿಸಲಾಗುತ್ತದೆ. ಹಚ್ಚೆ ಹಾಕಿಸಿಕೊಂಡರೆ ಗರ್ಭಪಾತ ಆಗುವುದಿಲ್ಲ ಎಂಬ ನಂಬಿಕೆ ಇದೆ.

ಸ್ವಾಭಾವಿಕವಾದ ಅನೇಕ ಘಟನೆಗಳಿಗೆ ಅನರ್ಥಗಳನ್ನು ಕಲ್ಪಿಸಿ ಆಚರಣೆಗಳನ್ನು ರೂಪಿಸ ಲಾಗುತ್ತದೆ. ಋತುಮತಿಯಾದ ಹೆಣ್ಣು ಮನೆ ಬಳಕೆಯ ವಸ್ತುಗಳನ್ನು ಮುಟ್ಟಬಾರದು. ಸಾವಿನ ಸುದ್ದಿ ಕೇಳಬಾರದು. ಹಸುವಿನ ಹಾಲು ಕುಡಿದರೆ ಹಸಿವು ಇಂಗಿ ಹೋಗುತ್ತದೆ. ಒಸಗೆ ಸಮಾರಂಭದ ದಿನ ತುಳಸಿಕಟ್ಟೆಯ ಮೇಲಿನ ಕಳಶದ ದೀಪ ಆರಬಾರದು. ಆರಿದರೆ ಕೇಡು.

ಹೀಗೆ ಗೌಳಿಗರಲ್ಲಿ ಪ್ರಚಲಿತವಾದ ಅನೇಕ ಜನಪದ ಕಲೆ, ಹಬ್ಬ ಇವುಗಳಿಗೆ ಅಲೌಕಿಕ ನಂಬಿಕೆಗಳು ತಳಕು ಹಾಕಿಕೊಂಡಿರುವುದು ಕಾಣಿಸುತ್ತದೆ.

ಭೌಗೋಳಿಕ ಸಂಗತಿಗಳು, ಧಾರ್ಮಿಕ ಮತ್ತು ಆರ್ಥಿಕ ಕಾರಣಗಳು, ವ್ಯಕ್ತಿಗತ ಮನೋಧರ್ಮ ನಂಬಿಕೆಗಳ ಹಿನ್ನೆಲೆಗೆ ಇರುತ್ತವೆ. ಬಹುತೇಕ ನಂಬಿಕೆಗಳು ತರ್ಕಹೀನ ನೆಲೆಯಿಂದ ಬಂದವು. ಸಾಂಪ್ರದಾಯಿಕ ಆಚರಣೆಯಿಂದ ಮುಂದುವರಿಸಲ್ಪಟ್ಟವು. ಆದರೆ ಎಲ್ಲಾ ನಂಬಿಕೆಗಳನ್ನು ಸಾರಸಗಟಾಗಿ ನಿರುಪಯುಕ್ತವೆಂದು ಹೇಳಲು ಬರುವುದಿಲ್ಲ, ಕೆಲವಾದರೂ ನಂಬಿಕೆಗಳಲ್ಲಿ ಆರೋಗ್ಯ ಸಂಬಂಧಿಯಾದ ಹಾಗೂ ಮನೋವೈಜ್ಞಾನಿಕವಾದ ಸತ್ಯದ ಎಳೆಗಳು ಕ್ರೋಢೀಕರಣಗೊಂಡಿರಲು ಸಾಧ್ಯ. ಆಧುನಿಕ ವಿದ್ಯಾಭ್ಯಾಸ ಮತ್ತು ವೈಚಾರಿಕ ಚಿಂತನೆಗಳು ಇಂಥ ಜನಪದ ನಂಬಿಕೆಗಳ ಬೇರನ್ನು ಸ್ವಲ್ಪಮಟ್ಟಿಗೆ ಅಲುಗಾಡಿಸುತ್ತವೆ. ಆದರೂ ನಂಬಿಕೆಗಳು ಹೊಸರೂಪ ಮತ್ತು ರೀತಿಗಳಲ್ಲಿ ಜೀವನವನ್ನು ಪ್ರವೇಶಿ ಸುತ್ತಲೇ ಇರುತ್ತವೆ.

**೨.೧೦ ಮಹಿಳೆಯರ ಕುಶಲಕಲೆಗಳು**

ಸಾಮಾನ್ಯವಾಗಿ ಸಂಗೀತ, ನೃತ್ಯ, ಚಿತ್ರಕಲೆಗಳನ್ನು ಲಲಿತಕಲೆಗಳು ಎಂದೂ ಶಿಲ್ಪವೇ ಮೊದಲಾದ ಉಳಿದವನ್ನು ಕುಶಲಕಲೆಗಳು ಎಂದೂ ಕರೆಯುವುದು ವಾಡಿಕೆ. ಎಂದರೆ ಭಾವಪ್ರಧಾನ ವಾದುದು ಲಲಿತಕಲೆ ಎಂದೂ, ವಸ್ತು ಪ್ರಧಾನವಾದುದು ಕುಶಲಕಲೆ ಎಂದೂ ಸ್ಥೂಲವಾಗಿ ವಿಭಾಗಿಸಲಾಗಿದೆ. ಅಂತೆಯೇ ಒಟ್ಟು ಭಾರತೀಯ ಕಲೆಗಳನ್ನು ೬೪ ಸಂಖ್ಯೆಯಲ್ಲಿ ಪಟ್ಟಿ ಮಾಡಿರುವುದು ಸಾಕಷ್ಟು ಪ್ರಸಿದ್ಧ ವಿಷಯ. ಈ ಸಂಖ್ಯೆಯೂ ನಿಶ್ಚಿತವಾದುದಲ್ಲ. ಕೆಲವೊಮ್ಮೆ ಈ ಪಟ್ಟಿಯಲ್ಲಿ ಐನೂರಕ್ಕೂ ಹೆಚ್ಚು ಸಂಖ್ಯೆಯ ಕಲೆಗಳು ಸೇರ್ಪಡೆ ಯಾಗುವುದುಂಟು. ಅರವತ್ತನಾಲ್ಕು ಕಲೆಗಳು ಸಹ ಒಬ್ಬೊಬ್ಬ ಕೃತಿಕಾರರಲ್ಲಿ ಒಂದೊಂದು ರೀತಿಯಲ್ಲಿ ಒಂದೊಂದು ಕ್ರಮದಲ್ಲಿ ಇವೆ.

ಕರಕುಶಲ ಕಲೆಗಳು ಶುದ್ಧ ಕಲೆಗಳ ನೆಲೆಯಿಂದ ಜನ್ಮ ತಳೆದವುಗಳಲ್ಲ. ಅವು ದೈನಂದಿನ ಬದುಕಿನ ನೆಲೆಯಿಂದ ಹುಟ್ಟಿಕೊಂಡ ಉಪಯೋಗೀ ವಸ್ತುಗಳು. ಹಾಗಾಗಿ ಅವುಗಳ ಉಪಯೋಗವನ್ನರಿಯದ ನಾವು ಅವುಗಳಲ್ಲಿ ಕಲಾತ್ಮಕ ಅಂಶವನ್ನು ಹುಡುಕಿ ಕಲೆಗಳ ಪ್ರಾಶಸ್ತ್ಯ ನೀಡಿದ್ದೇವೆ. ಮಾನವನ ಕರಕೌಶಲ್ಯ ಸೃಜನಶೀಲವಾದುದು. ಅದರ ಜೊತೆಗೆ ಮಾನವನ ಕಲ್ಪನೆ, ಪ್ರಯೋಗಶೀಲತೆ ಮತ್ತು ತಂತ್ರ ಕೌಶಲ್ಯವೂ ಸೇರಿ ತನಗೆ, ತನ್ನ ಕುಟುಂಬಕ್ಕೆ, ಜನಾಂಗಕ್ಕೆ, ಉಪಯೋಗಕ್ಕೆ ಬೇಕಾದ ವಸ್ತು, ಉಪಕರಣ, ಪರಿಕರ, ಸಾಧನ, ಸಲಕರಣೆಗಳನ್ನು ತಯಾರಿಸಿಕೊಂಡ. ಹಾಗೆ ತಯಾರಿಸಿದ ವಸ್ತುಗಳು ತನ್ನ ಬದುಕಿನ ಅವಶ್ಯಕ ಭಾಗವಾಗಿ ದಾಖಲಾದವು. ಆ ತಯಾರಿಕೆಯಲ್ಲಿ ಅವನ ಸೌಂದರ್ಯ ಪ್ರಜ್ಞೆಯು ಮಿಳಿತಗೊಂಡು ವಸ್ತುವಿಗೊಂದು ರೂಪ, ಆಕಾರ, ವಿನ್ಯಾಸಗಳು ಸಿದ್ಧವಾದವು. ಹೀಗೆ ರೂಪುಗೊಂಡ ವಸ್ತುಗಳಲ್ಲಿ ಅವು ಪ್ರತಿಯೊಂದು ಹೊಸ ಪ್ರಯೋಗಗಳಾಗಿ ಮೈ ಪಡೆದಿರಬಹುದು. ಒಂದೇ ಉದ್ದೇಶಕ್ಕೆ ರೂಪುಗೊಂಡ ವಸ್ತು, ಒಂದೇ ಕೌಶಲ್ಯದಿಂದ ಹುಟ್ಟಿಕೊಂಡಿದ್ದರೂ ಅವು ನೂರು ನೂರು ತೆರ. ಒಂದರಂತೆ ಇನ್ನೊಂದು ಇರಲಾರದು. ಏಕೆಂದರೆ ಅವುಗಳ ರಚನೆಯ ಹಿಂದಿನ ಮನಸ್ಸು, ಕಾಲ ಬೇರೆ ಬೇರೆಯಾಗಿವೆ. ವ್ಯಕ್ತಿನಿಷ್ಠ ಕಲ್ಪನೆ ಮತ್ತು ಯುಗಧರ್ಮದ ಪ್ರಭಾವ ಅವುಗಳನ್ನು ವೈವಿಧ್ಯಪೂರ್ಣವಾಗಿಸಿದುವು. ಹೀಗೆ ಉಪಯೋಗದ ನೆಲೆಯಿಂದ ಹುಟ್ಟಿಕೊಂಡ ವಸ್ತುವಿಗೆ ಆಯಾ ನೆಲದ, ಸಂಸ್ಕೃತಿಯ ಮಾನವ ಸಮುದಾಯದ

ಆಶೋತ್ತರಗಳ ಜೊತೆಗೆ ಸಂಬಂಧವಿರುತ್ತದೆ. ಹಾಗಾಗಿ ಕರಕುಶಲ ವಸ್ತುಗಳು ಆಯಾಯ ಪ್ರದೇಶದ ಭೌತಿಕ ಸಂಸ್ಕೃತಿಯ ಕೈಗನ್ನಡಿಗಳು.

ಒಂದಾನೊಂದು ಕಾಲದಲ್ಲಿ ಜಗತ್ತಿನಾದ್ಯಂತ ಅತ್ಯಂತ ವ್ಯಾಪಕ ಹಾಗೂ ಜನಪ್ರಿಯವೂ ಆಗಿದ್ದ 'ಹಚ್ಚೆ' ಕಲೆಯ ಸಂಪ್ರದಾಯ ಇಂದಿಗೂ ನಮ್ಮ ಮಧ್ಯೆ ಜೀವಂತವಾಗಿದೆ.

ಹೆಚ್ಚೆ, ಅಚ್ಚೆ, ಹಂಚೆ, ಅಣಚೆ, ಅಂಚಿ, ಅಚ್ಚಿ, ಅಣ್ಚೆ ಎಂದು ವಿವಿಧ ಶಬ್ದರೂಪದಲ್ಲಿ ಕರೆಸಿಕೊಳ್ಳುವ ಹಚ್ಚೆ, 'ಪಚ್ಚೆ' ಎಂಬ ಪದದಿಂದ ಬಂದಿದೆ. ಹಸಿರು ಗಿಡಮೂಲಿಕೆಗಳಿಂದ ತಯಾರಿಸಿದ ರಸ ದೇಹದ ಮೇಲೆ ಹಳದಿ ಮಿಶ್ರಿತ ಹಸಿರು ಕಲೆಯನ್ನು ಶಾಶ್ವತವಾಗಿ ಉಳಿಸುವುದರಿಂದ ಅದಕ್ಕೆ ಪಚ್ಚೆ>ಹಚ್ಚೆ ಎನ್ನುವ ಹೆಸರು ಬಂದಿದೆ. 'ಅಣಚೆ' ಎಂಬ ಪದಲ್ಲಿ 'ಅಣಿ' ಎಂದರೆ tp decorate' ಎಂದರ್ಥ. ಅಲ್ಲದೇ 'ಅಣ್' ಎಂದರೆ 'ಲೇಪಿಸು' ಅಥವಾ 'ಅಂಟು' ಎಂಬ ಅರ್ಥವೂ ಇದೆ. 'ಹಚ್ಚೆ' ಎಂಬ ಪದಕ್ಕೆ ಇಂಗ್ಲಿಷನಲ್ಲಿ 'tattoo' ಎಂದು ಕರೆಯುತ್ತಾರೆ. ಈ ಪದ ಪಾಲಿನೇಷಿಯನ್ ಭಾಷೆಯಿಂದ ಬಂದಿದೆ. 'ta' ಎಂದರೆ 'ಹೊಡೆ' 'ತಟ್ಟು' ಎನ್ನುವ ಅರ್ಥವಿದೆ. ಈ ರೂಪವೇ 'ಹಚ್ಚೆ' ಕ್ರಿಯೆಯ ಮೂಲಾರ್ಥವನ್ನು ಸೂಚಿಸುತ್ತದೆ.

ಹಚ್ಚೆಯನ್ನು ಪಂಚಮಿ (ಆಗಸ್ಟ್) ಹಾಗೂ ಕಾರ್ತೀಕ (ನವೆಂಬರ್) ಹಬ್ಬಗಳ ಸಮಯದಲ್ಲಿ ಹಾಕಿಸಿಕೊಳ್ಳುತ್ತಾರೆ. ಹಚ್ಚೆ ಹಾಕುವವರಿಗೆ ಹಚ್ಚೆ ಹಾಕುವ ಸಾಮಗ್ರಿಗಳು ಪೂಜನೀಯ ವಸ್ತುಗಳು. ಪ್ರತಿ ಹಬ್ಬದಲ್ಲೂ ಅಮಾವಾಸ್ಯೆ ಹುಣ್ಣಿಮೆಗಳಲ್ಲಿ ಅವುಗಳ ಪೂಜೆ ಮಾಡುವುದು ಅವರಲ್ಲಿದ್ದ ವಾಡಿಕೆ. ಅವುಗಳನ್ನು ಕಾಳಮ್ಮನೆಂದು ತಿಳಿದು ಪೂಜಿಸುತ್ತಾರೆ.

**ಹಚ್ಚೆ ಹೊಯ್ಯಲು ಬೇಕಾದ ಸಾಮಗ್ರಿಗಳು** : ಹಚ್ಚೆ ಹಾಕುವ ಕಲಾವಿದರು ಬಳಸುವ ಉಪಕರಣಗಳೆಂದರೆ ಸಾಮಾನ್ಯವಾಗಿ ಬಟ್ಟೆ ಹೊಲಿಯಲು, ಕಸೂತಿ ಹಾಕಲು ಬಳಸುವ ಸೂಚಿಗಳು. ಕೆಲವು ಬಾರಿ ಗುಂಡುಸೂಚಿ (ಬಾಚಣಿ) ಗಳನ್ನೂ ಬಳಸುತ್ತಾರೆ. ೨, ೪, ೬, ೭, ೯ ಹೀಗೆ ಅನುಕೂಲಕ್ಕೆ ತಕ್ಕಂತೆ ಸೂಚಿಗಳನ್ನು ಕೂಡಿಸಿ ಅವುಗಳನ್ನು ಒಂದರ ಪಕ್ಕದಲ್ಲಿ ಮತ್ತೊಂದರಂತೆ ಜೋಡಿಸಿ, ಕಬ್ಬಿಣದ ಎರಡು ಪಟ್ಟಿಗಳ ಮಧ್ಯೆ ಭದ್ರವಾಗಿ ಇರುವಂತೆ ಒತ್ತಿ ದಾರದಿಂದ ಕಟ್ಟುತ್ತಾರೆ. ಇಂತಹ ಸೂಜಿಗಳ ಕಟ್ಟಿಗೆ 'ಚಕ್ರ' ಎನ್ನುತ್ತಾರೆ. ಕೆಲವರು ಸೂಜಿಗಳನ್ನು ಬಾಚಣಿಕೆ ಆಕಾರದಲ್ಲಿ ಜೋಡಿಸಿ ಗೆರೆಯಾಕಾರದ ಚಿತ್ರ ಬಿಡಿಸುವಾಗ ಬಳಸುತ್ತಾರೆ. ಮೊದಲು ಒಂದು ಕಡ್ಡಿಯನ್ನು ಬಣ್ಣದಲ್ಲಿ ಅದ್ದಿ ಚಿತ್ರ ಬಿಡಿಸಿ ಕೊಂಡು ನಂತರ ಸೂಜಿಯಿಂದ ಚಿತ್ರದ ಮೇಲೆ ಚುಚ್ಚುತ್ತಾರೆ. ಹಚ್ಚೆಯ ವಿವಿಧ ನಮೂನೆಯ ಚಿತ್ರಗಳ ಪುಸ್ತಕವೇ ಇರುತ್ತದೆ. ಚಿತ್ರಕಲೆಯಲ್ಲಿ ನೈಪುಣ್ಯತೆಯುಳ್ಳವರು ಸ್ವಂತವಾಗಿ ಬೇರೆ ಹಾಳೆಯ ಮೇಲೆ ಚಿತ್ರ ಬಿಡಿಸಿಟ್ಟುಕೊಳ್ಳುತ್ತಾರೆ. ಕೆಲವರು ಹಚ್ಚೆ ಹೊಯ್ಯುವಾಗಲೇ ಚಿತ್ರಗಳನ್ನು ಸೃಜಿಸುತ್ತಾರೆ. ಅದು ಅವರವರ ಕಲಾ ನೈಪುಣ್ಯತೆಯನ್ನು ಅವಲಂಬಿಸಿರುತ್ತದೆ.

**ಹಚ್ಚೆಯ ಬಣ್ಣ**

ಹಚ್ಚೆಯ ಬಣ್ಣ ತಯಾರಿಕೆಯ ವಿಧಾನ ವಿಶಿಷ್ಟವಾಗಿದೆ. ಪ್ರದೇಶದಿಂದ ಪ್ರದೇಶಕ್ಕೆ ಬಣ್ಣ ತಯಾರಿಕಾ ವಿಧಾನ ಬೇರೆ ಬೇರೆಯಾಗಿವೆ. ಈ ರೀತಿಯ ಬಣ್ಣ ತಯಾರಿಕೆ ಆ ಪ್ರದೇಶದಲ್ಲಿ ದೊರೆಯುವ

ಗಿಡಮೂಲಿಕೆಗಳನ್ನು ಅವಲಂಬಿಸಿದೆ. ಬಣ್ಣ ತಯಾರಿಸುವಾಗ ಮುಖ್ಯವಾಗಿ ಎರಡು ಅಂಶಗಳನ್ನು ಗಮನದಲ್ಲಿಡಬೇಕಾದುದು ಅವಶ್ಯವಾಗಿದೆ. ಮೊದಲನೆಯದು ಬಣ್ಣ ಶಾಶ್ವತವಾಗಿ ದೇಹದ ಮೇಲೆ ಉಳಿಯಬೇಕು; ಎರಡನೆಯದು ಅದು ದೇಹಕ್ಕೆ ಬರುವ ನಂಜನ್ನು ನುಂಗುವ ಶಕ್ತಿಯನ್ನು ಪಡೆದಿರಬೇಕು. ಈ ರೀತಿಯ ಬಣ್ಣ ತಯಾರಿಕೆಯಲ್ಲಿ ಹಚ್ಚೆ ಹೊಯ್ಯುವವರು ಸಂಪೂರ್ಣ ಯಶಸ್ವಿ ಯಾಗಿದ್ದಾರೆ. ಸಾಮಾನ್ಯವಾಗಿ ಬಣ್ಣದಲ್ಲಿ ಎರಡು ವಿಧ ೧. ಬರೆಯುವ ಮಸಿ ಅರಿಷಿನ ಔಡಲೆಣ್ಣೆಗಳಿಂದ ತಯಾರಿಸಿದ ನೀಲಿ ಮಿಶ್ರಿತ ಕಪ್ಪು ಬಣ್ಣ ೨. ಬಳ್ಳಿ ಕಾಯಿ, ಎಲೆಯ ರಸ ಮತ್ತು ಬೇರಿನ ರಸಗಳಿಂದ ತಯಾರಿಸಿದ ಹಸಿರು ಮಿಶ್ರಿತ ಹಳದಿ ಬಣ್ಣ. ಇವಲ್ಲದೇ ಎಲ್.ಕೆ. ಅನಂತಕೃಷ್ಣಯ್ಯ ಹಾಗೂ, ಎಚ್.ವ್ಹಿ.ನಂಜುಂಡಯ್ಯ ನವರು ತಮ್ಮ 'The Mysore Tribes and Caster' ಎಂಬ ಪುಸ್ತಕದಲ್ಲಿ ಬಣ್ಣ ತಯಾರಿಕೆಯ ಹಲವಾರು ಮಾದರಿಗಳನ್ನು ಹೆಸರಿಸಿದ್ದಾರೆ.

ಮನೆಯಲ್ಲಿಯೇ ಮನೆಯವರೆ ಸೊಪ್ಪನ್ನು ಕಾವಲಿಗೆ ಹಾಕಿ ಬಿಸಿ ಮಾಡಿ, ಅದನ್ನು ತಿಕ್ಕಿ ಹರಳೆಣ್ಣೆ ದೀಪಕ್ಕೆ ಹಿಡಿಯಬೇಕು. ಅದರಿಂದ ಬಂದ ಕಪ್ಪಿಗೆ ನೀರು ಸೇರಿಸಿ ಬಣ್ಣ ತಯಾರಿಸಬಹುದು. ಎಳ್ಳೆಣ್ಣೆ ದೀಪದ ಬತ್ತಿಯ ಕರಿಗೆ ಮೊಲೆಹಾಲನ್ನು ಸೇರಿಸಿ ಬಣ್ಣ ತಯಾರಿಸಬಹುದು.

ಹಚ್ಚೆ ಹಾಕುವ ದೇಹದ ಭಾಗಗಳು : ದೇಹದ ಪ್ರತಿಭಾಗದ ಮೇಲೂ ಹಚ್ಚೆಯನ್ನು ಹೊಯ್ಸಿಸಿಕೊಳ್ಳುತ್ತಾರೆ. ಅಂಗೈ, ಮುಂಗೈ, ತೋಳು, ಹಣೆ, ಕೆನ್ನೆ, ಗಲ್ಲ ಹುಬ್ಬು, ಕಣ್ಣಿನ ಅಂಚು ಎದೆ, ಬೆನ್ನು, ತೊಡೆ, ಹೊಕ್ಕಳ, ನಡು ಯೋನಿ, ಶಿಶ್ನ, ನಿತಂಬ, ಮೊಣಕಾಲು, ಕಾಲು, ಹಿಮ್ಮಡಿ, ಹೊಟ್ಟೆ ಹೀಗೆ ಹಲವಾರು ಸ್ಥಳಗಳ ಮೇಲೆ ಹಚ್ಚೆಹಾಕಿಸಿಕೊಳ್ಳುತ್ತಾರೆ. ದೇಹದ ಬೇರೆಬೇರೆ ಭಾಗಗಳಿಗೆ ಬೇರೆಬೇರೆ ಬಗೆಯ ಚಿತ್ರ ಬಿಡಿಸಿಕೊಳ್ಳುವ ವಾಡಿಕೆ ಇದೆ.

**ದೇಹದ ಕೆಲವು ಭಾಗಗಳ ಮೇಲೆ ಹಾಕಿಸಿಕೊಳ್ಳುವ ಚಿತ್ರಗಳನ್ನು ಇಲ್ಲಿ ಕೊಡಲಾಗಿದೆ.**

**ಹಣೆ** : ದೃಷ್ಟಿ, ಬೊಟ್ಟು, ಹೂವು, ಚಂದ್ರ, ಸೂರ್ಯ, ನಕ್ಷತ್ರ, ಶಿಲುಬೆ, ಕಮಲ, ಒಂದು ಗೆರೆ, ಶಂಖ ಇತ್ಯಾದಿ.

**ಹುಬ್ಬಿನ ನಡುವೆ** : ದೃಷ್ಟಿ ಬೊಟ್ಟು.

**ಗಲ್ಲದ ಮೇಲೆ** : ಗಲ್ಲಹಚ್ಚೆ, ಸಣ್ಣ ಚುಕ್ಕೆ.

**ತೋಳು** : ಮುತ್ತಿನ ಬೊಟ್ಟು, ಸೀತೆಸೆರಗು, ತೋಳು ಚಪ್ಪರ, ಮುತ್ತಿನ ಬಳ್ಳಿ, ಮುತ್ತಿನ ಮಲಕು, ತೊಂಡೆ ಚಪ್ಪರ, ಒಡವೆ ಚಿತ್ರ ಇತ್ಯಾದಿ.

**ಬಲಮೊಣಕ್ಕೆ** : ಬಾಳೆಗಿಡ್ಡ, ಮುತ್ತಿನಾರತಿ, ಜೋಗಿಜಡೆ, ಹನುಮಪ್ಪ, ಸೀತೆ ಸೆರಗು, ನಾಗಪ್ಪ, ರಾಮನ ತೊಟ್ಟಿಲು ಇತ್ಯಾದಿ.

**ಎಡಮೊಣಕ್ಕೆ** : ಗೌರಿಗದ್ದಿಗೆ, ಜೋಗಿ ಜಡೆ, ತಾವರೆಹೂ, ಗಾಲಿತೇರು, ಶಿವನ ಬಾಸಿಂಗ ಇತ್ಯಾದಿ.

**ಮೂಗು** : ಮುಕ್ರ, ಚುಕ್ಕೆ ಇತ್ಯಾದಿ.

**ಮೆಲಕು** : ಕುದುರೆ ಚಿತ್ರ, ಚುಕ್ಕೆ ಇತ್ಯಾದಿ.

**ಮುಂಗೈ** : ಬಾಳೆಗಿಡ, ಕಮಲ, ಶಾವಂತಿಗೆ ಹೂ, ಹನುಮಪ್ಪ, ಶಿವನಮುಡಿ, ಮುತ್ತಿನಾರತಿ, ಮಾವಿನೆಲೆ ಇತ್ಯಾದಿ.

**ಕಣ್ಣುಗಳ ಪಕ್ಕ** : ಕಣ್ಣುಶಾವಿಗೆ, ಚುಕ್ಕೆ ಇತ್ಯಾದಿ.

**ಎಡ ಮುಂಗೈ** : ಅಷ್ಟಕೊಳ, ತಾವರೆ ಹೂ, ನಿಂಬೆಹೂ, ನಂದಿಕೋಲು, ಜಿರಲಿ ಇತ್ಯಾದಿ.

**ಬಲ ಮುಂಗೈ** : ಗಂಡ ಅಥವಾ ಹೆಂಡತಿಯ ಹೆಸರು, ಗೆಳೆಯ ಅಥವಾ ಗೆಳತಿಯ ಹೆಸರು. ಅಜ್ಜ, ಅಪ್ಪ ಮತ್ತು ಅಮ್ಮ ಇತರರ ಹೆಸರು.

**ಹೆಬ್ಬೆರಳು** : ಚೇಳು, ನೊಣ, ವಾಲಿಗುಪ್ಪಿ, ಹುಲಿಯುಗುರು ಇತ್ಯಾದಿ.

**ಮೊಲೆಗಳು** : ನವಿಲು, ಸಣ್ಣಚುಕ್ಕೆಗಳ ಸಾಲು, ವೃತ್ತಾಕಾರದ ಸಣ್ಣ ಚುಕ್ಕೆಗಳ ಚಿತ್ರ ಇತ್ಯಾದಿ.

**ಮೀನುಖಂಡ** : ಜೋಗಿ ಜಡೆ, ವಿವಿಧ ಹೂಗಳು ಇತ್ಯಾದಿ.

**ಯೋನಿ, ಶಿಶ್ನ** : ಚೇಳು, ಸಿಂಹ, ಹುಲಿ, ಚಿಟ್ಟೆ, ಹಡಗು, ಡ್ರಾಗನ್ ಸರ್ಪ, ಪ್ರಿಯರ ಹೆಸರು ಇತ್ಯಾದಿ.

**ನಿತಂಬ** : ಗುಲಾಬಿ ಹೂ, ಚುಕ್ಕೆಗಳ ಚಿತ್ರ, ಮೈಥುನ ಸರ್ಪಗಳ ಚಿತ್ರ ಇತ್ಯಾದಿ.

**ಕಾಲಿನ ಮೇಲು ಭಾಗ** : ಕಮಲದ ಹಚ್ಚೆ ಇತ್ಯಾದಿ.

**ಬೆನ್ನಿನ ಮೊಳೆಯ ಮೇಲ್ಭಾಗ** : ಸಣ್ಣ ಚುಕ್ಕೆಗಳು.

ಮೇಲೆ ತಿಳಿಸಿದ ಚಿತ್ರಗಳು ಸಾಮಾನ್ಯವಾಗಿ ಕಂಡು ಬರುವಂತಹುಗಳು. ಗೌಳಿಗ ಹೆಂಗಸರು ಬಲ ಮತ್ತು ಎಡತೋಳಿನ ಮೇಲೆ ಕುಬುಸದ ಹಚ್ಚೆ ಹಾಕಿಸಿಕೊಳ್ಳುತ್ತಾರೆ.

ಗೌಳಿಗರಲ್ಲಿ ಪ್ರಚಲಿತದಲ್ಲಿರುವ ಹಚ್ಚೆ ಚಿತ್ರಗಳೆಂದರೆ ಜೋಗಿಜಡೆ, ಸೀತೆಸೆರಗು, ರಾಮನ ತೊಟ್ಟಿಲು, ಶಿವನ ಬಾಸಿಂಗ, ಹಂಪಿ ತೇರು, ಯಾಲಕ್ಕಿ ಸಾಲು, ತೊಂಡೆ ಚಪ್ಪರ, ಗಿಂಡಿ, ಗೌರಿಕಣ್ಣು, ನಿಂಬೆಸಸಿ, ನಾಗಪ್ಪ, ಹನುಮನ ತೇರು, ಮಲ್ಲಿಗೆದಂಡೆ, ಬಿಲ್ವಪತ್ರೆ, ತಾವರೆಹೂ, ಚೇಳು, ಮುತ್ತಿನಾರತಿ, ಬಸವಣ್ಣ, ನಾಣ್ಯದ ಸಾಲು, ಚಂದಪ್ಪ, ನತ್ತು, ಗೌರಿಗದ್ದಿಗೆ, ಬಾಳೆಗಿಡ ಇತ್ಯಾದಿ ಚಿತ್ರಗಳು.

**ಹಚ್ಚೆಯ ಬಗ್ಗೆ ಇರುವ ನಂಬಿಕೆಗಳು** : ಬಲವಾದ ಧಾರ್ಮಿಕ ನಂಬಿಕೆಯೇ ಹಚ್ಚೆ ಹಾಕಿಸಿ ಕೊಳ್ಳುವವರಲ್ಲಿ ಕಂಡುಬರುತ್ತದೆ. "ಸತ್ತಾಗ ನಮಕೂಟೆ ಮತ್ತೇನು ಬರಬಹುದು? ಹಚ್ಚೀಯ ಬೊಟ್ಟು, ಹಣಿಬೊಟ್ಟು, ಸುಲಿಹಲ್ಲು ಕಟ್ಟಿರೋ ತುರುಬು" ಎಂದು ನಂಬಿರುವ ಗೌಳಿಗರಲ್ಲಿ ಹಚ್ಚೆಯ ಬಗ್ಗೆ ಅಪಾರವಾದ ಪವಿತ್ರ ಭಾವನೆ ಇದೆ. ಅಪಾರವಾದ ನೋವಿನಲ್ಲಿಯೂ ಸುಖವನ್ನು ಕಾಣುವಷ್ಟು ಪ್ರೀತಿ ಅಂದಿನ ಹೆಂಗಳೆಯರಿಗೆ ಹಚ್ಚೆಯ ಮೇಲೆ ಇರುತ್ತಿತ್ತು.

ಹಚ್ಚೆ ಹಾಕಿಸಿಕೊಂಡು ಪಾಪ ಮಾಡಿದರೂ ಅವರನ್ನು ಯಮರಾಜ ಕ್ಷಮಿಸಿ ಸ್ವರ್ಗಕ್ಕೆ ಕಳಸುತ್ತಾನೆಂಬ ನಂಬಿಕೆಯೂ ಇದೆ. ಹುಟ್ಟುವ ಮಕ್ಕಳು ಸಾಯುವ ತಾಯಿ, ತನ್ನ ನಡುವಿನ ಮೇಲೆ ಹಚ್ಚೆ ಹಾಕಿಸಿಕೊಂಡರೆ ಮುಂದೆ ಹುಟ್ಟುವ ಮಕ್ಕಳು ಬದುಕುಳಯುತ್ತವೆ ಎಂಬ ನಂಬಿಕೆಯೂ ಇದೆ.

ಹಚ್ಚೆ ಮುತ್ತೈದೆತನದ ಸಂಕೇತ, ಅದನ್ನು ಹಾಕಿಸಿಕೊಂಡೆರ ವೈಧವ್ಯ ಬರುವುದಿಲ್ಲ. ಬಡತನ ಬರುವುದಿಲ್ಲ ಎಂಬ ನಂಬಿಕೆಯೂ ಕೆಲವರಲ್ಲಿದೆ. ತಲೆಶೂಲಿ, ವಾತ ರೋಗ ನಿವಾರಣೆಗಾಗಿ ಹಣೆ ಮತ್ತು ನರಗಳ ಮೇಲೆ ಹಾಗು ಕಾಲು, ತೋಳಿನ ಸಂದುಗಳಗೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ.

ಹೆಣ್ಣು ಮಕ್ಕಳಗೆ ಮೂಗು ಬೊಟ್ಟು ಹಾಗೂ ಕಿವಿ ಚುಚ್ಚುವ ಕ್ರಿಯೆಯಷ್ಟೆ ಅನಿವಾರ್ಯತೆ ಹಚ್ಚೆಗೂ ಇದೆ. ಅವರಿಗೆ ೫ ವರ್ಷಗಳ ನಂತರ ೧೪ ವರ್ಷಗಳ ಒಳಗೆ ಹಚ್ಚೆ ಹಾಕಿಸಬೇಕೆಂಬ ನಂಬಿಕೆ ಜನರಲ್ಲಿದೆ. ವೈಧವ್ಯ ಬಂದ ನಂತರ ಹಚ್ಚೆ ಹಾಕಿಸಿಕೊಳ್ಳುವುದಿಲ್ಲ. ಮರುವಿವಾಹದ ನಂತರ ಹಚ್ಚೆ ಹಾಕಿಸಿಕೊಳ್ಳಬಹುದು. ಹಚ್ಚೆ ಗುರುತು ಇದ್ದರೆ ಗರ್ಭಪಾತವಾಗುವುದಿಲ್ಲವೆಂಬ ನಂಬಿಕೆಯೂ ಇದೆ.

ಹೀನಸುಳ, ಸರ್ಪಹುಣ್ಣು, ತೊನ್ನುಗಳನ್ನು ಮುಚ್ಚುವುದಕ್ಕಾಗಿ.

ಮಾಟ, ಮಂತ್ರ ಮದ್ದಿನಿಂದ ತಪ್ಪಿಸಿಕೊಳ್ಳಲು.

ಚೇಳು, ಹಾವುಗಳಂತಹ ವಿಷದ ನಂಜೇರದಂತೆ ತಡೆಯಲು.

ಗರ್ಭಪಾತ ತಡೆಗಟ್ಟಲು.

ಅಡುಗೆ ಕೆಡದಿರಲು. (ಹೆಂಗಸರು)

ಕಣಜ ಮುಟ್ಟವವವರ ಕೈಯಲ್ಲಿ ಹಚ್ಚೆ ಇದ್ದರೆ ಧಾನ್ಯ ಸಮೃಧ್ಧಿಯಾಗುವುದಾಗಿ.

ಅದೃಷ್ಟದೇವತೆಯ ಸಂಪ್ರೀತಿಗಾಗಿ.

ವಿಶ್ವದ ಶಕ್ತಿ, ಸಂಕೇತಗಳ ಚಿತ್ರಗಳಂದ ಅವುಗಳಂದ ರಕ್ಷಣೆ ಪಡೆಯಲು.

ದೃಷ್ಟಿ, ರೋಗ, ಭೂತ ಪ್ರೇತಾದಿಗಳ ನಿವಾರಣೆಗಾಗಿ.

ಹೀಗೆ ವಿವಿಧ ನಂಬಿಕೆಗಳ ಆಧಾರದ ಮೇಲೆ ಹಚ್ಚೆಕಲೆ ನಮ್ಮ ಗೌಳಗರ' ದೇಹದ ಮೇಲೆ ಮೂಡಿ ಬಂದಿದೆ.

**ಹಚ್ಚೆಹಾಕುವವರಿಗೆ ಸಂಭಾವನೆ** : ಬಟ್ಟೆ-ಬರೆ, ಧವಸ-ಧಾನ್ಯ, ನಗ-ನಾಣ್ಯ, ಊಟ-ಉಪಚಾರ, ತಿಂಡಿ-ತಿನಿಸು, ಹಳೆ ಬಟ್ಟೆ (ಸೀರೆ-ಕುಬಸ) ಹೀಗೆ ನಾನಾ ರೂಪದಲ್ಲಿ ಸಂಭಾವನೆ ಸಲ್ಲಿಸುತ್ತಾರೆ. ಮನೆಯ ಹಿರಿಯರಾದ, ಅಜ್ಜ, ಅಜ್ಜಿ, ಮಾವ, ಅತ್ತೆ ಹೀಗೆ ತಾವೇ ಸಂಭಾವನೆ ಕೊಟ್ಟು, ಚಿಕ್ಕವರಿಗೆ ಹಚ್ಚೆ ಹಾಕಿಸಿ ತಮ್ಮ ನೆನಪನ್ನು ಅವರಲ್ಲಿ ಉಳಸಿಹೋಗುತ್ತಾರೆ. ಹಚ್ಚೆ ಹಾಕುವವರೇ ಹಚ್ಚೆ

ಹಾಕಿಸಿಕೊಂಡರೆ ಹೆಚ್ಚು ಸಂಭಾವನೆ ನೀಡಬೇಕಾಗುತ್ತದೆ. ಹಚ್ಚೆ ಕಾರ್ಯಕ್ಕೆ ಸಾವಿರಾರು ರೂಪಾಯಿ ಖರ್ಚಾಗುತ್ತವೆ. ಜನಗಳಲ್ಲಿ ಹಚ್ಚೆಯ ಬಗ್ಗೆ ಆಕರ್ಷಣೆ ಕಡಿಮೆಯಾಗುತ್ತಿರುವುದೇ ಇದಕ್ಕೆ ಕಾರಣವಾಗಿದೆ.

**ಕಡಗೋಲು** : ಹೈನುಗಾರಿಕೆಯಲ್ಲಿ ಉಪಯೋಗವಾಗುವ ಕಡಗೋಲು ಕಟ್ಟಿಗೆಯಿಂದ ಮಾಡುವ ಕರಕುಶಲ ಕಲೆಗಳಲ್ಲಿ ಒಂದು. ಇವುಗಳಲ್ಲಿ ಎರಡು ಪ್ರಕಾರಗಳು. ಒಂದು ದೊಡ್ಡ ಕಡಗೋಲು, ಎರಡನೆಯದು ಚಿಕ್ಕ ಕಡಗೋಲು. ಇದನ್ನು ಕೈ ಕಡಗೋಲು ಎಂದು ಕರೆಯುತ್ತಾರೆ. ದೊಡ್ಡ ಕಡಗೋಲು ಗಡಿಗೆಯಲ್ಲಿ ಮಜ್ಜಿಗೆಯನ್ನು ಮಾಡುವುದಕ್ಕೆ ಉಪಯೋಗಿಸಲಾಗುತ್ತದೆ. ಈ ಕಡಗೋಲಿಗೆ ಹಗ್ಗ ಹಾಕಿ ಕಂಬಕ್ಕೆ ಕಟ್ಟಿ ಜಗ್ಗಲಾಗುತ್ತದೆ. ಇದರಿಂದ ಬೆಣ್ಣೆಯನ್ನು ತೆಗೆಯಲಾಗುತ್ತದೆ. ಕೈ ಕಡಗೋಲು ನಿತ್ಯದ ಅಡಿಗೆಯ ಕೆಲಸದಲ್ಲಿ ಉಪಯೋಗವಾಗುತ್ತದೆ. ಕಟ್ಟಿಗೆಯಿಂದ ತಯಾರಿಸುವ ಇವುಗಳು ಈಗಲೂ ಉಪಯೋಗವಾಗಿವೆ. ಸ್ಟೀಲ್ ಕಡಗೋಲುಗಳು ಮತ್ತು ಸ್ವಯಂಚಾಲಿತ ಕಡಗೋಲುಗಳು ಈಗ ಬಳಕೆಯಲ್ಲಿ ಬಂದಿವೆ. ದೊಡ್ಡ ಕಡಗೋಲಿನ ಉಪಯೋಗಕ್ಕೆ ಮನೆಯಲ್ಲಿ ಮಜ್ಜಿಗೆ ಕಂಬ ಬೇಕೇ ಬೇಕು. ಪ್ರತಿ ಮನೆಯಲ್ಲಿಯೂ ಮಜ್ಜಿಗೆ ಕಂಬ ಮತ್ತು ಮಜ್ಜಿಗೆ ಗಡಿಗೆಗಳ ಉಪಯೋಗ ಇದ್ದೇ ಇರುತ್ತದೆ. ಹೈನುಗಾರಿಕೆಯ ತೊಂದರೆಯಿಂದ ಈಗ ಇವುಗಳ ಸಂಖ್ಯೆ ಕಡಿಮೆಯಾಗಿದೆ ಯಾದರೂ ಗೌಳಿಗರ ಮನೆಯಲ್ಲಿ ಈಗಲೂ ಬಳಕೆಯಲ್ಲಿದೆ.

ಮೊಸರು ಕಡೆಯುವ ಸಾಧನಗಳಲ್ಲಿ ನಾನಾ ವಿಧಗಳನ್ನು ಕಾಣಬಹುದು. ಕಡಗೋಲು ಮಂಕು ಬಿದಿರಂಡೆ ಅಥವಾ 'ಕುತ್ತಿಹಂಡೆ', ಮಜ್ಜಿಗೆ ಶಿಲ್ಬೊ. ಹೀಗೆ ಬೇರೆಬೇರೆ ಹೆಸರಿನಲ್ಲಿ ಕಡಗೋಲನ್ನು ಕರೆಯಲಾಗುತ್ತದೆ. ಅಡಿಗೆ ಮನೆಯಲ್ಲಿ ಒಂದು ಕಡೆ ಭದ್ರಪಡಿಸಿ ಒಂದು ಗೂಟವನ್ನು ನೆಟ್ಟು ಅದಕ್ಕೆ ಹಗ್ಗದ ಕೊಂಡಿಗಳನ್ನು ಅಳವಡಿಸಿ ದೊಡ್ಡ ಮಡಕೆಯಲ್ಲಿ ಕೆನೆಮೊಸರನ್ನು ಹಾಕಿ ಕಡೆಯುವ ರೀತಿ ಎಲ್ಲ ಕಡೆಯೂ ಕಾಣಬಹುದಾಗಿದೆ. ಗೌಳಿಗರು ಬಳಸುವ 'ಮಜ್ಜಿಗೆ ಶಿಲ್ಬೊ' ಅಥವಾ 'ಮೆಂತ್ಯ' ಸಾಧನ ಬೇರೊಂದು ರೀತಿಯದು. ಗೌಳಿಗರಲ್ಲಿ ಬಿದಿರಿನ ಹಂಡೆಯಲ್ಲಿ ಮೊಸರನ್ನು ಹಾಕಿ ಕಡೆಯುವ ರೀತಿ ಇನ್ನೊಂದು ಬಗೆ. ದಪ್ಪ ಬಿದಿರನ್ನು ಎರಡು ಮೊಳದಷ್ಟು ತುಂಡು ಮಾಡಿ ಹಂಡೆಯನ್ನು ಮಾಡಿಕೊಳ್ಳುತ್ತಾರೆ. ಇದರ ಕೆಳಭಾಗ ಮುಚ್ಚಿರುತ್ತದೆ. ಮೇಲು ಭಾಗ ತೆರೆದಿದ್ದು ಒಳಭಾಗ ಟೊಳ್ಳಾಗಿರುತ್ತದೆ. ಇದರಲ್ಲಿ ಮೊಸರನ್ನು ಹಾಕಿ ಉದ್ದ ಬಿದಿರು ಕೋಲೊಂದರ ತಳದಲ್ಲಿ ಚಕ್ರಕಾರದ ತೆಂಗಿನ ಚಿಪ್ಪನ್ನು ಸೇರಿಸಿ ಮೇಲೆ ಕೆಳಗೆ ಆಡಿಸುವುದರಿಂದ ಮಜ್ಜಿಗೆಯಲ್ಲಿ ಬೆಣ್ಣೆ ತೇಲಿ ಬರುತ್ತದೆ.

ಇತ್ತೀಚೆಗೆ ಪ್ರಾದೇಶಿಕವಾಗಿ ಕೆಲವು ಕಡೆ ಸಾಂಪ್ರದಾಯಿಕ ಉಡುಪನ್ನು ಹಾಕಿಕೊಳ್ಳುತ್ತಿಲ್ಲ. ಆಧುನಿಕತೆಗೆ ಒಳಪಟ್ಟ ಹೊಸ ಹೊಸ ಉಡುಪನ್ನು, ಸೀರೆಯನ್ನು ಧರಿಸುತ್ತಾರೆ. ಆದರೆ ಇವರಲ್ಲಿ ಹಚ್ಚೆ ಹಾಕಿಸಿಕೊಳ್ಳುವ ಸಂಪ್ರದಾಯ ಇವತ್ತಿಗೂ ಇರುವುದಕ್ಕೆ ಇವರನ್ನು ಗೌಳಿಗರು ಎಂದು ಗುರುತಿಸಬಹುದು.

### ೨.೧೧ ಸಾವು; ಸಾವಿನ ನಂತರದ ಪರಿಕಲ್ಪನೆ

ದೈವಿಕ ಶ್ರದ್ಧೆ ಗೌಳಿಗ ಸಮುದಾಯದವರ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇವರು ಸರ್ವಚೇತನವಾದಿಗಳು, ಶಕ್ತಿ ರೂಪದ ಆತ್ಮಗಳಲ್ಲಿ, ಭೂತ ಪಿಶಾಚಿಗಳಲ್ಲಿ ನಂಬಿಕೆಯುಳ್ಳವರು.

ಸತ್ತ ಮೇಲೆ ಮೃತರ ಆತ್ಮಗಳು ಶರೀರ ರಹಿತವಾಗಿ ತಮ್ಮ ಸುತ್ತಲೂ ಅಲೆಯುತ್ತವೆಯೆಂಬ ನಂಬಿಕೆಯುಳ್ಳವರು. ಕಾಡಿನ ಹೊಳೆ, ಹಳ್ಳ, ಗಿಡಬಳ್ಳಿ, ಪ್ರಾಣಿಪಕ್ಷಿ, ಜಲಚರ, ಜೀವ ಜಂತುಗಳಲ್ಲಿ ಆತ್ಮಗಳಿವೆಯೆಂಬ ನಂಬಿಕೆಯುಳ್ಳವರು. ಆದ್ದರಿಂದ ಕುಟುಂಬದಲ್ಲಿ ಸತ್ತ ಹಿರಿಯರನ್ನು ಗೌರವಿಸಿ ಪೂಜಿಸುವ ಕಾಡಿನ ಗಿಡ, ಮರ, ಬಳ್ಳಿ, ಪ್ರಾಣಿಗಳನ್ನು ಕುಲ ಚಿಹ್ನೆಗಳನ್ನು ಬಳಿ, ಬಳ್ಳಿ, ಬೆಡಗು ಎಂದು ಮುಂತಾಗಿ ಕರೆಯುತ್ತಾರೆ. ಇವರಲ್ಲಿ ಗಿಡ, ಮರ, ಬಳ್ಳಿ, ಪಶು ಪಕ್ಷಿ, ಹೊಳೆ ಹಾಗೂ ವ್ಯಕ್ತಿಗಳಿಗೆ ಸಂಬಂಧಿಸಿದ ಬಳ್ಳಿಗಳನ್ನೆಲ್ಲ ಸಂಶೋಧಿಸಿ, ಪಟ್ಟಿ ಮಾಡಿದರೆ ನೂರಕ್ಕಿಂತ ಹೆಚ್ಚಾಗಬಹುದು. ತಮಗೆ ಉಪಕಾರಿಗಳಾದ ಪ್ರಾಣಿಗಳನ್ನು ಬದುಕಿಗೆ ಉಪಯುಕ್ತವಾದ ಗಿಡ ಮರಗಳನ್ನು ಉಪಕಾರ ಸ್ಮರಣೆಯಿಂದ ಕೆಡಕನ್ನುಂಟು ಮಾಡುವ ಪ್ರಾಣಿಗಳನ್ನು ಕೇಡಿನ ಭಯದಿಂದ ಮೂರ್ತ ಸ್ವರೂಪದಲ್ಲಿ ಆರಾಧಿಸಿದರು. ದುರ್ಮರಣಕ್ಕೊಳಗಾಗಿಯೇ, ಬದುಕಿನಲ್ಲಿ ಅತೃಪ್ತಿಪಟ್ಟೋ ಸತ್ತು ಅತೃಪ್ತಿಯಿಂದ ಪ್ರೇತಾತ್ಮರಾಗಿ ಅಲೆಯುವ ಪಿಶಾಚಿಗಳನ್ನು ತಮಗೆ ತೊಂದರೆ ನೀಡದಿರಲೆಂಬ ಭಾವನೆಯಿಂದ ಅಮೂರ್ತಸ್ಥಿತಿಯಲ್ಲಿ ಧ್ಯಾನಿಸಿದರು. ತೀರ ತೊಂದರೆದಾಯಕ ಪಿಶಾಚಿಗಳನ್ನು ಮಂತ್ರಗಾರರಿಂದ ಬಂಧಿಸಿವುದು. ಇವರು ಆರಾಧಿಸುವ ಭೂತ ದೇವತೆಗಳು ವೈದಿಕ ಸಂಸ್ಕೃತಿಗೆ ಸೇರಿದ ದೇವ, ದೇವಿಯರಲ್ಲ. ಜನಪದ ಸಂಸ್ಕೃತಿಯ ಜೊತೆಗೇ ಮೂಡಿ ಬಂದಂಥವು. ಇವರ ಆರಾಧನೆಯ ವಿಧಿವಿಧಾನಗಳೂ ಜಾನಪದೀಯ-ವಾಗಿವೆ. ಆರಾಧನೆಯಲ್ಲಿ ವೇದಮಂತ್ರಗಳಿಗೆ ಬದಲಾಗಿ ಜನಪದ ಗೀತ ಕುಣಿತಗಳು ಸೇರಿವೆ. ದೇವರ ಸಂತೃಪ್ತಿಗಾಗಿ ಸಲ್ಲಿಸುವ ಸೇವೆ ಹರಕೆಗಳೂ ಸಹ ವೈದಿಕರಿಂದ ಭಿನ್ನ ಸ್ವರೂಪದವು.

**ಅಂತ್ಯವಿಧಿ ಆಚರಣೆ** : ವ್ಯಕ್ತಿ ಪ್ರಾಣ ಬಿಟ್ಟ ಕೂಡಲೇ, ಊರಿನಲ್ಲಿ ವಾಸಿಸುವ ಜಾತಿಯ ಜನರಿಗೆ ಹಾಗೂ ಮೃತನ ಹಿತ ಸಂಬಂಧಿಗಳಿಗೆ ಸುದ್ದಿಯನ್ನು ಮುಟ್ಟಿಸುತ್ತಾರೆ. ಶವವನ್ನು ಹಾಸಿಗೆಯ ಮೇಲೆ ಮಲಗಿಸಿ ಒಂದು 'ತಲದಿಸ್' ಇಟ್ಟು, ಒಂದು ಬಿಳಿ ಬಟ್ಟೆಯನ್ನು ಮುಚ್ಚುವರು. ಒಂದು ದೀಪವನ್ನು ಹಚ್ಚಿ ಮಣೆಯ ಮೇಲಿಡುವರು. (ಒಂದು ತೆಂಗಿನ ಕಾಯನ್ನು ಒಡೆದು, ಒಂದು ಸಿದ್ದೆ ಅಕ್ಕಿ, ಒಂದು ತಾಮ್ರದ ದುಡ್ಡು ಪೊಟ್ಲಿ ಕಟ್ಟಿ ಒಂದು ಮಣೆಯ ಮೇಲಿಡುವರು.)

ಶವಕ್ಕೆ ಹೊದಿಸಲು ಹೊಸ ಬೆಳ್ಳಗಿನ ಬಟ್ಟೆಯನ್ನು ತರುತ್ತಾರೆ. ಶ್ಮಶಾನಕ್ಕೆ ಬೆಂಕಿ, ನೀರು ಕೊಂಡೊಯ್ಯಲು ಎರಡು ಹೊಸ ಗಡಿಗೆಗಳನ್ನು ಕುಂಬಾರನಿಂದ ತರಿಸುತ್ತಾರೆ. ಬಿಸಿನೀರನ್ನು ಕಾಯಿಸಿ, ಹೆಣವನ್ನು ಹೊರಕ್ಕೆ ತಂದು ಸ್ನಾನ ಮಾಡಿಸಿ, ಹೂ-ಗಂಧವನ್ನು ಹಾಕಿ, ಕಿರಿಯರು ಹೆಣಕ್ಕೆ ನಮಸ್ಕರಿಸುತ್ತಾರೆ. ಬಾಳೆಲೆಯಲ್ಲಿ ಊಟ ಹಾಕಿ ಬುತ್ತಿ ಕಟ್ಟುತ್ತಾರೆ. ಮೃತನು ವಿವಾಹಿತನಾದರೆ, ಅವನ ಹೆಂಡತಿಯನ್ನು ಸಿಂಗರಿಸಿ ಹೊರಗೆ ಕರೆತಂದು, ಅವಳ ದಾರಿಗುಂಡು, ಕುಡುಕು, ವಾಲೆ, ಮೂಗುತಿ, ಕಾಲುಂಗುರ ಕಳಚುತ್ತಾರೆ. ಅವಳ ಬಳೆಯನ್ನು ಶವದ ಎದೆಯ ಮೇಲೆ ಒಡೆಯುತ್ತಾರೆ. ಕುಂಕುಮವನ್ನು ಅಳಿಸುತ್ತಾರೆ. ಸತ್ತವಳು ಮುತ್ತೈದೆಯಾದರೆ, ಅವಳಿಗೆ ಅಡಿಕೆಯ ಸಿಂಗಾರವನ್ನು ಮುಡಿಸಿ, ಅರಿಸಿನ ಕುಂಕುಮವಿಟ್ಟು ಸಿಂಗರಿಸಿ ಸ್ಮಶಾನ ಯಾತ್ರೆಗೆ ಹೊರಡುವ ತಯಾರಿಯನ್ನು ನಡೆಸುತ್ತಾರೆ.

ಹಸಿಯಾದ ಏಳೆಂಟು ಘೂಟು ಉದ್ದದ ಎರಡು ಸೆಮೆ(ಗಳ) ತಂದು ಸುಮಾರು ಎರಡು ಘೂಟು ಅಗಲಳತೆಯಲ್ಲಿ ಅದನ್ನು ಸಮಾಂತರವಾಗಿಟ್ಟು, ಎರಡು ಬದಿಯಲ್ಲಿ ಒಂದೊಂದು ಘೂಟು ಬಿಟ್ಟು, ಘೂಟಿಗೊಂದರಂತೆ ಗಳದ ದಬ್ಬೆಯನ್ನು ಅಡ್ಡ ಕಟ್ಟಿ 'ಈಡಸಲು' ತಯಾರಿಸುತ್ತಾರೆ. ಅದರ ಮೇಲೆ, ಹಸಿಯ ತೆಂಗಿನ ಮಡಲನ್ನು ನೆಣೆದು, ಹಾಸಿ ಹೆಣವನ್ನು ಮೇಲ್ಮುಖ ಮಾಡಿ ನೆಟ್ಟಗೆ ಮಲಗಿಸಿ, ಹೊಸ ಬಟ್ಟೆಯನ್ನು ಹೊದಿಸಿ, ತಲೆಭಾಗದಲ್ಲಿ ಒಂದು ಸಿದ್ದಿ ಅಕ್ಕಿ, ಒಂದು ನಾಣ್ಯ, ಎಲೆ ಅಡಿಕೆಯ ಕವಳ ಹಾಕಿ, ಹೊಸ ವಸ್ತ್ರದಲ್ಲಿ ಕಟ್ಟುತ್ತಾರೆ. ಅನಂತರ ಕ್ರಿಯೆ ಹಿಡಿಯುವವನು ತಲೆಭಾಗದಲ್ಲಿ ನಿಂತು ಹೆರಕೈಯಲ್ಲಿ ಕತ್ತಿಯ ಬೆನ್ನಿಂದ ತೆಂಗಿನಕಾಯನ್ನು ಒಡೆದು ತಲೆಸೆರಗಿನಕ್ಕಿಯ ಸಂಗಡವೇ ಹಾಕಿ ಗಂಟು ಕಟ್ಟುವುದು ಕಾಣಬಹುದು.

ಹೆಣವನ್ನು ಸ್ಮಶಾನಕ್ಕೆ ಹೊತ್ತು ತಂದು, ಅದನ್ನು ಈಡಸಲದಿಂದ ಬೇರ್ಪಡಿಸಿ, ತಲೆಸೆರಗಿನಕ್ಕಿ ಯನ್ನು ಬದಿಗಿಟ್ಟು, ಹೆಣವನ್ನು ವಿವಸ್ತ್ರಗೊಳಿಸಿ, ಸೊಂಟದ ಉಡದಾರವನ್ನೂ ಕತ್ತರಿಸಿ ಹುಟ್ಟುವಾಗಿನಂತೆ ನಗ್ನಗೊಳಿಸಿ, ಉತ್ತರ ದಿಕ್ಕಿಗೆ ತಲೆ ಮಾಡಿ, ಸಿದಿಗೆಯ ಮೇಲಿಟ್ಟು, ಮತ್ತೆ ಅದರ ಮೇಲೆ ಕಟ್ಟಿಗೆಯನ್ನು ಹಾಕಿ, ಹೆಣವನ್ನು ಕಟ್ಟಿಗೆಯಲ್ಲಿ ಮುಚ್ಚುವರು. ಅನಂತರ ಕ್ರಿಯೆ ಹಿಡಿಯುವವನು ನೀರಿನ ಮಣ್ಣಿನ ಕೊಡವನ್ನು ಹೊತ್ತು ಅಪ್ರದಕ್ಷಿಣವಾಗಿ ತಿರುಗಿ ಒಂದು ಸುತ್ತು ಬಂದು, ಮೃತನ ತಲೆಭಾಗದಲ್ಲಿ ನಿಲ್ಲುವನು. ಮೂರು ಸುತ್ತು ತಿರುಗುವಾಗ, ಒಬ್ಬ ಕತ್ತಿಯ ಮೊನೆಯಿಂದ ಕೊಡಕ್ಕೆ ಸುತ್ತಿಗೊಮ್ಮೆ ಹೊಡೆದು ಮೂರು ತೂತು ಮಾಡಿ, ನೀರು ಹೊರ ಸುರಿಯುವಂತೆ ಮಾಡುತ್ತಾನೆ. ಅನಂತರ ಕ್ರಿಯೆ ಹಿಡಿಯುವವನು ಸಿದಿಗೆಗೆ ಬೆಂಕಿ ಹಚ್ಚುವನು. ಅನಂತರ ಮೃತನ ಆಪ್ತರೆಲ್ಲ ಗಂಧದ ಚೆಕ್ಕೆ, ಲೋಬಾನ, ಊದಬತ್ತಿಗಳನ್ನು ಅಗ್ನಿಗರ್ಪಿಸಿ ನಮಸ್ಕರಿಸುತ್ತಾರೆ. ಹೆಣ ಪೂರ್ತಿಯಾಗಿ ಭಸ್ಮವಾದ ಮೇಲೆ ಶ್ಮಶಾನದಿಂದ ಹಿಂತಿರುಗುತ್ತಾರೆ.

ಸ್ಮಶಾನ ಯಾತ್ರೆಗೆ ಹೋದವರು ಹಿಂತಿರುಗಿ ಬರುವಾಗ ಬೇರೆ ಜನರ ಹತ್ತಿರ ಮಾತನಾಡ ಬಾರದೆಂಬ ಸಂಪ್ರದಾಯ ಕೆಲವರಲ್ಲಿದೆ. ಶವ ಸಂಸ್ಕರಿಸಿ ಬಂದವರು ಕೆರೆ, ಹಳ್ಳ, ಹೊಳೆಯಲ್ಲಿ ಸ್ನಾನ ಮಾಡುತ್ತಾರೆ. ಅಲ್ಲಿಗೆ ಹೆಣವನ್ನು ಮುಟ್ಟಿ ಮೈಲಿಗೆಯನ್ನು ಮಾಡಿಕೊಳ್ಳದವನೊಬ್ಬನು ಗೋಮಯ ವನ್ನು ತೆಗೆದುಕೊಂಡು ಬಂದು, ಎಲ್ಲರ ಮೇಲೆ ಸಿಂಪಡಿಸುತ್ತಾನೆ. ಅನಂತರ ಮೃತನ ಅಂತ್ಯ ಸಂಸ್ಕಾರಕ್ಕೆ ಹೋದವರೆಲ್ಲ ಸಾಸಿವೆ ಹಾಕಿದ ಬೆಂಕಿದರ್ಶನವನ್ನು ಮಾಡಿಕೊಂಡು ತಮ್ಮ ತಮ್ಮ ಮನೆಗಳಿಗೆ ಬಂದು, ಬಿಸಿ ನೀರಿನ ಸ್ನಾನವನ್ನು ಮಾಡಿ, ಮಡಿಯುಟ್ಟು, ಗೋಮಯವನ್ನು ಸಿಂಪಡಿಸಿ ಕೊಳ್ಳುತ್ತಾರೆ.

ಮರಣದ ದಿನ ರಾತ್ರಿ ಮೃತನ ಮನೆಯಲ್ಲಿ ದೀಪವನ್ನು ಹಚ್ಚಿ, ವೀಳ್ಯದೆಲೆ, ಅಡಿಕೆ ಸುಣ್ಣವನ್ನು ಹಾಗೂ ಸಿಯಾಳವೊಂದನ್ನು ತಲೆಕೆಳಗು ಮಾಡಿ ಮೃತನಿಗಾಗಿ ಇಡುತ್ತಾರೆ. ಕೆಲವೆಡೆ ಮೃತನ ಮಕ್ಕಳು ಮೂರು ದಿನಗಳವರೆಗೆ ಅನ್ನದೂಟವನ್ನು ಮಾಡುವುದಿಲ್ಲ. ಉಪ್ಪನ್ನು ತಿನ್ನುವುದಿಲ್ಲ. ಹಾಲು ಇಲ್ಲವೆ ಹಾಲು ಹಾಕಿದ ಚಹವನ್ನೂ ಕುಡಿಯುವುದಿಲ್ಲ. ಮೃತನಿಗೆ ಮೂರು ದಿವಸಗಳವರೆಗೆ ಚಪ್ಪೆ ಗಂಜಿಯನ್ನು ಹಾಕುತ್ತಾರೆ.

ಮೃತನಿಂದಾದ ಮೈಲಿಗೆ ಕಳೆಯಲು ಮೂರನೆಯ ದಿನ ಬಟ್ಟೆಗಳನ್ನೊಗೆದು ಮಡಿ ಮಾಡುತ್ತಾರೆ. ಅಂದು ಕರ್ಮಾಂಗ ಅರಿತವನೊಬ್ಬ ಮೃತನ ಮನೆಗೆ ಬಂದು, ಅಂಗಳದ ಮೂಲೆಯಲ್ಲಿ ಅನ್ನ ಬೇಯಿಸುತ್ತಾನೆ. ಹಡಪಿಗ ಬಂದು ಕ್ರಿಯೆ ಹಿಡಿದವರಾದಿಯಾಗಿ, ಇಷ್ಟಪಟ್ಟ ಗಂಡಸರ ಗಡ್ಡಮೀಸೆಗಳನ್ನು ಬೋಳಿಸುತ್ತಾನೆ. ಅನಂತರ ಎಲ್ಲರೂ ಸ್ನಾನ ಮುಗಿಸಿ, ಕ್ರಿಯೆ ಹಿಡಿದವ ಹಾಗೂ ಇನ್ನಿಬ್ಬರು ಜನರೊಡನೆ ಕರ್ಮಾಂಗ ಬಲ್ಲವ ಎಲ್ಲರೂ ಶ್ಮಶಾನಕ್ಕೆ ಹೋಗುತ್ತಾರೆ. ಅಲ್ಲಿ ಮೃತನ ಬೂದಿಯನ್ನು ಒಟ್ಟುಗೂಡಿಸಿ, ಅಲ್ಲೊಂದು ತುಲಸಿಯ ಗಿಡ ನೆಟ್ಟು, ಸ್ವಲ್ಪ ಬೂದಿಯನ್ನು ತೆಗೆದುಕೊಂಡು, ಅಸ್ತಿಯನ್ನು ತೀರ್ಥಕ್ಷೇತ್ರದಲ್ಲಿ ಬಿಡುವ ಮನಸ್ಸಿದ್ದರೆ ಬೂದಿಯಿಂದ ಅಸ್ತಿಯನ್ನಾಯ್ದುಕೊಂಡು, ಮೃತನಿಗಾಗಿ ಬೇಯಿಸಿದ ಅನ್ನವನ್ನು ಎಡೆ ಮಾಡಿ ಕಾಗೆಗೆ ಬಡಿಸುತ್ತಾರೆ. ತೀರ್ಥಕ್ಷೇತ್ರದಲ್ಲಿ ಬಿಡುವ ಅಸ್ತಿಯನ್ನು ಒಂದು ಕರಡಿಗೆ ಇಲ್ಲವೆ ಗಳದ ಅಂಡೆಯಲ್ಲಿಟ್ಟುಕೊಂಡು, ಉಳಿದ ಅಸ್ತಿಬೂದಿಯನ್ನು ಸಮೀಪದ ಹರಿಯುವ ನೀರಿನಲ್ಲಿ ಬಿಡುತ್ತಾರೆ.

ಮೃತನ ಮನೆಯಲ್ಲಿ ಒಂದು ವರ್ಷದವರೆಗೆ ಮೃತನ ಹೆಸರಿನಲ್ಲಿ ಪ್ರತಿ ತಿಂಗಳು ಹಾಗೂ ವರ್ಷದ ದಿನ ಮೀಸಲು ಹಾಕುತ್ತಾರೆ. ಇಲ್ಲಿಗೆ ಮೃತನಿಗೆ ಸಲ್ಲಿಸುವ ಕ್ರಿಯಾ ಕರ್ಮಗಳೆಲ್ಲವೂ ಮುಗಿಯುತ್ತವೆ. ಪಿತೃಪಕ್ಷದಲ್ಲಿ ಅನ್ನ ಹಾಕುವುದನ್ನು ಬಿಟ್ಟರೆ ಗೌಳಿಗರಲ್ಲಿ ಶ್ರಾದ್ಧ ಕರ್ಮವನ್ನು ಮಾಡುವ ವಿಧಿಯಿಲ್ಲ. ಈಗ ಕಾಲ ಬದಲಾಗಿದೆ. ಸುಶಿಕ್ಷಿತರಾದ ಕೆಲವರು ಮೇಲ್ವರ್ಗದವರನ್ನು ಅನುಸರಿಸಿ, ಶ್ರಾದ್ಧಕರ್ಮವನ್ನು ಮಾಡುತ್ತಾರೆ.

**ಮಕ್ಕಳ ಸಂಸ್ಕಾರ** : ಆರು ವರ್ಷದ ಒಳಗಿನ ಮಕ್ಕಳು ಸತ್ತರೆ ಅವರನ್ನು ಸುಡುವ ಪದ್ಧತಿಯಿಲ್ಲ, ಅವರನ್ನು ಹುಗಿಯುತ್ತಾರೆ. ಅವರ ಸೂತಕವನ್ನೂ ಹಿಡಿಯುವುದಿಲ್ಲ.

**ಪಾಲಿಸುವ ನಿಷೇಧಗಳು** :

೧. ಮೃತನ ಮನೆಯ ತುಲಸಿಗೆ ೧೧ ದಿನದವರೆಗೆ ಪೂಜೆ ಮಾಡಕೂಡದು.

೨. ಸೂತಕ ಆಚರಿಸುವವರ ಮನೆಯಲ್ಲಿ ಉಣ್ಣಕೂಡದು.

೩. ಸೂತಕ ಸಮಯದಲ್ಲಿ ಮಂಗಲ ಕಾರ್ಯ ಮಾಡಕೂಡದು.

೪. ಸುಡುಗಾಡಿಗೆ ಹೆಣವನ್ನು ಒಯ್ಯುವಾಗ ನೀರಿನ ಪಾತ್ರೆ ಇಲ್ಲವೇ ಅಡಿಗೆಯ ಪಾತ್ರೆಗಳನ್ನು ಮುಚ್ಚಿಟ್ಟು ಸ್ಮಶಾನಕ್ಕೆ ಹೋಗಬಾರದು. ಸತ್ತವರ ಜೀವ ಪಾತ್ರೆಯ ಒಳಗೆ ಉಳಿಯುತ್ತದೆ. ಪಾತ್ರೆಯ ಮುಚ್ಚಳ ತೆಗೆದಾಗ ಸ್ಮಶಾನಕ್ಕೆ ಒಯ್ದ ಹೆಣ ಜೀವ ತಾಳುತ್ತದೆ ಎಂಬ ನಂಬಿಕೆಯಿದೆ. ಇಂಥ ಘಟನೆಯೊಂದನ್ನು ನೆನಪಿಸುತ್ತಾರೆ.

೫. ಹೆಣವನ್ನು ಸುಟ್ಟು ಬರುವಾಗ ಹಿಂತಿರುಗಿ ನೋಡಕೂಡದು. ಹೀಗೆ ಹಲವಾರು ನಿಷೇಧಗಳನ್ನು ಪಾಲಿಸುವುದಿದೆ.

ಯಾವುದೇ ಬುಡಕಟ್ಟು ಜನಾಂಗ ತಾವು ತಲತಲಾಂತರಗಳಿಂದ ಜೀವಿಸಿದ ಪರಿಚಿತ ಪರಿಸರದಲ್ಲಿ ತಮ್ಮ ಪೂರ್ಣಮಟ್ಟದ ಬುಡಕಟ್ಟು, ಸಂಸ್ಕೃತಿಯ ನೆಮ್ಮದಿಯ ಬದುಕಿನ ಚಟುವಟಿಕೆ

ಗಳಿಗಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ ಕಾಡನ್ನು ಹಳ್ಳಿಯ ಸುತ್ತಲು ಸಾಂಪ್ರದಾಯಿಕವಾಗಿ ಗುರುತಿಸಿಕೊಂಡ ಸಾಂಸ್ಕೃತಿಕ ಗಡಿರೇಖೆಯನ್ನು ಸೀಮಾ/ಜಮ್ಮಾ/ಎಲ್ಲೆ ಗಡಿ ಎಂದು ಕರೆಯಲಾಗುತ್ತದೆ. ಇದನ್ನೇ ಸೀಮಾ ಪದ್ಧತಿಯೆಂದು ಕರೆಯುತ್ತಾರೆ. ತಲಾತಲಾಂತರಗಳಿಂದ ಮಡಿದ ಬುಡಕಟ್ಟು ಪೂರ್ವಜರ ಆತ್ಮಗಳು ಈ ಸೀಮಾ ರೇಖೆಯ ಒಳಗಿನ ಕ್ಷೇತ್ರದಲ್ಲಿ ನೆಲೆಸಿದ್ದು, ಕಾಡನ್ನು ಮತ್ತು ಕಾಡಿನ ಸಂಪನ್ಮೂಲಗಳನ್ನು ಬುಡಕಟ್ಟು ಹಳ್ಳಿಯವರಿಗಾಗಿ ರಕ್ಷಿಸುತ್ತಾ ಸಂಚರಿಸುತ್ತಿರುತ್ತವೆ. ಇವರ ಆತ್ಮಗಳು ಹಳ್ಳಿಯ ಗಡಿ ರೇಖೆಯ ಅಂಚುಗಳಲ್ಲಿ ಕಲ್ಲಿನ ಗುಂಡಿನ ರೂಪದಲ್ಲಿಯೂ, ಮರಗಳಲ್ಲಿಯೂ ಇದ್ದೂ ಸೀಮೆಯನ್ನು ರಕ್ಷಿಸಿರುತ್ತಾರೆಂಬ ಗಾಢವಾದ ನಂಬಿಕೆಯಿಂದಾಗಿ ಆ ಬುಡಕಟ್ಟು ಜನಾಂಗಕ್ಕೆ ಗಡಿಯ ವ್ಯಾಪ್ತಿಯ ಒಳಗಿನ ಬದುಕು ನಿಶ್ಚಿಂತೆ ಯಿಂದಿರುತ್ತದೆ. ಹೀಗೆ ಮಡಿದವರ ಆತ್ಮಗಳಲ್ಲದೆ ಆತ್ಮಗಳನ್ನು ರಕ್ಷಿಸುವ ದೇವತೆಗಳು, ರಕ್ಷಣಾ ದೇವರುಗಳು ಬೇರೆ ಬೇರೆಯವೆ ಇದ್ದು, ಒಂದಕ್ಕೊಂದು ಪರಸ್ಪರ ಪೂರಕವಾಗಿ ಸೀಮಾ ಕ್ಷೇತ್ರದ ವ್ಯಾಪ್ತಿಯ ಸಂರಕ್ಷಣೆಯ ಜವಾಬ್ದಾರಿಯನ್ನು ಹೊಂದಿರುತ್ತವೆ.

ಇತರ ಬುಡಕಟ್ಟು ಜನಾಂಗಗಳಂತೆ ಅಭಿವೃದ್ಧಿ ಹೆಸರಿನಲ್ಲಿ ಸರ್ಕಾರದ ಕಾಯ್ದೆ ಕಾನೂನುಗಳು, ಅರಣ್ಯ ಕಾಯ್ದೆಗಳನ್ನು ಆಣೆಕಟ್ಟು ನಿರ್ಮಾಣ, ಗಣಿ ಕೈಗಾರಿಕೆಗಳು, ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ, ಸ್ಥಳಾಂತರ, ಪುನರ್ ವಸತಿ, ವಲಸೆ, ನಾಗರೀಕತೆಯ ದಾಳಿ ಹಾಗೂ ಮೇಲ್ವರ್ಗದವರ ಮತ್ತು ಜಮೀನ್ದಾರರುಗಳು ದಾಳಿಗಳಿಗೆ ತತ್ತರಿಸಿ ನಲುಗುತ್ತಿರುವ ಗೌಳಿಗ ಸಂಸ್ಕೃತಿ ತೀವ್ರ ಆತಂಕದ ಸ್ಥಿತಿಗೆ ಗಲುಪಿದ್ದು ಬುಡಕಟ್ಟು ಸಂಸ್ಕೃತಿಯ ಎಲ್ಲಾ ಮೌಲ್ಯಗಳು ಅವನತಿಯ ಅಂಚಿಗೆ ಸಂದು ಇವರ ಜೀವನ ಅಧೋಗತಿಗಿಳಿಯುತ್ತಿದೆ.

ತಮ್ಮದೇ ಆದ ಸಂಸ್ಕೃತಿಯ ನೆಲೆಯಲ್ಲಿ ಜೀವಿಸಿ ಹಿಂದುಳಿದ ವರ್ಗಗಳಲ್ಲಿ ಬರುವ ಕಡುಬಡತನದಲ್ಲಿರು ಗೌಳಿಗ ಸಮುದಾಯದಲ್ಲಿ ಬದಲಾವಣೆ ಕಾಣುತ್ತೇವೆ. ಅವನತಿಯ ಅಂಚಿನಲ್ಲಿ ತಲುಪಿತ್ತಿದೆ.

ಹಿಂದೆ ಗೌಳಿಗರ ಮಹಿಳೆಯರು ಮದುವೆ ಸಂದರ್ಭದಲ್ಲಿ ಹಾಡುವ ಸೋಬಾನೆ ಪದಗಳು, ತೊಟ್ಟಿಲು ತೂಗುವಾಗ ಹಾಡುವ ಜೋಗುಳಗಳು, ಅನೇಕ ಕಥನಗೀತೆಗಳು ಇವುಗಳಲ್ಲಿರುವ ಲಯ, ಸಂಗೀತದ ಗುಣ ಶ್ರೀಮಂತಿಕೆಯಿಂದ ಕೂಡಿದೆ. ಆದರೆ ಈ ಪದಗಳು ಇಂದು ಕ್ಯಾಸೆಟ್ ಲೋಕ ಮತ್ತು ನಾಗರೀಕತೆಯ ಕರಾಳರೂಪದಿಂದಾಗಿ ನಶಿಸುತ್ತಿವೆ. ಬಹಳ ಹಿಂದೆ ಸೋಬಾನೆ ಪದಗಳನ್ನು ಹೆಚ್ಚಿನ ಎಲ್ಲಾ ಗೌಳಿಗ ಮಹಿಳೆಯರು ಹಾಡುತ್ತಿದ್ದರು. ಆದರೆ ಇಂದು ಆ ಪಗಳಾವುವು ಇಂದಿನ ಯುವತಿಯರಲ್ಲಿ ಕಂಡುಬರುವುದಿಲ್ಲ. ಗೌಳಿಗರ ವೇಷಭೂಷಣಗಳಲ್ಲಿ ಆಧುನಿಕತೆ ಪ್ರವೇಶಿಸಿದೆ. ಎಲ್ಲಾ ಜನಾಂಗದವರಂತೆ ಇವರು ಕೂಡ ಬದಲಾಗುತ್ತಿದ್ದಾರೆ.

ಮುಖ್ಯವಾಹಿನಿಯೆಡೆಗೆ ಒಂದು ಜನಾಂಗ ವಿವಿಧ ಸ್ತರಗಳಲ್ಲಿ ಬದಲಾವಣೆ ಹೊಂದುತ್ತಿರುವಾಗ ಅನೇಕ ಪರಿಣಾಮಗಳು ಆಗಬಹುದು. ಲಾಭದ ಜೊತೆಯಲ್ಲಿ ಸ್ವಲ್ಪ ನಷ್ಟ ಎನ್ನುವಂತೆ ಆಧುನಿಕತೆಗೆ ಮುಖಮಾಡಿ ನಿಂತಾಗ ಕೆಲವೊಂದು ಅಂಶಗಳು ನಶಿಸುತ್ತವೆ. ಸಾಮಾಜಿಕ, ಆರ್ಥಿಕ ಕ್ಷೇತ್ರದಲ್ಲಿ ಬದಲಾವಣೆ ಆಗುತ್ತಾ ಸಮಾಜದಲ್ಲಿ ಹಿಂದುಳಿದ ಜನಾಂಗ ಹೇಗೆ ಗೌರವಕ್ಕೆ ಪಾತ್ರವಾಗುತ್ತದೆ ಎಂಬುದಕ್ಕೆ ಗೌಳಿಗ ಸಮುದಾಯವೇ ಸಾಕ್ಷಿ.

## ಆಧಾರಗಳು


೧. ಅಂಬಳಿಕೆ ಹಿರಿಯಣ್ಣ, ಕಚ್ಚೆಗೌಳಿಗರು, ಉಪಸಂಸ್ಕೃತಿ ಮಾಲೆ, ೧೯೯೩, ಪು.೫೧-೫೮

೨. ಮಹೇಶ್ವರಯ್ಯ ಎಚ್.ಎಂ., ಕರ್ನಾಟಕ ಬುಡಕಟ್ಟುಗಳು, ಸಂಪುಟ, ೨೦೦೦, ಕರ್ನಾಟಕ ಜನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು. ೧೦೬-೧೨೪, ೧೨೭-೧೨೮

೩. ನಾಯಕ ಎನ್.ಆರ್., ಗ್ರಾಮೊಕ್ಕಲು ಒಂದು ಸಾಂಸ್ಕೃತಿಕ ಅಧ್ಯಯನ, ಜಾನಪದ ಪ್ರಕಾಶನ, ಹೊನ್ನವಾರ, ಪು. ೪೧-೪೫, ೬೫, ೮೨-೮೪

೪. ಇಂದಿರಾ ಆರ್., ಮಹಿಳೆ ಸಮಾಜ ಮತ್ತು ಸಾಂಸ್ಕೃತಿ, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೬-೩೧, ೩೪-೩೭, ೪೨-೪೭, ೫೦-೫೨, ೫೬, ೧೪೪-೧೪೬, ೧೪೯-೧೫೧

೫. ಕವಿತಾ ಪೈ, ವಿವಾಹ ಮತ್ತು ಕುಟುಂಬ, ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೨-೨೪, ೨೭-೩೦

೬. ಕರೀಗೌಡ ಬೀಚನಹಳ್ಳಿ, ಕರಕುಶಲ ಕಲೆಗಳು, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೦೩-೧೧೦, ೭೪-೭೯, ೪೩-೪೪, ೧೫೨-೧೫೭, ೨೯೨

೭. ಹಾಲಕ್ಕಿ ಒಕ್ಕಲಿಗರ ಸಂಸ್ಕತಿ, ೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧೫೭

೮. ಸವಿತಾ ನಾಯಕ, ಬುಡಕಟ್ಟು ಮಹಿಳೆಯರ ಪ್ರಸಾಧನ ಕಲೆ, ೨೦೦೦,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ನಾಗೇಶ ಎಚ್., ಗ್ರಾಮೀಣ ನ್ಯಾಯ, ೧೯೯೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಮಹೇಶ್ವರಯ್ಯ ಎಚ್., ಲೇ. ಜಾನಪದ ಹೊಸದೃಷ್ಟಿ, ಸ್ತ್ರೀವಾದ ಸಾಂಸ್ಕೃತಿ ನೆಲೆಗಳು,

೧೧. ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ, ೧೯೯೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ದೈವರಾಧನೆ, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಜೋತ್ಸ್ನಾನ್ ಕಾಮತ್, ಮಹಿಳೆ ಅಂದು ಇಂದು, ೨೦೦೧, ಪ್ರೇಮಸಾಯಿ ಪ್ರಕಾಶನ, ಬೆಂಗಳೂರು.

೧೪. ಬಸವರಾಜ ಸಬರದ, ಜನಪದ ದೈವಗಳು, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ನಾಯಕ ಎನ್.ಆರ್., ಜನಪದ ಸಾಂಬರು ಬಟ್ಟಲು, ೧೯೯೨, ಜಾಪನದ ಪ್ರಕಾಶನ, ಹೊನ್ನಾವರ.

೧೬. ನಾಯಕ ಎನ್.ಆರ್., ಜಾನಪದ ಮೆಲಕು, ೧೯೮೭, ಜಾನಪದ ಪ್ರಕಾಶನ, ಹೊನ್ನಾವರ.

೧೭. ಸ್ವಾಮಿ ಬಿ.ಎಸ್., ಜಾನಪದ ಐಸಿರಿ, ೨೦೦೬, ದಾಮಿನಿ ಸಾಹಿತ್ಯ, ಬೆಂಗಳೂರು.

೧೮. ನಂಜಮ್ಮಣ್ಣಿ ಎಂ., ಭಾರತೀಯ ಸಾಮಾಜಿಕ ಸಂಸ್ಥೆಗಳು, ೨೦೦೩, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೯. ನೀಲಮ್ಮ, ಮಹಿಳೆ ಹಲವು ಮುಖಗಳು, ೧೯೯೭, ಕಿರಣ ಪ್ರಕಾಶನ, ರತ್ನಳ್ಳಿ.

೨೦. ಸಂಧ್ಯಾರೆಡ್ಡಿ ಕೆ.ಆರ್., ಜನಪದ ಸಾಹಿತ್ಯದಲ್ಲಿ ಮಹಿಳೆ, ೧೯೯೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೧. ಶಾರದಾ ಶಾಮಣ್ಣ, ಜನಪದ ನೆಲೆಯಲ್ಲಿ ಮಹಿಳೆ, ೧೯೯೩, ಕಳಸ ಪ್ರಕಾಶನ, ಬೆಂಗಳೂರು.

೨೨. ವೀಣಾ ಎಂ.ಪಿ., ಮನೆ ಸಮಾಜ ಸಂಸ್ಕೃತಿ, ೨೦೦೦ ನೆಲಮನೆ ಪ್ರಕಾಶನ, ಮಂಡ್ಯ.

೨೩. ತಿಪ್ಪೇರುದ್ರಸ್ವಾಮಿ ಎಚ್., ಮಲೆನಾಡು ಜಾನಪದ, ೧೯೮೨, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೪. ಭೈರೇಗೌಡ ಎಂ., ಜನಪದ ವೈವಿಧ್ಯ, ೧೯೯೯, ಶಕ್ತಿ ಮುದ್ರಣ ಪ್ರಕಾಶನ, ಬೆಂಗಳೂರು.

# ಅಧ್ಯಾಯ ೩

## ಮಹಿಳೆ ಮತ್ತು ಆರ್ಥಿಕತೆ

೩.೧ ಸಮುದಾಯದ ಮಹಿಳೆ ಮತ್ತು ಪಾರಂಪರಿಕ ಕಸುಬು ಪಶುಪಾಲನೆ

೩.೨ ಪಶುಪಾಲನೆ

೩.೩ ಪಾರಂಪರಿಕ ಕಸುಬುಗಳ ಸ್ಥಿತಿಗತಿಗಳು

೩.೪ ಕೃಷಿ ಮತ್ತು ಮಹಿಳೆ

೩.೫ ಪಾರಂಪರಿಕ ಬೇಸಾಯಪದ್ಧತಿಗಳು
- ೩.೫.೧ ಆಹಾರ ಸಂಗ್ರಹಣೆ
- ೩.೫.೨ ಅರಣ್ಯ ಬೇಸಾಯ
- ೩.೫.೩ ಕುಂಬ್ರಿ ಬೇಸಾಯ
- ೩.೫.೪ ಮಳೆಯಾಧಾರಿತ ಬೇಸಾಯ

೩.೬ ಸಹಕಾರಿ ಸಂಘ–ಸಂಸ್ಥೆಗಳು
- ೩.೬.೧ ಕೃಷಿ ಉತ್ಪನ್ನ ಸಹಕಾರಿ ಸಂಘಗಳು
- ೩.೬.೨ ಸ್ವ–ಸಹಾಯ ಗುಂಪುಗಳು
- ೩.೬.೩ ಸ್ತ್ರೀಶಕ್ತಿ ಗುಂಪುಗಳು
- ೩.೬.೪ ಬುಟಕಟ್ಟೇತರ ಸೇವಾ ಸಂಸ್ಥೆಗಳು

೩.೭ ಆರ್ಥಿಕ ಸಮಸ್ಯೆಗಳು
- ೩.೭.೧ ಅರಣ್ಯಾಧಿಕಾರದ ಸಮಸ್ಯೆ
- ೩.೭.೨ ಪಶುಪಾಲನಾ ಸಮಸ್ಯೆ
- ೩.೭.೩ ಕೃಷಿ ಭೂಮಿಯ ಸಮಸ್ಯೆಗಳು
- ೩.೭.೪ ವ್ಯಾಪಾರ ಮತ್ತು ಮದ್ಯವರ್ತಿಗಳ ಸಮಸ್ಯೆಗಳು

ಅಧ್ಯಾಯ – ಮೂರು

# ಮಹಿಳೆ ಮತ್ತು ಆರ್ಥಿಕತೆ

**ಭಾ**ರತೀಯ ಸಮಾಜದಲ್ಲಿನ ಅತ್ಯಂತ ಪ್ರಾಚೀನ ಒಳವಿಂಗಡನೆ ಎಂದರೆ ಆದಿವಾಸಿ ಸಮೂಹವಾಗಿದೆ. ತಮ್ಮದೇ ಆದ ಸಂಸ್ಕೃತಿ, ಭಾಷೆ, ಜೀವನ ವಿಧಾನಗಳಿಂದ ತಮ್ಮ ನೆಲೆಗಳನ್ನು ನಿಸರ್ಗದಲ್ಲಿ ರೂಪಿಸಿಕೊಂಡ ಇಂಥ ಆದಿವಾಸಿಗಳು ಇಂದಿಗೂ ನಾಗರಿಕ ಬದುಕಿನ ಶೈಲಿಗಳಿಂದ ದೂರವಾಗಿದ್ದಾರೆ. ಭಾರತದ ಒಟ್ಟು ಜನಸಂಖ್ಯೆಯ ಪ್ರತಿಶತ ೮ ರಷ್ಟು ಪ್ರಮಾಣ ಆದಿವಾಸಿಗಳಿದ್ದಾರೆ. ೨೦೦೧ರ ಜನಗಣತಿಯ ಪ್ರಕಾರ ೬೯.೮೭% ಮಿಲಿಯನ್ ಆದಿವಾಸಿಗಳಿದ್ದಾರೆಂದು ಅಂದಾಜು ಮಾಡಲಾಗಿದೆ. ಭಾರತದ ಆದಿವಾಸಿಗಳ ಪುರುಷ ಜನಸಂಖ್ಯೆಗಿಂತ ಸ್ತ್ರೀ ಜನಸಂಖ್ಯೆ ಪ್ರತಿಶತ ೫ರಷ್ಟು ಕಡಿಮೆ ಇದೆ.

ಬ್ರಿಟಿಷರು ಭಾರತವನ್ನಾಳುತ್ತಿದ್ದ ಸಂದರ್ಭದಲ್ಲಿ ಅವರು ಇಲ್ಲಿನ ಸಮಾಜದ ರಚನೆಯನ್ನೇ ಬದಲಾಯಿಸಿದರು. ಭಾರತದಲ್ಲಿ ತನ್ನ ಆಡಳಿತವನ್ನು ಭದ್ರಪಡಿಸಿಕೊಳ್ಳಲು ವಸಾಹತುಶಾಹಿ ಸರ್ಕಾರವು ಅನೇಕ ಯೋಜನೆಗಳನ್ನು ಜಾರಿಗೆ ತಂದಿತು. ಅವುಗಳಲ್ಲಿ ಸಾರಿಗೆ–ಸಂಪರ್ಕ ಅಭಿವೃದ್ಧಿ, ಅರಣ್ಯ ಕಾನೂನುಗಳ ಜಾರಿ ಪ್ರಮುಖವಾದವು. ಬ್ರಿಟಿಷರು ರಸ್ತೆ ಸಾರಿಗೆಯನ್ನು ಅಭಿವೃದ್ಧಿಪಡಿಸಿದರು. ಬ್ರಿಟಿಷರ ಸಾರಿಗೆ ಅಭಿವೃದ್ಧಿ ಮತ್ತು ಅರಣ್ಯ ಕಾನೂನುಗಳ ಜಾರಿಯಿಂದ ಗೌಳಿಗರಿಗೆ ಅನಾನುಕೂಲ ಉಂಟಾಗಿ ಇವರ ಆರ್ಥಿಕ ಸ್ಥಿತಿ ಹಿಂದುಳಿದಿತ್ತು.

ಸ್ವಾತಂತ್ರ್ಯಾನಂತರ ಅವರಿಗೆ ರಾಜಕೀಯ ಸ್ವಾತಂತ್ರ್ಯ ದೊರೆತರೂ ಆರ್ಥಿಕ ಸ್ವಾತಂತ್ರ್ಯ ದೂರವಾಗಿಯೇ ಉಳಿದಿದೆ. ರಾಜಕೀಯವಾಗಿ ಭಾರತ ಸ್ವಾತಂತ್ರ್ಯಗೊಂಡ ನಂತರ ಇವರಿಗೂ

ರಾಜಕೀಯ ಸ್ವಾತಂತ್ರ್ಯ ಲಭಿಸಿದರೂ ಆರ್ಥಿಕವಾಗಿ ಬಡತನದಲ್ಲಿದ್ದು ಅವರಿಗೆ ಯಾವ ಬಗೆಯ ಸ್ವಾತಂತ್ರ್ಯ ದೊರೆತರೂ ಅದು ನಿರರ್ಥವೆಂದೇ ಹೇಳಬೇಕಾಗುತ್ತವೆ. ಕಳೆದ ಕೆಲವು ಶತಮಾನಗಳಲ್ಲಿ ಅನೇಕ ಮೂಲಭೂತ ಆರ್ಥಿಕ ಪರಿವರ್ತನೆಗಳು ಉಂಟಾಗಿವೆ. ಈ ಪರಿವರ್ತನೆಗಳಲ್ಲಿ ಪ್ರತಿಯೊಂದು ಸಮಾಜದ ಸ್ವರೂಪದ ಮೇಲೆ ನೇರವಾಗಿ ಅಥವಾ ಪರೋಕ್ಷವಾಗಿ ಪರಿಣಾಮಬೀರಿದೆ.

ಆಧುನಿಕರಣಗೊಂಡ ಇಂದಿನ ಈ ಸಮಾಜದಲ್ಲಿ ಆರ್ಥಿಕತೆಗೆ ಹೆಚ್ಚಿನ ಪ್ರಾತಿನಿದ್ಯವನ್ನು ನೀಡಲಾಗುತ್ತಿದೆ. ಗೌಳಿಗರು ಆರ್ಥಿಕ ಬದಲಾವಣೆಗಳಿಗೆ ಒಳಗಾಗಿದ್ದಾರೆ. ಯಾವುದೇ ಒಬ್ಬ ವ್ಯಕ್ತಿ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಆರ್ಥಿಕ ಚಟುವಟಿಕೆಗಳು ಮುಖ್ಯ ಪಾತ್ರವಹಿಸುತ್ತವೆ. ಗೌಳಿಗರು ಗೋವಾ ಮತ್ತು ಮಹಾರಾಷ್ಟ್ರದ ಕಡೆಗಳಿಂದ ವಲಸೆಬಂದು ಉತ್ತರಕನ್ನಡದ ಅರಣ್ಯ ಪ್ರದೇಶಗಳಲ್ಲಿ ನೆಲೆಸಲು ಪ್ರಾರಂಭಿಸಿದರು. ಪಶುಪಾಲನೆ ಮುಖ್ಯ ಕಸುಬು ಆಗಿರುವುದರಿಂದ ಅರಣ್ಯದಲ್ಲೇ ವಾಸಿಸಿ ಆರ್ಥಿಕ ಸ್ವಾವಲಂಬಿಗಳಾಗಿದ್ದರು.

ಕಾಲಕ್ರಮೇಣ ಊರು ಬೆಳೆದಂತೆ ಇತರ ಸಮುದಾಯದ ಪ್ರಭಾವ ಹಾಗೂ ಸಾರಿಗೆ-ಸಂಪರ್ಕ ವ್ಯವಸ್ಥೆಯ ಸುಧರಣಾ ಕ್ರಮದಿಂದಲೂ ಇವರಿಗೆ ಸಮಾಜದ ಮುಖ್ಯವಾಹಿನಿಯ ಸಂಪರ್ಕ ದೊರೆಯಿತು. ಪಶುಪಾಲನೆ ಹಾಗೂ ಜೀವನ ನಿರ್ವಹಣೆಗಾಗಿ ಹಲವು ಕಸುಬುಗಳನ್ನು ಕೂಡ ಅವಲಂಬಿಸಿದ್ದಾರೆ. ಬದಲಾದ ಆರ್ಥಿಕ ಪರಿಸ್ಥಿತಿಯೊಂದಿಗೆ ಇವರ ಜೀವನ ಕ್ರಮವೂ ಬದಲಾವಣೆಗೆ ಒಳಪಡುತ್ತಿದೆ. ಇವರ ಮನೆ ಹಾಗೂ ವೇಷಭೂಷಣದಿಂದ ಇವರ ಆರ್ಥಿಕಸ್ಥಿತಿ ಹೇಗಿದೆ ಎಂದು ಊಹಿಸಬಹುದಿತ್ತು. ಆದರೆ ಇಂದು ಇವರು ವ್ಯಾಪಾರಿ, ಕೂಲಿ ಕೃಷಿಕರಾಗಿ ಪರಿವರ್ತಿತರಾಗುತ್ತಿದ್ದಾರೆ.

ಇವರ ಆರ್ಥಿಕ ಸುಧಾರಣೆಯಲ್ಲಿ ಕೃಷಿ. ಕೃಷಿಕೂಲಿ, ವ್ಯಾಪಾರ, ಕೂಲಿನಾಲಿ ಎಂಬಿತ್ಯಾದಿ ಕಸುಬುಗಳ ಪಾತ್ರಹಿರಿದಾಗಿದೆ. ಇಂದು ಹಾಡಿಗಳಲ್ಲಿ ಕೆಲವು ವ್ಯಕ್ತಿಗಳ ಆರ್ಥಿಕಸ್ಥಿತಿಗತಿ ಉತ್ತಮಗೊಂಡಿದೆ. ಬಹುಪಾಲು ಜನರು ಒಣಭೂಮಿ ಕೃಷಿಕರಾಗಿ ಬೆಳೆ ಬೆಳೆಯಲು ಮಳೆಯನ್ನೇ ಅವಲಂಬಿಸಿದ್ದಾರೆ. ಕೆಲವರು ಆರ್ಥಿಕ ಬದಲಾವಣೆ ಹೊಂದಿ ಸ್ಥಿತಿವಂತರಾಗಿದ್ದಾರೆ. ಇವರು ಅನುಸರಿಸುವ ವೃತ್ತಿಗಳಲ್ಲಿ ಕೂಡ ಸಾಕಷ್ಟು ವ್ಯತ್ಯಾಸ ಹಾಗೂ ಬದಲಾವಣೆ ಆಗಿರುವುದು ಕಂಡುಬರುತ್ತದೆ. ಈ ಹಿಂದೆ ಅನುಸರಿಸುತ್ತಿದ್ದ ಪಾರಂಪರಿಕ ವೃತ್ತಿ ಇಲ್ಲವಾಗುತ್ತಾ ಪರ್ಯಾಯ ವೃತ್ತಿಯನ್ನಾಗಿ ಕೂಲಿ, ಕೃಷಿ, ಸಾಮಾನ್ಯ ವ್ಯಾಪಾರ ಮುಂತಾದವುಗಳನ್ನು ಕಂಡುಕೊಂಡಿದ್ದಾರೆ. ಗೌಳಿಗ ಮಹಿಳೆಯರು ಕೃಷಿ ಸಂಬಂಧವಾದ ಕಾರ್ಯಗಳಲ್ಲಿ ಅಂತೆಯೇ ಕರಕುಶಲಕಲೆ, ಅರಣ್ಯ ಮೂಲ ಸಂಪತ್ತಿನ ಸಂಗ್ರಹಣೆಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಾರೆ. ಒಂದು ಸಮುದಾಯದಿಂದ ಮತ್ತೊಂದು ಸಮುದಾಯದ ಮಹಿಳೆಯ ಸ್ಥಿತಿ ಬದಲಾಗುತ್ತದೆ. ಒಂದೊಂದು ಸಾಮಾಜಿಕ ವ್ಯವಸ್ಥೆ ಬದಲಾಗಿರುವುದೇ ಇದಕ್ಕೆ ಕಾರಣ. ಬಹುಪಾಲು ಆದಿವಾಸಿ ಸಮುದಾಯದಲ್ಲಿ ಮಹಿಳೆಯರನ್ನು ಕೆಳಸ್ತರದಲ್ಲಿ ನೋಡಲಾಗುತ್ತದೆ. ಗೌಳಿಗ ಸಮುದಾಯದಲ್ಲೂ ಕೂಡ ಮಹಿಳೆಯರಿಗೆ ಒಳ್ಳೆಯ ಸ್ಥಾನ-ಮಾನವನ್ನು ನೀಡಿಲ್ಲ ಎನ್ನಬಹುದು. ಆರ್ಥಿಕ ಅಂಶಗಳಿಗೆ ಸಂಬಂಧಿಸಿದಂತೆ ಗೌಳಿಗ ಮಹಿಳೆ

ಗಮನಾರ್ಹ ಕೊಡುಗೆಯನ್ನು ಕೊಡುವುದರ ಮೂಲಕ ಮಹಿಳೆಯರು ಕ್ರಮವಾಗಿ ಶೇಕಡ ೭೫ ರಷ್ಟು ಕಾರ್ಮಿಕ ದುಡಿಮೆಯಲ್ಲಿ ಭಾಗಿಯಾಗಿದ್ದಾರೆ.

ಮಹಿಳಾ ಕಾರ್ಮಿಕ ಶ್ರಮದ ಬಹುಪಾಲನ್ನು ಗೌಳಿಗ ಮಹಿಳೆಯರು ವಹಿಸಿಕೊಂಡಿದ್ದಾರೆ. ಹೈನುಗಾರಿಕೆ, ಕೃಷಿ ಕಾರ್ಮಿಕರಾಗಿ ಹಾಗೂ ಮನೆಗೆಲಸಗಳನ್ನು ನಿರ್ವಹಿಸಬೇಕಾಗುತ್ತದೆ. ಕೃಷಿ ಕಾರ್ಯದಲ್ಲಿ ದುಡಿಯುತ್ತ ಹಾಗೂ ಬಿಡುವಿನ ವೇಳೆಯ ಸಂದರ್ಭದಲ್ಲಿ ಋತುಮಾನಕ್ಕೆ ಅನುಗುಣವಾಗಿ ದೊರೆಯುವ ಹಣ್ಣುಹಂಪಲು, ಅಂಟು, ಹಣ್ಣಿನಬೀಜ, ಸೀಗೆಕಾಯಿ, ಬಿದಿರು, ಔಷಧ ಸಂಗ್ರಹ, ಸೌದೆ ಮುಂತಾದವುಗಳನ್ನು ಸಂಗ್ರಹಿಸಿ ಇವು ವ್ಯಾಪಾರ ಮತ್ತು ಗೃಹೋಪಯೋಗಕ್ಕೆ ಬರುತ್ತವೆ. ಪಶುಸಾಕಣೆ, ಕೋಳಿಸಾಕಣೆಯೂ ಮಹಿಳೆಯರದ್ದೇ ಆಗಿದೆ. ಮಾರುಕಟ್ಟೆಯ ಜವಾಬ್ದಾರಿಯನ್ನು ಅವಳೇ ನಿರ್ವಹಿಸುತ್ತಾಳೆ. ಮಹಿಳೆಯ ದುಡಿಮೆಯ ಲಾಭ ಆಕೆಗೆ ಆರ್ಥಿಕ ಸ್ವಾತಂತ್ರ್ಯ ಹಾಗೂ ಮಾನಸಿಕ ಸಾಮರ್ಥ್ಯವನ್ನು ನೀಡುತ್ತವೆ. ಇವು ಆಕೆಯಲ್ಲಿ ಸ್ವಾಭಿಮಾನ ಉಂಟಾಗುವಂತೆ ಮಾಡುತ್ತವೆ. ಸ್ತ್ರೀಶಕ್ತಿ ಸಂಘ, ಸ್ವ-ಸಹಾಯ ಗುಂಪು ಇವುಗಳಿಂದ ಮಹಿಳೆಯರಲ್ಲೂ ಆರ್ಥಿಕ ಬದಲಾವಣೆ ಕಂಡುಬರುತ್ತಿವೆ. ಒಂದು ನಿರ್ದಿಷ್ಟ ಆದಿವಾಸಿ ಸಮುದಾಯದ ರಚನೆ ಹಾಗೂ ತತ್ವಗಳು ಆಕೆಯ ಸ್ಥಾನವನ್ನು ನಿರ್ದೇಶನ ಮಾಡುತ್ತವೆ.

**೩.೧ ಸಮುದಾಯದ ಮಹಿಳೆ ಮತ್ತು ಪಾರಂಪರಿಕ ಕಸುಬು ಪಶುಪಾಲನೆ**

ಗೌಳಿಗ ಮಹಿಳೆ ಪಾರಂಪರಿಕ ಕಸುಬು ಪಶುಪಾಲನೆ. ಪಶುಪಾಲನೆ ಇಲ್ಲವೇ ಹೈನುಗಾರಿಕೆ ಕ್ಷೇತ್ರದಲ್ಲಿ ಸ್ತ್ರೀಯರ ಪಾತ್ರ ಪ್ರಮುಖವಾದದ್ದು. ಮಹಿಳೆಯರ ಸ್ಥಾನ-ಮಾನ ನಿರ್ಧರಿಸುವಲ್ಲಿ ಅವರ ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಸಾಮಾಜಿಕ ಮಹಿಳೆಯರ ಸ್ಥಾನ-ಮಾನ ಪುರುಷರ ಸ್ಥಾನಮಾನಗಳಿಗಿಂತ ಕೆಳದರ್ಜೆ ಯಾಗಿರುವುದು ಸರ್ವವಿದಿತ. ದೇಶದ ಎಲ್ಲಾ ಸಂಸ್ಕೃತಿಯಲ್ಲೂ ಪುರುಷರಿಗೆ ಮೊದಲ ಸ್ಥಾನವಿದ್ದು ಮಹಿಳೆಯರಿಗೆ ನಂತರದ ಸ್ಥಾನವಿದೆ. ಮಹಿಳೆಯರ ಸ್ಥಾನಮಾನಗಳು ಆಯಾ ಜಾತಿಸ್ತರಗಳಿಗೆ ಅನುಸಾರ ಹಂಚಲ್ಪಟ್ಟಿವೆ. ಆದಿವಾಸಿ ಸಮುದಾಯದ ಅದರಲ್ಲೂ ಗೌಳಿಗ ಮಹಿಳೆಯರ ಜೀವನ ನಾಡಿನ ಮಹಿಳೆಯರ ಬದುಕಿಗಿಂತ ಭಿನ್ನವಾಗಿವೆ. ಬಹುತೇಕ ಇವರದೆಲ್ಲಾ ಕಾಡು, ಕಾಡಂಚಿನವಾಸ, ಇವರು ವಾಸಿಸುವ ಸ್ಥಳಗಳನ್ನು ಹಟ್ಟಿ, ಹಾಡಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಗೌಳಿಗ ಸಮುದಾಯಗಳಲ್ಲೂ ಜಾತಿ, ಕೀಳರಿಮೆ ಕಾಣಬುದು. ಆದಿವಾಸಿ ಮಹಿಳೆಯರನ್ನು ಒಳಗೊಂಡಂತೆ ಪ್ರಪಂಚದ ಎಲ್ಲಾ ದೇಶಗಳಲ್ಲೂ ಕುಟುಂಬ ನಿರ್ವಹಣೆ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮಹಿಳೆಯರ ದುಡಿಮೆ ಅಪಾರವಾದುದು.

ಪಶುಪಾಲನೆ ಇಲ್ಲವೇ ಹೈನುಗಾರಿಕೆ ಕ್ಷೇತ್ರದಲ್ಲಿ ಸ್ತ್ರೀಯರ ಪಾತ್ರ ಮಹತ್ವವಾದದ್ದು ಗೌಳಿ ವಾಡಾಗಳಲ್ಲಿ ಸ್ತ್ರೀಯರು ದನಕರುಗಳನ್ನು ಸಾಕುತ್ತಾರೆ. ಮತ್ತು ಹಾಲು ಕರೆಯುತ್ತಾರೆ. ಸ್ತ್ರೀಯರು ಹಾಲನ್ನು ಮಾರುತ್ತಾರೆ. ಹೆಂಗಸು ಮನೆಯಲ್ಲಿ ಕೆಲಸ ಮಾಡುವ ಜೊತೆಗೆ ಜಾನುವಾರು ಉತ್ಪನ್ನ ಕಾರ್ಯದಲ್ಲಿ ಶೇಕಡ ೭೫ ಭಾಗವನ್ನು ಮಹಿಳೆಯರು ನಿರ್ವಹಿಸುತ್ತಾರೆ. ಎಮ್ಮೆ, ದನಕರುಗಳು

ಅಸ್ವಸ್ಥಗೊಂಡಾಗ ಅವನ್ನು ಉಪಚರಿಸುವುದು, ಸ್ತ್ರೀಯರ ಕೆಲಸವಾಗಿದೆ. ಜೊತೆಗೆ ಪಟ್ಟಣ ಪ್ರದೇಶಗಳಿಗೆ ಹಾಲು ಮಾರಾಟಮಾಡುವ ಹೈನು ಉತ್ಪಾದಕರ ಸಮಸ್ಯೆಗಳು ಸಾಕಷ್ಟಿದ್ದವು. ಅಂದರೆ ಹಾಲಿನಲ್ಲಿನ ಕೊಬ್ಬಿನ ಅಂಶಕ್ಕನುಗುಣವಾಗಿ ಅವರಿಗೆ ಬೆಲೆ ಸಿಗುತ್ತಿರಲಿಲ್ಲ. ಪರಿಣಾಮವಾಗಿ ಉತ್ಪಾದಕರಿಗೆ ಈ ಕ್ಷೇತ್ರ ಅಪಸ್ವರವೂ ಮತ್ತು ಪೇಟೆ ಪರಿಮಿತವೂ ಆಗಿತ್ತು.

ಗೌಳಿಗ ಮಹಿಳೆಯರಿಗೆ ತಮ್ಮ ಪ್ರಾಣಿಗಳಿಗಾಗಿ ಪಶು ಆರೋಗ್ಯ ಸೇವೆಯನ್ನು ಪಡೆಯುವುದು ಕಷ್ಟವಾಗಿತ್ತು. ಆದ್ದರಿಂದ ಎಮ್ಮೆ, ದನಕರುಗಳ ಆರೋಗ್ಯವನ್ನು ನೋಡಿಕೊಳ್ಳುವುದು ದುರ್ಬರವಾಗಿತ್ತು. ಅದು ಒಣ ಮತ್ತು ಅರಣ್ಯ ಇಲಾಖೆಯವರ ಪ್ರದೇಶ. ಇವುಗಳಿಂದ ಮೇವು ದೊಡ್ಡ ಸಮಸ್ಯೆಯಾಗಿತ್ತು. ಗೌಳಿಗರು ಹೊಂದಿದ್ದ ಎಮ್ಮೆ, ದನಕರುಗಳ ಶ್ರೇಷ್ಠತೆ ಸಾಮಾನ್ಯ ರೀತಿಯದು ಮತ್ತು ಹಾಲು ಉತ್ಪನ್ನವು ಅತಿ ಕಡಿಮೆ. ಅದಕ್ಕೆ ಹಾಲು ಉತ್ಪನ್ನದಿಂದ ಜೀವನಾಧಾರ ವರಮಾನಗಳಿಸುವ ಅವರ ಸಾಮಾರ್ಥ್ಯವು ಪರಿಮಿತವಾದದ್ದು, ತಮ್ಮ ಹಾಲಿಗಾಗಿ ಹೆಚ್ಚಿನ ಬೆಲೆ ದೊರೆತಲ್ಲಿ ತಮಗೆ ಅದೊಂದು ಒಳ್ಳೆಯ ವರಮಾನವೆಂದು ಮಹಿಳೆಯರು ಭಾವಿಸಿದ್ದರು.

ನಸುಕಿನಲ್ಲಿ ಮಹಿಳೆಯರು ಎದ್ದು ದನಗಳಿಗೆ ಸ್ನಾನ ಮಾಡಿಸಿ ಮೇವು ಕೊಟ್ಟು ಹಾಲನ್ನು ಕರೆದು ಕ್ಯಾನುಗಳಲ್ಲಿ ತುಂಬಿ ಐದು-ಆರು ಕಿಲೋಮೀಟರ್ ಸಹಜವಾಗಿ ನಡೆಯುವರು. ಮಾರಾಟ ವಾಗದೇ ಉಳಿದ ಹಾಲನ್ನು ಹೆಪ್ಪುಹಾಕಿ ಮೊಸರುಮಾಡಿ ನೆರೆ-ಹೊರೆಯವರಿಗೆ ಮಾರಿ ಗೌಳಿ ಮಹಿಳೆಯರು ಕೊಂಚ ಹಣ ಸಂಪಾದಿಸುವರು. ಬೆಣ್ಣೆ-ತುಪ್ಪಗಳನ್ನು ತಯಾರಿಸಿ ಮಾರುವುದುಂಟು. ಈ ರೀತಿಯಾಗಿ ಬಂದ ಗಳಿಕೆ ಹಣವನ್ನು ಆಪದ್ಧನವೆಂದು ಪರಿಗಣಿಸಿ ತಾವೇ ನಿಯಂತ್ರಿಸುವರು. ಇದಲ್ಲದೇ ಗೊಬ್ಬರಕ್ಕಾಗಿ ಮಾರಿದ ಸೆಗಣಿ, ಹಿತ್ತಿಲಲ್ಲಿ ಬೆಳೆಸ ಬಾಳೆಗೊನೆಗಳನ್ನು ವಿಕ್ರಯಿಸಿ ಬಂದ ಕಾಸನ್ನು ತಮ್ಮ ಬೊಕ್ಕಸಕ್ಕೆ ಸೇರಿಸವರು. ಸಂತೆ ಜಾತ್ರೆಗಳಲ್ಲಿ ಈ ಹಣವನ್ನು ಹಚ್ಚೆ ಹಾಕಿಸಿಕೊಳ್ಳಲಿಕ್ಕೆ ಅಥವಾ ಇನ್ನುಳಿದ ಸೌಂದರ್ಯ ಸಾಮಾಗ್ರಿಗಳನ್ನು ಖರೀದಿಸುವುದಕ್ಕೆ ಬಳಕೆ ಮಾಡುತ್ತಾರೆ. ಕೇವಲ ಆರ್ಥಿಕ ಕ್ಷೇತ್ರದಲ್ಲಿ ಉತ್ಪಾದನೆಯ ಒಂದು ಮುಖ್ಯ ಸಾಧನವಾದ ಪಶುಪಾಲನೆಯ ವೃತ್ತಿಯ ಬಗೆಯನ್ನೇ ಇಲ್ಲಿಯವರೆಗೆ ವಿವೇಚಿಸಲಾಯಿತು. ಅವರ ಇನ್ನೊಂದು ಮುಖ್ಯ ವಾಣಿಜ್ಯವೂ ಇದೆ. ಆ ಕ್ಷೇತ್ರದಲ್ಲಿ ಮಹಿಳೆ ಪ್ರವೇಶಿಸಿ ಅಲ್ಲಿಯ ಏರಿಳಿತಗಳನ್ನು ಬಗೆಬಗೆಯ ಬದಲಾವಣೆಗಳನ್ನು ಎದುರಿಸಿ ಯಶಸ್ವಿಯಾಗುವದು ಕಠಿಣ. ಅಲ್ಲಿಯ ಅನಿಯಮಿತ ಜೀವನದಲ್ಲಿ ಆಕೆಯ ಮನೆಯ ವ್ಯವಸ್ಥೆ ತಲೆಕೆಳಗಾಗಬರದು. ವೃತ್ತಿಯಲ್ಲಿ ಆಯಾ ಶಾಖೆಯ ರಕ್ಷಣೆಯಾದರೂ ಅವಳಿಗಿರುತ್ತದೆ. ಆದರೆ ವಾಣಿಜ್ಯದ ವಿಶಾಲ ಪ್ರಪಂಚದಲ್ಲಿ ಆಕೆ ಸ್ವಂತ ಯೋಗ್ಯತೆಯ ಬಲದಿಂದ ನಿಲ್ಲಬೇಕಾಗುವುದು. ಗೌಳಿಗ ಮಹಿಳೆಯರಲ್ಲೂ ಹಣ ಪುರುಷರ ಪಾಲಿಗೆ, ದುಡಿಮೆ ಮಹಿಳೆಯರ ಪಾಲಿಗೆ ತನಗೆ ಬೇಕಾದ ಹಣಕ್ಕಾಗಿ ಆಕೆ ಮತ್ತೆ ಕೈಯೊಡ್ಡಬೇಕಾಗುತ್ತದೆ. ಮಹಿಳೆಯರಿಗೂ ಆರ್ಥಿಕ ಕ್ಷೇತ್ರದಲ್ಲಿ ಮುಕ್ತಪ್ರವೇಶವಿರಬೇಕು.

ಜೀವನದ ವೆಚ್ಚ ಭರದಿಂದ ಬೆಳೆದು ಆರ್ಥಿಕ ಮುಗ್ಗಟ್ಟನ್ನು ತಂದೊಡ್ಡುತ್ತಿರುವ ಈ ಕಾಲದಲ್ಲಿ ಶ್ರಮ ವಿಭಾಗ ತತ್ವಕ್ಕನುಸರಿಸಿ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕು ಇಂದು ಮಹಿಳೆ ಆರ್ಥಿಕ ಕ್ಷೇತ್ರದಲ್ಲಿ

ಕಾಲಿರಿಸಿರುವಳು. ಗೌಳಿಗ ಮಹಿಳೆಯರ ಅವಿಶ್ರಾಂತ ದುಡಿಮೆಯನ್ನು ಹಣದ ಲೆಕ್ಕದಲ್ಲಿ ಬೆಲೆಕಟ್ಟಲು ಸಾಧ್ಯವಿಲ್ಲ. ಅವಳೊಡನೆ ಒಡನಾಡುವ ರೀತಿ ಸಮಾನತೆಯ ಸದ್ಭಾವನೆಯನ್ನ ಪಡೆದು ಅವಳ ಸ್ವಂತ ಮನೇ ಬಯಕೆಗಳ ತೃಪ್ತಿಗೆ ಅದು ಅವಳ ಇಚ್ಛೆಯಂತೆ ವಿನಿಯೋಗಿಸಬೇಕು. ಜೀವನ ನಿರ್ವಹಣೆಯ ಸಲುವಾಗಿ ಪಶುಪಾಲನೆಯ ಹೊರತಾಗಿ ಬೇರೆ ಕ್ಷೇತ್ರದಲ್ಲಿ ಕಾಲಿಡುವದು ಅನಿವಾರ್ಯ ವಾಗಿರುವುದರಿಂದ ಅವರಿಗೆ ರಕ್ಷಣೆ ದೊರೆಯಬೇಕು.

**೩.೨ ಪಶುಪಾಲನೆ**

ಪ್ರಪಂಚದಲ್ಲಿ ಪಶುಪಾಲನೆಯ ವೃತ್ತಿಯನ್ನು ಅವಲಂಬಿಸಿ ಬದುಕುತ್ತಿರುವವರನ್ನು ದನಗಾರ ಎಂದು ಹೆಸರಿಸುತ್ತಾರೆ. ಪ್ರಪಂಚದ ಎಲ್ಲಾ ಸಂಶೋಧಕರ, ವಿದ್ವಾಂಸರ ಹಾಗೂ ಸಮಾಜಶಾಸ್ತ್ರದ ಅಧ್ಯಯನಕಾರರೆಲ್ಲರೂ ಒಪ್ಪಿಕೊಂಡಿದ್ದು ಆದಿಮಾನವನ ಸಂಸ್ಕೃತಿಯ ಉತ್ತರಾರ್ಧದಲ್ಲಿ ಉತ್ಪತ್ತಿಯಾದ ಪ್ರಥಮ ವೃತ್ತಿಪರ ಜಾತಿ ಪಶುಪಾಲನೆ. ಒಂದು ಗೊತ್ತಾದ ಭೌಗೋಳಿಕ ಪರಿವ್ಯಾಪ್ತಿಯಲ್ಲಿ ಬದುಕುವ ಜನ ಒಂದು ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣವಾಗುತ್ತಾರೆ.

ಪಶುಪಾಲನೆ ಕೃಷಿಗಿಂತ ಮುಂಚೆ ಮತ್ತು ನಂತರವೂ ಸಹ ಸಂಪತ್ತು, ಆಸ್ತಿ ಎಂಬ ಪರಿಗಣನೆ ಪಡೆದಿದೆ. ಗ್ರಾಮೀಣ ಬದುಕಿನ ಅವಿಭಾಜ್ಯ ಅಂಗವಾಗಿದೆ. ಅದರಲ್ಲೂ ಗೌಳಿಗ ಸಮುದಾಯದ ಮಹಿಳೆಯರ ದೈನಂದಿನ ಜೀವನಕ್ಕೆ ಅಗತ್ಯವಾದ ಎಮ್ಮೆ, ದನ, ಕೋಳಿ, ಕುರಿ, ಮೊದಲಾದ ಪ್ರಾಣಿಗಳನ್ನು ಸಾಕುವ, ಬೆಳೆಸುವ ಅವುಗಳ ಆರೋಗ್ಯಪಾಲನೆ ರೋಗೋಪಚಾರ ಹಾಗೂ ತಳಿ ಅಭಿವೃದ್ಧಿ ಮಾಡುವ ತಮ್ಮದೇ ಆದ ವಿಧಾನಗಳನ್ನು ತಲಾತಲಾಂತರದಿಂದ ರೂಢಿಸಿಕೊಂಡು ಬಂದಿದ್ದಾರೆ. ಗೌಳಿಗರಲ್ಲಿ ಪಶುಪಾಲನೆ ವೃತ್ತಿಯು ಹಿಂದಿನಿಂದಲೂ ಇರುವುದನ್ನು ಕಾಣುತ್ತೇವೆ. ಇವರು ಪಶುಪಾಲಕರಾಗಿ ದನಕರುಗಳ ಮೇಲೆ ತುಂಬಾ ಅಕ್ಕರೆ ಇರುವುದನ್ನು ಕಾಣುತ್ತೇವೆ. ಇವುಗಳಿಂದ ಬರುವ ಹೈನು ಹಾಗೂ ಅವುಗಳ ಉತ್ಪನ್ನದಿಂದ ಜೀವನ ನಡೆಸುತ್ತಿದ್ದಾರೆ.

ಗೌಳಿಗ ಮಹಿಳೆಯರು ದನಕರುಗಳ ಪಾಲನೆ, ಹಾಲು ಕರೆಯುವುದು, ಕೊಟ್ಟಿಗೆಗಳನ್ನು ಸ್ವಚ್ಛ ಗೊಳಿಸುವುದು ಮತ್ತು ದನಕರುಗಳು ಅಸ್ವಸ್ಥಗೊಂಡಾಗ ಅವನ್ನು ಉಪಚರಿಸುವುದು ಇವರ ಕೆಲಸವಾಗಿದೆ. ಹಾಲನ್ನು ಸಂಗ್ರಹ ಮಾಡಿ ಮನೆ-ಮನೆಗೆ ಹೋಗಿ ಮಾರಾಟ ಮಾಡುವ ವ್ಯವಸ್ಥೆ ಮೊದಲು ಇತ್ತು. ಹೆಚ್ಚಿನ ಮನೆಯಲ್ಲಿ ಕನಿಷ್ಠ ಪಕ್ಷ ೩-೪ ಆಕಳು ೨-೩ ಎಮ್ಮೆ ಒಂದೆರಡು ಜೊತೆ ಎತ್ತುಗಳನ್ನು ಸಾಕಿಕೊಂಡಿರುತ್ತಾರೆ. ಪಶುಪಾಲನೆಯೇ ಇವರ ಜೀವನಾಧಾರವಾಗಿದೆ. ಮೊದಲು ಡೇರಿಗಳು ಇಷ್ಟು ಪ್ರಮಾಣದಲ್ಲಿ ಬೆಳೆದಿರದ ಕಾರಣ ಗೌಳಿಗರು ಕೊಡುವ ಹಾಲಿಗೆ ಹೆಚ್ಚಿನ ಬೇಡಿಕೆಯಿತ್ತು. ಯಾವುದೇ ಒಂದು ಕಾರಣಕ್ಕೆ ಮಾರಾಟವಾಗದೇ ಉಳಿದಿರುವ ಹಾಲನ್ನು ಖಾದ್ಯ ವಸ್ತುಗಳನ್ನು ಅದರಲ್ಲೂ ಹೆಚ್ಚಾಗಿ ಖೋವಾ ತಯಾರಿಸಲು ಬಳಸುತ್ತಿದ್ದರು. ಮಾರುಕಟ್ಟೆಗಾಗಿಯೇ ಹಾಲು ಉತ್ಪಾದನೆ ಎಂಬ ಮೂಲ ಉದ್ದೇಶವಿಟ್ಟು ಕೊಂಡವರು. ಹಲವಾರು ಗ್ರಾಮಗಳಲ್ಲಿ ಹಾಲು ಉತ್ಪಾದಕರ ಸಹಕಾರಿ ಸಂಘಗಳು ಸ್ಥಾಪನೆಯಾಗಿದ್ದರಿಂದ ಉತ್ಪಾದಿಸಿದ ಹಾಲನ್ನು ಮಾರುವುದು

ಸುಲಭವಾಗತ್ತವೆ. ಇದರಿಂದ ಮನೆ-ಮನೆಗೆ ಹೋಗಿ ಮಾರುವ ಇವರ ಶ್ರಮ ಉಳಿಯುತ್ತದೆ ಮತ್ತು ಹಾಲಿಗೆ ದರ ಒಳ್ಳೆಯ ರೀತಿಯಲ್ಲಿ ಸಿಗುತ್ತವೆ. ಹೀಗಾಗಿ ಕ್ಷಿರೋತ್ಪಾದನೆಯು ಇವರಿಗೆ ಲಾಭದಾಯಕ ವೃತ್ತಿಯಾಗಿದೆ. ಆದರೆ ಈಗ ಪಾರಂಪರಿಕ ಕಸುಬುಗಳಲ್ಲಿ ರೂಪಾಂತರ ಎನ್ನುವುದು ಕಂಡುಬರುತ್ತಿದೆ. ಅರಣ್ಯದ ಕಾನೂನು ಹಾಗೂ ಮೇವಿನ ಸಮಸ್ಯೆಗಳಿಂದ ಇಂದು ಪಾರಂಪರಿಕ ಕಸುಬನ್ನಾಗಿ ಮಾಡಿಕೊಂಡಿದ್ದ ಪಶುಪಾಲನೆಯನ್ನು ಬಿಡಬೇಕಾದ ಪರಿಸ್ಥಿತಿ ಬಂದಿದೆ.

ಹೆಸರೇ ಸೂಚಿಸುವಂತೆ ಗೌಳಿಗ ಸಮುದಾಯದ ಸಾಂಪ್ರದಾಯಿಕ ಕಸುಬು ಪಶುಪಾಲನೆ ಕಾಡುಮೇಡುಗಳು ಹೆಚ್ಚಾಗಿದ್ದ ಕಾಲದಲ್ಲಿ ಹೆಚ್ಚಿನ ದನಕರುಗಳನ್ನು ಸಾಕಿ ಅವುಗಳಿಂದ ಬರುವ ಹಾಲು, ಮೊಸರು, ತುಪ್ಪವನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಕಾಡುಗಳು ಕ್ರಮೇಣ ನಾಶವಾದಂತೆ ದನಕರುಗಳ ಸಂಖ್ಯೆಯೂ ಕಡಿಮೆಯಾದವು. ಆದಾಗ್ಯೂ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಗೌಳಿ ಸಮುದಾಯದ ಪ್ರತಿಯೊಬ್ಬ ಕುಟುಂಬಸ್ಥನು ಕುಲಕಸುಬಾಗಿ ಸಾಂಕೇತಿಕ ವಾಗಿಯಾದರೂ ಒಂದೆರಡು ಎತ್ತುಗಳನ್ನು ಮತ್ತು ಎಮ್ಮೆಗಳನ್ನು ಸಾಕುವುದನ್ನು ಕಾಣಬಹುದು. ಇವುಗಳಿಂದ ಆದಾಯ ಮತ್ತು ಸೇವೆಯನ್ನು ನಿರೀಕ್ಷಿಸದಿದ್ದರೂ ತಮ್ಮ ಕುಲದ ಸಂಕೇತವಾಗಿ ಮತ್ತು ತಮ್ಮ ಸಮುದಾಯದ ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗಲು ಎಮ್ಮೆ ಮತ್ತು ಎತ್ತುಗಳನ್ನು ಸಾಕುತ್ತಾರೆ.

**ಕೋಷ್ಟಕ ೩.೧ ಪ್ರಸ್ತುತ ಅಧ್ಯಯನದ ಪ್ರಕಾರ ೧೦೫ ಕುಟುಂಬಗಳಲ್ಲಿರುವ ಪಶುಸಂಪತ್ತು**

| ಕ್ರ.ಸಂ. | ಹೆಸರು | ಸಂಖ್ಯೆ |
|---|---|---|
| ೧. | ಎತ್ತು/ಹೋರಿ | ೨೫೦ |
| ೨. | ಆಕಳು/ಕರು | ೧೬೦ |
| ೩. | ಎಮ್ಮೆ/ಕೋಣ | ೨೩೦ |
| ೪. | ಕುರಿ | ೮೪೮೬ |
| ೫. | ಮೇಕೆ | ೬೩೪ |
| ೬. | ಕೋಳಿ | ೭೦ |
| | **ಒಟ್ಟು** | **೯೮೩೦** |

ಪಶುಪಾಲನೆಯು ಸಾಂಪ್ರದಾಯಿಕ ಕುಲಕಸುಬಾಗಿದೆ. ಪಶುಪಾಲನೆ ಕಷ್ಟದಾಯಕ ಕಸುಬಾಗಿದ್ದರೂ ಗೌಳಿಗರಿಗೆ ಇದು ಒಂದು ಆದಾಯ ತಂದುಕೊಡುವ ಕಸುಬಾಗಿದೆ. ಪಶುಪಾಲನೆಯು ಅಷ್ಟು ಸುಲಭದ ಕೆಲಸವಲ್ಲ. ಗೌಳಿಗರು ಬಹಳಕಷ್ಟ ಜೀವಿಗಳಾಗಿದ್ದುರಿಂದಲೇ ಈ ವೃತ್ತಿಯನ್ನು ಮುಂದುವರೆಸಿ ಕೊಂಡು ಬರುತ್ತಿದ್ದಾರೆ.

ಒಂದು ಪಶುಸಂಗೋಪನಾ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದ ಪ್ರಮುಖ ಜನವರ್ಗಗಳೆಂದರೆ ಗೌಳಿಗರು. ಇವರ ಪ್ರಧಾನ ವೃತ್ತಿಯೇ ಪಶುಪಾಲನೆ. ತಮ್ಮ ದನ ಕರುಗಳೆಂದರೆ ಅವರಿಗೆ ಪ್ರಾಣ. ಅದೇ ಅವರ ಸರ್ವಸ್ವ, ವಿದ್ಯೆ, ನೌಕರಿ, ರಾಜಕಾರಣ ಯಾವುದರಲ್ಲೂ ಆಸಕ್ತಿ ತೋರದ ಇವರ ಪಾಲಿಗೆ ತಮ್ಮ ಜಾನುವಾರುಗಳೇ ದೈವಗಳು.

ಆದರೆ ಇಂದು ಕಾಲ ಬದಲಾಗಿದೆ ತಮ್ಮ ಹಾಡಿಗಳನ್ನು ಕಾಡು-ಮೇಡುಗಳಲ್ಲಿ ನಿರ್ಮಿಸಿಕೊಂಡು ತಮ್ಮದೇ ವಿಶಿಷ್ಟ ಸಂಸ್ಕೃತಿಯನ್ನು ಕಟ್ಟಿಕೊಂಡು ಬದುಕುಸಾಗಿಸುತ್ತಿದ್ದ ಇವರಿಗೂ ಇಂದು ಆಧುನೀಕತೆಯ ಗಾಳಿ ಸೋಕಿದೆ. ಗೌಳಿಗರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಮಹಿಳೆಯರಿಗೆ ಪಶುಪಾಲನೆಗೆ ಪೂರಕವಾಗಿ ಅವರ ಸಾಂಪ್ರದಾಯಿಕ ವೇಷ-ಭೂಷಣ ಇತ್ತು. ಅದು ಎಲ್ಲ ರೀತಿಯಿಂದಲೂ ಅನುಕೂಲಕರವಾಗಿತ್ತು. ಆದರೆ ಇವತ್ತಿನ ದಿನಗಳಲ್ಲಿ ಮಹಿಳೆಯರು ಸಾಂಪ್ರದಾಯಿಕ ಉಡುಪನ್ನು ಧರಿಸುತ್ತಿಲ್ಲ. ಮತ್ತು ಮನೆ-ಮನೆಗಳಿಗೆ ಹೋಗಿ ಹಾಲು ಇತರ ಹಾಲಿನ ಉತ್ಪನ್ನಗಳನ್ನು ಮಾರಲು ಒಪ್ಪುತ್ತಿಲ್ಲ. ಹೀಗಾಗಿ ಪಾರಂಪರಿಕ ಕಸುಬುಗಳು ನಶಿಸಿಹೋಗಲು ಇದು ಒಂದು ಕಾರಣವಿರಬಹುದು. ಆಧುನಿಕ ನಾಗರಿಕತೆಯ ಸುಖ ಜೀವನವೆಂಬ ಭ್ರಮೆಯಲ್ಲಿ ಪಾರಂಪರಿಕ ವೃತ್ತಿ, ಹಾಡು, ಹಸೆ ಕಲೆಗಳನ್ನು ಮಣ್ಣುಮಾಡುತಿದ್ದಾರೆ. ಅಲ್ಲದೇ ಇನ್ನೊಂದು ಕಡೆ ರಾಜಕೀಯ ಪಕ್ಷಗಳ ಕೆಳಮಟ್ಟದ ರಾಜಕಾರಣ ಹಟ್ಟಿಯನ್ನು ತಲುಪುತ್ತಿದೆ. ಗೌಳಿಗರು ದನಗಳನ್ನೇ ದೈವವೆಂದು ನಂಬಿದ್ದವರು. ಇವರು ಇಂದು ತಮ್ಮ ಆದರ್ಶಗಳನ್ನು, ಕನಸುಗಳನ್ನು, ತಮ್ಮ ಭವಿಷ್ಯವನ್ನು ಅರೆ-ಬರೆ ವಿದ್ಯಾವಂತರಲ್ಲಿ ಕಾಣತೊಡಗಿದ್ದಾರೆ. ಇವತ್ತಿನ ಯುವಕ-ಯುವತಿಯರಲ್ಲಿ ಪಶುಪಾಲನೆ ಅಥವಾ ಪಾರಂಪರಿಕ ವೃತ್ತಿಗಳ ಬಗ್ಗೆ ಕೇಳಿದರೆ ಉದಾಸೀನವಾದ ಮಾತು ಕೇಳಬರುತ್ತಿವೆ. ಗೌಳಿಗ ಮಹಿಳೆಯರು ಪಶುಪಾಲನೆಗೆ ಸೀಮಿತವಾಗಿದ್ದ ತಮ್ಮ ವೇಷ-ಭೂಷಣಗಳಲ್ಲಿ ಆಚಾರ-ವಿಚಾರಗಳಲ್ಲಿ ತೀವ್ರತರ ಬದಲಾವಣೆಗಳಿಗೆ ಒಳಗಾಗುತ್ತಿದ್ದಾರೆ. ಇವರೆಲ್ಲದರ ಜೊತೆಗೆ ಗೌಳಿಗರ ಊರೊಟ್ಟಿಗಿನ ಸಂಬಂಧ ಹತ್ತಿರವಾಗುತ್ತಿದೆ. ಊರಿಗೆ ಅಂಟಿಕೊಂಡೆ ಗೌಳಿಗರ ಮನೆಗಳಿರುವುದನ್ನು ಕಾಣಬಹುದು. ಈ ಕಾರಣದಿಂದ ಗೌಳಿಗರ ಪ್ರತ್ಯೇಕವಾದ, ವಿಶಿಷ್ಟವಾದ ಸಂಸ್ಕೃತಿ ನಿಧಾನವಾಗಿ ಕರಗುತ್ತಿದೆ. ಕರಗುತ್ತ, ಕರಗುತ್ತ ಊರಿನ ಮುಖ್ಯ ಸಂಸ್ಕೃತಿಯಲ್ಲಿ ಲೀನವಾಗುವ ಕಾಲ ದೂರವಿಲ್ಲ ಏನಿಸುತ್ತದೆ.

**ಕೋಷ್ಟಕ ೩.೨ ಪಾರಂಪರಿಕ ವೃತ್ತಿಯಲ್ಲಿ ತೊಡಗಿಸಿಕೊಂಡಿರುವವರ ಸಂಖ್ಯಾ ಪ್ರಮಾಣ**

| ಕ್ರ.ಸಂ. | ನೆಲೆ | ೨೦-೪೫ ವರ್ಷದ ಮೇಲ್ಪಟ್ಟು | | |
|---|---|---|---|---|
| | | ಹೆಣ್ಣು | ಗಂಡು | ಒಟ್ಟು |
| ೧. | ದೇಶಪಾಂಡೆನಗರ | ೧೫ | ೮ | ೨೩ |
| ೨. | ಹೊಸಳ್ಳಿ | ೬ | ೪ | ೧೦ |
| ೩. | ಅಂಬಾವಾಡೆ | ೯ | ೭ | ೧೬ |
| ೪. | ವಿಟ್ನಾಳ | ೮ | ೫ | ೧೩ |
| | **ಒಟ್ಟು** | **೩೮** | **೨೪** | **೬೨** |

ಮೇಲಿನ ಕೋಷ್ಟಕಗಳನ್ನು ನೋಡಿದರೆ ನಮಗೆ ಪಶುಪಾಲನೆ ಎನ್ನುವುದು ಎಷ್ಟು ಕಡಿಮೆಯಾಗಿದೆ ಎಂದು ತಿಳಿಯುತ್ತದೆ.

**೩.೩ ಪಾರಂಪರಿಕ ಕಸುಬುಗಳ ಸ್ಥಿತಿ-ಗತಿಗಳು**

ಅಧ್ಯಯನಕ್ಕೆ ಒಳಪಡುವ ಮೂರು ತಾಲೂಕಿನ ಗೌಳಿಗ ಮಹಿಳೆಯರು ಇಂದಿಗೂ ತಮ್ಮ ಪಾರಂಪರಿಕ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಕಾಣಬುಹುದು. ಗೌಳಿಗ ಸಮುದಾಯವೇ ಇರಲಿ ಅಥವಾ ಇತರ ಯಾವುದೇ ಸಮುದಾಯವಿರಲಿ ತಮ್ಮ ಪಾರಂಪರಿಕ ಕಸುಬುಗಳನ್ನು ಅವಲಂಬಿಸಿ ಪ್ರಗತಿ ಸಾಧಿಸಲಾರದು. ಭಾರತದ ಯಾವುದೇ ಕಾಲಘಟ್ಟದಲ್ಲಿ ಕೆಳಸಮುದಾಯಗಳು ಅವು ಅವಲಂಬಿಸುತ್ತಿದ್ದ ವೃತ್ತಿಯಿಂದಾಗಿ ಸಾಮಾಜಿಕ ಸ್ಥಾನಮಾನಗಳು ಸಿಗಲಿಲ್ಲ. ಅವರೂ ಸಹ ಹಿಂದೆ ಸಾಕಷ್ಟು ಅರಣ್ಯಗಳು ಇದ್ದುದ್ದರಿಂದ ದನಕರುಗಳನ್ನು ಅವಲಂಬಿಸಿ ತಮ್ಮ ಕಸುಬುಗಳನ್ನು ಮಾಡುತ್ತಿದ್ದರು. ಆದರೆ ಇಂದು ಆಧುನಿಕರಣದ ಫಲವಾಗಿ ಆರ್ಥಿಕವಾಗಿ ನಾಶವಾಗ ತೊಡಗಿದರು. ಹೀಗಾಗಿ ಅವರು ಸಾಮಾಜಿಕವಾಗಿ ಆರ್ಥಿಕವಾಗಿ ಹಿನ್ನಡೆಯನ್ನು ಸಾಧಿಸುತ್ತಿದ್ದಾರೆ. ಇದಕ್ಕೆ ಮೂಲ ಕಾರಣ ಎಂದರೆ ಒಂದು ಅರಣ್ಯನಾಶ ಮತ್ತು ಮೇವಿನ ಕೊರತೆ ಹಾಗೂ ಅರಣ್ಯಾಧಿಕಾರಿಗಳ ಕಿರುಕುಳ ಈ ಎಲ್ಲಾ ಕಾರಣಗಳಿಂದ ತಮ್ಮ ಮೂಲವೃತ್ತಿಯನ್ನು ಬಿಟ್ಟು ಆಧುನಿಕ ವೃತ್ತಿಗಳನ್ನು ಅವಲಬಿಂಸಲು ಪ್ರಾರಂಭಿಸಿದರು. ಉತ್ತರ ಕನ್ನಡ ಜಿಲ್ಲೆಯ ಅವಿಭಾಜ್ಯ ಅಂಗವಾಗಿ ಮೇವಿನಕೊರತೆ ಕಂಡುಬರುತ್ತಿದೆ. ಆದರೆ ಕೊರತೆಯ ಪ್ರಮಾಣ ಮಾತ್ರ ಜಿಲ್ಲೆಯ ವಿವಿಧ ಭಾಗಗಳಲ್ಲಿ ವಿಭಿನ್ನವಾಗಿದೆ. ಇದಕ್ಕೆ ಕಾರಣ ಅಂದರೆ ಹೆಚ್ಚಿನ ದನಕರುಗಳನ್ನು ಸಾಕುತ್ತಿರುವುದು ಮತ್ತು ದನಕರುಗಳಿಗೆ ವಯಸ್ಸು ಆಗುತ್ತಾ ಅವುಗಳ ಕ್ಷಿರೋತ್ಪಾದನೆಯು ಗಣನೀಯವಾಗಿ ಕಡಿಮೆ ಆಗುವುದು. ಗೋವುಗಳಿಗೆ ಪೂಜನೀಯ ಸ್ಥಾನವನ್ನು ಗೌಳಿಗರು ಕೊಟ್ಟಿರುವುದರಿಂದ ಯಾವುದೇ ಕಟುಕರಿಗೂ ಇವರು ದನವನ್ನು ಮಾರುವುದಿಲ್ಲ. ಇದೊಂದು ಸಮಸ್ಯೆ ಆಗಬಹುದು ಅವರಿಗೆ. ಇದರ ಜೊತೆಗೆ ಅಜ್ಞಾನ, ಅವಿಶ್ವಾಸ, ತಪ್ಪು ಮಾಹಿತಿ ಅಥವಾ ಆರ್ಥಿಕ ದುಸ್ಥಿತಿಯಿಂದ ಪಾಲನೆಯಲ್ಲಿ

ಸುಧಾರಿತ ಪದ್ಧತಿಯನ್ನು ಅನುಸರಿಸುತ್ತಿಲ್ಲ. ಅರಣ್ಯ ಅಧಿಕಾರಿಗಳ ಕಿರುಕುಳ ಈ ಎಲ್ಲ ಕಾರಣಗಳಿಂದ ಪಾರಂಪರಿಕ ಕಸುಬು ಎನ್ನುವುದು ನಾಶವಾಗುತ್ತಿದೆ.

ಪಶುಪಾಲನೆಗೆ ಬೇಕಾಗುವ ರೀತಿಯಲ್ಲೇ ಗೌಳಿಗ ಮಹಿಳೆಯರ ಉಡುಪು ಇರುತ್ತಿತ್ತು. ಕಚ್ಚೆ ಹಾಕಿದ ಸಾಂಪ್ರದಾಯಿಕ ಉಡುಪು ಇರುತ್ತಿತ್ತು. ಆದರೆ ಇತ್ತೀಚಿಗೆ ಪ್ರಾದೇಶಿಕವಾಗಿ ಆಧುನಿಕತೆಗೆ ಒಳಪಟ್ಟು ಮಹಿಳೆಯರು ಹೊಸಹೊಸ ಉಡುಪನ್ನು ಧರಿಸುತ್ತಿದ್ದಾರೆ. ಒಂದು ರೀತಿಯ ಸಾಮಾಜಿಕ ಕೀಳರಿಮೆ ಗೌಳಿಗರ ಇವತ್ತಿನ ಮಹಿಳೆಯರಲ್ಲಿ ಕಾಣಬಹುದು. ಮೂಲವೃತ್ತಿ ಬಿಡುವುದೆ ಸಾಮಾಜಿಕ ಸ್ಥಾನ-ಮಾನಗಳನ್ನು ಉತ್ತಮ ಪಡಿಸಿಕೊಳ್ಳುವ ಪ್ರಯತ್ನವಾಗಿದೆ. ಯಾವ ವೃತ್ತಿಯಿಂದ ಸಾಮಾಜಿಕ ಗೌರವ, ಮಾನ್ಯತೆ, ಆದಾಯ ಆರ್ಥಿಕ ಭದ್ರತೆ ದೊರೆಯುವುದಿಲ್ಲವೋ ಆವೃತ್ತಿಯಿಂದ ಸಮುದಾಯದ ಪ್ರಗತಿಯ ಬದಲು ಅಪ್ರಗತಿ ಉಂಟಾಗುತ್ತದೆಯೋ ಆ ಮೂಲವೃತ್ತಿ ಬಿಡುವುದೆ ಒಳ್ಳೆಯ ಪ್ರಯತ್ನವಾಗಿದೆ. ಒಂದು ವೇಳೆ ಆ ವೃತ್ತಿಯಿಂದ ಲಾಭವಾದರೆ ಇರಲಿ ಎಂದು ಮುಂದುವರಿಸಬಹುದು. ಆದರೆ ಇದರಿಂದ ಬಡತನ, ಕನಿಷ್ಠ ಸೌಲಭ್ಯ ರಹಿತತೆ, ಆರ್ಥಿಕ ಹಿನ್ನಡೆ ಸಾಮಾಜಿಕ ಕೀಳರಿಮೆ ಹೊಂದುವ ಬದಲು ಆಧುನಿಕ ಶಿಕ್ಷಣವನ್ನು ಪಡೆದು ಹಾಡಿಗಳಲ್ಲಿ ಒಂದು ಪ್ರಯತ್ನವೆಂಬಂತೆ ಹಲವಾರು ಕುಟುಂಬಗಳು ಆಧುನಿಕ ಹೊಸ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳತೊಡಗಿದವು.

ಪಾರಂಪರಿಕ ವೃತ್ತಿಯನ್ನು ಮುಂದುವರಿಸುವುದನ್ನು ಇಷ್ಟಪಡದೆ ವ್ಯಾಪಾರವನ್ನು ಆಧುನಿಕ ಉದ್ಯೋಗಗಳನ್ನು ಸ್ತ್ರೀ-ಪುರುಷರಿಬ್ಬರೂ ಮಾಡುತ್ತಿದ್ದಾರೆ. ತಾವು ಕೂಡ ಸಮಾಜದಲ್ಲಿ ಶಿಕ್ಷಣ, ಅಧಿಕಾರ, ಆಸ್ತಿ, ಸಂಪತ್ತು. ಉದ್ಯೋಗವನ್ನು ಹೊಂದಿ ಬಂಡವಾಳವನ್ನು ಪಡೆಯಲು ಪ್ರಯತ್ನಿ ಸುತ್ತಿದ್ದಾರೆ. ಸಮಾಜದಲ್ಲಿ ಇವುಗಳಿಂದ ಉತ್ತಮ ಸ್ಥಾನಮಾನಗಳನ್ನು ಪಡೆಯಬೇಕೆಂಬ ನಿರೀಕ್ಷೆಯನ್ನು ಕೂಡ ಮಾಡುತ್ತಿರುವರು. ಮೇಲ್ವರ್ಗದವರಂತೆ ತಾವು ಕೂಡ ಆಗಬೇಕೆಂಬ ಸ್ಪರ್ಧೆ ಕೂಡ ಸಮುದಾಯಕ್ಕೆ ಪಾರಂಪರಿಕ ವೃತ್ತಿಯನ್ನು ಬಿಡಲು ಪ್ರೇರಕವಾಗಿದೆ. ಏಕೆಂದರೆ ಮುಖ್ಯವಾಹಿನಿಯನ್ನು ಸಮಾಜದಲ್ಲಿ ಎಲ್ಲರೂ ಅನುಕರುಣೆ ಮಾಡುತ್ತಾರೆ. ಒಬ್ಬ ಒಳ್ಳೆಯ ಸಮುದಾಯದ ವ್ಯಕ್ತಿ ಮೇಲ್ವರ್ಗ ದಲ್ಲಿರುವ ವ್ಯಕ್ತಿಯಂತೆ ಬಂಡವಾಳವನ್ನು, ಅಂತಸ್ತನ್ನ, ಉದ್ಯೋಗ, ಅಧಿಕಾರ ಆರ್ಥಿಕ ಬಲವನ್ನು ಪಡೆಯಬೇಕೆಂದು ಪ್ರಯತ್ನಿಸುತ್ತಾರೆ. ಹೀಗೆ ಮೂಲವೃತ್ತಿಯನ್ನು ಬಿಟ್ಟು ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮಪಡಿಸಿಕೊಳ್ಳಲು ಭಿನ್ನ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಅನಿವಾರ್ಯತೆಯನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ನೈಸರ್ಗಿಕ ಅರಣ್ಯಗಳು ಕಿರಿದಾಗುತ್ತಿವೆ. ಪರಿಸರ ಪರಿಸ್ಥಿತಿ ಬಿಗಡಾಯಿಸಿದರೆ ಆದಿವಾಸಿ ಜನಸಂಖ್ಯೆ ಹೆಚ್ಚುತ್ತಿರುವುದೂ ಶಿಕ್ಷಣ ನಾಗರೀಕತೆಯ ಸಂಪರ್ಕದಿಂದ ಅರಣ್ಯದ ಮೇಲಿನ ಅವರ ದೃಷ್ಟಿ ಬದಲಾಗುತ್ತಿರುವುದರಿಂದ ಅರಣ್ಯ ಉಳಿಸಲು ಆದಿವಾಸಿಗರನ್ನು ಕಾಡಿನೀಚೆಗೆ ತರುವುದು ಅನಿವಾರ್ಯವಾಗಿರುವುದರಿಂದ ಮೂಲ ವೃತ್ತಿಯನ್ನು ಬಿಡಲು ಇದೊಂದು ಕಾರಣವಾಗಬಹುದು.

**೩.೪ ಕೃಷಿ ಮತ್ತು ಮಹಿಳೆ**

ಆರ್ಥಿಕ ಚಟುವಟಿಕೆಗಳು ವ್ಯಕ್ತಿಯ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುತ್ತವೆ. ಹಾಡಿಗಳಲ್ಲಿ ಸ್ತ್ರೀ-ಪುರುಷ ತಾರತಮ್ಯವಿಲ್ಲದೆ ತಮ್ಮ ಗದ್ದೆಗಳಲ್ಲಿ ದುಡಿಯುತ್ತಾರೆ. ಗೌಳಿಗರ ಹಾಡಿಗಳಲ್ಲಿ ಬಹಳಷ್ಟು ಜನ ಉತ್ಪಾದನಾ ಮಾರ್ಗವಾಗಿ ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ವ್ಯವಸ್ಥೆಗಳಲ್ಲಿ ಕೃಷಿ ಕೂಲಿಯು ಮುಖ್ಯವಾಗಿದೆ. ಬಹುತೇಕ ಎಲ್ಲಾ ಬುಡಕಟ್ಟುಗಳು ತಮ್ಮ ಜೀವನೋಪಾಯಕ್ಕೆ ಬೇಟೆ, ಕಾಡಿನ ಉತ್ಪನ್ನಗಳನ್ನು ಅವಲಂಬಿಸಿ, ಬದುಕುತ್ತಿದ್ದರು ಅರಣ್ಯವನ್ನು ತಮ್ಮ ಉಪಸ್ಥಾನವನ್ನಾಗಿಸಿಕೊಂಡು ತದನಂತರದಲ್ಲಿ ಕೃಷಿಯನ್ನು ರೂಢಿಸಿಕೊಂಡು ಆಹಾರ ಉತ್ಪಾದನೆಯಲ್ಲಿ ತೊಡಗಿಸಿಕೊಂಡಿರುವುದನ್ನು ಕಾಣಬಹುದು.

ಗೌಳಿಗರು ಸಹ ಕೃಷಿಗೆ ಬೇಕಾದಷ್ಟು ಭೂಮಿ ಇದ್ದರೂ ಸಹ ಅಗತ್ಯಕ್ಕೆ ತಕ್ಕಷ್ಟು ಭೂಮಿಯನ್ನು ಬಳಸುತ್ತಿದ್ದಾರೆ. ಒಂದು ನಿರ್ದಿಷ್ಟ ಭೂಮಿಯನ್ನು ೨-೩ ವರ್ಷ ಬೆಳೆ-ಬಳೆದ ನಂತರ ಫಲವತ್ತತೆಯ ದೃಷ್ಠಿಯಿಂದ ಆ ಭೂಮಿಯನ್ನು ಬಿಟ್ಟು ಮತ್ತೊಂದು ಕಡೆ ವ್ಯವಸಾಯಕ್ಕೆ ಭೂಮಿಯನ್ನು ಬಳಸುತ್ತಿದ್ದರು. ಗೌಳಿಗ ಕುಟುಂಬಗಳ ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ ಪ್ರಧಾನವಾಗಿವೆ. ಇವರು ದುಡಿಮೆಯಲ್ಲಿ ಪುರುಷರಿಗಿಂತ ಕಡಿಮೆಯಿಲ್ಲ. ಇವರ ಗಟ್ಟಿಮುಟ್ಟಾದ ಮೈಕಟ್ಟು ದುಡಿಮೆಗೆ ಸಹಾಯಕವಾಗಿತ್ತು. ಋತುಮಾನಗಳಿಗೆ ಅನುಸಾರವಾಗಿ ದುಡಿಯುತ್ತಿದ್ದರು. ಮಕ್ಕಳ ಲಾಲನೆ ಪೋಷಣೆ ಕುಟುಂಬ ನಿರ್ವಹಣೆ ಜೊತೆಗೆ ವ್ಯವಸಾಯದಲ್ಲೂ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಗೌಳಿಗರಿಗೆ ತಮ್ಮ ಪೂರ್ವಕಾಲದಿಂದಲೂ ಜಮೀನು ಯಾರಿಗೂ ಹೆಚ್ಚಾಗಿ ಇಲ್ಲ. ಅಲ್ಲೇ ಅರಣ್ಯ ಪ್ರದೇಶಗಳಲ್ಲಿ ಕೃಷಿಭೂಮಿಯನ್ನು ಮಾಡಿಕೊಂಡು ವ್ಯವಸಾಯ ಮಾಡುತ್ತಿದ್ದಾರೆ. ಪಶುಪಾಲನೆ ಜೊತೆಯಲ್ಲಿ ಗೌಳಿಗರಿಗೆ ಕೃಷಿಯು ಪ್ರಮುಖವಾದ ಮತ್ತು ಮಹತ್ವದ ಆರ್ಥಿಕ ಕಸುಬಾಗಿ ಈಗ ಪರಿಣಮಿಸಿದೆ. ಕ್ಷೇತ್ರಕಾರ್ಯ ಮಾಡಿದ ಹಾಡಿಗಳಲ್ಲಿ ಭತ್ತ, ಹತ್ತಿ, ತೆಂಗು ಹೆಚ್ಚಾಗಿ ಕಂಡುಬರುತ್ತವೆ.

**ಕೋಷ್ಟಕ ೩.೪ ಕೃಷಿಯಲ್ಲಿ ತೊಡಗಿಸಿಕೊಂಡಿರುವ ಪುರುಷ ಮತ್ತು ಮಹಿಳೆಯರ ವಿವರ**

| ಕ್ರ.ಸಂ. | ನೆಲೆ | ಹೆಣ್ಣು | ಗಂಡು | ಒಟ್ಟು |
|---|---|---|---|---|
| ೧. | ದೇಶಪಾಂಡೆನಗರ | ೧೦ | ೮ | ೨೦ |
| ೨. | ಹೊಸಳ್ಳಿ | ೨ | ೪ | ೬ |
| ೩. | ಅಂಬಾವಾಡೆ | ೩ | ೪ | ೭ |
| ೪. | ವಿಟ್ನಾಳ | ೪ | ೫ | ೯ |
| ೫. | ಮೈನಳ್ಳಿ | ೧೦ | ೭ | ೧೭ |
| ೬. | ಬಡ್ಡಿಗೇರೆ | ೯ | ೫ | ೧೪ |
| | **ಒಟ್ಟು** | ೪೦ | ೩೩ | ೭೩ |

ಈ ಮೇಲಿನ ಕೋಷ್ಟಕವನ್ನು ನೋಡಿದರೆ ತಮ್ಮ ಮೂಲ ವೃತ್ತಿ ಪಶುಪಾಲನೆಯನ್ನು ಬಿಟ್ಟು ಕೃಷಿಯಲ್ಲಿ ತೊಡಗುತ್ತಿರುವ ಸಂಖ್ಯೆ ಹೆಚ್ಚಾಗುತ್ತಿದೆ ಎನ್ನುವುದನ್ನು ಕಾಣಬಹುದು.

ಕಾಡಿನ ಜೇನು, ಹಣ್ಣುಹಂಪಲು, ಗಡ್ಡೆ-ಗೆಣಸು ಮುಂತಾದ ಕಿರು ಅರಣ್ಯ ಉತ್ಪನ್ನ ಸಂಗ್ರಹ ಸಾಂಪ್ರದಾಯಿಕ ಕೃಷಿ ಪದ್ಧತಿಯಲ್ಲಿ ಕೃಷಿ ಹೈನುಗಾರಿಕೆ ಮುಂತಾದ ವೃತ್ತಿಗಳಲ್ಲಿ ಶ್ರಮಜೀವಿಗಳಾಗಿ ಜೀವನ ನಡೆಸುತ್ತಿದ್ದಾರೆ. ಜೀವನವಿಧಾನಕ್ಕು, ಆಹಾರಪದ್ಧತಿಗೂ ನೇರ ಸಂಬಂಧವಿರುವುದರಿಂದ ಹೆಚ್ಚು ಅಗತ್ಯ ಪೋಷಕಾಂಶ, ಖನಿಜಾಂಶಗಳನ್ನು ಕಾಡುತರಕಾರಿಗಳಿಂದ ಪಡೆಯುತ್ತಿದ್ದರು. ಇಂತಹ ಸಾಂಪ್ರದಾಯಿಕ ಜ್ಞಾನ ಗೌಳಿಗ ಮಹಿಳೆಯರಲ್ಲಿ ತಲಾತಲಾಂತರದಿಂದ ಬಂದಿದೆ.

ಬ್ರಿಟಿಷರ ಆಗಮನದಿಂದಾಗಿ ಊರ ರೀತಿಯ ಆಡಳಿತ ಕ್ರಮ ಜಾರಿಗೆ ಬಂದಿತು. ಬೃಹತ್ ಕೈಗಾರಿಕೆಗಳ ನಿರ್ಮಾಣ, ಗುಡಿಕೈಗಾರಿಕೆ, ರೈಲ್ವೆ, ರಸ್ತೆ ನಿರ್ಮಾಣ, ಎಸ್ಟೇಟ್‌ಗಳ ವಿಸ್ತರಣೆ ಮುಂತಾದವು ಗಳಿಂದಾಗಿ ಕಾಡನ್ನು ಹೆಚ್ಚು ಹೆಚ್ಚು ಕಡಿಯಲಾಗುತ್ತಿದೆ. ಜೊತೆಗೆ ಗೌಳಿಗ ಜನರಿಗೆ ಸೇರಿದ ಪರ್ವತ, ಅರಣ್ಯ ಪ್ರದೇಶಗಳನ್ನು ಕಿತ್ತುಕೊಳ್ಳಲಾಯಿತು. ಇದರಿಂದ ಸ್ಥಳಾಂತರ ಬೇಸಾಯ ಮಾಡುತ್ತಿದ್ದ ಭೂಮಿ ಇಲ್ಲವಾಯಿತು. ಗೌಳಿಗರ ಜಮೀನಿನ ಗಾತ್ರದಲ್ಲಿ ಚಿಕ್ಕದಾಗಿದ್ದು ಹಿಂದುಳಿದ ತಂತ್ರಜ್ಞಾನವನ್ನು ಬಳಸುತ್ತಿದ್ದರು.

ಸಾವಿರಾರು ವರ್ಷಗಳಿಂದ ಅರಣ್ಯವನ್ನು ಕಾಪಾಡಿಕೊಂಡು ಬಂದಿದ್ದ ಗೌಳಿಗರು ಅದರಲ್ಲೂ ಕಾಡಿನ ಉತ್ಪನ್ನ, ಔಷಧಿ ಸಸ್ಯಗಳು, ಗಿಡಮೂಲಿಕೆಗಳು, ಅವುಗಳಿಂದ ಜೀವನ ಸಾಗಿಸುತ್ತಿದ್ದ ಗೌಳಿಗ ಮಹಿಳೆಯರ ಬದುಕು ಅತಂತ್ರ ಸ್ಥಿತಿ ತಲುಪಿತು. ಗೌಳಿಗ ಮಹಿಳೆಯರು ಆರ್ಥಿಕವಾಗಿ ಅಲ್ಲದೆ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿದ್ದಾರೆ. ಆಣೆಕಟ್ಟು, ಅರಣ್ಯನೀತಿ, ಗಣಿಗಾರಿಕೆ, ತೋಟಗಾರಿಕೆಗಳು ದೊಡ್ಡ ಪ್ರಮಾಣದ ಅರಣ್ಯನಾಶವಾಗಲದ್ದು, ಅರಣ್ಯನೀತಿಗಳು ಮಹಿಳೆಯರನ್ನು ಬೀದಿಪಾಲು ಮಾಡಿದವು. ತಮ್ಮ ಕೃಷಿ ಇದ್ದರೆ ಅದರಲ್ಲಿ ದುಡಿಯುತ್ತಾರೆ. ದುಡಿಯುವುದು ಕೂಡಾ ಒಂದು ಋತುಮಾನದಲ್ಲಿ ಮಾತ್ರ. ಆದರೆ ಇಂದು ಗದ್ದೆಗಳಲ್ಲಿ ಕೃಷಿಕೂಲಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಿದ್ದಾರೆ. ಕೆಳಮಟ್ಟದ ಸಾಕ್ಷರತೆ ವೃತ್ತಿ ಕೌಶಲ್ಯದ ಕೊರತೆ ಅವರನ್ನು ಕಡಿಮೆ ಸಂಭಾವನೆ ತರುವಂತಹ ಕೆಲಸಗಳಿಗೆ ತಳ್ಳುತ್ತಿವೆ. ಹೆಚ್ಚಿನ ಪ್ರಮಾಣ ಮಹಿಳೆಯರು ೫.೮೮% ಗೃಹಸಂಬಂಧಿ ಕೈಗಾರಿಕೆಗಳಲ್ಲಿ ಮತ್ತು ಕೃಷಿಕಾರ್ಮಿಕರಾಗಿ ೫೭.೯೦%, ಕೇವಲ ಶೇ. ೨೯% ಮಹಿಳೆಯರು ಸಾಗುವಳಿದಾರರಾಗಿದ್ದಾರೆ. ಗೌಳಿಗರಲ್ಲಿ ಕಡಿಮೆ ಉತ್ಪಾದನೆಯಲ್ಲಿ ಸಣ್ಣ ಘಟಕಗಳನ್ನು ಹೊಂದಿದ್ದು, ಅವು ಆರ್ಥಿಕವಾಗಿ ಲಾಭದಾಯಕವಾಗಿಲ್ಲ. ಆದ್ದರಿಂದ ಹಿಡುವಳಿದಾರರು ಜೀವನ ನಿರ್ವಹಣೆಗಾಗಿ ಕೂಲಿಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ನಾಡಿನ ಜನರ ಸಂಪರ್ಕವಿಲ್ಲದೆ ಕಾಡಿನ ಉತ್ಪನ್ನಗಳನ್ನು ನಂಬಿಬದುಕುತ್ತಿರುವ ಅನಕ್ಷರಸ್ಥ ಮಹಿಳೆಯರನ್ನು ಸ್ಥಳಾಂತರಗೊಳಿಸಿದಾಗ ಪುನರ್ವಸತಿ ಸೌಲಭ್ಯಗಳಿಲ್ಲದೆ ದುಡಿಮೆಗೆ ಕೆಲಸವಿಲ್ಲದೆ ಹೊಸಪರಿಸರಕ್ಕೆ ಹೊಂದಿಕೊಳ್ಳಲಾಗದೆ ದಿನೆ ದಿನೆ ಅಂಚಿಗೆ ತಳ್ಳಲ್ಪಡುತ್ತಿದ್ದಾರೆ.

## ೩.೫ ಪಾರಂಪರಿಕ ಬೇಸಾಯಪದ್ಧತಿಗಳು

ಪುರಾತನ ಕಾಲದಿಂದ ವಂಶಪಾರಂಪರಿಕವಾಗಿ ಬೆಳೆದು ಬಂದಿರುವ ಪದ್ಧತಿಗಳನ್ನು ಗೌಳಿಗರು ಈಗಲೂ ಇಟ್ಟುಕೊಡು ಬಂದಿದ್ದಾರೆ. ವ್ಯವಸಾಯ ಚಟುವಟಿಕೆಯ ಭಾರಹೊರುವಲ್ಲಿ ಕಾಡುಪ್ರದೇಶಕ್ಕೆ ಒಂದು ಮಿತಿಯಿದೆ. ಪ್ರತಿಶತ ಹತ್ತರಷ್ಟು ಭಾಗದಲ್ಲಿ ವ್ಯವಸಾಯ ಚಟುವಟಿಕೆ ನಡೆಸಿದರೆ ಮಲೆನಾಡಿನ ಪರಿಸರ ತನ್ನ ಸಮತೋಲನವನ್ನು ಕಾಯ್ದುಕೊಳ್ಳಬಲ್ಲದಾಗಿದೆ. ಆದರಿಂದು ಅಲ್ಲಿನ ವ್ಯವಸಾಯ ಚಟುವಟಿಕೆ ಹಲವು ದುಪ್ಪಟ್ಟು ಹೆಚ್ಚಿದೆ. ಬೇಸಾಯವು ನಿಧಾನವಾಗಿ ಹರಡಿ ಕಾಡುಗುಡ್ಡಗಳನ್ನು ಆವರಿಸಿಕೊಂಡಿದೆ.

**೩.೫.೧ ಆಹಾರ ಸಂಗ್ರಹಣೆ** : ಸಾಮಾನ್ಯವಾಗಿ ಬುಡಕಟ್ಟುಗಳೆಂದರೆ ಪ್ರಾಚೀನದಿಂದಲೂ, ನಿಸರ್ಗದಲ್ಲಿ ಸಿಗುವ ಆಹಾರೋತ್ಪನ್ನಗಳನ್ನು ಸಂಗ್ರಹಿಸಿ ತಮ್ಮ ಅಗತ್ಯತೆಯ ನಂತರ ಮಾರಾಟ ಮಾಡಿ ಬದುಕುವುದೇ ಆಗಿತ್ತು. ಗೌಳಿಗರು ಕೂಡ ಒಂದನೊಂದು ಕಾಲಕ್ಕೆ ತಾವು ಪಶುಸಂಗೊಪನೆಯ ಜೊತೆಗೆ ನಿಸರ್ಗದತ್ತ ಆಹಾರ ಸಂಗ್ರಹಣೆಯನ್ನು ಮಾಡುತ್ತಿದ್ದರು. ಅದರೆ ಇಂದು ಅರಣ್ಯನಾಶ ಮತ್ತು ಪ್ಲಾಂಟಿಶನ್ ಬದಲಾವಣೆಯ ಕಾರಣದಿಂದಾಗಿ ಹಣ್ಣು, ಹಂಪಲು, ಗಡ್ಡೆ-ಗೆಣಸು, ನಾರು ಬೇರಿನಂತಹ ಸಹಜ ಆಹಾರ ಸಿಗುತ್ತಿಲ್ಲ. ಜೊತೆಗೆ ತಮ್ಮ ಪಶುಸಂಪತ್ತಿಗೆ ಬೇಕಾದ ಸಹಜ ಆಹಾರವು ದುರ್ಲಬವಾಗಿದೆ. ಆಹಾರ ಸಂಗ್ರಹಣೆ ಇಂದು ಮರಿಚೀಕೆಯಾಗಿದೆ.

**೩.೫.೨ ಅರಣ್ಯ ಬೇಸಾಯ** : ಗೌಳಿಗ ಸಮುದಾಯದಲ್ಲಿ ಅರಣ್ಯಬೇಸಾಯವನ್ನು ಕಾಣಬಹುದು. ಅರಣ್ಯ ಬೇಸಾಯ ಎಂದರೆ ಗಿಡಗಳು ದಷ್ಟಪುಷ್ಟವಾಗಿ ಬೆಳೆದಿರುವುದನ್ನು ಗಮನಿಸಿ ಕೃಷಿಗೆ ಕಾಡುಸುಡುವ ಪರಿಪಾಠಕ್ಕೆ ಅರಣ್ಯ ಬೇಸಾಯ ಎನ್ನಬಹುದು. ಇದು ಮಣ್ಣಿಗೆ ಬೂದಿ ಹಾಕುವ ಕೃಷಿ ಪರಂಪರೆಯ ಒಂದು ಮೆಲುಕು. ಕೃಷಿಗೆ ಜಾಗವೇ ಇಲ್ಲದಷ್ಟು ದಟ್ಟಕಾಡು ಬೆಳೆದಾಗ ಸುಡುವುದು ಅಡವಿ ನಿಯಂತ್ರಣದ ಅಸ್ತ್ರ. ಅರಣ್ಯ ಬೇಸಾಯದಲ್ಲಿ ಕುಂಬ್ರಿ ಬೇಸಾಯ ಪದ್ಧತಿ ಹೆಚ್ಚು ಪ್ರಚಲಿತವಾಗಿದೆ.

**೩.೫.೩ ಕುಂಬ್ರಿ ಬೇಸಾಯ** : ಪಾರಂಪರಿಕವಾಗಿ ಗೌಳಿಗ ಸಮುದಾಯಗಳು ನಡೆಸಿಕೊಂಡು ಬಂದ ಸಾಂಪ್ರದಾಯಿಕವಾದ ಈ ಬೇಸಾಯ ಪದ್ಧತಿ ಅತೀ ಪುರಾತನವಾದದ್ದು. ಕಾಡಿನ ಬೆಟ್ಟಗಳ ಇಳಿಜಾರಿನ ಪ್ರದೇಶಗಳಲ್ಲಿ ನೆಲವನ್ನು ಉಳದೇ ನೇಗಿಲನಂತಹ ಸಲಕರಣೆಗಳನ್ನು ಬಳಸದೇ ನೇರವಾಗಿ ಭತ್ತ, ರಾಗಿಗಳನ್ನು ಮಳೆಗಾಲದಲ್ಲಿ ಚೆಲ್ಲಿ ಬೇರೆ ವಿವಿಧ ಇತರ ಕಳೆಗಳೊಂದಿಗೆ ಸಹಜವಾಗಿ ನೈಸರ್ಗಿಕವಾಗಿ, ಬೆಳೆಯುವ ವಿಶಿಷ್ಟ ಸಂಪ್ರದಾಯಿಕ ಬೇಸಾಯವೇ ಕುಂಬ್ರಿ ಬೇಸಾಯ ಪದ್ಧತಿಯಾಗಿದೆ. ದನಕರುಗಳಿಗೆ ಮೇವನ್ನು ಸ್ವಲ್ಪ ಭಾಗದಲ್ಲಿ ಬೆಳೆಸಿಗೊಳ್ಳುವ ಈ ಕೃಷಿ ಪದ್ಧತಿ ಗೌಳಿಗ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಹದ್ದು. ಅನಾದಿಕಾಲದಿಂದಲೂ ನಡೆಸಿಕೊಂಡು ಬಂದಿರುವ ಈ ಕೃಷಿಯನ್ನು ಬೆಟ್ಟದ ಇಳಿಜಾರಿನ ಭಾಗದ ಕಾಡನ್ನು ಸುಟ್ಟು ಸಮಮಾಡಿ ದವಸಗಳನ್ನು ಚೆಲ್ಲುತ್ತಿದ್ದರು. ಒಮ್ಮೆ ಇವರು ನಿರ್ದಿಷ್ಟ ಜಾಗದಲ್ಲಿ ಒಂದು ಬೆಳೆ ಪಡೆದರೆ ಅದೇ ಜಾಗದಲ್ಲಿ ೩ ರಿಂದ ೫ ವರ್ಷಗಳವರೆಗೂ ಅಲ್ಲಿ ಕೃಷಿ ಮಾಡುವುದಿಲ್ಲ. ಬದಲಾಗಿ ಪಕ್ಕದ ನಿರ್ದಿಷ್ಟ ಜಾಗದಲ್ಲಿ ಬೆಳೆ ತೆಗೆಯುತ್ತಾರೆ.

ನಂತರ ಮೊದಲಿನ ಜಾಗದಲ್ಲಿ ಬೆಳೆದ ಗಿಡಗಂಡರಗಳಿಗೆ ಪುನಃ ಬೆಂಕಿಕೊಟ್ಟು ಸಮಮಾಡಿ ಪುನಃ ಜಾಗ ಹದಮಾಡಿಕೊಳ್ಳುತ್ತಾರೆ. ಈ ರೀತಿ ಮಾಡುವುದರಿಂದ ಯಾವುದೇ ಗೊಬ್ಬರ ಬಳಸದೇ ನೆಲವನ್ನು ತಮ್ಮಷ್ಟಕ್ಕೆ ನೈಸರ್ಗಿಕವಾಗಿ ಫಲವತ್ತುಗೊಳಿಸುವ ಸಹಜ ಕೃಷಿ ರೀತಿ ಇದಾಗಿದೆ.

ಈ ಕುಂಬ್ರಿ ಬೇಸಾಯವನ್ನು ಜನ ರೂಢಿಸಿಕೊಂಡಿರುವುದರ ಹಿನ್ನೆಲೆಗೆ ಭೌಗೋಳಿಕ ಕಾರಣಗಳೂ ಇವೆ. ಮೊದಲನೆಯದಾಗಿ ಸದಾ ಮಳೆಯಾಗುವ ದಟ್ಟಕಾಡಿನ ಭಾಗಗಳು, ನೀರು ರಭಸವಾಗಿ ಹರಿಯವುದರಿಂದ ನೆಲಮಟ್ಟದಲ್ಲಿ ಭತ್ತ ಬೆಳೆಯಲಾಗುವುದಿಲ್ಲ. ಈ ಕಾರಣದಿಂದ ಜನ ಬೆಟ್ಟದ ಇಳಿಜಾರಿನಲ್ಲಿ ಅನಿವಾರ್ಯವಾಗಿ ಈ ಬೇಸಾಯ ಪದ್ಧತಿಯನ್ನು ರೂಢಿಸಿಕೊಂಡು ಬಂದಿರ ಬಹುದು. ಈಗಲೂ ಜನ ತಾವು ಬೆಳದ ಭತ್ತ, ರಾಗಿ, ಗೆಡ್ಡೆ-ಗೆಣಸುಗಳನ್ನು ಮಾರುವುದಿಲ್ಲ. ತಮ್ಮ ಬಳಕೆಗೋಸ್ಕರ ಈ ಕೃಷಿಯನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಕುಂಬ್ರಿ ಬೇಸಾಯ ಮಾಡುತ್ತಾ ಬಂದಿರುವ ರೈತರುಗಳ ಅಭಿಪ್ರಾಯವನ್ನು ಕೇಳಿದಾಗ ಜನ ಅನಾದಿಕಾಲದಿಂದಲೂ ಈ ಕೃಷಿ ನಡೆಸಿಕೊಂಡು ಬರುತ್ತಿದ್ದಾರೆ. ಬ್ರಿಟಿಷರ ಕಾಲದಲ್ಲಿ ಈ ಜಮೀನುಗಳ ಮೇಲೆ ತೆರಿಗೆ ವಿಧಿಸುವ ಸಲುವಾಗಿ ೧೮೮೮ರಲ್ಲಿ Lease rent ತಿರ್ವೆ ತುಂಬಿಸಿಕೊಳ್ಳುವುದರ ಮೂಲಕ ಕುಂಬರಿ ಜಾಗ ದಾಖಲೆಗಳಿಗೆ ಒಳಪಟ್ಟಿತು. ಅಂದೇ ಬ್ರಿಟಿಷರು ಸರ್ವೆ ಮಾಡಿ ಜಮೀನಿನ ಸುತ್ತಲೂ ಬಂದಾರ ಕಲ್ಲುಗಳನ್ನು ನೆಟ್ಟಿದ್ದಾರೆಂದು ಈಗಲೂ ತಮ್ಮ ಜಮೀನುಗಳಲ್ಲಿ ಗೌಳಿಗರು ತೋರಿಸುತ್ತಾರೆ. ಹಣವನ್ನು ಪಾವತಿಸಿಕೊಳ್ಳುವುದರ ಮೂಲಕ ಕಾನೂನಿನ ಪರಧಿಯೊಳಗೆ ಕುಂಬ್ರಿ ಬೇಸಾತದ ಅಸ್ತಿತ್ವವನ್ನು ಸ್ಥಿರಗೊಳಿಸಿತು. ಬ್ರಿಟಿಷ್ ಕಾಲದಿಂದಲೂ ಉತ್ತರ ಕರ್ನಾಟಕದ ಹಲವು ಭಾಗ ಮುಂಬೈ ಆಡಳಿತಕ್ಕೆ ಒಳಪಟ್ಟಿದ್ದರಿಂದ ಆಗಿನ ದಾಖಲೆಗಳು ಹಳೆಯ ಮರಾಠಿ ಲಿಪಿಯಲ್ಲಿವೆ. ಈ ಕಾರಣ ಕರ್ನಾಟಕದ ಈಗಿನ ಅಧಿಕಾರಿಗಳಿಗೆ ಕುಂಬ್ರಿ ಬಗ್ಗೆ ಇರುವ ಸ್ಪಷ್ಟ ದಾಖಲೆಗಳ ಬಗ್ಗೆ ಅರಿವಿಲ್ಲ. ಈ ಕುಂಬ್ರಿ ಬೇಸಾಯ ಸಾಮೂಹಿಕವಾಗಿದ್ದು ಅದರ ಒಡೆತನ ಹಾಡಿಯ ನಾಯಕನ ಹೆಸರಲ್ಲಿ ಮಾತ್ರ ಇತ್ತು.

ಒಂದು ದಾಖಲೆಯ ಪ್ರಕಾರ ಒಂದು ಎಕರೆಗೆ ಅಂದಾಜು ೨೫ ಪೈಸೆಯಂತೆ ೧೯೬೭ರವರೆಗೂ ರೈತರು ಹಣ ತುಂಬುತ್ತಾ ಬರುತ್ತಿದ್ದರು. ಆದರೆ ಇದ್ದಕ್ಕಿದ್ದಂತೆ ೧೯೬೭ರ ನಂತರ ಅರಣ್ಯ ಇಲಾಖೆ ರೈತರಿಗೆ ಇನ್ನು ಕುಂಬ್ರಿ ಹಣ ಪಾವತಿಸಬೇಡಿ ಮತ್ತು ಕುಂಬ್ರಿ ಬೇಸಾಯ ಮಾಡಬೇಡಿ ಎಂದು ನಿರ್ಬಂಧ ಹಾಕಿತು. ಅಮಾಯಕ ಮುಗ್ಧ ಜನ ಜೀವನ ನಡೆಸಲಾಗದವರು ಗೋವಾದ ಕಡೆಗೆ ವಲಸೆಹೋದರು.

ಇಷ್ಟೇ ಅಲ್ಲ ಕಳೆದ ದಶಕಗಳಲ್ಲಿ ಪಶ್ಚಿಮಘಟ್ಟದ ಕಾಡುಗಳನ್ನು ಉಳಿಸಿಕೊಳ್ಳಿ ಎಂದು ಬ್ರಿಟಿಷರ ODA (Overüean Developrent Administrion) ನಿಧಿಯಿಂದ ಅರಣ್ಯ ಇಲಾಖೆ ರಚಿಸಲ್ಪಟ್ಟ JFPM (Joint Forestry Program Managemant) ಗ್ರಾಮ ಅರಣ್ಯ ಸಮಿತಿಗಳನ್ನು ರಚಿಸಿ ಜನರ ಸಹ ಭಾಗಿತ್ವದಲ್ಲಿ ಕಾಡನ್ನು ಉಳಿಸಿ ಬೆಳಸಿ ಸಮಪಾಲನ್ನು ತೆಗೆದುಕೊಳ್ಳಬೇಕೆಂಬ ಉದ್ದೇಶದಿಂದ ಕಳೆದ ದಶಕಗಳಿಂದ ಕೆಲಸಮಾಡಿದ ಅರಣ್ಯ ಇಲಾಖೆ ಎಷ್ಟರಮಟ್ಟಿಗೆ ಪ್ರಗತಿ ಸಾಧಿಸಿತು? ಜನರುಗಳಿಗೆ ಸಮಪಾಲು ಎಷ್ಟುಬಂತು? ಗೌಳಿಗರ ಕುಂಬ್ರಿ ಜಾಗದಲ್ಲಿ ಅವರಿಂದಲೇ ಅಕೇಶಿಯಾ ಗಿಡ ನಡೆಸಿ ಅವರ ಜಾಗಕ್ಕೆ ಬೇಲಿ ನಡೆಸಿರುವುದನ್ನು ಕಾಣಬಹುದಾಗಿದೆ.

ಪುರಾತನ ಬೇಸಾಯವಾಗಿದ್ದ ಕುಂಬ್ರಿ ಬೇಸಾಯ ಕಾನೂನು ಕಾಯ್ದೆ, ಬೇಜಾವಾಬ್ದಾರಿಗಳಡಿಯಲ್ಲಿ ಸಿಲುಕಿ ಅವನತಿಯಾಗುತ್ತಿದೆ. ಕುಂಬ್ರಿ ಜಾಗೆಯಲ್ಲಿ ಬೆಳೆಯುತ್ತಿದ್ದ ಭತ್ತ, ರಾಗಿ, ವಿಶಿಷ್ಟ ತಳಗಳು ಭೂಮಿಯಿಂದಲೇ ಮಾಯವಾಗುವಂತಹ ಪರಿಸ್ಥಿತಿ ಬರುತ್ತಿದೆ. ಇದೆಲ್ಲದರ ಮಧ್ಯ ಕುಂಬ್ರಿ ಜಮೀನು ಕಳೆದುಕೊಂಡ ಜನ ನಿರ್ಗತಿಕರಾಗಿ ಜೀವನ ನಡೆಸಲು ನಿರ್ವಾವಿಲ್ಲದೇ ಪಕ್ಕದ ಗೋವಾಗೆ ಜನಗೂಳೆ ಹೋಗುತ್ತಿದ್ದಾರೆ.

ಕುಂಬಾರವಾಡ, ತೆಂಗಿನಗರಿ, ಮಾವಳ್ಳಿ ಮುಂತಾದ ಕಡೆಯ ಹಳ್ಳಿಯಜನ ಕೂಲಿಗಾಗಿ ವಲಸೆ ಹೋಗುತ್ತಿದ್ದಾರೆ. ನಾಗರಿಕತೆಯ ಸೋಂಕಿಲ್ಲದೇ ಸಮುದಾಯದ ಸೊಗಡನ್ನುಳಿಸಿಗೊಂಡಿದ್ದ ಹಳಿಯಾಳ ಯಲ್ಲಾಪುರ ಗೌಳಿಗರ ಸಂಸ್ಕೃತಿ ಗೋವಾದ ಆಧುನಿಕತೆ ವಿದೇಶಿಕರಣಗಳ ಹಿಡಿತಕ್ಕೆ ಸಿಕ್ಕು ಸಾಯುತ್ತಿವೆ. ಕಾಡು ಅವಲಂಬಿಸಿ, ಕೃಷಿ, ಹಾಡು ಕುಣಿತಗಳನ್ನೊಳಗೊಂಡ ಜೀವಾಳವಾಗಿಸಿ ಕೊಂಡು ನೆಮ್ಮದಿ ಬದುಕು ಸಾಗಿಸಿ ಪಶುಪಾಲನೆ ಮತ್ತು ಬೇಸಾಯದ ಕೆಲಸ ಬಿಟ್ಟು ಅಲ್ಲಿಯ ದನ ಕರುಗಳ ಹೊರಗಟ್ಟಿ, ತೋಟಗಳಲ್ಲಿ ಜೀತದಾಳಾಗಿ ದುಡಿಯುತ್ತಿದ್ದಾರೆ. ಬಹಳಷ್ಟು ಮೋಸ, ವಂಚನೆಗಳಿಂದ ಗೌಳಿಗ ಹೆಣ್ಣುಮಕ್ಕಳು ಗೋವಾದ ಜಮೀನು ಹಾಳು ಪಿಪಾಸೆಗೆ ಬಲಿಯಾಗುತ್ತಿದ್ದಾರೆ. ಎಷ್ಟೋ ಪ್ರಕರಣಗಳು ದಾಖಲಾಗದೇ ಮುಚ್ಚಿ ಹೋಗುತ್ತವೆ. ದಟ್ಟವಾದಕಾಡು, ಬೇಕಾದಷ್ಟು ಮಳೆ, ಸಮೃದ್ಧ ಸಂಸ್ಕೃತಿ, ಎಲ್ಲ ರೀತಿಯಿಂದಲೂ ಸುಖವಾಗಿದ್ಗ ಜನತೆ ಕುಂಬ್ರಿ ಕಿತ್ತುಕೊಂಡ ಅರಣ್ಯ ಇಲಾಖೆ ಗೌಳಿಗರನ್ನು ಬಲವಂತವಾಗಿ ಗೋವಾಗೆ ತಳ್ಳುವಂತೆ ಮಾಡಿದೆ.

೧೯೮೭ ರಿಂದಲೂ ಹಳಿಯಾಳದ ಕೆಲವು ಭಾಗದ ರೈತರುಗಳು ಮತ್ತು ಕೆಲವು ರಾಜಕೀಯ ಮುಖಂಡರು ಕುಂಬ್ರಿ ಹಕ್ಕಿಗಾಗಿ ಪ್ರತಿಭಟಿಸುತ್ತಲೇ ಬಂದಿದ್ದಾರೆ. ೧೯೯೨ರಲ್ಲಿ ಹಾಗೂ ೧೯೯೮ರಲ್ಲಿ ಕುಂಬ್ರಿಗಾಗಿ ಚಳುವಳಿ ನಡೆದಿದೆ. ಜೋಯಿಡಾದ ಕೆಲವು ರೈತರುಗಳು ಗ್ರೀನ್ ಇಂಡಿಯಾ ಸಂಸ್ಥೆಯ ಸಹಯೋಗದೊಂದಿಗೆ ಒಟ್ಟಿಗೆ ಸೇರಿ ಕುಂಬ್ರಿ ಹಕ್ಕಿನ ಹೋರಾಟಸಮಿತಿಯನ್ನು ರಚಿಸಿಕೊಂಡಿದ್ದಾರೆ. ಮುಖಾಮುಖಿ ಕಾರ್ಯಕ್ರಮ ಹಮ್ಮಿಕೊಳ್ಳುವುದ ಮೂಲಕ ಚಳುವಳಿಯನ್ನು ತೀವ್ರಗೊಳಿಸಿದ್ದಾರೆ. ಈ ಮುಖಾಮುಖಿಕಾರ್ಯಕ್ರಮದಲ್ಲಿ ಅರಣ್ಯ ವರಿಷ್ಠಾಧಿಕಾರಿಗಳು, ಜನಪ್ರತಿನಿಧಿಗಳು ಮತ್ತು ಹೋರಾಟ ಸಮಿತಿಯ ಪ್ರಮುಖರು ಸಕಲ ಜನರೆದುರಿಗೆ ಚರ್ಚೆ ಮತ್ತು ಸಂವಾದಗಳ ಮೂಲಕ ಕುಂಬ್ರಿ ಬಗ್ಗೆ ಇರುವ ಗೊಂದಲಗಳನ್ನು ಬಗೆಹರಿಸುತ್ತಿದ್ದಾರೆ.

ಆಧುನಿಕತೆ, ಔದ್ಯೋಗಗಳೂ ಮತ್ತು ವಾಣಿಜ್ಯ ಬೆಳೆಗಳ ಪ್ರವಾಹದಲ್ಲಿ ಗೌಳಿಗ ಜನರ ಸಂಸ್ಕೃತಿ, ಅವರ ಮುಗ್ಧತೆ ಅವರ ನೈಸರ್ಗಿಕ ಸಹಜ ಕೃಷಿ, ಜೀವನಕ್ಕಾಗಿ ಬೆಳೆಯುತ್ತಿದ್ದ ಭತ್ತ, ರಾಗಿ, ಎಲ್ಲವೂ ಕೊಚ್ಚಿ ಹೋಗುತ್ತಿದೆ. ಹಣ ಸಂಪಾದಿಸುವ ಭರದಲ್ಲಿ ಶುಂಠಿ, ಅರಿಶಿನ ಮುಂತಾದ ಬೆಳೆಗಳು ಆಹಾರ ಧ್ಯಾನ್ಯ ಬೆಳೆಗಳ ಜಾಗಗಳನ್ನು ಅಲಂಕರಿಸುತ್ತಿವೆ. ಈ ಕುಂಬ್ರಿ ಬೇಸಾಯ ಮಾಡುತ್ತಿದ್ದ ಅವರ ಬದುಕಿನ ಮೂಲ ಉತ್ಪನ್ನ ಕಳೆದುಕೊಂಡಿದ್ದರಿಂದ ವಂಚಿತ ರೈತರು ಬಡತನದ ಬೇಗೆಯಲ್ಲಿ ನರಳುತ್ತಿದ್ದಾರೆ. ಆಧುನಿಕತೆ ಮತ್ತು ನಾಗರಿಕತೆಗಳ ರೀತಿಗಳಲ್ಲಿ ಕೊಚ್ಚಿಹೋಗಿರುವ ಅನೇಕ ಸಂಸ್ಕೃತಿಗಳಲ್ಲಿ ಇನ್ನೂ ಉಸಿರಾಡುತ್ತಿದ್ದ ಕುಂಬಿ ಬೇಸಾಯದ ಸಂಸ್ಕೃತಿ, ಸರಕಾರದ

ನಿರ್ಲಕ್ಷ ಕಾಯ್ದೆಗಳಿಂದಾಗಿ ಸಂಸ್ಕೃತಿಯ ತನ್ನ ಕೊನೆಕೊಂಡಿಯನ್ನು ಕಳಚಿ ಇತಿಹಾಸದ ಪುಟಸೇರಲಿದೆ. ಸರಕಾರದ ಮತ್ತು ಅರಣ್ಯ ಇಲಾಖೆಗಳು ಕೊಂಚ ಕಣ್ಣು ತೆರೆದು ನೋಡಿ ಗೌಳಿಗರು ಕಳೆದುಕೊಂಡ ಕುಂಬ್ರಿ ಜಾಗ ಅವರಿಗೆ ಸಿಗುವಂತಾಗಬೇಕಾಗಿದೆ.

**೩.೫.೪ ಮಳೆಯಾಧಾರಿತ ಬೇಸಾಯ** : ಮಳೆಗಾಲದಲ್ಲಿ ಮಳೆ ಆಶ್ರಿತವಾಗಿ ತುಂಡು ಹೊಲದಲ್ಲಿ ಭತ್ತದ ಕೃಷಿ ಮಾಡುವುದು. ಬೇಸಿಗೆಯಲ್ಲಿ ಐದಾರು ತಿಂಗಳು ಗೋವಾ-ಮಹಾರಾಷ್ಟ್ರಕ್ಕೆ ಕೂಲಿಗಾಗಿ ಗಂಡಸರ ವಲಸೆ, ಆಗ ಮಹಿಳೆ ಮಕ್ಕಳು ವೃದ್ಧರನ್ನು ಪೋಷಿಸುವುದು ನಡೆದು ಬಂದಿದೆ. ಆದರೆ ಈಗ ಮಳೆಯಾಗದೇ ಬೆಳೆಯಲ್ಲಾ ಹಾನಿಯಾಗಿ ಆರ್ಥಿಕ ಸಂಕಷ್ಟ ಹೆಚ್ಚು ಅನುಭವಿಸುತ್ತಿದ್ದಾರೆ. ಒಂದು ವೃತ್ತಿಯನ್ನು ಮಾಡಲು ಬಂಡವಾಳವಿಲ್ಲ. ಬಂಡವಾಳ ಬೇಕೆಂದರೆ ಆರ್ಥಿಕವಾಗಿ ಸಹಾಯವನ್ನು ಯಾರು ಮಾಡದೇ ಆರ್ಥಿಕ ವ್ಯವಸ್ಥೆಯಲ್ಲಿ ಅಸ್ಥಿರತೆ ಉಂಟಾಗುತ್ತಿದೆ. ಪರಿಣಾಮ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಬದುಕಿನ ಮೇಲೆ ಜೀವನಕ್ರಮದಲ್ಲಿ ಏರುಪೇರುಗಳು ಉಂಟಾಗುತ್ತಿವೆ. ಇಂದಿಗೂ ಕೃಷಿಯಲ್ಲಿ ನೇಗಿಲು, ಎತ್ತಿನಬಂಡಿ, ಹೆಚ್ಚಾಗಿ ಬಳಕೆಯಾಗುತ್ತಿದ್ದು ಶೇಕಡ ೬೫ರಷ್ಟು ಕೃಷಿಕರು ಕೇವಲ ಮಳೆಯಾಧಾರಿತ ಕೃಷಿಕ್ರಮವನ್ನು ಅನುಸರಿಸಿರುವುದರಿಂದ ವ್ಯವಸಾಯದಿಂದ ಯಾವ ಲಾಭವು ಇಲ್ಲವೆಂದು ಹಾಗೂ ಮಳೆಯಿಲ್ಲದೆ ಬೆಳೆಗಳೆಲ್ಲ ಹಾನಿಯಾಗಿ ಪರ್ಯಾಯ ವೃತ್ತಿಯನ್ನಾಗಿ ಕೂಲಿ, ಜೀತ, ವ್ಯಾಪರವನ್ನು ಮಾಡುತ್ತಿದ್ದಾರೆ. ಹೊಸ ತಲೆಮಾರಿನ ಜನ ಕೃಷಿಯಿಂದ ಯಾವಲಾಭವು ಇಲ್ಲಾ ಎನ್ನುವ ಭಾವನೆ ತಳೆಯುತ್ತಿದ್ದಾರೆ. ಹಾಡಿಗಳಲ್ಲಿ ಲಿಂಗತಾರತಮ್ಯವಿಲ್ಲದೆ ಸ್ತ್ರೀ-ಪುರುಷ ಬೇರೆಯವರ ಜಮೀನುಗಳಲ್ಲಿ ದುಡಿಯಲು ಹೋಗುತ್ತಿದ್ದಾರೆ. ಗೌಳಿಗ ಸಮುದಾಯಕ್ಕೆ ಕೂಲಿ ಮಹತ್ವವಾದ ಆರ್ಥಿಕ ಚಟುವಟಿಕೆಯಾಗಿದೆ. ಶ್ರಮಕ್ಕೆ ಪ್ರತಿಫಲವಾಗಿ ಇವರು ಪಡೆಯುವ ಕೂಲಿಯು ಅವರ ಆರ್ಥಿಕ ಸ್ಥಿತಿಗತಿಯ ಜೊತೆಗೆ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ.

ಹಾಡಿಗಳಲ್ಲಿ ಹೆಣ್ಣುಮಕ್ಕಳು ಹೆಚ್ಚಾಗಿ ಕೂಲಿಯನ್ನು ಮಾಡುತ್ತಿದ್ದಾರೆ. ಕೂಲಿಯನ್ನು ಮೇಲ್ಜಾತಿಯವರು ಹಾಗೂ ತಮ್ಮ ಸುತ್ತಮುತ್ತಲಿನ ಕೃಷಿಕರ ಜಮೀನುಗಳಲ್ಲಿ, ತೋಟಗಳಲ್ಲಿ ಮಾಡುತ್ತಾರೆ. ಕೂಲಿಯನ್ನು ಬೆಳಗ್ಗೆಯಿಂದ ಸಂಜೆಯವರೆಗೆ ನಿಗದಿಪಡಿಸಿರುತ್ತಾರೆ. ವಾರದ ಕೂಲಿಯನ್ನು ವಾರದ ಏಳು ದಿನಗಳಲ್ಲಿ ಆರು ದಿನ ಮಾಡುತ್ತಿದ್ದಾರೆ. ಒಂದು ದಿನ ಸಂತೆಯನ್ನು ಮಾಡಲು ಕೂಲಿಗೆ ಹೋಗುವುದಿಲ್ಲ. ತಮಗೆ ಬೇಕಾದ ಜೀವನಕ್ಕೆ ಅತ್ಯವಶ್ಯಕ ಸಾಮಾಗ್ರಿಗಳನ್ನು ಕೊಳ್ಳಲು ಸಂತೆಗೆ ಹೋಗುವರು. ಕೂಲಿಯ ತಾರತಮ್ಯ ಇರುವುದನ್ನು ಸಾಮಾನ್ಯವಾಗಿ ಎಲ್ಲ ಗ್ರಾಮೀಣ ಪ್ರದೇಶದಲ್ಲಿ ನಾವು ಕಾಣಬಹುದು. ಪುರುಷ ಮತ್ತು ಮಹಿಳೆಯರ ನಡುವಿನ ಕೂಲಿಯ ತಾರತಮ್ಯದ ಜೊತೆಗೆ ಕೂಲಿ ನೀಡುವ ಹಣದಲ್ಲಿಯೂ ತಾರತಮ್ಯವಿದೆ. ಮಹಿಳೆಯರಿಗೆ ಸಾಮಾನ್ಯವಾಗಿ ೪೫ ರಿಂದ ೫೦ ರೂ.ಗಳನ್ನು ನೀಡುವರು. ಇಬ್ಬರೂ ಸಮಾನ ಕೂಲಿಯನ್ನೇ ಮಾಡಿದರು ಹಣ ನೀಡುವುದರಲ್ಲಿ ತಾರತಮ್ಯವಿದೆ. ವಾರದ ಕೂಲಿಯನ್ನು ಗಂಡಸರಿಗೆ ೩೦೦ರಿಂದ ೩೫೦ ರೂ. ಇದ್ದರೆ ಮಹಿಳೆಯರಿಗೆ ೨೦೦ ರಿಂದ ೨೫೦ ರೂ.ಗಳಷ್ಟು ವ್ಯತ್ಯಾಸವಿದೆ. ಕೃಷಿ ಕೂಲಿಯು ವರ್ಷದ

ಋತುಮಾನಗಳಿಗೆ ಅನುಸಾರವಾಗಿ ಕೊಡಲ್ಪಡುತ್ತದೆ. ಭೂಮಾಲೀಕರು ಮಳೆಗಾಲದಲ್ಲಿ ಕೆಲಸಕ್ಕೆ ನೇಮಿಸಿಕೊಳ್ಳುತ್ತಾರೆ. ಪ್ರಮುಖವಾಗಿ ನಾಟಿಸಮಯದಿಂದ ಹಿಡಿದು ಕೊಯ್ಲು ಬರುವವರೆಗೂ ಮಾಡುವ ಸಮಯದಲ್ಲಿ ದುಡಿಯುತ್ತಾರೆ. ಅನಿವಾರ್ಯವಾಗಿ ಕೂಲಿ ಸಿಗದೆ ಇದ್ದಾಗ ದೂರ ದೂರದ ಪ್ರದೇಶ ಗಳಿಗೆ ಹೋಗುತ್ತಾರೆ. ಕೃಷಿ ಕೂಲಿಯು ವರ್ಷಪೂರ್ತಿ ಸಿಗದೆ ಇದ್ದ ಸಮಯದಲ್ಲಿ ಬೇರೆ ಕೂಲಿಗಳನ್ನು ಮಾಡುತ್ತಾರೆ. ಗಾರೆಕೆಲಸ, ಕಲ್ಲುಹೊಡೆಯುವುದು, ರಸ್ತೆರಿಪೇರಿಮಾಡುವ ಕೆಲಸಗಲಿಗೆ ಹೋಗುತ್ತಾರೆ.

ಪ್ರಸ್ತುತ ಕ್ಷೇತ್ರಕಾರ್ಯ ಮಾಡಿದ ಹಾಡಿಗಳಲ್ಲಿ ಸಾಮಾನ್ಯವಾಗಿ ಗಾರೆ ಕೆಲಸಕ್ಕೆ ಹೋಗುವರು ಹೆಚ್ಚಾಗಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆ ಮತ್ತು ಮಕ್ಕಳು ಕೂಡ ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

**ಕೋಷ್ಟಕ ೩.೫ ಕೂಲಿಯಲ್ಲಿ ತೊಡಗಿಸಿಕೊಂಡಿರುವ ಪುರುಷ ಮತ್ತು ಮಹಿಳೆಯರ ಪ್ರಮಾಣ**

| ಕ್ರ.ಸಂ. | ನೆಲೆ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧. | ದೇಶಪಾಂಡೆನಗರ | ೫೫ | ೨೬ | ೮೨ |
| ೨. | ಹೊಸಳ್ಳಿ | ೨೦ | ೧೨ | ೩೨ |
| ೩. | ಅಂಬಾವಾಡೆ | ೧೫ | ೧೦ | ೨೫ |
| ೪. | ವಿಟ್ನಾಳ | ೨೦ | ೮ | ೨೮ |
| ೫. | ಮೈನಳ್ಳಿ | ೨೫ | ೧೬ | ೪೧ |
| ೬. | ಬಡ್ಡಿಗೇರೆ | ೧೮ | ೧೪ | ೩೨ |
| | **ಒಟ್ಟು** | **೧೫೩** | **೮೭** | **೨೪೦** |

ಈ ಕೋಷ್ಟಕವನ್ನು ಗಮನಿಸಿದರೆ ವೃತ್ತಿಯಲ್ಲಿ ಬದಲಾವಣೆ ಎನ್ನುವುದು ಈ ಸಮುದಾಯದಲ್ಲಿ ಹೇಗೆ ಆಗುತ್ತಿದೆ ಎನ್ನುವುದು ಕಂಡುಬರುತ್ತದೆ. ಮೂಲವೃತತಿಗಳಾದ ಪಶುಪಾಲನೆ ಮತ್ತು ಕೃಷಿಯನ್ನು ಬಿಟ್ಟು ಕೂಲಿ ಮಾಡುವವರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ.

**ಕೂಲಿಗಾಗಿ ತಾತ್ಕಾಲಿಕ ವಲಸೆ**

ಇರುವ ಸ್ವಂತದ ಹಾಡಿಗಳಲ್ಲಿ ದುಡಿಮೆ ಇಲ್ಲದ ಪರಿಸ್ಥಿತಿಯಲ್ಲಿ ಗೌಳಿಗರು ಬೇರೆ ಊರಿಗೆ ವಲಸೆ ಹೋಗುವುದು ಇತ್ತೀಚಿನ ದಿನಗಳಲ್ಲಿ ಸಾಮಾನ್ಯ ಸಂಗತಿಯಾಗಿದೆ. ಉತ್ಪಾದನೆ ಮುಖ್ಯ ವಾಗಿರುವುದರಿಂದ ಅವಲಂಬಿಸಿರುವ ಕ್ಷೇತ್ರಗಳು ವಿಭಿನ್ನವಾಗಿವೆ. ಮೂಲ ಕಸುಬು ಪಶುಪಾಲನೆ ಇಲ್ಲದೆ ಹಾಗೂ ಮಳೆಯಾಗದೇ ಬೆಳೆಗಳು ಚೆನ್ನಾಗಿ ಬರದೆ ರೈತರು ಕಂಗಾಲಾಗಿ ಕೂಲಿಯನ್ನು ಮಾಡಲು ದೂರದ ಊರುಗಳಿಗೆ ವಲಸೆಹೋಗುತ್ತಿದ್ದಾರೆ. ಆದರೆ ಮಹಿಳೆಯರು ಅಲ್ಲೇ ಹತ್ತಿರದ ಊರುಗಳಿಗೆ ಹೋಗಿ ಕೂಲಿಗಾಗಿ ಕೆಲಸ ಮಾಡುತ್ತಿದ್ದಾರೆ. ನಾನು ಕ್ಷೇತ್ರಕಾರ್ಯ ಮಾಡಿದ ಹಾಡಿಗಳಲ್ಲಿ

ಬಹಳಷ್ಟು ಮಂದಿ ಉತ್ಪಾದನಾ ಸಾಧನವಾಗಿ ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ಮಾರ್ಗಗಳಲ್ಲಿ ಕೂಲಿಯು ಮುಖ್ಯವಾಗಿದೆ. ಕೂಲಿಯಲ್ಲಿ ತೊಡಗಿಕೊಂಡಿರುವವರ ಕುಟುಂಬವು ಸುತ್ತಲ ಸಮುದಾಯಗಳ ಜೊತೆಗೆ ಬೆರೆಯುವಂತೆ ಸ್ನೇಹ-ಸೌಹಾರ್ದತೆ ಬೆಳೆಯುವಂತೆ ಮಾಡಿದೆ. ಇದರಿಂದ ಗೌಳಿಗರ ರೀತಿ-ನೀತಿ ಜೀವನ ಶೈಲಿಗಳಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬರುತ್ತದೆ.

**ಕೂಲಿಗಾಗಿ ವಲಸೆ ಹೋಗಿರುವ ಕೂಲಿಯ ವಿಧಗಳು**

ಕುಟುಂಬದ ನಿರ್ವಹಣೆಗಾಗಿ ಗೌಳಿಗರು ಇಂದು ವಲಸೆ ಹೋಗುವ ಪ್ರಕ್ರಿಯೆಯನ್ನು ನೋಡಿದಾಗ ಪಾರಂಪರಿಕವಾಗಿ ನಂಬಿದ್ದ ಉದ್ಯೋಗಗಳಿಗೂ ಸಂಬಂಧವೇ ಇಲ್ಲದ ಪರಿಸ್ಥಿಯಲ್ಲಿಯೂ ಆಸರೆಯಾಗಿ ಪಡೆದ ವೃತ್ತಿಗಳು ಇಂದು ಹೆಚ್ಚು ಗೌಳಿಗರನ್ನು ಬದುಕಿದುತ್ತಿವೆ. ಬದಲಾಗುತ್ತಿರುವ ಸಮಾಜದಲ್ಲಿ ಗೌಳಿಗರು ಅನೇಕ ವಿಧವಾದ ವೃತ್ತಿಗಳಲ್ಲಿ ತೊಡಗಿಕೊಂಡು ಜೀವಿಸುತ್ತಿದ್ದಾರೆ. ಗೌಳಿಗರು ಸಮಾಜದೊಂದಿಗೆ ವ್ಯವಸಾಯದ ಜೊತೆ ವಿಧವಿಧವಾದ ವೃತ್ತಿಯನ್ನು ಅವಲಂಬಿಸಿ ಅನೇಕ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ಹಾಡಿಗಳ ಸಾಕಷ್ಟು ಜನ ಕೂಲಿಗಾಗಿ ವಲಸೆ ಹೋಗಿದ್ದಾರೆ.

**ಗಾರೆಕೆಲಸ**

ಗೌಳಿಗರಲ್ಲಿ ಗಾರೆ ಕೆಲಸಕ್ಕೆ ಹೋಗುವರ ಸಂಖ್ಯೆ ಹೆಚ್ಚಿನದಾಗಿದೆ. ಯಾಕೆಂದರೆ ಗಾರೆ ಕೆಲಸದಲ್ಲಿ ಹೆಚ್ಚಿನ ಕೂಲಿಯು ಸಿಗುತ್ತದೆ. ಚಿಕ್ಕ ಹೆಣ್ಣಮಕ್ಕಳಿಗೂ ಸೀರೆಯನ್ನು ಉಡಿಸಿ ಗಾರೆ ಕೆಲಸಕ್ಕೆ ಕರೆದೊಯ್ಯುವ ಸ್ಥಿತಿ ಇವರದ್ದಾಗಿದೆ. ಗಾರೆಕೆಲಸಮಾಡಲು ೧೦-೨೦ ಕಿ. ಮೀ.ಗಳವರೆಗೆ ದೂರ ಹೋಗುತ್ತಾರೆ. ಕಲ್ಲು ಹೊಡೆಯುವ, ಮಣ್ಣು ಹೊರುವ, ಮನೆ ಕಟ್ಟುವ ಅಂದರೆ ಹೆಚ್ಚು ಹೆಚ್ಚು ಕೂಲಿಗಳು ಸಿಗುವ ಕಡೆ ಇವರ ಒಲವು ಹೆಚ್ಚಾಗುತ್ತಿದೆ ಎನ್ನಬಹುದು. ನಾನು ಕ್ಷೇತ್ರಕಾರ್ಯ ಮಾಡಿದ ಪ್ರತಿಯೊಂದು ಹಾಡಿಗಳಲ್ಲಿ ಕೂಲಿಗಾಗಿ ಯಲ್ಲಾಪುರ, ದಾಂಡೇಲಿ ಹಾಗೂ ಮುಂಡಗೋಡ ಪ್ರದೇಶಗಳಿಗೆ ಸಾಮಾನ್ಯವಾಗಿ ಹೋಗುವುದು ಕಂಡುಬರುತ್ತಿದೆ.

**ಮಹಿಳೆಯರು ಅವಲಂಬಿಸಿರುವ ವ್ಯಾಪಾರಗಳು**

ಗೌಳಿಗ ಮಹಿಳೆಯರು ಶ್ರಮಜೀವಿಗಳು ಜೀವನಪೂರ್ತಿ ದುಡಿಯುವುದರಲ್ಲೇ ಕಳೆಯುತ್ತಾರೆ. ಎಂದಿಗೂ ಕೂತು ಉಣ್ಣುವುದು ಅವರಿಂದ ಸಾಧ್ಯವಿಲ್ಲ. ಅರಣ್ಯಗಳಿಂದ ಚಾರೆ, ನೆಲ್ಲಿ, ಕವಳೆ ಹಣ್ಣು ಮುಂತಾದ ಕಾಡುಹಣ್ಣುಗಳನ್ನು ಸಂಗ್ರಹಿಸಿ ಸ್ಥಳೀಯವಾಗಿ ಮಾರುತ್ತಾರೆ. ಮಹಿಳೆಯರು ಸಣ್ಣಪುಟ್ಟ ದಿನಸಿ ಅಂಗಡಿ, ತರಕಾರಿ, ಧಾನ್ಯಗಳನ್ನು, ಬೆಣ್ಣೆ, ತುಪ್ಪ ಮುಂತಾದವುಗಳನ್ನು ಪಟ್ಟಣದ ಸಂತೆಯಲ್ಲಿ ಹೋಗಿ ಮಾರುತ್ತಾರೆ. ಕಾಡಿನಲ್ಲಿರುವ ಮುತ್ತುಗದ ಎಲೆಗಳನ್ನು ತಂದು ಅವುಗಳನ್ನು ಒಣಗಿಸಿ ಊಟದ ಎಲೆಗಳನ್ನು ಸಹ ತಯಾರಿಸಿ ಅವುಗಳನ್ನೇ ಮಾರಾಟ ಮಾಡುವ ಮೂಲಕ ಜೀವಿಸುತ್ತಿದ್ದಾರೆ. ಅವರಿಗೆ ಸಿಗುವುದು ಕೇವಲ ದಿನಕ್ಕೆ ೪೫ ರಿಂದ ೫೦ ರೂ. ಮಾತ್ರ. ಮಹಿಳೆಯರು ಶಿಕ್ಷಣ ಹೊಂದಿಲ್ಲದ ಕಾರಣ ನಿತ್ಯವೂ ನಾಗರಿಕರೆನ್ನುವವರಿಂದ ಮೋಸ ಹೋಗುತ್ತಾರೆ. ವಯಸ್ಸಿನ ನಿರ್ಬಂಧವಿಲ್ಲದಂತೆ ವಯಸ್ಸಾದ ಹಿರಿಯರಿಂದ, ಕಿರಿಯರವರೆಗೂ ದುಡಿಯುವುದು ಇವರ ಜೀವನವಾಗಿದೆ.

**೩.೬ ಸಹಕಾರಿ ಸಂಘ-ಸಂಸ್ಥೆಗಳು**

ಪ್ರಪಂಚದಲ್ಲಿ ಮಾನವನ ಆರ್ಥಿಕ ಉದ್ಯಮಗಳನ್ನು ಬಂಡವಾಳ ಪ್ರಭುತ್ವ ಸಮಾಜ, ಸಮತವಾದ, ಸಹಕಾರ ಮೂರು ಪಂಗಡಗಳಾಗಿ ಅರ್ಥಶಾಸ್ತ್ರಜ್ಞರು ವಿಂಗಡಿಸಿದ್ದಾರೆ. ಸಹಕಾರ ಎಂದರೆ ಒಟ್ಟುಗೂಡಿ ಕೆಲಸ ಮಾಡುವುದು ಎಂದರ್ಥ. ಮಾನವ ಬದುಕನ್ನು ಉತ್ತಮಪಡಿಸುವುದಕ್ಕೆ ಸಹಕಾರವು ಬಹಳ ಉತ್ತಮವಾದ ಮಾರ್ಗ. ಒಬ್ಬನಿಗಾಗಿ ಎಲ್ಲರೂ ಎಲ್ಲರಿಗಾಗಿ ಒಬ್ಬನೂ ದುಡಿಯುವುದೇ ಸಹಕಾರದ ಮುಖ್ಯ ಧ್ಯೇಯ. ಒಗ್ಗಟ್ಟೆ ಇದರ ಮೂಲಮಂತ್ರ ಸರ್ವಸಮಭಾವನೆಯೇ ಇದರ ಅಡಿಗಲ್ಲು.

ಭಾರತದಲ್ಲಿ ಸಹಕಾರ ಪದ್ಧತಿಯು ಪ್ರಾಚೀನ ಕಾಲದಿಂದಲೂ ಕಾರ್ಯಕ್ರಮಗಳು ಇಲ್ಲಿ ಆಚರಣೆಯಲ್ಲಿತ್ತು. ನಂತರ ಬ್ರಿಟಿಷರ ಕಾಲಾವಧಿಯಲ್ಲಿ ರೈತರ ಬದುಕನ್ನು ಉತ್ತಮ ಪಡಿಸಲು ರೈಪಿಯಿಸಶನ್ ಮಾದರಿಯ ಸಂಘಗಳು ಉತ್ತಮವಾದವು. ಸಹಕಾರಿ ಸಂಘ ಸಂಸ್ಥೆಗಳು ಕಳೆದ ೩೦ ವರ್ಷಗಳಿಂದಲೂ ಹೆಚ್ಚಾಗಿ ಪ್ರಚಾರದಲ್ಲಿವೆ. ಇಲ್ಲಿ ಗೌಳಿಗರಿಗೆ ಅನುಕುಲವಾಗುವ ರೀತಿಯಲ್ಲಿ ಹಳಿಯಾಳ, ಯಲ್ಲಾಪುರದಲ್ಲಿ ಸಹಕಾರಿ ಸಂಘಗಳಿವೆ. ಈ ಸಹಕಾರಿ ಸಂಘಗಳು ಗೌಳಿಗರಿಗೆ ಅಲ್ಪಾವಧಿ ಸಾಲವನ್ನು ನೀಡುತ್ತಿವೆ.

**೩.೬.೧ ಕೃಷಿ ಉತ್ಪನ್ನ ಸಹಕಾರಿ ಸಂಘಗಳು** : ಯಲ್ಲಾಪುರ, ಹಳಿಯಾಳ, ಮುಂಡಗೋಡ, ಭಾಗದ ಜನರು ಹೆಚ್ಚು ಅವಲಂಬಿತರಾಗಿರುವುದು ಕೃಷಿ ಉತ್ಪನ್ನಗಳ ಮೇಲೆ. ಕೃಷಿ ಉತ್ಪನ್ನಗಳನ್ನು ಸಹಕಾರಿ ಸಂಘಗಳಿಗೆ ಹಾಕುವುದರ ಮೂಲಕ ಸಾಲವನ್ನು ಪಡೆಯುತ್ತಾರೆ. ಇವರು ಬೆಳೆಯುವ ಭತ್ತ, ಹತ್ತಿ ಈ ಬೆಳೆಗಳ ಮಾರಾಟಕ್ಕೆ ಸಹಕಾರಿ ಸಂಘ ಸಹಾಯವಾಗಿದೆ. ಸಹಕಾರಿ ಸಂಘಗಳು ಇರುವುದರಿಂದ ಮಧ್ಯವರ್ತಿಗಳ ಹಾವಳಿಯನ್ನು ತಪ್ಪಿಸಬಹುದು. ನಾಗರೀಕತೆಯ ಜನರ ಜೊತೆ ಗೌಳಿಗರು ಸೇರುತ್ತಿರುವುದರಿಂದ ಸಹಕಾರಿ ಸಂಘಗಳಲ್ಲಿ ವ್ಯವಹಾರವನ್ನು ಮಾಡುತ್ತಿದ್ದಾರೆ. ಇವರದ್ದೆ ಸಂಘಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಕಿರುವತ್ತಿಯಲ್ಲಿ ಗೌಳಿ ಉನ್ನತಿ ಎಂಬ ಸಂಘ ೧೯೯೭ರಲ್ಲೆ ಪ್ರಾರಂಭವಾಗಿದೆ. ವೈಯಕ್ತಿಕವಾಗಿ ಈ ಸಂಘದಲ್ಲಿ ೫೦೦೦೦ ಸಾವಿರದಿಂದ ೨ ಲಕ್ಷ ಸಾಲವನ್ನು ನೀಡುತ್ತಿರುವುದು ಹಾಗೂ ವಾಹನಗಳಿಗೂ ೧೬ ೧/೨ ಬಡ್ಡಿದರದಲ್ಲಿ ಸಾಲವನ್ನು ನೀಡುವುದು, ಉಳಿದೆಲ್ಲದಕ್ಕೂ ೧೪% ಬಡ್ಡಿದರದಲ್ಲಿ ಸಾಲವನ್ನು ನೀಡುತ್ತಿದೆ. ಹೀಗೆ ಕೃಷಿಯನ್ನು ಸಹಕಾರಿ ಸಂಘಗಳು ತಾಲೂಕು ಮತ್ತು ವಲಯ ಮಟ್ಟದಲ್ಲಿ ಕೆಲಸ ನಿರ್ವಹಿಸುತ್ತಿವೆ. ೨೦೦೮ರಲ್ಲಿ ಗೌಳಿ ಸಂಘ ಎನ್ನುವುದು ಅಸ್ತಿತ್ವಕ್ಕೆ ಬಂದು ಜಿಲ್ಲಾದ್ಯಂತ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದೆ.

**೩.೬.೨ ಸ್ವ-ಸಹಾಯ ಗುಂಪುಗಳು** : ಗ್ರಾಮೀಣ ಪ್ರದೇಶದ ಬಡತನ ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಕೊಳ್ಳಲು ತಾವೇ ಸ್ವಯಂ ಪ್ರೇರಣೆಯಿಂದ ಮುಂದಾಗಿ ಸ್ಥಾಪಿಸಿಕೊಂಡಿರುವ ಸಮೂಹಗಳೇ ಈ ಸ್ವ-ಸಹಾಯ ಗುಂಪುಗಳು. ಈ ಗುಂಪಿನಲ್ಲಿರುವ ಪ್ರತಿಯೊಬ್ಬ ಸದಸ್ಯರು ತಮ್ಮ ಸಾಮರ್ಥ್ಯಕ್ಕೆ ತಕ್ಕ ಹಾಗೆ ಉಳಿತಾಯವನ್ನು ಮಾಡುವವರು, ಇಲ್ಲಿರುವ ಮಹಿಳೆಯರು

ಸಮಾನ ಮನಸ್ಕರು. ಪರಸ್ಪರ ಸುಖ ದುಃಖಗಲ್ಲಿ ನೆರವಾಗಬಹುದು ಎನ್ನುವ ರೀತಿಯಲ್ಲಿ ಈ ಸ್ವ-ಸಹಾಯ ಸಂಘಗಳನ್ನು ರೂಪಿಸಿಕೊಂಡಿರುವರು. ಗೌಳಗ ಮಹಿಳೆಯರ ಪಾಲಿಗೆ ಈ ಬಗೆಯ ಸ್ವ-ಸಹಾಯ ಸಂಘಗಳು ಆರ್ಥಿಕ ಅಭ್ಯುದಯದ ಕೇಂದ್ರಗಳಾಗಿವೆ.

ನಾನು ಕಾರ್ಯಕ್ಷೇತ್ರ ಮಾಡಿದ ಹೊಸಳ್ಳಿ, ಕಿರುವತ್ತಿ, ಅಂಬಾವಾಡಿ, ಈ ಎಲ್ಲ ಹಾಡಿಗಳಲ್ಲಿ ಸ್ವ-ಸಹಾಯ ಗುಂಪುಗಳನ್ನು ಅನ್ನಪೂರ್ಣೇಶ್ವರಿ, ಮಕರಜ್ಯೋತಿ, ರುಕ್ಮಿಣಿ, ಮಾರುತಿ ಹಾಗೂ ಅಶ್ವಿನಿ, ಧರ್ಮಸ್ಥಳ ಸಂಘ ಹೀಗೆ ಬೇರೆ ಬೇರೆ ಹೆಸರುಗಳಂದ ೧೩, ೧೨, ೧೪, ೧೫, ೮ ಹೀಗೆ ಸದಸ್ಯರುಗಳನ್ನು ಒಳಗೊಂಡು ಸ್ವ-ಸಹಾಯ ಸಂಘಳು ತಮ್ಮದೇ ಆದ ಕೆಲವು ಪ್ರಮುಖ ಉದ್ದೇಶಗಳನ್ನು ಇಟ್ಟುಕೊಂಡು ಕಾರ್ಯನಿರ್ವಹಿಸುತ್ತವೆ.

**ಉದ್ದೇಶಗಳು** :

೧) ಗ್ರಾಮೀಣ ಭಾಗದ ಬಡ ಮಹಿಳೆಯರಲ್ಲೂ ಉಳಿತಾಯದ ಮನೋಭಾವವನ್ನು ಮೂಡಿಸುವುದು.

೨) ಸಾಲಸೌಲಭ್ಯವನ್ನು ಒದಗಿಸುವುದು.

೩) ಮಹಿಳೆಯರು ಸಂಘಟಿತರಾಗಿ ಉದ್ಯೋಗ ಕೈಗೊಳ್ಳಲು ಚಾಲನೆ ನೀಡುವುದು

೪) ಸಾಮುದಾಯಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಪ್ರೋತ್ಸಾಹ ನೀಡುವುದು.

೫) ತಮ್ಮ ಸಮಸ್ಯೆಗಳನ್ನು ತಾವೇ ಪರಿಹರಿಸಿಕೊಳ್ಳುವ ಸಾಮರ್ಥ್ಯವನ್ನು ತುಂಬುವದು.

೬) ಅವರಲ್ಲಿ ವ್ಯಾಪಾರಿಮನೋಜ್ಞಾನದ ಹೈನುಗಾರಿಕೆಯನ್ನು ಸುಧಾರಿಸುವುದು ಹಾಗೂ ಕುರಿಸಾಕಣೆ, ಕೋಳಿಸಾಕಣೆ ಬಗ್ಗೆ ಒಲವು ಮೂಡಿಸುವುದು.

೭) ಕಡಿಮೆ ಬಡ್ಡಿದರದಲ್ಲಿ ಸಾಲನೀಡುವುದು

ಹೀಗೆ ಅತ್ಯಂತ ಪ್ರಯೋಜನಕಾರಿ ಮತ್ತು ಪರಿಣಾಮಕಾರಿ ಗುರಿಗಳನ್ನು ಇಟ್ಟುಕೊಂಡು ಮಹಿಳಾ ಸ್ವ-ಸಹಾಯ ಸಂಘಗಳು ಕಾರ್ಯ ನಿರ್ವಹಿಸುತ್ತಿವೆ. ಕೇವಲ ಆರ್ಥಿಕತೆಯನ್ನು ಮಾತ್ರ ಆಧಾರ ವಾಗಿಟ್ಟುಕೊಳ್ಳದೇ, ಬಾಲ್ಯವಿವಾಹದ ವಿರುದ್ಧ ಧೋರಣೆ ಬಿಂಬಿಸುವಲ್ಲಿಯೂ ಈ ಬಗೆಯ ಸ್ವ-ಸಹಾಯ ಸಂಘಗಳು ನೆರವಾಗುತ್ತವೆ. ಈ ಬಗೆಯ ಸಂಘಗಳು ಅನೌಪಚಾರಿಕ ರಚನೆಯನ್ನು ಒಳಗೊಂಡಿದ್ದರೂ ತಮ್ಮದೆ ಆದ ರಚನೆಯನ್ನು, ಕೆಲನಿಯಮವನ್ನು ಹೊಂದಿ ಕಾರ್ಯನಿರ್ವಹಿಸುತ್ತಿದೆ.

ಸಮಾನ ಆಸಕ್ತಿಯುಳ್ಳ ಮಹಿಳೆಯರು ಸ್ವ-ಪ್ರೇರಣೆಯಿಂದ ಸದಸ್ಯರಾಗುತ್ತಿದ್ದಾರೆ. ಸದಸ್ಯರ ವಯೋಮಿತಿ ೧೮ ರಿಂದ ೬೦ ವರ್ಷದವರಿದ್ದು, ಬಡತನದ ರೇಖೆಯ ಕೆಳಗಿನ ಕುಟುಂಬದವ ರಾಗಿರಬೇಕು. ಈ ಸಂಘಗಳಲ್ಲಿ ಸಾಲಪಡೆಯಲು ಕನಿಷ್ಠ ಕುಟುಂಬದವರಾಗಿರಬೇಕು. ಈ ಸಂಘಗಳಲ್ಲಿ ಸಲಪಡೆಯಲು ಕನಿಷ್ಠ ಆರು ತಿಂಗಳಾದರೂ ಉಳಿತಾಯ ಮಾಡಬೇಕು. ಇದರಿಂದ ಸದಸ್ಯರಲ್ಲಿ ಉಳಿತಾಯದ ಮನೋಭಾವನೆ ಬೆಳೆಯುತ್ತದೆ. ಅದೇ ರೀತಿಯಾಗಿ ಪಡೆದ ಸಾಲವನ್ನು ನಿಗದಿತ

ಅವಧಿಯಲ್ಲಿ ಮರುಪಾವತಿ ಮಾಡದಿದ್ದರೆ ೨% ರ ಹೆಚ್ಚುವರಿ ಬಡ್ಡಿಯನ್ನು ನೀಡಬೇಕಾಗುತ್ತದೆ. ಈಗ ನಮ್ಮ ದೇಶದಲ್ಲಿ ಸುಮಾರು ೮೩.೭೪೫ ಸ್ವ-ಸಹಾಯ ಸಂಘಗಳಿದ್ದು, ಕರ್ನಾಟಕದಲ್ಲಿ ಈ ಪ್ರಮಾಣ ಸುಮಾರು ೮೨.೧೭೮ ರಷ್ಟಿದೆ ಎಂದು ಅಂದಾಜಿಸಲಾಗಿದೆ. ಗೌಳಿಗ ಮಹಿಳೆಯರು ಇಂದು ಈ ಬಗೆಯ ಸ್ವ-ಸಹಾಯ ಸಂಘಗಳಿಂದ ಅನೇಕ ಪ್ರಯೋಜನಗಳನ್ನು ಪಡೆಯುತ್ತಿದ್ದಾರೆ. ಇದರ ಲಾಭದ ಹಿನ್ನೆಲೆಯಲ್ಲಿಯೇ ಇಂದು ಹೆಚ್ಚೆಚ್ಚು ಸ್ವ-ಸಹಾಯ ಸಂಘಗಳು ಬೆಳೆಯುತ್ತಿವೆ. ಇದರಿಂದ ಗೌಳಿಗ ಮಹಿಳೆಯರಲ್ಲಿ ಬದಲಾವಣೆ ಎನ್ನುವುದು ಕಾಣುತ್ತಿದೆ.

**೩.೭.೩ ಸ್ತ್ರೀಶಕ್ತಿ ಗುಂಪುಗಳು** : ಮಹಿಳೆಯರು ನಮ್ಮ ರಾಜ್ಯದಲ್ಲಿ ತಮ್ಮದೇ ಆದ ಸ್ವ-ಸಹಾಯ ಗುಂಪುಗಳನ್ನು ರಚಿಸಿಕೊಳ್ಳುವುದರ ಮೂಲಕ ಸಾಧನೆಯ ಜೊತೆಗೆ ಬದಲಾವಣೆ ಕಂಡು ಬರುತ್ತಿದೆ. ಇದನ್ನರಿತ ಕರ್ನಾಟಕ ಸರಕಾರ ಅದೇ ಮಾದರಿಯಲ್ಲಿ ಅವರಿಗೆ ಆರ್ಥಿಕ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಈ ಸ್ತ್ರೀಶಕ್ತಿ ಯೋಜನೆಯನ್ನು ೨೦೦೧ ರಲ್ಲಿ ಆರಂಭಿಸಿತು. ನಾನು ಕ್ಷೇತ್ರಕಾರ್ಯ ಮಾಡಿದ ಸ್ಥಳಗಳಲ್ಲಿ ಅಂಬಭವಾನಿ, ಜೀವನಮಹಿಳಾ, ನಿತ್ಯ ಸಂಜೀವಿನಿ, ಹೀಗೆ ಬೇರೆ ಬೇರೆ ಹೆಸರುಗಳಿಂದ ೧೫ ರಿಂದ ೨೫ ಮಂದಿ ಸದಸ್ಯರನ್ನು ಹೊಂದಿದ ಸ್ತ್ರೀಶಕ್ತಿ ಗುಂಪುಗಳನ್ನು ಕಾಣಬಹುದು.

ಸ್ವ-ಸಹಾಯ ಸಂಘಗಳಿಗೆ ಇದ್ದಂತೆ ಸ್ತ್ರೀಶಕ್ತಿ ಗುಂಪುಗಳಿಗೂ ಉದ್ದೇಶಗಳಿವೆ. ಅವು ಯಾವುವೆಂದರೆ;

೧) ಗೌಳಿಗ ಮಹಿಳೆಯರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಬಲಪಡಿಸಲು ಯೋಗ್ಯ ಪರಿಸರವನ್ನು ನಿರ್ಮಿಸಿಕೊಡುವುದು.

೨) ಮಹಿಳೆಯರಲ್ಲಿ ಆತ್ಮವಿಶ್ವಾಸ, ಸ್ವಾವಲಂಬನೆ ಮೂಡಿಸುವುದು.

೩) ಮಹಿಳೆಯರನ್ನು ಉತ್ಪಾದಕ ಕಾರ್ಯಗಳಲ್ಲಿ ತೊಡಗಿಸುವುದು.

೪) ಸರಕಾರದ ವಿವಿಧ ಇಲಾಖೆಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸ್ತ್ರೀಶಕ್ತಿ ಗುಂಪಿನ ಸದಸ್ಯರಿಗೆ ಒದಗಿಸುವುದು.

ಈಗ ನಮ್ಮ ರಾಜ್ಯದ ಪ್ರತಿಯೊಂದು ತಾಲೂಕು ಹಾಗೂ ವಲಯಗಳಲ್ಲಿ ಸ್ತ್ರೀಶಕ್ತಿ ಸಂಘಗಳನ್ನು ಸ್ಥಾಪಿಸಲಾಗಿದೆ. ಇಲ್ಲಿ ಮಹಿಳೆಯರು ಸ್ವ-ಪ್ರೇರಣೆಯಿಂದ ಮುಂದಾಗಿ ಗುಂಪುಗಳನ್ನು ರಚಿಸಿ ಕೊಂಡಿರುತ್ತಾರೆ. ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಆರಂಭದ ಆರು ತಿಂಗಳು ಮಾರ್ಗದರ್ಶನ ಪಡೆದ ನಂತರ ತಾವೇ ಸ್ವತಃ ಗುಂಪುಗಳನ್ನು ರಚಿಸಿಕೊಳ್ಳುತ್ತಾರೆ. ಬ್ಯಾಂಕಿನಲ್ಲಿ ಖಾತೆತೆಗೆದು ೬ ತಿಂಗಳು ಕಾರ್ಯನಿರ್ವಹಿಸಿದ್ದರೆ ಸರ್ಕಾರ ಇಂಥ ಪ್ರತಿಗುಂಪಿಗೆ ೫೦೦೦ ರೂಪಾಯಿ ಸಹಾಯ ಧನವನ್ನು ನೀಡುವುದು.

ಇಲ್ಲೂ ಸಹ ಬ್ಯಾಂಕಿನಲ್ಲಿ ಜಂಟಿಖಾತೆ, ವೈಯಕ್ತಿಕ ಉಳಿತಾಯ ಮತ್ತು ಸಾಲದ ಪುಸ್ತಕ ಹೊಂದಿರಬೇಕು. ವಾರಕ್ಕೆ ೫೦ ರೂಪಾಯಿಗಳಿಂದ ೩೦೦ ರೂ. ವರೆಗೂ ತುಂಬುವ ವ್ಯವಸ್ಥೆಯಿದೆ.

ಇನ್ನು ಗೌಳಿಗ ಮಹಿಳೆಯರಲ್ಲಿ ಒಂದು ಬಗೆಯ ಶಿಸ್ತುಬದ್ಧತೆ ಮೂಡಿಸುವ ರೀತಿಯಲ್ಲಿ ಪ್ರತಿವಾರ ನಡೆಯುವ ಸಭೆಯಲ್ಲಿ ಪ್ರತಿಯೊಬ್ಬ ಸದಸ್ಯರು ಹಾಜರಿರಬೇಕು. ಹಾಜರಾಗಲು ಸಾಧ್ಯವಾಗಲ್ಲ ಅಂದರೆ ದಂಡವನ್ನು ತುಂಬಬೇಕು. ಆದರೆ ಇಲ್ಲಿ ಗೌಳಿಗರ ಹಾಡಿಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರಿಗೆ ಒಂದು ಸಮಸ್ಯೆ ಎದುರಾಗುತ್ತಿದೆ. ಏನೂ ಅಂದರೆ ಹಗಲು ಹೊತ್ತಿನಲ್ಲಿ ಯಾವ ಗೌಳಿಗ ಮಹಿಳೆಯರು ಸಭೆಗೆ ಹಾಜರಾಗಲು ಸಾಧ್ಯವಾಗುವುದಿಲ್ಲ. ಎಷ್ಟೇ ತಿಳಿಸಿ ಹೇಳಿದರೂ ತಮ್ಮ ಉದ್ಯೋಗವನ್ನು ಬಿಟ್ಟುಬರಲು ಅವರು ಒಪ್ಪುವುದಿಲ್ಲ. ಅದಕ್ಕೆ ಕಾರ್ಯಕರ್ತೆಯರು ಸಭೆಯನ್ನು ಸಂಜೆ ೬-೩೦ ರಿಂದ ಅಥವಾ ೭.೦೦ ಘಂಟೆಗೆ ಸಂದಿಸಬೇಕಾಗುತ್ತದೆ. ಆದರೂ ಅವರ ಶ್ರಮದಿಂದ ಗೌಳಿಗ ಮಹಿಳೆಯರು ಸ್ಪಂದಿಸುತ್ತಿದ್ದಾರೆ.

ರಾಜ್ಯದಲ್ಲಿ ೯೩ ಸಾವಿರ ಬುಡಕಟ್ಟು ಮಹಿಳೆಯರು ಸ್ತ್ರೀಶಕ್ತಿ ಗುಂಪುಗಳನ್ನು ರಚಿಸಿಕೊಂಡು ಆ ಮೂಲಕ ತಮ್ಮ ಸಾಮಾಜಿಕ ಆಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳುವಲ್ಲಿ ತೊಡಗಿದ್ದಾರೆ. ತಮ್ಮ ಉಳಿತಾಯದ ಹಣದ ಜೊತೆಗೆ ಬ್ಯಾಂಕಿನಿಂದ ಪಡೆದ ಸಾಲದಿಂದ ಗೌಳಿಗರು ಎಮ್ಮೆ, ಹಸು-ಎತ್ತುಗಳನ್ನು ಸಾಕುವುದು. ಊದುಬತ್ತಿ ತಯಾರಿಸುವುದು, ಅಲ್ಲದೇ ವೈಯಕ್ತಿಕವಾಗಿ ಸಾಲ ಪಡೆದು ತರಕಾರಿ ಹಾಗೂ ಇನ್ನಿತರ ಕಿರು ಉತ್ಪನ್ನಗಳನ್ನು ಮಾರಾಟದ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ವೈಯಕ್ತಿಕ ಸಾಲವನ್ನು ಪಡೆದ ಗೌಳಿಗ ಮಹಿಳೆಯರು ಮನೆಗೆಬೇಕಾದ ವಸ್ತುಗಳನ್ನು ತೆಗೆದುಕೊಳ್ಳುತ್ತಿದ್ದಾರೆ. ಹಿಂದೆ ಇದ್ದ ಗೌಳಿಗ ಹಾಡಿಗಳಗೂ ಇವತ್ತಿನ ಗೌಳಿಗರ ಹಾಡಿಗಳಗೂ ಸಾಕಷ್ಟು ಬದಲಾವಣೆ ಆಗಿದೆ. ಕಾಡಿನಿಂದ ಸ್ಥಳಾಂತರಗೊಂಡ ಗೌಳಿಗ ಜನರ ಸುಸ್ಥಿತಿಗೆ ವಿಶೇಷ ಕಾರ್ಯಕ್ರಮಗಳ ಮೂಲಕ ಆರ್ಥಿಕ ಉತ್ಪನ್ನ ಚಟುವಟಿಕೆಗಳಲ್ಲಿ ತೊಡಗಿ ಜೀವನ ನಿರ್ವಹಣೆ, ಅಗತ್ಯ ವರಮಾನ ಪಡೆಯುವಂತಾಬೇಕಾಗಿದೆ. ಮಹಿಳೆಯರ ಬದುಕಿನಲ್ಲಿ ಹೆಚ್ಚು ಆಶಾಭಾವನೆ ಮೂಡಿಸಿರುವ ಸ್ತ್ರೀಶಕ್ತಿ ಗುಂಪುಗಳನ್ನು ಆರ್ಥಿಕವಾಗಿ ಬಲಪಡಿಸುವುದು ಅಗತ್ಯವಾಗಿವೆ.

**೩.೬.೪ ಬುಡಕಟ್ಟೇತರ ಸೇವಾ ಸಂಸ್ಥೆಗಳು** : ಗೌಳಿಗರ ಅಭಿವೃದ್ಧಿಗೆಂದು ಉತ್ತರಕನ್ನಡದಲ್ಲಿ ಸುಮಾರು ೧೨ ಕ್ಕೂ ಹೆಚ್ಚು ಸ್ವಯಂಸೇವಾ ಸಂಸ್ಥೆಗಳು ಕಾರ್ಯನಿರ್ವಹಿಸುತ್ತವೆ. ಸರಕಾರ ಆರೋಗ್ಯ ಹಾಗೂ ಇನ್ನೀತರ ಕಾರ್ಯಕ್ರಮಗಳನ್ನು ವನವಾಸಿಗರಿಗೆ ತಲುಪಿಸುವಲ್ಲಿ ಹಾಗೂ ತಮ್ಮದೇ ಆದ ವಿಶೇಷ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರುವಲ್ಲಿ ಯತ್ನಿಸುತ್ತಿವೆ. ಯಲ್ಲಾಪುರ ತಾಲೂಕಿನ ಗೌಳಿಕ ಅಭಿವೃದ್ಧಿ ಸಂಘ ಎಂಬ ಸ್ವಯಂ ಸೇವಾ ಸಂಸ್ಥೆ ಸುಮಾರು ಒಂದು ದಶಕದಿಂದ ಶಿಕ್ಷಣ ಆರ್ಥಿಕ ಪ್ರಗತಿಯ ಕಾರ್ಯಕ್ರಮಗಳನ್ನು ಮಾಡುತ್ತಿವೆ. ಒಳಹಳ್ಳಿಗಳಲ್ಲಿ ಬಾಲವಾಡಿಗಳನ್ನು ತೆರೆದಿವೆ. ಮುಂಡಗೋಡಿನಲ್ಲಿ ಲಯೋಲ ವಿಕಾಸ ಸಂಘ, ಆರೋಗ್ಯ ಹಾಗೂ ಗ್ರಾಮೀಣ ಅಭಿವೃದ್ಧಿ ಸೇವೆ ನೀಡುತ್ತಿದೆ. ೧೯೯೮ರಲ್ಲಿ ಜಿಲ್ಲೆಗೆ ಬಂದ ಸ್ವಯಂ ಸೇವಾ ಸಂಸ್ಥೆ ಹಳಿಯಾಳದ ಭಾಗವತಿ ಮಂಡಲ ಪಂಚಾಯತ ವ್ಯಾಪ್ತಿಯಲ್ಲಿನ ೧೨ ವಾರ್ಡ್‌ಗಳ ಗೌಳಿಗರ ಆರೋಗ್ಯ, ಶಿಕ್ಷಣ, ಆರ್ಥಿಕ ಉನ್ನತಿಗಾಗಿ ಕಾರ್ಯಕ್ರಮ ರೂಪಿಸಿದೆ. ಗರ್ಭಿಣಿಯರು ಹಾಗೂ ಶಿಶುಗಳು ರೋಗನಿರೋಧಕ ಚುಚ್ಚುಮದ್ದುಗಳನ್ನು ಪಡೆಯುವಂತ ಪ್ರಯತ್ನಿಸುತ್ತಿವೆ. ವನವಾಸಿ ಬದುಕನ್ನು ಸುಧಾರಿಸುವ ನಿಟ್ಟಿನಲ್ಲಿ ಸರಕಾರದ ಜೊತೆ ಸ್ವಯಂಸೇವಾ ಸಂಸ್ಥೆಗಳ ಪ್ರಯತ್ನಗಳು ಪ್ರಮುಖವಾದುದು.

ಶಿಕ್ಷಣ, ವಸತಿ, ಕುಡಿಯುವ ನೀರು, ಶೌಚಾಲಯ ಸೇರಿದಂತೆ ಮೂಲಭೂತ ಅಗತ್ಯಗಳನ್ನು ಗುರುತಿಸುವ, ಪೂರೈಸುವ ನಿಟ್ಟಿನಲ್ಲಿ ಈ ಸಂಸ್ಥೆಗಳು ತಮ್ಮ ಮಿತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಇದರ ಪರಿಣಾಮಗಳಿಂದಾಗಿ ಮಕ್ಕಳು ಶಾಲೆಗೆ ಬರತೊಡಗಿದ್ದಾರೆ. ಆರೋಗ್ಯ ಪರೀಕ್ಷೆಗೆ ಒಳಗಾಗುತ್ತಿದ್ದಾರೆ. ಮಹಿಳೆಯರಲ್ಲೂ ಕ್ರಮೇಣ ಜಾಗೃತಿ ಮೂಡುತ್ತಿದೆ. ಗರ್ಭಿಣಿ, ಬಾಣಂತಿ ಮಕ್ಕಳ ಪೌಷ್ಟಿಕ ಆಹಾರ ಅಗತ್ಯಗಳನ್ನು ಕ್ರಮೇಣ ಅರಿಯತೊಡಗಿದ್ದಾರೆ. ಸ್ವಚ್ಛತೆ ಕಲ್ಪನೆ ಮೂಡುತ್ತಿದೆ. ಇದರಿಂದ ಸ್ವ-ಸಹಾಯ ಗುಂಪುಗಳು ರಚನೆಯಾಗಿವೆ. ಚಿಕ್ಕಪುಟ್ಟ ಸ್ವಯಂ ಉದ್ಯೋಗಗಳಲ್ಲಿ ಇವರು ದುಡಿದು ಹಣಗಳಿಸತೊಡಗಿದ್ದಾರೆ. ಯೋಜನೆಗಳಿಂದ ಕಾನೂನುಗಳಿಂದ ತೊಂದರೆ ಉದ್ಭವಿಸಿದಾಗ ಸಂಘಟಿತರಾಗಿ ಪ್ರತಿಭಟಿಸುತ್ತಾರೆ. ಸಾರಾಯಿವಿರೋಧಿ ಆಂದೋಲನದಲ್ಲಿ ವನವಾಸಿ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾರೆ. ಇಂತಹ ಪ್ರಗತಿ ಚಿತ್ರಗಳು ಸಾಮೂಹಿಕವಾಗಿ ಎಲ್ಲ ವನವಾಸಿಗರಲ್ಲಿ ಕಂಡುಬರುತ್ತಿಲ್ಲ. ಆದರೆ ಅಪರೂಪಕ್ಕೆ ಅಲ್ಲೊಂದು, ಇಲ್ಲೊಂದು ವಾರ್ಡ್‌ಗಳಲ್ಲಿ (ಹಾಡಿಗಳಲ್ಲಿ) ಇಂತಹ ಕಿರುಬೆಳಕು ಕಾಣುತ್ತಿವೆ. ಕೆಲವು ಸಂಸ್ಥೆಗಳು ವನವಾಸಿ ಅಭಿವೃದ್ಧಿಯ ಮುಖವಾಡ ಧರಿಸಿ ವಿದೇಶಿ ನೆರವು ಪಡೆದು ಸ್ವಯಂ ಸೇವೆಯನ್ನು ಜೀವನದ ವೃತ್ತಿಯಾಗಿಸಿದ ಗಂಭೀರ ದೂರುಗಳಿವೆ. ಅಂತೆಯೇ ಪ್ರತಿ ಜಿಲ್ಲಾಮಟ್ಟದಲ್ಲಿ ಕಾರ್ಯನಿರ್ವಹಿಸುವ ವಿವಿಧ ಸ್ವಯಂ ಸೇವಾಸಂಸ್ಥೆಗಳು ತಮ್ಮ ಕಾರ್ಯವಿಧಾನ ವ್ಯವಹಾರಿಕ ಪಾರದರ್ಶಿಕೆಯನ್ನು ಕಾಲಕಾಲಕ್ಕೆ ತಿಳಿಸುವ ಅಗತ್ಯವಿದೆ. ಇದರಿಂದ ಜನರ ನಡುವಿನಿಂದ ಜನರಿಗಾಗಿ ಮೂಡಿದ ಸೇವಾ ಸಂಸ್ಥೆಗಳ ಕಾರ್ಯವೈಖರಿ ಜನಕ್ಕೆ ಇನಷ್ಟು ಹತ್ತಿರವಾಗುವ ಅವಕಾಶ ನೀಡಿದಂತಾಗುತ್ತವೆ.

**೩.೭ ಆರ್ಥಿಕ ಸಮಸ್ಯೆಗಳು**

ಭಾರತದಲ್ಲಿ ಒಂದರಿಂದ ೬ನೇ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ೧೫ ಮಿಲಿಯನ್ ಜನ ವಿವಿಧ ಯೋಜನೆಗಳಿಂದ ನಿರಾಶ್ರಿತರಾಗಿದ್ದಾರೆ ಎಂದು ದಾಖಲೆಗಳು ಹೇಳುತ್ತವೆ. ಆದರೆ ವಾಸ್ತವಿಕವಾಗಿ ನಿರಾಶ್ರಿತರಾದವರ ಸಂಖ್ಯೆ ಸುಮಾರು ೩೦ ಮಿಲಿಯನ್‌ಗೂ ಅಧಿಕ ಎಂಬ ಅಂದಾಜಿದೆ. ಇವರಲ್ಲಿ ವನವಾಸಿ ಜನಾಂಗದವರೇ ಹೆಚ್ಚು. ಬದುಕಿನ ಪರಿಸರ ಉದ್ಯೋಗ, ಆಹಾರ ವಿಧಾನಗಳ ಮೇಲೆ ಯೋಜನೆ ಮಾಡಿದ ಪರಿಣಾಮ ಭೀಕರ. ಅವರ ಇಡೀ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಪರಂಪರೆಯೇ ಪತನಗೊಳ್ಳುತ್ತದೆ. ಹೊಸ ಹೊಸ ಆರೋಗ್ಯ ಸಾಮಾಜಿಕ ಸಮಸ್ಯೆಗಳು ಉದ್ಭವವಾಗುತ್ತಿವೆ.

ಮೂಲನಿವಾಸಿಗಳು ಕುಟುಂಬ ನಿರಾಶ್ರಿತರಾದರೆ ಅವರ ಜಮೀನಿನ ಮೌಲ್ಯಕ್ಕೆ ಸಮನಾದ ಇಂದಿನ ಅಗತ್ಯಗಳನ್ನು ಪೂರೈಸುವ ಮುಂದಿನ ಅವಶ್ಯಕತೆಗಳನ್ನು ಪೂರೈಸಬಲ್ಲ ಸಾಮರ್ಥ್ಯವಿರುವಷ್ಟು ಜಮೀನನ್ನು ನೀಡಬೇಕು. ಆದರೆ ವಿವಿಧ ಯೋಜನೆಗಳಿಂದ ನಿರಾಶ್ರಿತರಾದವರಿಗೆ ಸರಕಾರ ಬರಡು ಭೂಮಿಗಳನ್ನು ನೀಡಿದ ಉದಾಹರಣೆಗಳಿವೆ. ಕುಡಿಯಲು ನೀರಿಲ್ಲದ ಪ್ರದೇಶಗಳಲ್ಲಿ ನಿವೇಶನಗಳನ್ನು ಒದಗಿಸುತ್ತವೆ. ನಿರಾಶ್ರಿತ ಪರಿಹಾರವೆಂದು ನೀಡಿದ ಜೋಯಿಡಾ ತಾಲೂಕಿನ ರಾಮನಗರವನ್ನು ನೋಡಬಹುದು. ಪರಿಹಾರ ಹಣ ಗಂಡಸರ ಕಿಸೆ ಸೇರಿ ಕುಡಿತ ದುಶ್ಚಟಗಳಿಗೆ ವ್ಯಯವಾಯಿತು.

ಮತ್ತು ದುಂದುವೆಚ್ಚಗಳಿಂದ ಬೇಗ ಹಣ ಖರ್ಚಾಗಿ ಅನೇಕ ಕುಟುಂಬಗಳು ಬೀದಿಗೆ ಬಂದವು. ಕೆಲ ಮಹಿಳೆಯರು ಹೆದ್ದಾರಿಯಲ್ಲಿ ಓಡಾಡುವ ಲಾರಿಯಲ್ಲಿ ಓಡಾಡುತ್ತ ವೇಶ್ಯಾವಾಟಿಕೆ ನಡೆಸಿ ಬದುಕುವ ದಯನೀಯ ಸ್ಥಿತಿಗೆ ಇಳಿದರು.

ಅರಣ್ಯ ಸಂರಕ್ಷಣೆಯ ಕಾನೂನು ಕಠಿಣವಾಗಿದೆ. ಬದುಕಿಗೆ ಬೇರೆ ಮಾರ್ಗ ಹುಡುಕುವುದು ಅನಿವಾರ್ಯವಾಗಿದೆ. ೫೦-೬೦ ಕಿ.ಮೀ. ಸುತ್ತಳತೆಯ ಕಾಡಿನಲ್ಲಿ ಎಮ್ಮೆಗಳನ್ನು ಮೇಯಿಸಿ ಹಾಲು ಕರೆದು ಹತ್ತಿರದ ಪೇಟೆಗಳಿಗೆ ಮಾರಿ ಬದುಕುತ್ತಿದ್ದ ಗೌಳಿಗರು ಇಂದು ತೊಂದರೆಗೆ ಸಿಲುಕಿದ್ದಾರೆ. ಮೇವು ನೀಡುತ್ತಿದ್ದ ನೆಲ ನೆಡುತೋಪಾಗಿ ಅಲ್ಲಿ ದನಕರುಗಳು ಮೇಯಿಸುವುದು ಅಪರಾಧವಾಗುತ್ತವೆ. ಕೇವಲ ೧೦-೧೨ ಕಿ.ಮೀ. ಸೀಮಿತ ವ್ಯಾಪ್ತಿಯಲ್ಲಿ ಎಮ್ಮೆಗಳನ್ನು ಮೇಯಿಸಬೇಕಾದ ಸ್ಥಿತಿ ಅರಣ್ಯ ಸಂರಕ್ಷಣೆಯ ಬಿಗಿನಿಲುವಿನಿಂದಾಗಿ ಬಂದಿದೆ. ಮೇವಿನ ಕೊರತೆ, ರೋಗಗಳಿಂದಾಗಿ ಎಮ್ಮೆಗಳು ಸಾವನ್ನಪ್ಪಿವೆ. ಪ್ರತಿಕುಟುಂಬವೂ ಹಿಂದೆ ನೂರಾರು ಎಮ್ಮೆಗಳನ್ನು ಸಾಕುತಿತ್ತು. ಈಗ ಒಂದೆರಡು ಎಮ್ಮೆಗಳೂ ಅವರಲ್ಲಿಲ್ಲ. ಅರಣ್ಯ ಇಲಾಖೆ ಸಾಗವಾನಿ, ಅಕೇಶಿಯಾದಂತಹ ಏಕ ಜಾತೀಯ ನೆಡುತೋಪುಗಳನ್ನು ಬೆಳಸಿದ ಪರಿಣಾಮ ಮೇವಿನ ಸಮಸ್ಯೆ ಉಲ್ಬಣವಾಗುತ್ತಿವೆ. ವನವಾಸಿಗರಿಗೆ ಖಾಸಗೀ ಆಸ್ತಿಯ ಕಲ್ಪನೆಗಳಿರಲಿಲ್ಲ. ಆದ್ದರಿಂದ ಅವರ ಹತ್ತಿರ ಯಾವುದೇ ಭೂ-ದಾಖಲೆಗಳಿಲ್ಲ. ೮ ದಶಕಗಳಿಂದ ವಾಸಿಸುತ್ತಿದ್ದ ವನವಾಸಿಗರನ್ನು ಅರಣ್ಯ ಇಲಾಖೆಯು ಅತಿಕ್ರಮಣವೆಂದು ಹೇಳುತ್ತಿವೆ. ಬದುಕಿಗೆ ಬೇರೆ ದಾರಿಯಿಲ್ಲದೆ ವಲಸೆ ಹೋಗತೊಡಗಿದ್ದಾರೆ. ಶಿಕ್ಷಣ, ಆರೋಗ್ಯದಂತಹ ಮೂಲಭೂತ ಸೌಲಭ್ಯಗಳಿಲ್ಲದ ಬದುಕು ಅಸಹನೀಯ. ಅರಣ್ಯ ಸಂರಕ್ಷಣೆ ಕಾನೂನು, ಬೃಹತ್ ಯೋಜನೆಗಳಿಂದ ಹಾಗೂ ಈಗ ಬಂದಿರುವ ಹುಲಿಯೋಜನೆಗಳಿಂದ ಬದುಕಿನ ನೆಲೆ ತಪ್ಪುತ್ತಿದೆ. ಅನಕ್ಷರತೆ, ಬಡತನ ಕಾರಣ ನಿರಾಶ್ರಿತರು ತೊಂದರೆ ಅನುಭವಿಸಬೇಕಾಗಿದೆ. ಕಾಡಿನಲ್ಲಿ ಕೆಲಸವಿಲ್ಲ ಹತ್ತಿರದಲ್ಲಿ ಬೇಕಾದ ಉದ್ಯೋಗ ಮಾರ್ಗವಿಲ್ಲ. ದೂರದ ಊರುಗಳಿಗೆ ಗಂಡಸರು ಮಾತ್ರ ಹೋಗುತ್ತಾರೆ. ಕೆಲವೊಮ್ಮೆ ಇಡೀ ಕುಟುಂಬ ವಲಸೆ ಹೋಗುತ್ತದೆ. ಕೆಲವರು ಜೀತರಾಗುತ್ತಿದ್ದಾರೆ. ಕೆಲಸದ ಭದ್ರತೆ ಇಲ್ಲದೆ ಅತ್ಯಂತ ಕಡಿಮೆ ಹಣಕ್ಕೆ ದುಡಿಯುತ್ತಾರೆ. ಜೀವನ ಎಲ್ಲಿಯೂ ನೆಲೆಗೊಳ್ಳದೇ ಅಲೆಮಾರಿತನ ಬಗೆಹರಿಯದ ಜಾಡ್ಯವಾಗುತ್ತಿದೆ. ಗೌಳಿಗ ಸಮುದಾಯವು ಆರ್ಥಿಕವಾಗಿ ಅನೇಕ ಸಮಸ್ಯೆ ಇಟ್ಟುಕೊಂಡು ತನ್ನ ಒಡಲಿನಲ್ಲಿಯೇ ಆರ್ಥಿಕ ಸ್ಥಿತ್ಯಂತರಕ್ಕೆ ಒಳಗಾಗುತ್ತಿದೆ.

**೩.೭.೧ ಅರಣ್ಯಾಧಿಕಾರದ ಸಮಸ್ಯೆ** : ಅರಣ್ಯದ ಕೆಲ ಭಾಗಗಳನ್ನು ಸಂರಕ್ಷಿತ ಪ್ರದೇಶಗಳೆಂದು ಮೀಸಲಿರಿಸಲಾಗಿದೆ. ಇದರಿಂದ ಅರಣ್ಯದಲ್ಲಿ ವಾಸಿಸುವ, ಅನಾದಿ ಕಾಲದಿಂದ ಅರಣ್ಯವನ್ನೇ ನೆಚ್ಚಿ ಬಾಳು ನಡೆಸುವ, ಸ್ಥಳೀಯ ಕಾಡು ಮಕ್ಕಳಿಗೆ ಬಹಳ ತೊಂದರೆ ಆಗಿದೆ. ಘರ್ಷಣೆಗೆ ಎಡೆ ಮಾಡಿ ಕೊಟ್ಟಿದೆ ಮತ್ತು ಕಾಡಿನ ಮಕ್ಕಳ ಹಕ್ಕುಗಳಿಗೆ ಚ್ಯುತಿ ಬಂದಿದೆ.

ಖಾಸಗಿಯವರಿಗೆ ಕೈಗಾರಿಕೆಗಳನ್ನು ಮತ್ತು ಕೃಷಿ ಆಧಾರಿತ ಉದ್ಯಮಗಳನ್ನ ಸ್ಥಾಪಿಸಲು ರೇಲ್ವೆ ಮತ್ತು ರಸ್ತೆ ರಚಿಸಲು ಹಾಗೂ ಹೊಸ ಹೊಸ ವಸತಿ ಸ್ಥಳಗಳನ್ನು ನಿರ್ಮಿಸಲು, ಅರಣ್ಯದ

ಕೆಲ ಭಾಗಗಳನ್ನು ಪ್ರತ್ಯೇಕವಾಗಿ ಇರಿಸಲಾಗಿದೆ. ಇದರಿಂದಾಗಿ, ಅರಣ್ಯ ಪ್ರದೇಶ ಸಂಕುಚಿತವಾಗಿದೆ ಮತ್ತು ಸ್ಥಳೀಯ ಅರಣ್ಯ ವಾಸಿಗಳಿಗೆ ದೈನಂದಿನ ಬದುಕು ಅಸಹನೀಯವಾಗಿದೆ.

ಅರಣ್ಯದ ಹಲವಾರು ಯೋಜನೆಗಳಿಗೆ ಅಂತಾರಾಷ್ಟ್ರೀಯ ಒಪ್ಪಂದಗಳಿಗೆ ಸಹಿ ಹಾಕಿರುವುದರಿಂದ, ಅರಣ್ಯ ವಾಸಿಗಳಿಗೆ ಪರಂಪರಾಗತ ಬೇಟೆ ಸೌಲಭ್ಯ ವರ್ಜಿತವಾಗಿದೆ. ಆಗಾಗ ಇವರು ಹಸಿವು ಮತ್ತು ಅಪೌಷ್ಠಿಕತೆಗೆ ಈಡಾಗುತ್ತಿದ್ದಾರೆ.

ನೀಲಗಿರಿ ಮತ್ತು ಇತರ ಗಿಡಗಳನ್ನು ಅರಣ್ಯ ವೃಕ್ಷಗಳನ್ನಾಗಿ ಬೆಳೆಸತೊಡಗಿರುವುದರಿಂದ, ಮೊದಲಿನ ಪ್ರಾಕೃತಿಕ ಕಾಡುಗಳಲ್ಲಿ ದೊರೆಯುತ್ತಿದ್ದ ಪಶು-ಪಕ್ಷಿ, ಕ್ರಿಮಿ-ಕೀಟಗಳ ವೈವಿಧ್ಯತೆ ಮಾಯ ವಾಗಿದೆ. ಸಮುದಾಯದ ಹುಲ್ಲುಗಾವಲು ಸಮುದಾಯದ ಅರಣ್ಯ ಬಂಜರು ಭೂಮಿ, ಹಳ್ಳಿಯ ಕೆರೆಗಳು, ಹೊಳೆ-ಹಳ್ಳಗಳು ಮೊದಲಾದವುಗಳು ಒಂದು ಕಾಲಕ್ಕೆ ಸಾಮಾನ್ಯ ಆಸ್ತಿಗಳಾಗಿದ್ದವು ಮತ್ತು ಇವುಗಳಲ್ಲಿ ಸ್ಥಾನಿಕ ಜನರ ಗುಂಪುಗಳಿಗೆ ಬಳಸುವ ಸಮಾನ ಹಕ್ಕಗಳು ಇದ್ದವು. ಆದರೆ ಇವು ಈಗ ವೇಗವಾಗಿ ಕಣ್ಮರೆಯಾಗುತ್ತಿವೆ. ಹೀಗಾಗಿ ಸ್ಥಾನಿಕ ನೈಸರ್ಗಿಕ ಸಂಪನ್ಮೂಲಗಳು ಕ್ಷೀಣಿಸುವಂತಾಯಿತು. ಇವೆಲ್ಲ ಕಾಡಿನ ಮಕ್ಕಳಿಗೆ ಮೂಲಭೂತ ಜೀವನೋಪಾಯ ಒದಗಿಸುವ ಸಾಧನಗಳಾಗಿದ್ದವು.

ಒಂದ ಕಾಲಕ್ಕೆ ಇವೆಲ್ಲ ಮಾನವನ ದಾಳಿಗೆ ಈಡಾಗದ ಪ್ರಶಾಂತ ಸ್ಥಳಗಳು ಆಗಿದ್ದವು. ಈ ಸ್ಥಳಗಳಲ್ಲಿನ ಅರಣ್ಯ, ಹುಲ್ಲುಗಾವಲು, ಜವುಳು ಪ್ರದೇಶ, ಜಲಾಶಯಗಳು ಮೊದಲಾದವು ಸ್ಥಳೀಯ ಜನ ಸಮುದಾಯಕ್ಕೆ ವೃಕ್ಷಗಳಿಗೆ, ಪಶು, ಪಕ್ಷಿಗಳಿಗೆ ಸ್ವಾಭಾವಿಕ ನೆಲೆಯನ್ನು ಒದಗಿಸುವುದರ ಜತೆಗೆ ಮನುಷ್ಯ ಮತ್ತು ಇತರ ಪ್ರಾಣಿ ವೈವಿಧ್ಯತೆಯನ್ನು ಕಾಪಾಡಿಕೊಂಡು ಬಂದಿದ್ದವು. ಮೇಲೆ ವಿವರಿಸಲಾದ ಪ್ರದೇಶಗಳು ಮಹತ್ವದ ಪರಿಸರ ಸಂರಕ್ಷಣೆಯ ಕಾರ್ಯವನ್ನು ಮಾಡುವ ಹಾಗೂ ಅಗತ್ಯದ ಜೀವನೋಪಾಯಗಳನ್ನು ಕಲ್ಪಿಸುವ ತಾಣಗಳಾಗಿದ್ದವು.

ಪ್ರಕೃತಿ ಮತ್ತು ಜೀವರಾಶಿಯ ಸೂಕ್ಷ್ಮ ಸಂಬಂಧದ ಬಗ್ಗೆ ಹೇಳುವುದಾದರೆ, ಸ್ಥಳೀಯ ಸಮುದಾಯಗಳು ಈ ಸೂಕ್ಷ್ಮ ಸಂಬಂಧ ಹದಗೆಡದಂತೆ ಅನುಗಾಲವೂ ನೋಡಿಕೊಂಡು ಬಂದಿವೆ. ಏಕೆಂದರೆ, ಅವರ ಉತ್ಪಾದನಾ ಪದ್ಧತಿ ಮುಂಬರುವ ಪೀಳಿಗೆಗೂ ಉಳಿಸುವ ಸಾಮರ್ಥ್ಯ ಹೊಂದಿದೆ. ವಿಶಾಲ ಕ್ಷೇತ್ರಕ್ಕೆ ಅವರು ತಮ್ಮ ಚಟುವಟಿಕೆಗಳನ್ನು ವಿಸ್ತರಿಸಿದ್ದರು. ಬಹಳ ಕಾಲದಿಂದಲೂ ಅವರು ಕಾಡಿನೊಳಗೆ ನುಸುಳಿ ಬರುವ ಆಕ್ರಮಣಕಾರರನ್ನು ಮತ್ತು ಕಳ್ಳ ಬೇಟೆಗಾರರನ್ನು ಹದ್ದುಬಸ್ತಿನಲ್ಲಿ ಇಟ್ಟಿದ್ದರು.

ದಟ್ಟ ಕಾನನದ ಗಿಡ ಮರಗಳು ಪೊದೆ ಬಳ್ಳಿಗಳು ಹಾಗೂ ಪ್ರಾಕೃತಿಕ ಸಂಪನ್ಮೂಲಗಳು ಕಾಡಿನ ಮಕ್ಕಳಿಗೆ ಮೂಲಭೂತ ಅವಶ್ಯಕತೆಗಳಾಗಿವೆ. ಅವೆಂದರೆ:

ಅರಣ್ಯದಿಂದ ದೊರೆಯುವ ಕಾಯಿಗಳು, ಹಣ್ಣುಗಳು, ತರಕಾರಿಗಳು, ಎಲೆಗಳು, ಹೂಗಳು, ಕಂದ ಮೂಲಗಳು, ತೊಗಟೆಗಳು, ಜೇನುತುಪ್ಪ, ಕಾಡು ಪ್ರಾಣಿಗಳು, ಹುಳಹುಪ್ಪಡಿಗಳು, ನೆಲೆಯೂರಿ

ನಿಲ್ಲಲು ಸ್ಥಳ ಮತ್ತು ಆಶ್ರಯ ಸ್ಥಾನ; ಬಿದಿರು, ನಾರು, ಎಣ್ಣೆ, ಹುಲ್ಲು, ಮೇಣ, ಅಂಟು, ಬಣ್ಣ ಕೃಷಿ ಉಪಕರಣಗಳು ಹಾಗೂ ಆಸನ ವಸ್ತುಗಳ ತಯಾರಿಕೆಗೆ ಬೇಕಾದ ಮರ ಮೊದಲಾದವು; ಕಟ್ಟಡ ನಿರ್ಮಾಣ, ಬೇಲಿ ಕಟ್ಟುವುದು, ಉಪಕರಣ ತಯಾರಿಕೆ–ಇವಕ್ಕೆಲ್ಲ ಬೇಕಾದ ಕಟ್ಟಿಗೆ; ಉರುವಲು ಕಟ್ಟಿಗೆ; ಔಷಧೀಯ ವನಸ್ಪತಿಗಳು; ಹುಲ್ಲು, ಎಲೆ–ಟೊಂಗೆ ಮೊದಲಾದ ಮೇವು ಸಾಮಗ್ರಿ, ಪಶುಗಳನ್ನು ಮೇಯಿಸಲು ಹುಲ್ಲುಗಾವಲು; ಸುಗ್ಗಿಯ ಕಾಲದಲ್ಲಿ ಮತ್ತು ವಾರ್ಷಿಕವಾಗಿ ದೊರೆಯುವ ವಸ್ತುಗಳು; ಪ್ರಕೃತಿಯ ಮಕ್ಕಳಿಗೆ ಅವಿಚ್ಛಿನ್ನ ನೆರಳು; ಒಡವೆಗಳು, ಧಾರ್ಮಿಕ ವಸ್ತುಗಳು ಹಾಗೂ ಸಾಂಸ್ಕೃತಿಕ ಚಿನ್ಹೆಗಳು ಮತ್ತು ಬರಗಾಲದಲ್ಲಿ ಪರಿಹಾರ ನೀಡುವ ಪ್ರಕೃತಿಯ ಸಂಪನ್ಮೂಲಗಳು.

ಇವೆಲ್ಲ ಕಾಡಿನ ಮಕ್ಕಳಿಗೆ ದೊರೆಯಬಹುದಾದ ನೇರ ಲಾಭಗಳು, ಇದಲ್ಲದೆ ಅರಣ್ಯ ಮತ್ತು ಸಾಮಾನ್ಯ ಪ್ರಾಕೃತಿಕ ಸಂಪನ್ಮೂಲಗಳು ಹಲವಾರು ಪರೋಕ್ಷ ಲಾಭಗಳನ್ನೂ ಒದಗಿಸುತ್ತವೆ. ಅವೆಂದರೆ ಭೂ ಸವಕಳಿಗೆ ತಡೆ, ನೀರು ಮತ್ತು ಮೇವು, ಸಂರಕ್ಷಣೆ, ಬರಗಾಲ ಬರದಂತೆ, ಬಂದರೂ ಗಂಭೀರ ಪರಿಣಾಮ ಬೀರದಂತೆ ಪ್ರಕೃತಿಯ ರಕ್ಷಣೆ, ಎಲೆಗೊಬ್ಬರ, ವೃಕ್ಷರಾಶಿಯಿಂದ ಭೂ ಫಲವತ್ತತೆಯ ರಕ್ಷಣೆ, ದಟ್ಟ ಕಾಡಿನ ನೆರವಿನಿಂದ ಹವಾಮಾನ ಮತ್ತು ಮಳೆಯ ಮೇಲೆ ಕೆಲಮಟ್ಟಿನ ನಿಯಂತ್ರಣ, ಹರಿದ್ವರ್ಣ ವೃಕ್ಷರಾಶಿ ಮತ್ತು ಅನನ್ಯ ಪ್ರಾಕೃತಿಕ ಸೌಂದರ್ಯ ಮತ್ತು ಮುಖ್ಯವಾಗಿ ಕಡಿಮೆ ಪ್ರದೂಷಣೆ.

ಸ್ವಲ್ಪದಲ್ಲಿ ಹೇಳುವುದಾದರೆ, ಅರಣ್ಯಗಳು, ಗಿಡಮರಗಳು ಮತ್ತು ಸಾಮಾನ್ಯ ಪ್ರಾಕೃತಿಕ ಆಸ್ತಿ ಮೂಲಗಳು ಸ್ಥಳೀಯ ಮೂಲ ನಿವಾಸಿಗಳಿಗೆ ಸುರಕ್ಷಾ ಚಕ್ರವನ್ನು ಒದಗಿಸುತ್ತವೆ. ನಾಗಾಲೋಟದಿಂದ ಏರುತ್ತಿರುವ ಬೆಲೆಗಳು, ಕಡಿಮೆಯಾಗುತ್ತಿರುವ ಸಂಬಳದ ಮೌಲ್ಯ, ನಿರುದ್ಯೋಗ, ಅನಾರೋಗ್ಯದ ಸ್ಥಿತಿ, ಕಡಿಮೆಯಾಗುತ್ತಿರುವ ಭೂಮಿಯ ಉತ್ಪಾದಕತೆ ಮತ್ತು ಮರುಕಳಿಸುತ್ತಿರುವ ಅಭಾವ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ, ಕಾನನ, ವೃಕ್ಷ ಮತ್ತು ಸಾಮಾನ್ಯ ಪ್ರಾಕೃತಿಕ ಆಸ್ತಿ ಮೂಲಗಳ ಕಾನೂನು ಕಾಡಿನ ಮಕ್ಕಳನ್ನು ಪ್ರಬಲ ಮಾರುಕಟ್ಟೆಯ ಅಘಾತದಿಂದ ರಕ್ಷಿಸಬಲ್ಲದು. ಇಂತಹ ಕಾನೂನು ಆಹಾರ ಮತ್ತು ಜೀವನೋಪಾಯದ ಅಭದ್ರತೆ, ಬರ, ಕೀಟಗಳ ಹಾವಳಿ, ಅನಾರೋಗ್ಯ, ಮಾಲಿನ್ಯ, ಏರುವ ಬೆಲೆಗಳು ಮತ್ತು ಬಾಡಿಗೆ ದರಗಳು ಮುಂತಾದವುಗಳಿಂದ ಅವರನ್ನು ರಕ್ಷಿಸಲು ಸಾಧ್ಯ. ಇಂತಹ ಕಾಯಿದೆಯಿಂದ ಸ್ಥಳೀಯ ಮೂಲ ನಿವಾಸಿಗಳಿಗೆ ಪರ್ಯಾಯ ಜೀವನೋಪಾಯದ ಮಾರ್ಗಗಳು ತೆರೆಯುವವು.

ಅರಣ್ಯ ಮತ್ತು ಪ್ರಾಕೃತಿಕ ಪ್ರದೇಶಗಳ ನಾಶದಿಂದ ಸ್ಥಳೀಯ ಮೂಲ ನಿವಾಸಿಗಳ ಆರ್ಥಿಕ, ಸಾಮಾಜಿಕ ಮತ್ತು ಜೈವಿಕ ಸಂಬಂಧಗಳ ಮೇಲೆ ಗಂಭೀರ ಪರಿಣಾಮ ಆಗಿದೆ.

ಕಾಡಿನ ಮೂಲ ನಿವಾಸಿಗಳಿಗೆ ತಂಗುದಾಣವೇ ಇಲ್ಲದಂತಾಗಿದೆ. ಕಾನನದ ಕ್ಷೇತ್ರ ಕುಂಠಿತವಾಗುತ್ತಿರುವಂತೆ, ಅಲ್ಲಿನ ಮೂಲ ನಿವಾಸಿಗಳಿಗೆ ನೆಲೆ ನಿಲ್ಲಲ್ಲು ತಕ್ಕ ನೆಲವೇ ಸಿಗದಂತಾಗಿದೆ. ಇದರಿಂದಾಗಿ ಅವರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳು ಹೆಚ್ಚಾಗುತ್ತಿವೆ. ಕಾನನ ಪ್ರದೇಶದ

ಭೂಮಿ ಮತ್ತು ಜೀವರಾಶಿ ವ್ಯವಸ್ಥೆಯಲ್ಲಿ ಏರುಪೇರು ಉಂಟಾಗಿರುವುದರಿಂದ ಅಲ್ಲಿನ ಮೂಲ ನಿವಾಸಿಗಳಿಗೆ ಜೀವನ ನಿರ್ವಹಣೆ ದುಸ್ತರವಾಗಿದೆ. ಕಾಡಿನ ಮಹಿಳೆಯರು ಉರುವಲು, ಮೇವು, ಆಹಾರ ಮೊದಲಾದವುಗಳನ್ನು ಸಂಗ್ರಹಿಸಲು ಬಲು ದೂರ ದಾರಿ ಕ್ರಮಿಸಬೇಕಾಗಿದೆ.

ಬಾಹ್ಯ ಸಂಸ್ಥೆಗಳು, ಇಲಾಖೆಗಳು ಕಾಡಿನ ಮಕ್ಕಳನ್ನು ಶೋಷಿಸಿವೆ. ಅವರ ಆಸ್ತಿಯನ್ನು ಅತಿಕ್ರಮಿಸಿವೆ ಮತ್ತು ಅವರಿಗೆ ಬೆದರಿಕೆ ಹಾಕಿವೆ. ಹೀಗಾಗಿ ಕಾಡಿನ ಕೆಲವು ಸಮುದಾಯಗಳು ತಮ್ಮ ಪರಂಪರಾಗತ ಆಸ್ತಿಗೆ ಎರವಾಗಿವೆ, ಭೂಮಿಯನ್ನು ಕಳೆದುಕೊಂಡಿವೆ ಮತ್ತು ಭೂಹೀನರ ಸಾಲಿಗೆ ಬಂದು ಸೇರಿವೆ. ಕಾಡಿನ ಸ್ಥಳೀಯ ನಿವಾಸಿಗಳ ಸಂವಿಧಾನಾತ್ಮಕ ಹಕ್ಕುಗಳಿಗೆ ಅನೇಕಾನೇಕ ಸಲ ಚ್ಯುತಿ ಬಂದಿದೆ. ವಸ್ತುನಿಷ್ಠ ರೀತಿಯಿಂದ ನೋಡುವುದಾದರೆ ಪ್ರಸ್ತುತ ಸಾಮಾಜಿಕ-ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆ ಕಾಡಿನ ಮಕ್ಕಳಿಗೆ ದಮನಕಾರಿ ಹಾಗೂ ಪ್ರತಿಕೂಲವಾಗಿದೆ, ಅವರಿಗೆ ಬಹಳ ನಷ್ಟವಾಗಿದೆ.

ಕಾಡಿನ ಮಕ್ಕಳು ಪರಂಪರಾಗತವಾಗಿ ಅರಣ್ಯವನ್ನು ತಮ್ಮ ಜೀವನೋಪಾಯಕ್ಕಾಗಿ ಮತ್ತು ಆದಾಯದ ಮೂಲವಾಗಿ ಉಳಿಸಿದ್ದರು; ಕಾಪಾಡಿಕೊಂಡು ಬಂದಿದ್ದರು. ಈಗ ಅರಣ್ಯದ ಬಹಳಷ್ಟು ಭಾಗದಲ್ಲಿ ಅವರು ಇರುವಂತಿಲ್ಲ, ಕೆಲಸ ಮಾಡುವಂತಿಲ್ಲ. ಇಂತಹ ಕಾನೂನು ಹಾಗೂ ಧೋರಣೆ ಯಿಂದಾಗಿ ಅರಣ್ಯದ ಸಾಮಾಜಿಕ ನಿಯಂತ್ರಣದ ವಿಷಯದಲ್ಲಿ ದುಃಖ-ದುಮ್ಮಾನಗಳು ತಲೆದೋರಿದೆ. ಕೆಲ ಸಲ ವಿಪರೀತಕ್ಕೂ ಹೋಗಿವೆ. ಕಿರಿದಾಗುತ್ತಿರುವ ಅರಣ್ಯ ಪ್ರದೇಶದಲ್ಲಿ ಕಾಡಿನ ಮಕ್ಕಳಿಗೆ ಉರುವಲು ಹಾಗೂ ಮೇವು ಕೂಡ ದುರ್ಲಭವಾಗತೊಡಗಿವೆ. ಅವರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳು ಹೆಚ್ಚಿ, ಘರ್ಷಣೆಗೆ ಕಾರಣವಾಗಿವೆ ಜಗತ್ತಿನಾದ್ಯಂತ.

ಭಾರತದ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಬ್ರಿಟಿಷರ ಕಾಲದ ಕಾನೂನಿನ್ವಯ, ಭಾರತದ ಅರಣ್ಯ ಪ್ರದೇಶದ ೬೭% ಭಾಗದಲ್ಲಿ ಸಾಮಾನ್ಯ ಜನರು ನೇರವಾಗಿ ಸಂಚರಿಸುವಲ್ಲಿ ಕಾಡಿನ ಮೂಲವಾಸಿಗಳು ಕೆಲ ಪ್ರದೇಶದಲ್ಲಿ ಮಾತ್ರಾ ವಾಸಿಸಬಹುದಾದರೂ ಅವರಿಗೆ ಅಲ್ಲಿ ಭೂ ಒಡೆತನದ ಹಕ್ಕು ಇಲ್ಲ. ಹೀಗಾಗಿ ಅವರ ಬದುಕಿನ ಹೋರಾಟ ತೀವ್ರವಾಗಿದೆ. ಇದರಿಂದ ಸ್ಥಳೀಯ ಗುಂಪುಗಳು ಹಾಗೂ ಅರಣ್ಯ ಸಿಬ್ಬಂದಿ ನಡುವೆ ಘರ್ಷಣೆಗೆ ದಾರಿಯಾಗಿದೆ. ಕಾಡಿನ ಮಕ್ಕಳಿಗೆ ಅರಣ್ಯ ಸಂಪತ್ತುಗಳು ಅಗತ್ಯ ಎಂಬುದನ್ನು ಗುರುತಿಸುವ ಬದಲು, ಅವರ ಅಗತ್ಯಗಳನ್ನೂ ಅಲಕ್ಷಿಸಲಾಗಿದೆ.

ಕಾಡಿನ ನಾಶ ಪರಿಸರ ನಾಶ, ಹೀಗಾಗಿ ಕಾಡಿನ ಮಕ್ಕಳ ಬದುಕಿನ ಬುನಾದಿಯೇ ಅಲ್ಲಾಡಿದೆ, ಜೀವನ ನಿರ್ವಹಣೆ ದುಸ್ತರವಾಗಿದೆ. ಜೀವನೋಪಾಯದ ಪರ್ಯಾಯ ಮೂಲಗಳು ಪರಿಮಿತಿಯಿಂದ ಕೂಡಿವೆ. ಅವರ ಸಾಂಪ್ರದಾಯಿಕ ಹಕ್ಕುಗಳನ್ನು ಚ್ಯುತಿಗೊಳಿಸಲಾಗಿದೆ. ಬಡತನ ಅವರನ್ನು ಬೆಂಬತ್ತಿ ಬರುತ್ತಿದೆ.

ಇಂತಹ ದುರ್ದಶಿಯಲ್ಲಿಯೂ ಅರಣ್ಯದ ಕೆಲ ಜನಾಂಗಗಳು ಸವಾಲನ್ನು ಎದುರಿಸುತ್ತಿರುವ ಉದಾಹರಣೆಗಳು ಕಾಣಸಿಗುತ್ತವೆ. ಪ್ರಾಕೃತಿಕ ವನಸಂಪತ್ತು ಕ್ಷೀಣಿಸುವ ಪ್ರಸಂಗದಲ್ಲಿ, ಇವರು ತಮ್ಮ

ಗುಂಪಿನ ಸಹಾಯದೊಂದಿಗೆ ಇಲ್ಲವೆ ಅಭಿವೃದ್ಧಿ ಕಾರ್ಯದ ಇಲಾಖಾ ಸಿಬ್ಬಂದಿಯೊಂದಿಗೆ, ಹೊಸದಾಗಿ ಗಿಡ ನೆಡೆಸುವಲ್ಲಿ, ಅರಣ್ಯ ಬೆಳೆಸುವಲ್ಲಿ ಮತ್ತು ಜಲಾಶಯಗಳನ್ನು ನಿರ್ಮಿಸುವಲ್ಲಿ ಮುಂದೆ ಬಂದಿದ್ದಾರೆ. ಸದ್ಯಕ್ಕಿರುವ ಇಂತಹ ಜಲಾಶಯ ಮತ್ತು ಅರಣ್ಯಗಳನ್ನು ಕಾಪಾಡಿಕೊಂಡು ಬರಲು ಯತ್ನಿಸಿದ್ದಾರೆ.

ಕಾಡಿನ ಮೂಲನಿವಾಸಿಗಳು ಯಾವ ಹಕ್ಕನ್ನೂ ಹೊಂದಿದ್ದಾರೆ? ಕಾಡಿನ ಬೆಳವಣಿಗೆಯಲ್ಲಿ ಅವರ ಪಾತ್ರವೇನು? ಇದನ್ನೆಲ್ಲ ಸ್ಪಷ್ಟಪಡಿಸಬೇಕು. ಇವುಗಳ ಮೂಲ ವ್ಯಾಖ್ಯಾನ ನಡೆಯಬೇಕು. ನೈಸರ್ಗಿಕ ಸಂಪನ್ಮೂಲಗಳ ನಿರ್ವಹಣೆ ಹೆಚ್ಚು ಉತ್ತಮವಾಗಿ ನಡೆಯಬೇಕು. ಕಾಡಿನ ಮಕ್ಕಳ ಇಂದಿನ ದುರ್ಭರ ಪರಿಸ್ಥಿತಿ ಇದೆಲ್ಲದರ ಅಗತ್ಯವನ್ನು ಒತ್ತಿ ಹೇಳುತ್ತಿದೆ.

ಅರಣ್ಯ ಪ್ರದೇಶವು ತೀವ್ರವಾಗಿ ಕುಂಠಿತವಾಗುತ್ತಿರುವುದರಿಂದ, ಅನೇಕ ಕಡೆ ಈಗ ಕಾಡಿನ ಮೂಲ ಗುಂಪುಗಳಿಗೆ ಸೇರಿದ ಜನರನ್ನು ಪಾಳು ಬಿದ್ದ ಅರಣ್ಯ ಪ್ರದೇಶಗಳನ್ನು ಪುನಃ ಸಸ್ಯ ಶಾಲನಿಯನ್ನಾಗಿ ಪರಿವರ್ತಿಸುವ ಪ್ರಯತ್ನದಲ್ಲಿ, ಗಿಡಗಳನ್ನು ನೆಡಲು ಮತ್ತು ಹುಲ್ಲುಗಾವಲನ್ನು ನಿರ್ಮಿಸುವ ಕೆಲಸಕ್ಕೆ ಸೇರಿಕೊಳ್ಳಲಾಗುತ್ತಿದೆ.

ಜನರಲ್ಲಿ ವೃಕ್ಷಪ್ರೇಮವನ್ನು ಹೆಚ್ಚಿಸಲು ಸಾಮಾಜಿಕ ಅರಣ್ಯೀಕರಣದ ನೂತನ ಕಲ್ಪನೆಯನ್ನು ಜನಪ್ರಿಯಗೊಳಿಸಲಾಗುತ್ತಿದೆ. ಗಿಡಮರಗಳ ಅಗತ್ಯವನ್ನು ಬಿಂಬಿಸುತ್ತಾ ಸಮುದಾಯದ ಜನರನ್ನು ಗಿಡ ನೆಡುವಲ್ಲಿ ಪಾಲ್ಗೊಳ್ಳಲು ಆಹ್ವಾನಿಸಲಾಗುತ್ತಿದೆ. ಸಾಮಾಜಿಕ ಅರಣ್ಯೀಕರಣದಲ್ಲಿ ಬೀದಿ ಬೀದಿಗಳಲ್ಲಿ ಗಿಡನೆಡುವುದು, ಸಮುದಾಯದ ಉಪವನಗಳನ್ನು ನಿರ್ಮಿಸುವುದು, ಹೊಲ-ಗದ್ದೆಗಳ ಹತ್ತಿರ ವೃಕ್ಷ ರಾಶಿಗಳನ್ನು ಬೆಳೆಸುವುದು ಮತ್ತು ಬೇಸಾಯಕ್ಕೆ ಬರದ ಭೂಮಿಯಲ್ಲಿ ಭೂಹೀನ ಜನರಿಂದ ಕಾಡನ್ನು ಬೆಳೆಸುವುದು ಮೊದಲಾದವುಗಳು ಸೇರಿವೆ. ಸಾಮಾಜಿಕ ಅರಣ್ಯವರ್ಧನ ಕಾಲದಲ್ಲಿ ಗಿಡ ನೆಡುವಂತೆ ಜನರನ್ನು ಪ್ರೇರೆಪಿಸಿದಾಗ, ಅಗತ್ಯದ ಉರುವಲು, ಮರಗೆಲಸಕ್ಕಾಗಿ ಕಟ್ಟಿಗೆ ಮತ್ತು ಅಲ್ಪ ಆದಾಯ ಕೂಡ ದೊರೆಯುತ್ತದೆ. ಸಮಾಜದ ದುರ್ಬಲವರ್ಗದವರಿಗೆ ಒಂದಿಷ್ಟು ಲಾಭದೊರೆಯುತ್ತದೆ. ಜಂಟಿ ಅರಣ್ಯ ನಿರ್ವಹಣೆ ಕಾರ್ಯಕ್ರಮವೊಂದನ್ನು ರೂಢಿಸಲಾಗಿದೆ. ಇದರಲ್ಲಿ ಸ್ಥಳೀಯ ವನ ಸಂಪತ್ತನ್ನು ಸ್ಥಾನೀಯ ಜನರ ಹಾಗೂ ಅರಣ್ಯ ಇಲಾಖೆಯ ಸಿಬ್ಬಂದಿಯ ಸಹಯೋಗದೊಂದಿಗೆ ಕಾಪಾಡಿಕೊಂಡು ಬರಲಾಗುತ್ತಿದೆ.

ಇಂತಹ ಅಲ್ಪ ಪ್ರಮಾಣದ ಕಾರ್ಯಕ್ರಮಗಳು ಪ್ರಾರಂಭವಾಗಿದ್ದರೂ, ಕಾಡಿನ ಸ್ಥಳೀಯ ಮೂಲ ನಿವಾಸಿಗಳಿಗೆ ಅರಣ್ಯಗಳು ನೀಡುವ ಸುರಕ್ಷತಾ ವಲಯವನ್ನು ಪುನರ್ ನಿರ್ಮಿಸುವ ಬೃಹತ್ ಕಾರ್ಯ ಇನ್ನೂ ನಡೆಯಬೇಕಾಗಿದೆ. ಕಾಡಿನ ಮಕ್ಕಳಿಗೆ ಆಗಿರುವ ಹಾನಿಯನ್ನು ಪೂರ್ತಿಯಾಗಿ ಭರ್ತಿ ಮಾಡಿಕೊಡಲು ಸಾಧ್ಯವಿಲ್ಲ. ಆದರೆ ಅರಣ್ಯ ಸಂಪತ್ತಿನ ಪುನರುಜ್ಜೀವನ ಕಾರ್ಯವನ್ನು ಕೈಗೊಂಡಾಗ, ಆಗಾಗ ಅನೇಕ ನಿರ್ಧಾರಗಳನ್ನು ಕೈಗೊಳ್ಳುವ ಮೂಲಕ ಸಾಧ್ಯವಿದೆ.

ಗೌಳಿಗರ ಸಾಂಪ್ರದಾಯಿಕ ಕಸುಬಾಗಿದ್ದ ಪಶುಪಾಲನೆಗೆ ಹುಲ್ಲುಗಾವಲುಗಳು ಕಡಿಮೆಯಾದಂತೆ ಈ ಸಮುದಾಯದವರು ಕುರಿಸಾಕಾಣಿಕೆ ಜೊತೆ ಕೂಲಿಕಾರರಾಗಿ ಕೆಲಸ ಮಾಡುತ್ತಿದ್ದಾರೆ.

ಸಾಂಪ್ರದಾಯಿಕ ಕಸುಬುಗಳಲ್ಲಿ ಸ್ಥಿತ್ಯಂತರ-ಅಂದರೆ ಅನಿವಾರ್ಯವಾಗಿ ಸಾಂಪ್ರದಾಯಿಕ ಕಸುಬುಗಳು ನಾಶದ ಸ್ಥಿತಿಗೆ ತಿರುಗಿದಾಗ, ಅನಿವಾರ್ಯವಾಗಿ ಕೃಷಿ ಮತ್ತು ಕೂಲಿಕಾರರಾಗುವ ಸ್ಥಿತ್ಯಂತರ ಪ್ರಾರಂಭವಾಗಿದೆ.

**೩.೭.೨ ಪಶುಪಾಲನಾ ಸಮಸ್ಯೆ** : ಕರ್ನಾಟಕದ ಪಶುಸಂಗೋಪನಾ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದ ಪ್ರಮುಖ ಜನವರ್ಗವೆಂದರೆ ಗೌಳಿಗರು. ಗೌಳಿಗರ ಪ್ರಧಾನ ವೃತ್ತಿಯೇ ಪಶುಪಾಲನೆ, ತಮ್ಮ ಎಮ್ಮೆ, ದನ ಅವರಿಗೆ ಪ್ರಾಣ. ಅವೇ ಅವರ ಸರ್ವಸ್ವ. ವಿದ್ಯೆ ನೌಕರಿ, ರಾಜಕಾರಣ ಯಾವುದರಲ್ಲೂ ಆಸಕ್ತಿ ತೋರದೆ ಇವರ ಪಾಲಿಗೆ ತಮ್ಮ ಜಾನುವಾರುಗಳೇ ದೈವಗಳು. ಈ ಪಶುಗಳ ಪಾಲನೆಯಲ್ಲಿ ಅನೇಕ ಕಷ್ಟನಷ್ಟಗಳನ್ನ, ಆತಂಕ, ಅವಮಾನಗಳನ್ನು ಅವರು ಎದುರಿಸಿದಾಗ್ಯೂ, ತಮ್ಮದೇ ಜಾಣತನದಿಂದ ಅವುಗಳನ್ನು ಗೆದ್ದು ಬಂದಿದ್ದಾರೆ.

ಆದರೆ ಇಂದು ಕಾಲ ಬದಲಾಗಿದೆ. ಊರ ಸಂಬಂಧವೇ ಇಲ್ಲವೆಂಬಂಲತೆ, ಊರಿನಂದ ದೂರ, ತಮ್ಮ ಹಟ್ಟಿಗಳನ್ನು ಕಾಡು-ಮೇಡುಗಳಲ್ಲಿ ನಿರ್ಮಿಸಿಕೊಂಡು ತಮ್ಮದೇ ವಿಶಿಷ್ಟ ಸಂಸ್ಕೃತಿಯನ್ನು ಕಟ್ಟಿಕೊಂಡು, ಬದುಕುಸಾಗಿಸುತ್ತಿದ್ದ ಇವರಿಗೂ ಇಂದು ಆಧುನಿಕತೆಯ ಗಾಳಿ ಸೋಂಕಿದೆ. ತಮ್ಮ ಮಕ್ಕಳನ್ನೂ ಶಾಲೆಗೆ ಕಳಿಸಲು ಆರಂಭಿಸಿದ್ದಾರೆ. ಸರ್ಕಾರಿ ನೌಕರಿಗೂ ಸೇರಿದವರಿದ್ದಾರೆ. ಸ್ನಾತಕ ಮಾಡಿದವರೂ ಇದ್ದಾರೆ. ಈ ಉನ್ನತ ಮಟ್ಟದ ಶಿಕ್ಷಣ ಪಡೆದವರು ಒಂದು ರೀತಿಯಲ್ಲಿ ತಮ್ಮ 'ಹಟ್ಟಿಯ ಸಂಸ್ಕೃತಿ' ಬಗೆಗೆ ಒಲವಿಲ್ಲದಿದ್ದರೂ, ಅದನ್ನು ಹೀಗಳೆಯುವ, ಬದಲಾಯಿಸುವ ಸಾಹಸ ಮಾಡುತ್ತಿಲ್ಲ. ಆದರೆ ಸ್ನಾತಕ ಪೂರ್ವ ಶಿಕ್ಷಣ, ಸ್ನಾತಕ ಪದವಿ, ಪಡೆದು ಅಥವಾ ಅರ್ಧಕ್ಕೆ ಬಿಟ್ಟು ಹಟ್ಟಿಸೇರಿದ ಯುವಕರು ಒಂದಿಲ್ಲೊಂದು ರೀತಿಯಲ್ಲಿ ತಮ್ಮ ಅರೆಬೆಂದ ವಿಚಾರಗಳನ್ನು ಯಥಾವತ್ತಾಗಿ ಅವರ ಮೇಲೆ ಹೇರಲು ಆರಂಭಿಸಿದ್ದಾರೆ.

ಗೌಳಿಗ ಸಮುದಾಯದ ಸಾಮಾಜಿಕ-ಆರ್ಥಿಕ ಜೀವನ ಅವರ ದನಕರುಗಳ ಪಾಲನೆ-ಪೋಷಣೆ ಯಲ್ಲಿ ಹಾಸುಹೊಕ್ಕಾಗಿರುವುದನ್ನ ಇವರ ವಾಸ್ತವ್ಯದ ರಚನೆಯನ್ನ ನೋಡಿದರೆ ತಿಳಿಯುತ್ತದೆ. ಸಾಮಾನ್ಯವಾಗಿ ಇವರು ತಾವು ಮಲಗುವ ವರಾಂಡದ ಪಕ್ಕದಲ್ಲಿ ದನಗಳ ಕೊಟ್ಟಿಗೆ ನಿರ್ಮಿಸಿ ಅವುಗಳ ಪಕ್ಕದಲ್ಲೆ ತಾವೂ ಮಲಗುತ್ತಾರೆ. ರಾತ್ರಿಯಿಡೀ ಎದ್ದಿದ್ದು, ಅವುಗಳಿಗೆ ಮೇವು(ಹುಲ್ಲು ಜೋಳ)ವನ್ನ ಹಾಕಿ, ಪ್ರತಿನಿತ್ಯ ಅವುಗಳ ಮೈಯನ್ನ ಶುಚಿಗೊಳಿಸುತ್ತಾರೆ. ಕಾರಬ್ಬ ಅಥವಾ ಬಸವನ ಹಬ್ಬ ಬಂತೆಂದರೆ ತಮ್ಮ ರಾಸುಗಳಿಗೆ ಬಣ್ಣದ ಕಾಗದಗಳಿಂದ ಸಿಂಗರಿಸಿ ಊರು ಮತ್ತು ಊರ ಹೊರಗೆ ಮೆರವಣಿಗೆ ಮಾಡಿಸಿ ಇವರೂ ಕುಣಿದು ಕುಪ್ಪಳಿಸಿ ಊರ ಬಾಗಿಲಿನಲ್ಲಿ ಕಟ್ಟಿದ ತೋರಣವನ್ನ ಅರಿದು ತಮ್ಮ ಬುಡಕಟ್ಟು ದೇವರುಗಳಿಗೆ ಪೂಜೆ ಮಾಡಿಸಿ ಮನೆಗಳಿಗೆ ಹೋಗಿ ಮೊದಲು ಆಹಾರದ ಎಡೆಯನ್ನು ದನಕರುಗಳಿಗೆ ತಿನ್ನಿಸಿ ನಂತರ ತಾವು ಊಟ ಮಾಡುತ್ತಾರೆ. ತಮ್ಮ ದನ-ಕರುಗಳನ್ನ ತಮ್ಮ ಮಕ್ಕಳಷ್ಟೇ ಹೆಚ್ಚಿಗೆ ಪ್ರೀತಿಸುತ್ತಾರೆಂದರೆ ಅತಿಶಯೋಕ್ತಿಯಾಗಲಾರದು. ದನಕರುಗಳಿಗೆ ರೋಗ-ರುಜಿನಗಳು ಬಂದರೆ ಇವರು ನಿದ್ದೆ ಮಾಡುವುದಿಲ್ಲ. ತಮ್ಮ ಸಮುದಾಯದಲ್ಲೇ ಇರುವ

ನಾಟಿ ವೈದ್ಯರನ್ನ ಕರೆಸಿ ಗಿಡಮೂಲಿಕೆಗಳಿಂದ ಸರ್ಕಾರದ ಪಶುಚಿಕಿತ್ಸಾ ಕೇಂದ್ರಗಳಿಗೆ ತೋರಿಸುವದು ತುಂಬಾ ಅಪರೂಪ. ಇತ್ತೀಚಿನ ಬದಲಾವಣೆಯಿಂದಾಗಿ ಈ ಸಮುದಾಯದಲ್ಲಿ ಸಾಂಪ್ರದಾಯಿಕ ಕಸುಬಾದ ಪಶುಪಾಲನೆ ಕ್ರಮೇಣ ಕಡಿಮೆಯಾಗುತ್ತಿದೆ. ಅದಕ್ಕಾಗಿ ಪಶುಪಾಲನೆಗೆ ಉತ್ತೇಜನ ನೀಡಲು ಅಮೃತ ಯೋಜನೆಯನ್ನು ತಂದಿದೆ. ಅನುದಾನವಾಗಿ ೨೭,೨೫೦ ರೂ. ಪಡೆಯಬಹುದು. ಉಳಿದ ೮,೨೫೦ ರೂ. ಬ್ಯಾಂಕಿನಿಂದ ಸಾಲ ಪಡೆಯಬಹುದು. ೧೮ ರಿಂದ ೬೦ರ ವರೆಗೆ ಈ ಅವಕಾಶವಿರುವುದರಿಂದ ಗೌಳಿಗ ಮಹಿಳೆಯರು ಇದರ ಫಲಾನುಭವಿಯನ್ನು ಪಡೆದುಕೊಂಡಿದ್ದಾರೆ.

**೩.೭.೩ ಕೃಷಿ ಭೂಮಿಯ ಸಮಸ್ಯೆಗಳು** : ಪ್ರಾಚೀನ ಕಾಲದಲ್ಲಿ ಯಾರೊಬ್ಬರ ಒಡೆತನಕ್ಕೂ ಸೇರದ ಸಾರ್ವಜನಿಕ ಕಾಡಿನಲ್ಲಿ ನೆಲೆಸಿದ ಗೌಳಿಗರು ಕಾಡಿನ ಉತ್ಪನ್ನಗಳನ್ನು ಬಳಸಿ ಬದುಕಿ ಬಾಳಿದವರು ಆಹಾರದ ಕೊರತೆ ಇದ್ದಾಗ ಕಾಡಿನ ಸಮತಟ್ಟ ನೆಲನೋಡಿ ಕಾಡಿನ ಗಿಡಗಂಟಿಗಳನ್ನು ಹಿಡಿದು ಸುಟ್ಟು ಮಳೆಗಾಲದಲ್ಲಿ ನೆಲ ಮೆದುವಾದಾಗ ನೆಲವನ್ನು ಕೆದರಿ ಭತ್ತ ಇಲ್ಲವೆ ರಾಗಿ ಅಥವಾ ಇನ್ನಿತರ ಧಾನ್ಯಗಳನ್ನು ಭಿತ್ತಿ ಬೇಸಾಯವನ್ನು ಮಾಡುತ್ತಿದ್ದರು. ಅಂದರೆ ಕುಂಬ್ರಿ ಬೇಸಾಯ ಮಾಡುತ್ತಿದ್ದರು. ಆದರೆ ಈ ಬಗೆಯ ಬೇಸಾಯದಿಂದ ಕಾಡು ನಾಶವಾಗುತ್ತಿತ್ತು. ಪರಿಸರ ಸಮತೋಲನ ಏನೆಂಬುದನ್ನು ಬಗಿದು ಸರಕಾರದವರು ಸಾರ್ವಜನಿಕ ಆಸ್ತಿಯಾದ ಕಾಡಿನ ಮೇಲೆಯೂ ತಮ್ಮ ಸ್ವಾತಂತ್ರ್ಯವನ್ನು ಸ್ಥಾಪಿಸಿ ಕುಂಬ್ರಿ ಬೇಸಾಯ ಹಾಗೂ ಪ್ರಾಣಿ ಬೇಟೆಗೆ ನಿಷೇಧವನ್ನು ಹೇರಿದರು. ಈ ಬಗೆಯ ನಿಷೇದದಿಂದಾಗಿ ಗೌಳಿಗರ ಬುಡಕಟ್ಟುಗಳ ಜೀವನ ನಿರ್ವಹಣೆ ಕಷ್ಟವಾಗಿ ಅವರು ಬದುಕು ಆತಂತ್ರವಾಯಿತು.

ಉತ್ತರಕನ್ನಡದಲ್ಲಿ ಎಲ್ಲಿ ನೋಡಿದರು ಅರಣ್ಯ ಇಲಾಖೆಯ ಜಾಗ ಇರುವುದರಿಂದ ಕೃಷಿಭೂಮಿಯ ಸಮಸ್ಯೆ ಇವೆ. ಇದ್ದರೂ ಅವರ ಬೇಲಿಯವರೆಗೆ ಅರಣ್ಯ ಇಲಾಖೆಯವರು ಸಾಗವಾನಿ ಮರಗಳನ್ನು ನೆಟ್ಟಿರುವುದು ಕಂಡು ಬರುತ್ತದೆ. ಕೃಷಿ ಭೂಮಿ ಸರಿಯಾದ ದಾಖಲೆ ಇಲ್ಲದೇ ಇರುವುದು ಒಂದು ಸಮಸ್ಯೆ ಆಗಿದೆ. ಅದೇ ರೀತಿಯಾಗಿ ವನ್ಯಜೀವಿ ಸಂರಕ್ಷಣೆ, ರಾಷ್ಟ್ರೀಯ ಉದ್ಯಾನ ಯೋಜನೆ ಹಾಗೂ ಹುಲಿ ಸಂರಕ್ಷಣೆ ಯೋಜನೆಗಳಿಂದ ಅರಣ್ಯದ ಒಳಗಡೆ ಕಾಲಿಡದೇ ಇರುವಂಥ ಪರಿಸ್ಥಿತಿ ಇವರಿಗೆ ಬಂದಿದೆ. ಇನ್ನು ಸರ್ಕಾರದವರು ಗೌಳಿಗಳಿಗೆ ನೆಲೆಯನ್ನು ಕಲ್ಪಿಸಿಕೊಡುವಾಗ ಅವರ ಜಾಯಮಾನಕ್ಕೆ ಹೊಂದುವ ರೀತಿಯಲ್ಲಿ ೩-೪ ಎಕರೆ ಭೂಮಿಯನ್ನು ಅವರ ಸ್ವಾದೀನಕ್ಕೆ ಅಳವಡಿಸಿಕೊಟ್ಟಿಲ್ಲ ತೋಟಗಾರಿಕೆಯಿಂದ ಬದುಕು ಮಾಡಲು ಅನುಕೂಲವಾಗುತ್ತಿತ್ತು. ಇಂದು ಅರಣ್ಯಪ್ರದೇಶ ಅಕೇಶಿಯಾ ಇಲ್ಲವೇ ನೀಲಗಿರಿ ಹೀಗೆ ಒಂದೆರಡು ಜಾತಿ ಗಿಡಮರಗಳಿಂದ ಮಾತ್ರ ತುಂಬಿದೆ.ಈ ಬಗೆಯ ವನ್ಯರಕ್ಷಣೆಯಿಂದ ಗೌಳಿಗ ಸಮುದಾಯದವರ ಜೀವನಕ್ಕೆ ಅಷ್ಟೇ ಅಲ್ಲ ವನ್ಯ ಜೀವಿಗಳ ಜೀವನಕ್ಕೂ ಗಂಡಾಂತರ ಬಂದಿದೆ. ಈ ದಿಶೆಯಲ್ಲಿ ಸರಕಾರ ಗಂಭೀರವಾಗಿ ಆಲೋಚಿಸಿ ಕಾಡಿನ ಗೌಳಿಗರ ಜೀವನ ಕ್ರಮಕ್ಕೆ ವ್ಯತ್ಯಯ ಬರದ ರೀತಿಯಲ್ಲಿ ರೂಪುಗೊಳ್ಳುವಂಥ ಯೋಜನೆಗಳನ್ನು ರೂಪಿಸಿದ್ದಲ್ಲಿ ಮಾತ್ರ ಅವರ ಬದುಕಿಗೆ ಭದ್ರ ನೆಲಯನ್ನೊದಗಿಸಿ ದಂತಾಗುವುದು.

**೩.೭.೪ ವ್ಯಾಪಾರ ಮತ್ತು ಮಧ್ಯವರ್ತಿಗಳ ಸಮಸ್ಯೆಗಳು** : ಗೌಳಿಗ ಮಹಿಳೆಯರು ಮೊದಲಿನಿಂದಲೂ ಅರಣ್ಯ ಉತ್ಪನ್ನಗಳನ್ನು ತಂದು ಮಾರಟಮಾಡುತ್ತಿದ್ದರು. ಅವರೆ ಈಗ ಅರಣ್ಯ ಇಲಾಖೆಯಿಂದ ತೊಂದರೆಯನ್ನು ಅನುಭವಿಸಬೇಕಾಗಿದೆ. ಮಧ್ಯವರ್ತಿಗಳಿಂದಲೂ ಸಾಕಷ್ಟು ಮೋಸ ಹೋಗುತ್ತಿದ್ದಾರೆ. ಗೌಳಿಗರು ಸಣ್ಣ-ಪುಟ್ಟ ವ್ಯಾಪಾರ ಮಾಡುತ್ತಿದ್ದಾರೆ. ಅಂದರೆ ಭತ್ತ, ಹತ್ತಿ, ಅರಣ್ಯ ಉತ್ಪನ್ನಗಳನ್ನು ಇವರ ಹತ್ತಿರ ಮಧ್ಯವರ್ತಿಗಳು ಅರ್ಧ ದರಕ್ಕೆ ತೆಗೆದುಕೊಂಡು ಅವರು ಹೆಚ್ಚಿನ ದರಕ್ಕೆ ಮಾರುವುದರಿಂದ ತಮ್ಮ ಲಾಭವನ್ನು ಮಾಡಿಕೊಳ್ಳುತ್ತಿದ್ದಾರೆ. ಇವರ ಮುಗ್ಧತೆ ಮತ್ತು ಪ್ರಾಮಾಣಿಕತೆಯನ್ನು ದುರಪಯೋಗ ಪಡಿಸಿಕೊಳ್ಳುತ್ತಿದ್ದಾರೆ.

**ಆರ್ಥಿಕ ಚಟುವಟಿಕೆಯ ರೂಪಾಂತರಗಳು**

ಆಧುನಿಕ ಕೈಗಾರಿಕೀರಣದ ನಾಗಾಲೋಟದ ಸಂದರ್ಭದಲ್ಲಿ ಪರಿಸರ ಮತ್ತು ಅಭಿವೃದ್ಧಿ ವಿಷಯಗಳು ಗಂಭೀರ ಸ್ವರೂಪ ತಾಳಹತ್ತಿವೆ. ಉದ್ಯಮಗಳು ಹೆಚ್ಚುತ್ತಿದ್ದು, ರಾಷ್ಟ್ರೀಯ ವರಮಾನವೂ ಗಮನಾರ್ಹ ರೀತಿಯಲ್ಲಿ ವೃದ್ಧಿಗೊಳ್ಳುತ್ತದೆ ಆಧುನಿಕ ಕೈಗಾರಿಕೀರಣದ ನಾಗಾಲೋಟದ ಸಂದರ್ಭದಲ್ಲಿ ಪರಿಸರ ಮತ್ತು ಅಭಿವೃದ್ಧಿ ವಿಷಯಗಳು ಗಂಭೀರ ಸ್ವರೂಪ ತಾಳುತ್ತಿವೆ. ಉದ್ಯಮಗಳು ಹೆಚ್ಚುತ್ತಿದ್ದು ನಿಜ. ಆದರೆ ಇದರ ಜತೆ ಜನತೆಗೆ, ಪರಿಮಿತವಾದ ಪರಿಸರ ಸಂಪತ್ತು ಖಾಯಂ ನಾಶವಾಗುತ್ತಿದೆ ಎಂಬುದರ ಅರಿವು ಅನೇಕ ಪ್ರಜ್ಞಾವಂತರಿಗೆ ಮೂಡಿದೆ. "ಉದ್ಯಮಗಳು ತರುವ ಅಭಿವೃದ್ಧಿ" ಅದೇ ಕಾಲಕ್ಕೆ "ಪರಿಸರ ಮೈತ್ರಿ"ಯಿಂದ ಕೂಡಿರಬೇಕು ಎಂದು ಆಲೋಚಿಸಿ, ಅಂತಹ ಮಾದರಿಗಳನ್ನು ಸಂಶೋಧಿಸುವಲ್ಲಿ ಜಗತ್ತಿನಾದ್ಯಂತ ಪರಿಣಿತರು ತೊಡಗಿದ್ದಾರೆ. ಸಂಶೋಧನೆ ಇನ್ನೂ ಸಾಗಿರುವುದೇನೋ ನಿಜ, ಆದರೆ ಪರಿಸರ ನಾಶ ಸತತವಾಗಿ ನಡೆದೇ ಇದೆ.

ಆಧುನಿಕರಣಗೊಂಡ ಇಂದಿನ ಸಮಾಜದಲ್ಲಿ ಆರ್ಥಿಕತೆಗೆ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಲಾಗುತ್ತಿವೆ. ಗೌಳಿಗ ಮಹಿಳೆಯರು ಈಗ ಆರ್ಥಿಕ ಬದಲಾವಣೆಗಳಿಗೆ ಒಳಗಾಗುತ್ತಿದ್ದಾರೆ. ಕಳೆದ ೨೦-೨೫ ವರ್ಷಗಳ ಹಿಂದೆ ಇವರ ಆರ್ಥಿಕ ಸ್ಥಿತಿ ತುಂಬಾ ಹಿಂದುಳಿದಿತ್ತು. ಊರು ಬೆಳೆದಂತೆ ಇದರೊಂದಿಗೆ ಇತರೆ ಸಮುದಾಯದ ಜನರ ಜೊತೆ ಒಡನಾಟಗಳು ಪ್ರಾರಂಭವಾದವು. ಇಂತಹ ಜನರ ಪ್ರಭಾವದಿಂದ ಹಾಗೂ ಸಾರಿಗೆ ಸಂಪರ್ಕ ವ್ಯವಸ್ಥೆಯ ಸುಧರಣಾ ಕ್ರಮದಿಂದಲೂ ಇವರಿಗೆ ಸಮಾಜದ ಮುಖ್ಯವಾಹಿನಿ ಸಂಪರ್ಕ ದೊರೆಯಿತು. ಸರ್ಕಾರದ ಯೋಜನೆಗಳು ಸಾರಿಗೆ-ಸಂಪರ್ಕ ಮಾಧ್ಯಮಗಳ ಪ್ರಭಾವ ಆದಿವಾಸಿಗಳ ಮೇಲೆ ಉಂಟಾಗುತ್ತಿವೆ. ನಗರದ ಆಕರ್ಷಣೆ ಹೆಚ್ಚುತ್ತಿದೆ. ಇವುಗಳ ಜೊತೆ ರಾಜಕೀಯ, ಆರ್ಥಿಕ ಬಲವುಳ್ಳ ಕೈಗಾರಿಗಳ ಮುಖಂಡರು ಆದಿವಾಸಿ ನೆಲೆಗಳನ್ನು ಐಷಾರಾಮಿ ರೆಸಾರ್ಟ್‌ಗಳ ಉದ್ದೇಶ, ಗಣಿಗಾರಿಕೆ, ಅರಣ್ಯ ಸಂಪತ್ತಿನ ಲೂಟಿ ಮುಂತಾದವುಗಳಿಗೆ ಬಳಸಿ ಕೊಳ್ಳತೊಡಗಿದ್ದಾರೆ. ಇವುಗಳ ನೇರ ಪರಿಣಾಮ ಬುಡಕಟ್ಟು ಮಹಿಳೆಯರ ಮೇಲಾಗುತ್ತಿವೆ. ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದವರು ಆಧುನಿಕ ಯೋಜನೆಗಳಿಂದ ದಿಕ್ಕೆಟ್ಟು ಕೂಲಿ ಕೆಲಸಗಳಿಗೆ ಮುಂದಾಗಿವೆ. ಹೆಣ್ಣು ಕಾರ್ಮಿಕರು ದಿನಕ್ಕೆ ೩೫ ರಿಂದ ೪೦ ರೂ. ಪಡೆಯುತ್ತಾಳೆ.

ಅತಂತ್ರ ಸ್ಥಿತಿಯಲ್ಲಿರುವ ಗೌಳಿಗ ಸಮೂದಾಯದ ಮಹಿಳೆಯರ ಮೇಲೆ ನಡೆಯುವ ಲೈಂಗಿಕ ಶೋಷಣೆ ಅಪರೂಪವಲ್ಲ.

ಗೌಳಿಗರು ತಮ್ಮ ಪಾರಂಪರಿಕ ಪಶುಪಾಲನೆ ಅದರ ಜೊತೆ ಅವರು ನಂಬಿದ ಕೃಷಿ ಇವರನ್ನು ಒಂದೆಡೆ ನೆಲೆನಿಲ್ಲುವಂತೆ ಮಾಡಿತು. ಇಂದು ಜೀವನ ನಿರ್ವಹಣೆಗಾಗಿ ಹಲವು ಕಸುಬುಗಳನ್ನು ಕೂಡ ಅವಲಂಬಿಸಿದ್ದಾರೆ. ಬದಲಾದ ಆರ್ಥಿಕ ಪರಿಸ್ಥಿತಿಯೊಂದಿಗೆ ಇವರ ಜೀವನ ಕ್ರಮವೂ ಬದಲಾವಣೆಗೆ ಒಳಪಡುತ್ತಿದೆ. ಹಿಂದೆ ಹಾಡಿಗಳಲ್ಲಿ ಹುಲ್ಲಿನಿಂದ ಕೂಡಿದ ಗುಡಿಸಲು ಮನೆಗಳಿದ್ದವು. ಇವರ ಮನೆಯನ್ನು ನೋಡಿ ಇವರ ಆರ್ಥಿಕ ಸ್ಥಿತಿ ಹೇಗಿದೆ ಎಂದು ಊಹಿಸಲಾಗುತ್ತಿತ್ತು. ಆರ್ಥಿಕ ಸುಧಾರಣೆಯಲ್ಲಿ ಕೃಷಿಯೇತರ ಕೂಲಿ, ವ್ಯಾಪಾರ, ಸಣ್ಣಪುಟ್ಟ ದಿನಸಿ ಅಂಗಡಿ, ತರಕಾರಿ, ಸರಕಾರಿ ನೌಕರಿ ಎಂಬಿತ್ಯಾದಿ ಕಸುಬುಗಳ ಪಾತ್ರ ಹಿರಿದಾಗಿದೆ. ಇಂದು ಹಾಡಿಗಳಲ್ಲಿ ಕೆಲವು ವ್ಯಕ್ತಿಗಳ ಆರ್ಥಿಕ ಸ್ಥಿತಿ–ಗತಿ ಉತ್ತಮಗೊಂಡಿದೆ. ಸರಕಾರ ಆರ್ಥಿಕವಾಗಿ ಹಿಂದುಳಿದವರಿಗೆ ಅಂಬೇಡ್ಕರ ಆಶ್ರಮಯೋಜನೆ, ಜನತಾ ಮನೆ, ಸ್ವರ್ಣಗ್ರಾಮ ಸ್ವರಾಜ್ಯ ಯೋಜನೆ, ಉದ್ಯೋಗ ಖಾತ್ರಿ ಯೋಜನೆ ಮತ್ತು ಕೃಷಿ ಇಲಾಖೆ ಕೃಷಿ ಹೊಂಡ ಮತ್ತು ಭೂ ಅಭಿವೃದ್ಧಿಯನ್ನು ಮಾಡಿಸಿಕೊಡುತ್ತಿವೆ. ಹೀಗೆ ಕೆಲವರು ಆರ್ಥಿಕ ಬದಲಾವಣೆ ಹೊಂದಿ ಸ್ಥಿತಿವಂತರಾಗಿದ್ದಾರೆ. ಹಾಗೆಯೇ ಹೆಚ್ಚಾಗಿ ಕೂಲಿಕಾರ್ಮಿಕರು ಕೂಲಿಯನ್ನೇ ಅವಲಂಬಿಸಿ ಜೀವನ ಸಾಗಿಸುವುದನ್ನು ಕಾಣಬಹುದಾಗಿದೆ. ಇವು ಅನುಸರಿಸುವ ವ್ಯಕ್ತಿಗಳಲ್ಲಿ ಕೂಡ ಸಾಕಷ್ಟು ವ್ಯತ್ಯಾಸ ಹಾಗೂ ಬದಲಾವಣೆ ಆಗಿರುವುದು ಕಂಡು ಬರುತ್ತದೆ.

ಜಾಗತೀಕರಣದ ಪ್ರಭಾವದಿಂದ ಹೊಸ ಬದುಕಿಗೆ ಹೊಂದಿಕೊಳ್ಳಬೇಕಾಗಿರುವುದು ಅನಿವಾರ್ಯವಾಗಿರುವುದರಿಂದ ನೆಲೆ ಇಲ್ಲದ ತಮ್ಮ ಮೂಲ ಕಸುಬುಗಳಿಗೆ ಬದಲಾಗಿ ಆಧುನಿಕವಾದ ಹಲವು ಕಸುಬುಗಳನ್ನು ಅವಲಂಬಿಸಿರುವುದು ಇವರಿಗೆ ಅನಿವಾರ್ಯವಾಗಿದೆ. ಶಿಕ್ಷಣವನ್ನು ಹೊಂದಿರುವ ಕೆಲವರು ಉದ್ಯೋಗವನ್ನು ವ್ಯಾಪಾರವನ್ನು ಕೂಡ ಮಾಡುತ್ತಿದ್ದಾರೆ. ಆದರೆ ಸಾಮಾನ್ಯವಾಗಿ ಇಂದು ನಾನು ಕ್ಷೇತ್ರಕಾರ್ಯ ಮಾಡಿದ ಹಾಡಿಗಳಲ್ಲಿ ಕೃಷಿಯ ಕೂಲಿ ಜೊತೆ ಕೆಲಸಗಳಿಗೆ ಹೋಗುವವರ ಸಂಖ್ಯೆ ಹೆಚ್ಚಾಗಿದೆ.

ಒಟ್ಟಾರೆ ಇಂದಿಗೂ ಪಾರಂಪರಿಕ ವೃತ್ತಿಯನ್ನು ಪಶುಪಾಲನೆ, ಕೃಷಿ, ಕೂಲಿ, ಇತರ ವೃತ್ತಿಗಳಲ್ಲಿ ಪಾಲುಗೊಂಡಿರುವುದನ್ನು ಗಮನಿಸಬಹುದು. ಕೆಲವೊಂದು ಕುಟುಂಬದ ಆರ್ಥಿಕ ಸ್ಥಿತಿಗತಿಯಲ್ಲಿ ಬದಲಾವಣೆಯಾಗಿರುವುದನ್ನು ಬಿಟ್ಟರೆ ಉಳಿದಂತೆ ಇಂದಿಗೂ ನಾನು ಅಧ್ಯಯನಕ್ಕೆ ಆಯ್ದುಕೊಂಡ ಹಾಡಿಗಳಲ್ಲಿ ಆರ್ಥಿಕಸ್ಥಿತಿಯು ಕೆಳಸ್ತರದಲ್ಲಿಯೇ ಇದೆ. ಶಿಕ್ಷಣವನ್ನು ಪಡೆದ ಕೆಲವರು ಸರಕಾರದ ಮೀಸಲಾತಿಯ ಪ್ರಯೋಜನ ಪಡೆದು ಸರ್ಕಾರಿ ಮತ್ತು ತಾತ್ಕಾಲಿಕ ನೌಕರಿಯನ್ನು, ವ್ಯಾಪಾರವನ್ನು ಮಾಡುತ್ತಿದ್ದಾರೆ. ಆದರೆ ಇವರ ಸಂಖ್ಯೆ ಬೆರಳೆಣಿಕೆಯಷ್ಟು ಇವೆ. ಗೌಳಿಗರು ಕಡಿಮೆ ಬಂಡವಾಳವನ್ನು ಬಯಸುವಂತಹ ಕಸಬನ್ನೇ ಅವರು ಮಾಡುತ್ತಿದ್ದಾರೆ. ಕುಟುಂಬದ ಮಂದಿಯಲ್ಲಾ ದುಡಿದರು ಸಾಕಾಗದ ಸಮಯದಲ್ಲಿ ದುಡಿದ್ದನ್ನು ಕುಡಿತಕ್ಕೆ ಹೆಚ್ಚಾಗಿ ವ್ಯಯ ಮಾಡುವುದು ಹಾಗೂ ಧಾರ್ಮಿಕ ಆಚರಣೆಗಳಿಗೆ

ಹಬ್ಬ ಹರಿದಿನಗಳನ್ನು ತಪ್ಪದೇ ಆಚರಿಸುವುದರಿಂದ ದುಡಿದ ಹಣವು ವ್ಯಯವಾಗಿ ಉಳಿತಾಯ ವೆನ್ನುವುದು ಗೌಳಿಗರಲ್ಲಿ ಆಗುವುದಿಲ್ಲ. ಆದರೆ ಹೊಸ, ಹೊಸ ಉದ್ಯೋಗವಕಾಶಗಳು ಸಮುದಾಯದ ಆರ್ಥಿಕ ಬದಲಾವಣೆಯನ್ನು ಮಾಡುತ್ತಿರುವುದು ಗಮನಾರ್ಹ ಸಂಗತಿಯಾಗಿದೆ.

ಆಧುನಿಕತೆಗೆ ಒಳಗಾಗಿ ಇವರ ಕುಟುಂಬ ಮೂಲರೂಪದಲ್ಲಿ ಸಾಕಷ್ಟು ಬದಲಾವಣೆಯನ್ನು ಕಂಡಿದೆ. ಇವರು ತಮ್ಮ ಸಮುದಾಯದ ಚಹರೆಯನ್ನು ಕಳಚುತ್ತಾ ಬರುತ್ತಿದ್ದಾರೆ. ಹಾಗೆಯೇ ಸರಕಾರವು ಹಿಂದುಳಿದ ಪರಿಶಿಷ್ಟ ಜಾತಿ, ಎಸ್.ಟಿ. ಮತ್ತು ಇತರೇ ಹಿಂದುಳಿದವರಿಗಾಗಿ ಮೀಸಲಾತಿ ಯಲ್ಲಿ ಶಿಕ್ಷಣ ಉದ್ಯೋಗದಲ್ಲಿ ನೀಡಿರುವ ಪರಿಣಾಮವಾಗಿ ಈ ಕೆಳ ಸಮುದಾಯಗಳು ಇಂದು ಶಿಕ್ಷಣವನ್ನು, ಉದ್ಯೋಗವನ್ನು ಪಡೆಯುವ ಅವಕಾಶವನ್ನು ಹೊಂದಿವೆ. ಗ್ರಾಮ ಪಂಚಾಯತಿಗಳಲ್ಲಿ ಸ್ಪರ್ಧಿಸಲು ಅವಕಾಶ ನೀಡಿರುವುದರಿಂದ ಇಂದು ಹಾಡಿಗಳಲ್ಲಿ ಮೀಸಲಾತಿಯನ್ನೇ ಉಪಯೋಗಿಸಿ ಸ್ತ್ರೀ-ಪುರುಷರಿಬ್ಬರೂ ಕೂಡ ಗ್ರಾಮ, ತಾಲೂಕು ಮಟ್ಟದ ರಾಜಕಾರಣದಲ್ಲಿ ಭಾಗವಹಿಸುತ್ತಿರುವುದು ಕಂಡು ಬರುತ್ತಿವೆ. ತಮ್ಮ ಸ್ಥಾನಮಾನಗಳನ್ನು ಬದಲಾಯಿಸುವ ಅವಕಾಶ ಕೂಡ ಒದಗುವಂತೆ ಸರಕಾರದ ಮೀಸಲಾತಿ ಅನುವು ಮಾಡಿಕೊಟ್ಟಿದೆ. ಎಂಟನೇ ಯೋಜನೆಯು ಬುಡಕಟ್ಟಿನ ಅಭಿವೃದ್ಧಿಗೆ ಸಾಕಷ್ಟು ಪರಿಶ್ರಮವನ್ನು ತೋರಿದೆ. ಎಂಟನೇ ಯೋಜನೆಯಲ್ಲಿಯು ಕೃಷಿ, ಪಶುಪಾಲನೆ, ಗೃಹ ಕೈಗಾರಿಕೆ, ಕೈತೋಟ ನಿರ್ಮಾಣ, ಆದಿವಾಸಿ ಜನರಿಗೆ ಹಣವನ್ನು ಬಡ್ಡಿಗೆ ನೀಡಿ ಶೋಷಿಸುವ ವಿರುದ್ಧ ಕಾರ್ಯಾಚರಣೆ, ಗುಲಾಮಗಿರಿ ಹೆಂಡಮಾರಾಟ ನಿಷೇಧ, ಶೈಕ್ಷಣಿಕ, ಆರೋಗ್ಯ ಸವಲತ್ತು ಆದಿವಾಸಿ ಸ್ಥಳ ರಕ್ಷಣೆ ಅಭಿವೃದ್ಧಿ ಮುಂತಾದವುಗಳಿಗೆ ಒತ್ತು ನೀಡಿವೆ. ಆದಿವಾಸಿ ಮಹಿಳೆಯರ ಆರ್ಥಿಕ ಸ್ವಾವಲಂಬನೆಯನ್ನು ಹೆಚ್ಚಿಸಲು ಆದಿವಾಸಿ ಮಾರುಕಟ್ಟೆ ಅಭಿವೃದ್ಧಿ ಮಹಾಮಂಡಲವನ್ನ ಸ್ಥಾಪಿಸಿವೆ. ಪುರುಷರಿಗಿಂತ ಮಹಿಳೆಯರಿಗೆ ಬದುಕಿನ ಬಗ್ಗೆ ವಿಶ್ವಾಸ, ಪ್ರೀತಿಗಳು ಸಹಜವಾಗಿ ಹೆಚ್ಚಾಗಿರುವುದರಿಂದ ಈ ಎಲ್ಲಾ ಯೋಜನೆಗಳು ಬುಡಕಟ್ಟು ಮಹಿಳೆಯರನ್ನು ತಲುಪಿ ಸದುಪಯೋಗ ಆಗುತ್ತದೆ ಎಂದು ಭಾವಿಸಬಹುದು. ಗೌಳಿಗ ಸಮುದಾಯವು ಒಂದಲ್ಲ ಒಂದು ಬಗೆಯಲ್ಲಿ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ರೂಪಾಂತರಗಳಿಗೆ ಒಳಗಾಗಿವೆ. ಭಾರತದ ಶ್ರೇಣಿಕೃತ ವ್ಯವಸ್ಥೆ ಯಲ್ಲಿ ತಮ್ಮದೇ ಆದ ಸಾಂಪ್ರದಾಯಿಕ ಬುಡಕಟ್ಟಿನಲ್ಲಿ ಉಳಿದುಕೊಂಡಿರುವ ಗೌಳಿಗ ಮಹಿಳೆಯರಲ್ಲಿ ಸ್ಥಿತ್ಯಂತರ ಎನ್ನುವುದು ಕಾಣುತ್ತಿದೆ.

ಆದಿವಾಸಿ ಮಹಿಳೆಯರು ಕೃಷಿ ಸಂಬಂಧವಾದ ಕಾರ್ಯಗಳಲ್ಲಿ ಅಂತೆಯೇ ಕರಕುಶಕಲೆ, ಅರಣ್ಯಮೂಲ ಸಂಪತ್ತಿನ ಸಂಗ್ರಹಣೆಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಾರೆ. ಒಂದು ಬುಡಕಟ್ಟಿನಿಂದ ಮತ್ತೊಂದು ಬುಡಕಟ್ಟಿಗೆ ಮಹಿಳೆಯ ಸ್ಥಿತಿ ಬದಲಾಗುತ್ತದೆ. ಒಂದೊಂದು ಸಮೂಹದ ಸಾಮಾಜಿಕ ವ್ಯವಸ್ಥೆ ಬದಲಾಗಿರುವುದೇ ಇದಕ್ಕೆ ಕಾರಣ.

ಅರಣ್ಯ ಆದಿವಾಸಿಗಳ ಉಸಿರು, ಅವರು ಒಟ್ಟಾರೆ ಬದುಕನ್ನು ಶತಶತಮಾನಗಳಿಂದ ಪೋಷಿಸಿ ಕೊಂಡು ಬಂದಿರುವ ಅಶ್ರಯ ತಾಣವಾಗಿದೆ. ಅರಣ್ಯ ಹೊರತು ಅದಿವಾಸಿಗಳ ಬದುಕು ಕಲ್ಪಿಸುವುದು

ಅಸಾಧ್ಯ. ಹಾಗೆಯೇ ಶತಶತಮಾನಗಳಿಂದ ತಮ್ಮ ಕುಲ, ಪಂಗಡಗಳಿಗೆ, ಗಿಡಮರ, ಬಳ್ಳಿ, ಹೂವು, ಪ್ರಾಣಿ, ನೆಲ, ಜಲ, ಮುಂತಾದ ಹೆಸರನ್ನೇ ಇಟ್ಟುಕೊಂಡು ಅವುಗಳು ತಮ್ಮ ಕುಲದೈವವಾಗಿ, ಕುಲಚಿಹ್ನೆಯಾಗಿ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡು ಇಂದಿಗೂ ಅವಗಳನ್ನು ಉಳಿಸಿಕೊಂಡು ಆರಾಧಿಸುತ್ತಿದ್ದಾರೆ. ಅರಣ್ಯ ಮತ್ತು ಆದಿವಾಸಿಗಳ ಸಂಬಂಧ ಹೇಗಿದೆ ಎಂದರೆ ಅರಣ್ಯ ಹೊರತುಪಡಿಸಿ ಆದಿವಾಸಿಗಳನ್ನು, ಆದಿವಾಸಿಗಳನ್ನು ಹೊರತುಪಡಿಸಿ ಅರಣ್ಯಗಳನ್ನು ಕಲ್ಪಿಸಲು ಆಗದು. ಆದಿವಾಸಿಗಳು ಮತ್ತು ಎಲ್ಲಾ ಸಮುದಾಯಗಳ ಮೂಲಸ್ಥಾನ ಮೊದಲು ಅರಣ್ಯವೇ ಆಗಿತ್ತು. ಕಾಲಬದಲಾದಂತೆ ಸಮುದಾಯಗಳು ಅರಣ್ಯದಿಂದ ಬೇರ್ಪಟ್ಟು ಗ್ರಾಮಗಳನ್ನು ಕಟ್ಟಿಕೊಂಡು ನೆಲೆಸಿದರು. ಅವರ ಒಟ್ಟಾರೆ ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಬದುಕನ್ನು ರೂಪಿಸಿದ್ದು ಅರಣ್ಯವೇ. ಅರಣ್ಯದ ಉತ್ಪನ್ನ ಗಳಾದ ಉರುವಲು, ಗೆಡ್ಡೆ-ಗೆಣಸು, ಸೊಪ್ಪು, ಮೇವು, ಹೂ-ಹಣ್ಣು, ನಾರು-ಬೇರು, ಜೇನು ಮುಂತಾದ ಉತ್ಪನ್ನಗಳನ್ನು ನಂಬಿಯೇ ಇರುತ್ತಿತ್ತು. ಈ ನಿಟ್ಟಿನಲ್ಲಿ ಗೌಳಿಗ ಮಹಿಳೆ ಅರಣ್ಯದ ಮೇಲೆ ಅವಲಂಬಿಸಿ ದುಡಿಮೆ ಮಾಡುತ್ತಿದ್ದಾಳೆ. ಅರಣ್ಯದಲ್ಲಿ ದೊರೆಯುವ ಕಟ್ಟಿಗೆ, ವಾಟೆಹುಳಿ, ಮುಕ್ಲಹಣ್ಣು, ಬೆಟ್ಟದ ನೆಲ್ಲಿಕಾಯಿ, ಕರುಜ್ಜಿಕಾಯಿ, ಸೀಗೆಕಾಯಿ, ಮುಳ್ಳೆಣ್ಣು, ಸಂಪಿಗೆ, ಮುಸ್ಲಿಗಡ್ಡೆ, ಕವಳೆಗಡ್ಡೆ, ಕಾಡು ಬಸ್ಲೆ, ಬಗೆಬಗೆಯ ಹೂ, ಹಣ್ಣುಗಳನ್ನು ಮಾರಿ ಅದರಿಂದ ಬಂದ ಹಣದಿಂದಲೇ ಕುಟುಂಬವನ್ನು ನಡೆಸುತ್ತಿರುವುದು. ಹಾಗೆಯೇ ಬೇಸಾಯ ಹಾಗೂ ಕಾಡಿನ ಕಸುಬುಗಳ ಮುಖಾಂತರ ಹೆಂಗಸರು ನಡೆಸುವ ಚಟುವಟಿಕೆಗಳು ಪ್ರಕೃತಿಯ, ಜೀವಂತಿಕೆಯನ್ನು ಕಾಪಾಡಿ ಪೋಷಿಸುತ್ತವೆ. ಹೀಗೆ ಅರಣ್ಯ ಮತ್ತು ಆದಿವಾಸಿ ಮಹಿಳೆಯ ನಡುವೆ ಅವಿನಾಭಾವ ಸಂಬಂಧವಿದೆ. ಆದಿವಾಸಿಗಳು ಅರಣ್ಯ ಉಪ, ಉತ್ಪನ್ನಗಳನ್ನು ಬಳಸಿದರೆ ಕಾಡು ನಾಶವಾಗುತ್ತದೆ ಎಂದು ಹೇಳುವ ಸರ್ಕಾರಕ್ಕೆ ಬಹುಶಃ ತಿಳಿದಿದೆ. ಆರಣ್ಯ ಇವತ್ತು ಸಂಪೂರ್ಣವಾಗಿ ನಾಶ ಮಾಡುತ್ತಿರುವುದು ಆದಿವಾಸಿಗಳಲ್ಲ ಅರಣ್ಯವನ್ನು ನಾಶಮಾಡಿ ಅಣೆಕಟ್ಟು, ಕಾರ್ಖಾನೆ, ರಾಷ್ಟ್ರೀಯ ಹೆದ್ದಾರಿಗಳು, ರೈಲ್ವೆ ಟ್ರ್ಯಾಕ್‌ಗಳನ್ನು ಮಾಡುವುದು ಸರ್ಕಾರವೇ ಹೊರತು ಆದಿವಾಸಿಗಳಲ್ಲ. ಇಂದು ಗೌಳಿಗ ಮಹಿಳೆಯರು ತಾವು ಈ ಮೊದಲು ಸ್ವಲ್ಪಸ್ವಲ್ಪವಾಗಿ ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸಿ ತಮ್ಮ ಪಾಡಿಗೆ ತಾವು ಇದ್ದರು. ಆದರೆ ಯಾವಾಗ ಅರಣ್ಯ ಪ್ರವೇಶ ನಿಷೇಧ ಕಾನೂನು ಮತ್ತು ಸರ್ಕಾರದ ದೊಡ್ಡ ದೊಡ್ಡ ಯೋಜನೆಗಳು ಬಂದು ಇಂದು ಮುಕ್ತವಾಗಿ ಜೀವನ ನಡೆಸಲು ಸಾಧ್ಯವಾಗುತ್ತಿಲ್ಲ. ಅದರಂತೆಯೇ ಹಲವು ರೀತಿಯ ಒಣ ಹುಲ್ಲುಗಳ ಹಾಗೂ ಬೇಸಾಯದ ಉಪ ಉತ್ಪನ್ನಗಳು ಬೆರಕಿಯೊಂದಿಗೆ ಮರದ ಎಲೆಗಳನ್ನು ಸೇರಿಸಿ ಸುಗ್ಗಿಯ ಕಡೆಯ ದಿನಗಳಿಂದ ಹಿಡಿದು ಚಳಿಗಾಲ ಮತ್ತು ವಸಂತ ಕಾಲದವರೆಗೂ ಜಾನುವಾರುಗಳಿಗೆ ಮೇವನ್ನಾಗಿ ಕೊಡಲಾಗುತ್ತದೆ. ಗೌಳಿಗ ಮಹಿಳೆಯರು ಮುಟ್ಟಲು ನಿಷೇಧಗಳಿರುವ ಪರಿಣಾಮ ಇಂದು ಕಾಡುತ್ಪನ್ನ ಸಂಗ್ರಹಿಸಲು ಕೆಲಸದಿಂದ ಕೂಡಾ ಗೌಳಿಗ ಮಹಿಳೆಯರು ದೂರ ಉಳಿಯುವ ಹಾಗೇ ಮಾಡಲಾಗುತ್ತದೆ. ಇದರ ಪರಿಣಾಮ ಈ ಮಹಿಳೆಯರು ಕೂಲಿನಾಲಿ ಮಾಡಲು ವಲಸೆ ಕೂಡ ಹೋಗುತ್ತಿದ್ದಾರೆ. ಅಂದರೆ ಪಾರಂಪರಿಕ ವೃತ್ತಿಗಳು ಅರಣ್ಯವನ್ನು ಅವಲಂಬಿಸಿ ಗೌಳಿಗ ಆರ್ಥಿಕ ಜೀವನವನ್ನು ಅವಲಂಬಿಸಿತ್ತು. ಪಶುಪಾಲನೆಯಾಗಿರಬಹುದು, ಬೇಸಾಯವಾಗಿರ ಬಹುದು, ಬೇಟೆ, ಅರ್ಯಣೋತ್ಪನ್ನ ಸಂಗ್ರಹ, ಕಟ್ಟಿಗೆ ವ್ಯಾಪಾರ, ಮತ್ಯಾವುದೇ ಇರಬಹುದು ಇದನ್ನು

ಅವಲಂಬಿಸಿ ಇವರು ಸುರಕ್ಷತೆಯನ್ನು ತಮ್ಮ ದೊಡ್ಡಿಗಳಲ್ಲಿ ಶಾಂತಿ ಸೌಹಾರ್ದತೆಯನ್ನು ಹೊಂದಿದ್ದರು. ಇಂದು ತಮ್ಮ ಮೂಲ ವೃತ್ತಿಯನ್ನು ಪ್ರವೇಶಿಸುವುದು ನಿಷೇಧವೆಂದಾಗ ಇವರು ಪರ್ಯಾಯವಾಗಿ ಇತರೆ ವೃತ್ತಿಯನ್ನು ಅವಲಂಬಿಸಬೇಕಾಯಿತು. ಈ ರೀತಿಯಲ್ಲಿ ವೃತ್ತಿ ನಾಶದಿಂದ ಇತರೆ ಪ್ರವೃತ್ತಿಗಳ ಕಡೆ ಅವರ ಜೀವನಶೈಲಿ ಮಹತ್ತಾರದ ಬದಲಾವಣೆಯನ್ನು ತರುತ್ತಿದೆ. ಅರಣ್ಯೋತ್ಪನ್ನಗಳನ್ನು ಮುಟ್ಟಿದರೆ ಅಪರಾಧಿಗಳೆಂದು ಪರಿಗಣಿಸುವ ಸರ್ಕಾರ ಕಾನೂನಿಗೆ ಅರಣ್ಯ ಇಲಾಖೆಯವರು ಕಾಡುಗಳ್ಳರನ್ನು ಹಿಡಿಯಲು ಧೈರ್ಯ ಇಲ್ಲ. ಅವರ ಬದಲು ಅವರ ಜೊತೆ ಶಾಮಿಲಾಗಿ ಬಡವರ ಬಗ್ಗೆ ಕ್ರೂರವಾದ ವಂಚನೆಯನ್ನು ತೋರುತ್ತಿದ್ದಾರೆ.

ರಾಷ್ಟ್ರೀಯ ಉದ್ಯಾನವನ ಮತ್ತು ಆದಿವಾಸಿಗಲ ಸಹಜ ಹಕ್ಕುಗಳ ನಡುವಿನ ಸಂಘರ್ಷಗಳು ಇಂದಿಗೂ ಜೀವಂತವಾಗಿವೆ. ಕರ್ನಾಟಕದಲ್ಲಿ ಐದು ರಾಷ್ಟ್ರೀಯ ಉದ್ಯಾನವನಗಳು ಒಟ್ಟು ೨೪೭೫ ಚ.ಕಿ.ಮೀ. ಅರಣ್ಯವನ್ನು ಒಳಗೊಂಡಿರುತ್ತದೆ. ಉದ್ಯಾನವನಗಳು ಕರ್ನಾಟಕದ ಪಶ್ಚಿಮ ಘಟ್ಟಗಳಲ್ಲಿ ವಿಸ್ತರಿಸಿಕೊಂಡಿವೆ. ಈ ಉದ್ಯಾನಗಳ ವ್ಯಾಪ್ತಿಯಲ್ಲಿ ಬರುವ ಬುಡಕಟ್ಟುಗಳಿಗೆ ಇಂದಿಗೂ ಸೂಕ್ತ ಪರಿಹರ ಮತ್ತು ಪುನರ್ ವಸತಿ ಲಭ್ಯವಾಗಿಲ್ಲ. ಕೆಲವು ಕಡೆ ಪುನರ್ ವಸತಿ ಕಲ್ಪಿಸಲಾಗಿದ್ದರೂ ಸಹ ಆದಿವಾಸಿಗಳು ಅವನ್ನು ತಿರಸ್ಕರಿಸಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ರಾಷ್ಟ್ರೀಯ ಉದ್ಯಾನ ಘಟ್ಟದ ಪೂರ್ವಭಾಗದಲ್ಲಿದೆ.

ಹೀಗೆ ಸಮುದಾಯಗಳನ್ನು ಅವರ ಮೂಲ ನೆಲೆಗಳಿಂದ ಹೊರಗಟ್ಟುವ ಅವರು ತಮ್ಮ ಮೂಲ ನೆಲೆಯೊಡನೆ ಇಟ್ಟುಕೊಂಡಿರುವ ಭಾವನಾತ್ಮಕ ಸಂಬಂಧವನ್ನು ಕಳಚಿಕೊಳ್ಳುವುದರಿಂದ ಅವರು ಮಾನಸಿಕವಾಗಿ ಕುಗ್ಗಿ ಹೊಗುತ್ತಿದ್ದಾರೆ. ತಲಾತಲಾಂತರದಿಂದ ಬದುಕನ್ನು ರೂಪಿಸಿಕೊಳ್ಳಲು ಅನುವುಮಾಡಿಕೊಟ್ಟ ನೆಲೆಯನ್ನು ಬಿಟ್ಟು ಹೋಗುವುದು ಯಾರಿಗಾದರೂ ಕಷ್ಟದ ಕೆಲಸವೇ ಆಗಿರುತ್ತದೆ.

ಒಂದು ಸಮುದಾಯದ ಪುರುಷರು ತಮ್ಮ ಮೂಲ ಪರಿಸರದಿಂದ ಹೊರಬಂದು ಯಾವುದೇ ಪರಿಸರಕ್ಕೆ ಬೇಗ ಹೊಂದಿಕೊಳ್ಳಬಲ್ಲರು. ಆದರೆ ಮಹಿಳೆಯರು ತಮ್ಮ ಸುತ್ತಲೂ ಪರಿಸರದೊಂದಿಗೆ ಭಾವನಾತ್ಮಕ ಸಂಬಂಧವನ್ನು ಹೊಂದಿರುತ್ತಾರೆ. ಏಕೆಂದರೆ ಮಹಿಳೆ ಮತ್ತು ಪರಿಸರಗಳು ತಮ್ಮನ್ನು ಪರಸ್ಪರ ಪೋಷಿಸಿಕೊಳ್ಳುತ್ತವೆ. ಪರಿಸರ ಸಂರಕ್ಷಣೆಯಲ್ಲಿ ಮಹಿಳೆಯರ ಪಾತ್ರ ಮುಖ್ಯ. ಮಹಿಳೆಯರ ಪಾಲಿಗೆ ಪ್ರಕೃತಿ ಬದುಕಿನ ಮೂಲ. ಮಹಿಳೆಯರು ಬದುಕನ್ನು ರಕ್ಷಿಸುವುದರಿಂದ ಅವರಿಗೆ ಅದರ ಮೌಲ್ಯ ಚೆನ್ನಾಗಿಗೊತ್ತಿವೆ. ಈ ಎಲ್ಲ ಸಮಸ್ಯೆಗಳಿಂದ ಮಹಿಳೆ ತಾನು ಪಾರಂಪರಿಕ ಪರಿಸರದಿಂದ ದೂರವಾಗುತ್ತಾಳೆ. ಇದರಿಂದ ಮಹಿಳೆಯರು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಲವಾರು ಅವಕಾಶಗಳಿಂದ ವಂಚಿತರಾಗಿದ್ದಾರೆ. ಸ್ತ್ರೀಯರು ಹೂವು, ಎಲೆ, ಗಿಡಮೂಲಿಕೆಗಳು, ಹಣ್ಣು ಮುಂತಾದವುಗಳಿಂದ ಸಂಪಾದಿಸುತ್ತಿದ್ದರು. ಆದರೆ ಇವತ್ತು ಬೇರೆ ಬೇರೆ ಕೃಷಿಕೂಲಿ ಮಾಡುತ್ತಿದ್ದಾರೆ. ಅದು ಅವರನ್ನು ಸಂಕಿರಣ ಸ್ಥಿತಿಯನ್ನು ತಲುಪಿಸಿದೆ. ಅಪರಿಚಿತ ಪ್ರದೇಶದ ಸಂಸ್ಕೃತಿ, ಲೈಂಗಿಕಹಿಂಸೆ, ಇನ್ನಿತರ ಕಾರಣಗಳಿಂದಾಗಿ ಆದಿವಾಸಿ ಸ್ತ್ರೀಯರ ಜೀವನ ದುರ್ಬಲವಾಗಿದೆ. ಬದಲಾವಣೆ ಎನ್ನುವುದು ಗೌಳಿಗ ಮಹಿಳೆಯರು ಒಂದು ಬಗೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಸ್ಥಿರತೆಯನ್ನು

ಅನುಭವಿಸಲಾರಂಭಿಸುತ್ತಿದ್ದಾರೆ. ಗೌಳಿಗರ ಎಲ್ಲ ಬಗೆಯ ಪಾರಂಪರಿಕ ಆರ್ಥಿಕ ಚಟುವಟಿಕೆಗಳನ್ನು ನಾಶವಾಗಿ ಸ್ಥಿತ್ಯಂತರ ಇಂದು ಕಂಡುಬರುತ್ತಿವೆ.

ಅರಣ್ಯ ಇಲಾಖೆ ಸಕ್ರಮ ಎಂಬ ಮಾತು ನಮ್ಮ ಜಿಲ್ಲೆಯಲ್ಲಿ ಪ್ರತಿಧ್ವನಿಸಲು ಸ್ವಾತಂತ್ರ್ಯ ಬಂದಷ್ಟೇ ವರ್ಷಗಳು ಗತಿಸಿರಬಹುದಾಗಿದೆ. ಹತ್ತಾರು ವರ್ಷಗಳಿಂದಲೂ ರಾಜಕೀಯದ ಬಣ್ಣ ತೊಟ್ಟ ಪ್ರಕ್ರಿಯೆಗಳು ಹೋರಾಟಗಳು ನಡೆಯುತ್ತಿವೆಯೇ ಹೊರತು ಸಕ್ರಮಕ್ಕೆ ಮಾತ್ರ ರಾಜಕೀಯ ಬುದ್ಧಿಜೀವಿಗಳೂ, ಅಧಿಕಾರಿಗಳು ಸದಾ ತೊಡಕಾಗುತ್ತಿರುವುದು ನಿತ್ಯ ಸಹಜ.

**ಆಧಾರಗಳು**

೧. ಮಂಜುನಾಥ ಬಿ.ಪಿ., ಪಶುಪಾಲನೆ, ೨೦೦೭, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, ಪು.೭

೨. ಬೋರಲಿಂಗಯ್ಯ ಹಿ.ಚಿ., ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಅಕ್ಷರ ಪ್ರಕಾಶನ, ಪು. ೪೯-೫೦

೩. ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರ, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೩೬-೪೫ ೧೩೦-೧೪೩, ೧೪೫-೧೫೭

೪. ದೀಕ್ಷಿತ್ ಎ., ಮಲೆನಾಡಿನಲ್ಲಿ ಪಶುಪಾಲನೆ, ೨೦೦೩, ಉತ್ತರ ಕನ್ನಡ ಜಿಲ್ಲಾ ಅಡಿಕೆ ಸಂಬಾರ ಬೆಳೆಗಾರರ ಸಂಘ ರಿ., ಶಿರಸಿ, ಪು. ೭-೧೦

೫. ಚಂದ್ರಶೇಖರ ಟಿ.ಆರ್., ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಚಿನ್ನಸ್ವಾಮಿ ಸೋಸಲೆ ಎನ್., ನಮ್ಮ ಗ್ರಾಮಗಳು ಅಂದು ಇಂದು, ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಒಡೆಯರ್ ಡಿ. ಹೆಗ್ಗಡೆ, ಎಸ್. ಅನ್ನಪೂರ್ಣೇಶ್ವರಿ, ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ೧೯೯೨, ಪ್ರಕಾಶಕರು ಮಾನವಾಭಿವೃದ್ಧಿ ಅಧ್ಯಯನ ಕೇಂದ್ರ, ಮೈಸೂರು.

೮. ಚಂದ್ರಶೇಖರ ಟಿ.ಆರ್., ಕರ್ನಾಟಕದಲ್ಲಿ ಅಭಿವೃದ್ಧಿ ಸಾಮಾಜಿಕ ನೆಲೆಗಳು, ೨೦೦೩, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

೯. ಮೈತ್ರಿ ಕೆ.ಎಂ., ಬುಡಕಟ್ಟು ಕುಲಕಸುಬುಗಳು, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಅಬ್ದುಲ್ ಅಜೀಜ್, ಕೆ.ಜಿ. ವಾಸುಕಿ (ಸಂ), ಕರ್ನಾಟಕದ ಆರ್ಥಿಕತೆ, ೧೯೯೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಶ್ರೀಮತಿ ಎಚ್.ಎಸ್., ಶಿವಾನಂದ ಎಸ್. ವಿರಕ್ತಮಠ, ಜೆ. ಕೃಷ್ಣ (ಸಂ), ಮಹಿಳಾ ಆರ್ಥಿಕತೆ, ೨೦೦೭, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಲಕ್ಷ್ಮಣರಾವ್ ಕೆ.ಎನ್., ಹಾಲು, ೧೯೬೭, ಪ್ರಸಾರಾಂಗ ಮೈಸೂರು.

೧೩. ಕರಭಂಟನಾಳ ಎಸ್.ಜಿ., ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ, ೧೯೮, ಪ್ರಸಾರಾಂಗ, ಮೈಸೂರು

ವಿಶ್ವವಿದ್ಯಾಲಯ, ಮೈಸೂರು

೧೪. Devendra Thakar and D.N. Thakar, Tribal Women, Deep & Deep Publication, New Delhi

೧೫. Anil Bhuimali, Sampo podder, Development of Rural Women through Education and Empowerment, Abhijeet Publication, New Delhi, 2005, Pp. 1-10

೧೬. ಅಂಬಳಿಕೆ ಹಿರಿಯಣ್ಣ, ಬುಡಕಟ್ಟು ಸಮೂಹಗಳ ಬದಲಾಗುತ್ತಿರುವ ಆರ್ಥಿಕ ಜೀವನ, ೧೯೯೩, ಜಾನಪದ ಗಂಗೋತ್ರಿ ಸಂ-೬, ಸಂ-೨

೧೭. Swarankar R.C., Indian Tribes, Rupa offset print, Joipur, 1995, Pp.245-252

೧೮. Upadhyay H.C., S.C and S.Tribes in India, Asocio Economic Profile, Amol pub. 1991, Pp.41-55

೧೯. Alexandar K.C., R.R. Prasad, M.P. Jahagiradara, Tribal Rehabilitiona and Development, Rawat Pub. Joipur, 1991.

೨೦. Desai A.R., Rural Sociology in India, Popular Prakashan, 1969, Bombay, Pp. 219-232

# ಅಧ್ಯಾಯ ೪

## ಮಹಿಳೆ ಮತ್ತು ಶಿಕ್ಷಣ

೪.೧ ಪಾರಂಪರಿಕ ಶಿಕ್ಷಣ

೪.೨ ಶಿಕ್ಷಣದ ಸ್ವರೂಪ

೪.೩ ಸಾರ್ವಜನಿಕ ಶಿಕ್ಷಣ

೪.೪ ಆಶ್ರಮ ಶಾಲೆಯ ಶಿಕ್ಷಣ

೪.೫ ಶಿಕ್ಷಣದ ಪ್ರಗತಿ

## ಅಧ್ಯಾಯ-ನಾಲ್ಕು

# ಮಹಿಳೆ ಮತ್ತು ಶಿಕ್ಷಣ

ಶಿಕ್ಷಣವೆಂದರೆ ಜೀವನ ನಿರ್ವಹಣಾ ತರಬೇತಿ ಎಂಬ ಅರ್ಥವಿದೆ. ಜೊತೆಗೆ ಅನುಭವವನ್ನು ಪಡೆಯುವುದು, ಅರಿವನ್ನು ವಿಸ್ತರಿಸಿಕೊಳ್ಳುವುದು, ಜೀವನ ಮುಂದುವರಿಕೆಗಾಗಿ ಅವಶ್ಯವಿರುವ ಕೌಶಲ್ಯಗಳನ್ನು ಕಲಿತುಕೊಳ್ಳುವುದು ಎಂದು ಪರಿಭಾವಿಸಬಹುದಾಗಿದೆ. ಶಿಕ್ಷಣವು ಅಂತರಂಗ ದೊಳಗಿರುವ ಸಕಲ ಸಾಮರ್ಥ್ಯಗಳನ್ನು ವಿಕಸಿತಗೊಳಿಸಿಕೊಳ್ಳುವ ವಿಧಾನವಾಗಿದೆ. ರವೀಂದ್ರನಾಥ ಟ್ಯಾಗೂರ್‌ರವರ ಪ್ರಕಾರ "ಆತ್ಮ ಪ್ರಕಾಶ ಮತ್ತು ಪ್ರೇಮಗಳೆಂಬ ಸ್ಥಿರ ಸಂಪತ್ತನ್ನು ತಂದುಕೊಟ್ಟು ಮಗುವನ್ನು ಸತ್ಯಸುಂದರ ಯೋಗ್ಯ ವ್ಯಕ್ತಿಯನ್ನಾಗಿ ಮಾಡುವುದೇ ಶಿಕ್ಷಣವಾಗಿದೆ".

ಪ್ರತಿಯೊಬ್ಬ ಮನುಷ್ಯನಿಗೂ ಮೂಲಭೂತ ಸೌಕರ್ಯಗಳ ಅಗತ್ಯವಿದೆ. ಅಂತಹ ಮೂಲಭೂತ ಸೌಕರ್ಯವೆಂದರೆ ಆಹಾರ, ಆರೋಗ್ಯ ಮತ್ತು ಶಿಕ್ಷಣವೆಂದು ಖ್ಯಾತ ಅರ್ಥಶಾಸ್ತ್ರಜ್ಞರಾದ ಅಮರ್ತ್ಯಸೆನ್‌ರವರು ತಿಳಿಸಿರುತ್ತಾರೆ. ಇವು ಮೂರು ಭಿನ್ನ-ಭಿನ್ನವೆನಿಸಿದರೂ ಅಂತರ್ಯದಲ್ಲಿ ಇವುಗಳ ಮಧ್ಯೆ ಅಂತರ ಸಂಬಂಧವಿರುವುದು ಮಾತ್ರ ಸತ್ಯ. ಭಾರತ ಪ್ರಜಾತಂತ್ರ ನೀತಿಯನ್ನು ಅಳವಡಿಸಿ ಕೊಂಡಿರುವ ದೇಶವಾಗಿದೆ. ಭಾರತೀಯ ಪ್ರತಿಯೊಬ್ಬ ಪ್ರಜೆಯಾದವನಿಗೂ ಸಮಾನ ಹಕ್ಕುಗಳಿವೆ. ಆದರೆ ಭಾರತದಂತಹ ಅಸಮಾನ ನೆಲೆಯ ಸಮಾಜದಲ್ಲಿ ಅಸಾಧಾರಣ ಏರುಪೇರುಗಳಿವೆ. ಶಿಕ್ಷಣ ಎನ್ನುವುದು ಇಂಥವರಿಗೆ ಮಾತ್ರ ಮೀಸಲು ಎನ್ನುವ ಸಾಮಾಜಿಕ ಕಾನೂನುಗಳನ್ನು ಸಾವಿರಾರು ವರ್ಷಗಳಿಂದ ಪೋಷಿಸಿಕೊಂಡು ಬಂದ ದೇಶ ಇದು. ಇಂತಹ ದೇಶದಲ್ಲಿ ಈ ಸಮಾಜದ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗ ಮತ್ತು ಅಂಚಿನ ಸಮುದಾಯಗಳಿಗೆ ಶಿಕ್ಷಣವೆಂಬುದು

ಗಗನಕುಸುಮ. ಈ ಕಾರಣದಿಂದಾಗಿ ಈ ಸಮುದಾಯಗಳು ಕೇವಲ ಶ್ರಮದಾಯಕ ದುಡಿಮೆ ಮಾತ್ರ. ಶತಮಾನಗಳಿಂದ ತೊಡಗಿಸಿಕೊಂಡೆ ಬಂದವು. ಆದರೆ ಕಳೆದ ಹತ್ತು ವರ್ಷಗಳಲ್ಲಿ ಈ ಸಮುದಾಯಗಳ ಶೈಕ್ಷಣಿಕ ಸ್ಥಿತಿಗತಿ ಹಂತ ಹಂತವಾಗಿ ಸುಧಾರಿಸುತ್ತಾ ಬಂದಿದೆ. ಪ್ರತಿಯೊಂದು ಗಿರಿಜನ ಸಮುದಾಯದವರು ತಮ್ಮದೆ ಆದ ಸ್ವತಂತ್ರ ಭಾಷೆಯನ್ನು ಹೊಂದಿದ್ದಾರೆ. ಅದನ್ನು ಬೇರೆಯವರು ಅರ್ಥಮಾಡಿಕೊಳ್ಳುವುದು ಕಷ್ಟ.

ಇವರ ಭಾಷೆಗೆ ಲಿಪಿ ಇಲ್ಲದೇ ಇರುವುದರಿಂದ ಇವರು ಶೈಕ್ಷಣಿಕವಾಗಿ ತೀರಾ ಹಿಂದುಳಿದಿದ್ದಾರೆ. ಅದಿವಾಸಿ ಭಾಷೆಗಳಲ್ಲಿ ನೆರೆಹೊರೆ ಪ್ರದೇಶಗಳ ಭಾಷೆಯ ಪ್ರಭಾವವನ್ನು ಕಾಣಬಹುದು. ಕನ್ನಡ ನಾಡಿನ ಬಹುಸಂಖ್ಯಾತ ಗಿರಿಜನರ ಮಾತೃಭಾಷೆ ಕನ್ನಡವಲ್ಲ. ಹಾಲಕ್ಕಿಯವರು ಕನ್ನಡ, ಸಿದ್ಧಿಗಳು ಕನ್ನಡ ಮಿಶ್ರಿತವಾದ ಕೊಂಕಣಿ, ಗೌಳಿಗರು ಹಾಗೂ ಕುಣಬಿಯರು ಮರಾಠಿ ಮಿಶ್ರಿತ ಕೊಂಕಣಿ ಹೀಗೆ ಬೇರೆ ಬೇರೆ ಮಾತೃಭಾಷೆಗಳನ್ನು ಹೊಂದಿದ್ದಾರೆ.

ಶಿಕ್ಷಣವು ವ್ಯಕ್ತಿಯ ಅದರಲ್ಲೂ ಮಹಿಳೆಯರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಬೆಳೆಸುವ ಮತ್ತು ಪ್ರೌಢಗೊಳಿಸುವ ಶಕ್ತಿಯಾಗಿದೆ. ಸ್ತ್ರೀ ಶಿಕ್ಷಣವು ಕುಟುಂಬದ ರಾಜ್ಯದ ಮತ್ತು ದೇಶದ ಅಭಿವೃದ್ಧಿಯ ಬುನಾದಿಯಾಗಿದೆ. ಶಿಕ್ಷಣವು ಮಹಿಳೆಯಲ್ಲಿರುವ ವಿಶಿಷ್ಟತೆ ಮತ್ತು ವಿಶೇಷತೆಗಳನ್ನು ಅರಳಿಸುವುದು ಮಾತ್ರವಲ್ಲ. ಆಕೆಗೆ ಅನುಕೂಲವಾಗುವಂತೆ ಅವುಗಳನ್ನು ಅಭಿವೃದ್ಧಿ ಪಡಿಸಬೇಕು. ಸ್ವಂತಿಕೆ ಸ್ವಾಭಿಮಾನ, ಸಂತೋಷದ ಬದುಕನ್ನು ನಡೆಸುವುದಕ್ಕೆ ಸಹಾಯಕವಾಗಬೇಕು.

ವೇದ, ಉಪನಿಷತ್ತು, ಮಹಾಕಾವ್ಯ ಮತ್ತು ಆರ್ಯ ಸಂಸ್ಕೃತಿಯ ಮೂಲಾಧಾರವೆಂದು ಹೇಳಲಾಗಿದೆ. ಇಂದಿಗೂ ಇವುಗಳೇ ಸಮಾಜ ವ್ಯವಸ್ಥೆಯನ್ನು ನಿರ್ಧರಿಸುವ ಅಂಶಗಳಾಗಿವೆ. ವೇದಗಳ ಕಾಲದಲ್ಲಿ ಮಹಿಳೆಯರಿಗೆ ಧಾರ್ಮಿಕ, ತಾತ್ವಿಕ, ಸಾಹಿತ್ಯಿಕ ವಿಷಯಗಳಲ್ಲಿ ಪುರುಷನೊಂದಿಗೆ ಮುಕ್ತವಾಗಿ ಚರ್ಚಿಸುವ ಮತ್ತು ಸಾಮಾಜಿಕ ಪ್ರಕ್ರಿಯೆಗಳಲ್ಲಿ ಸಮಾನವಾಗಿ ತೊಡಗುವ ಶೈಕ್ಷಣಿಕ ಅವಕಾಶಗಳು ಇದ್ದವು. ಆದರೆ ಮಧ್ಯಕಾಲೀನ ಭಾರತದಲ್ಲಿ ಹಿಂದೂಧರ್ಮದಲ್ಲಿಯೇ ಸ್ತ್ರೀಯರಿಗೆ ಮುಕ್ತವಾದ ಸ್ವಾತಂತ್ರ್ಯವಿರಲಿಲ್ಲ. ಅನಂತರ ಮುಸ್ಲಿಮರ ಕಾಲಾವಧಿಯಲ್ಲಿ ಬೇಗ ಮದುವೆ ಮಾಡುವುದು, ನಾಲ್ಕು ಗೋಡೆಗಳ ಮಧ್ಯದಲ್ಲಿ ಸ್ತ್ರೀ ಇರುವ ಸನ್ನಿವೇಶ ಇದ್ದಿದ್ದರಿಂದ ಹಾಗೂ ಸ್ತ್ರೀ ಶಿಕ್ಷಣ ಎನ್ನುವುದು ಕಡಿಮೆಯಾಯಿತು. ಭಾರತೀಯ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ನಂಬಿಕೆಗಳು ಮತ್ತು ಮೌಲ್ಯಗಳು ಹಾಗೂ ಆಚರಣೆಗಳು ಮಹಿಳೆಯರನ್ನು ಶಿಕ್ಷಣದಿಂದ ದೂರವಾಗಿಯೇ ಇಟ್ಟಿದ್ದವು.

**೧೮ನೇ ಶತಮಾನದ ನಂತರ ಮಹಿಳಾ ಶಿಕ್ಷಣ :** ರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ೧೮ನೇ ಶತಮಾನದಿಂದೀಚೆಗೆ ಮಹಿಳಾ ಶಿಕ್ಷಣ ಆರಂಭವಾಯಿತು. ಭಾರತದಲ್ಲಿ ಬ್ರಿಟಿಷ್ ಆಡಳಿತ ಕೇವಲ ರಾಜಕೀಯ ಮಾತ್ರವಾಗದೇ ಭಾರತೀಯ ಅರ್ಥವ್ಯವಸ್ಥೆಯ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಭಾವನೆಗಳಲ್ಲಿ ಹಾಗೂ ಸ್ತ್ರೀ ಶಿಕ್ಷಣದ ಪರಿಕಲ್ಪನೆ, ಬ್ರಿಟಿಷ್ ಆಡಳಿತದ ಪರಿಣಾಮ ಎನ್ನಬಹುದು. ೧೮೨೪ರಲ್ಲಿ ಅಮೆರಿಕನ್ ಮಿಷನ್ ಸಂಸ್ಥೆ ಬೊಂಬಾಯಿಯಲ್ಲಿ ಹೆಣ್ಣು ಮಕ್ಕಳಿಗಾಗಿ

ಮೊಟ್ಟಮೊದಲ ಶಾಲೆಯನ್ನು ತೆರೆಯಿತು. ೧೮೨೯ರಲ್ಲಿ ಆ ಶಾಲೆಗೆ ೪೦೦ ಮಂದಿ ಹುಡುಗಿಯರು ಸೇರಿದ್ದರು. ಮನ್ರೋ ವರದಿಯಂತೆ ೧೮೫೨ರಲ್ಲಿ ಮದ್ರಾಸ್ ಸಂಸ್ಥಾನದ ವಿವಿಧ ಶಾಲೆಗಳಲ್ಲಿ ೫೦೦ ವಿದ್ಯಾರ್ಥಿನಿಯರು ಸೇರಿದರು. ೧೮೫೪ ಡೆಸ್ಪಾಚ್ ವರದಿಯಂತೆ ಬೊಂಬಾಯಿ ಸಂಸ್ಥಾನದ ೬೫ ಹೆಣ್ಣುಮಕ್ಕಳ ಶಾಲೆಗಳಲ್ಲಿ ಒಟ್ಟು ೩೫೦೦ ಹುಡುಗಿಯರು, ಬಂಗಾಳ ಸ್ಥಾನದ ೨೮೮ ಶಾಲೆಗಳಲ್ಲಿ ೭೦೦೦ ಹುಡುಗಿಯರು ಶಿಕ್ಷಣವನ್ನು ಪಡೆಯಲು ಶಾಲೆಗೆ ಸೇರಿದ್ದರು. ಈ ಅವಧಿಯಲ್ಲಿ ಕ್ರೈಸ್ತ ಮಿಶನರಿ ಸಂಸ್ಥೆಗಳು ಕೆಲವು ಸ್ವಯಂ ಸೇವಾ ಸಂಸ್ಥೆಗಳು ವಿಶೇಷವಾದ ಆಸಕ್ತಿಯನ್ನು ವಹಿಸಿಕೊಂಡು ಮುಖ್ಯವಾಗಿ ಹೆಣ್ಣುಮಕ್ಕಳ ಶಿಕ್ಷಣಾಭಿವೃದ್ಧಿಗೆ ನಾಂದಿ ಹಾಡಿದವು ಎನ್ನಬಹುದು. ಇನ್ನು ಕರ್ನಾಟಕದಲ್ಲಿ ಕ್ರಿ.ಶ. ೧೮೩೩ರಲ್ಲಿ ಲಂಡನ್ ಮಿಷನ್ ಸಂಸ್ಥೆ ಬಳ್ಳಾರಿಯಲ್ಲಿ ಪ್ರಥಮವಾಗಿ ಒಂದು ಹೆಣ್ಣುಮಕ್ಕಳ ಶಾಲೆಯನ್ನು ಆರಂಭಿಸಿತು. ೧೮೮೨-೮೩ರಲ್ಲಿ ರೋಮನ್ ಕ್ಯಾಥೋಲಿಕ್ ಕಾನ್ವೆಂಟ್ ಹೆಣ್ಣುಮಕ್ಕಳ ಪ್ರೌಢಶಾಲೆಯನ್ನು ಆರಂಭಿಸಿತು. ೮೧-೮೨ರಲ್ಲಿ ೨ ಹೆಣ್ಣುಮಕ್ಕಳ ಶಾಲೆಗಳಿದ್ದವು. ಇವುಗಳಲ್ಲಿ ೪೬೦ ಹೆಣ್ಣುಮಕ್ಕಳು ಮತ್ತು ಪ್ರಥಮ ದರ್ಜೆ ಕಾಲೇಜಿನಲ್ಲಿ ೬೨ ವಿದ್ಯಾರ್ಥಿನಿಯರು ಓದುತ್ತಿದ್ದರು. ೧೮೪೦ರಲ್ಲಿ ಲಂಡನ್ ಮಾದರಿ ಮಹಿಳಾ ಶಿಕ್ಷಣ ಪ್ರಥಮವಾಗಿ ಕಾಣಿಸಿಕೊಂಡಿದ್ದು. ಕ್ರಿ.ಶ. ೧೮೬೭ರಲ್ಲಿ ಎರಡು ಸರ್ಕಾರಿ ಶಾಲೆಗಳಲ್ಲದೆ ಕೆಲವು ಅನುದಾನ ಪಡೆಯುತ್ತಿದ್ದ ಖಾಸಗಿ ಹೆಣ್ಣುಮಕ್ಕಳ ಶಾಲೆಗಳಿದ್ದವು.

ಮೈಸೂರಿನಲ್ಲಿ ಮಹಿಳಾ ಸಮ್ಮೇಳನವು ೧೯೨೫ರಲ್ಲಿ ನಡೆಯಿತು. ಇದು ಸ್ತ್ರೀ ಶಿಕ್ಷಣ ಮತ್ತು ಅಭಿವೃದ್ಧಿಗೆ ಸಹಾಯವಾಯಿತು. ನಂತರ ಬೆಂಗಳೂರಿನ ಮಹಿಳಾ ಸೇವಾ ಸಮಾಜ, ಮೈಸೂರಿನ ವನಿತಾ ಸಮಾಜ, ಮುಂತಾದವು ಮಹಿಳಾ ಶಿಕ್ಷಣಕ್ಕೆ ಉತ್ತಮ ಸಲಹೆ ಸಹಕಾರವನ್ನು ನೀಡಿದವು. ಮಹಿಳೆಯರಿಗಾಗಿ ಮೈಸೂರು ವಯಸ್ಕರ ಶಿಕ್ಷಣ ಸಮಿತಿಯು ನಂಜನಗೂಡು ಮತ್ತು ಕೆಂಗೇರಿಗಳಲ್ಲಿ ಎರಡು ವಿದ್ಯಾಪೀಠಗಳನ್ನು ನಡೆಸುತ್ತಿತ್ತು. ಇದಾದ ಮೇಲೆ ೧೮೫೫ಕ್ಕೆ ಹಿಂದೆ ಲಂಡನ್ ಮಿಷನ್ ಸಂಸ್ಥೆಯವರು ನಡೆಸುತ್ತಿದ್ದ ಕೆಲವು ಬಾಲಕಿಯರ ಶಾಲೆಗಳಿದ್ದವು. ಭಾರತೀಯ ಸಮಾಜ ಸುಧಾರಕರ ಒತ್ತಾಯಕ್ಕೆ ಮಣಿದ ಬ್ರಿಟಿಷ್ ಸರ್ಕಾರ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಕೆಲಸವನ್ನು ತೀವ್ರಗೊಳಿಸಲು ಹಲವಾರು ಆಯೋಗಗಳನ್ನು ರಚಿಸಿತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ

೧. ವುಡ್ಸ್ ಆಯೋಗ - ೧೮೫೪
೨. ಹಂಟರ್ ಆಯೋಗ - ೧೮೮೨
೩. ಸ್ಯಾಟ್ಲರ್ ಆಯೋಗ - ೧೯೧೭
೪. ಹರ್ಟಗ್ ಆಯೋಗ - ೧೯೨೩
೫. ಸಾರ್ಜೆಂಟ್ ಆಯೋಗ - ೧೯೪೪

ಈ ಎಲ್ಲಾ ಶಿಕ್ಷಣ ಆಯೋಗಗಳು ಮಹಿಳಾ ಶಿಕ್ಷಣದ ಸಮಸ್ಯೆಗಳನ್ನು ವಿಶೇಷವಾದ ಅಸಕ್ತಿಯನ್ನು ವಹಿಸಿ ಹಲವು ಶಿಫಾರಸ್ಸುಗಳನ್ನು ಮಾಡಿತು. ಶಿಕ್ಷಣದ ಬಗ್ಗೆ ನೀಡಿದ ಪ್ರಾಮುಖ್ಯತೆ ಶಿಕ್ಷಣದಲ್ಲಿ ತೊಡಗಿದ ಶಾಲೆಗಳಿಗೆ ಮಹಿಳಾ ಸಂಖ್ಯೆ ಕ್ರಮೇಣ ಹೆಚ್ಚ ತೊಡಗಿತು. ೧೮೫೪ರಲ್ಲಿ ದೇಶಾದ್ಯಂತ ಕೇವಲ ೨೫,೦೦೦ ಹುಡುಗಿಯರು ಶಾಲೆಗಳಲ್ಲಿ ಸೇರ್ಪಡೆಯಾಗಿದ್ದರೆ. ೧೮೮೧ರಲ್ಲಿ ೧,೧೭,೦೦೦ ಮತ್ತು ೧೮೯೨ರಲ್ಲಿ ೧,೨೨,೦೦೦ಕ್ಕೆ ಏರಿತು. ೧೯೦೨ರಲ್ಲಿ ಸುಮಾರು ೨,೫೬,೦೦೦

ವಿದ್ಯಾರ್ಥಿನಿಯರು ಅಭ್ಯಾಸ ಮಾಡುತ್ತಿದ್ದು ೧೩೯ ಕಲಾ ಕಾಲೇಜುಗಳು ೮೭ ವೃತ್ತಿ ಶಿಕ್ಷಣದ ಕಾಲೇಜುಗಳು ಅಸ್ತಿತ್ವದಲ್ಲಿದ್ದವು.

ಬ್ರಿಟಿಷರ್ ಕಾಲಾವಧಿಯಲ್ಲಿ ಹೆಣ್ಣು ಮಕ್ಕಳ ಶಿಕ್ಷಣ ಪ್ರಸರಣ ಯಾವರೀತಿ ಇತ್ತು ಎಂಬುದನ್ನು ಕೋಷ್ಟಕ ೪.೧ ರಲ್ಲಿ ನೋಡಬಹುದು.

**ಕೋಷ್ಟಕ ೪.೧ ೧೯೪೭ರವರೆಗಿನ ಹೆಣ್ಣುಮಕ್ಕಳ ಶಿಕ್ಷಣ ಪ್ರಸರಣ**

| ಸಂಸ್ಥೆ | ವರ್ಷ | ಕೇವಲ ಹೆಣ್ಣುಮಕ್ಕಳಗಾಗಿಯೇ ಇದ್ದಂತ ಶಿಕ್ಷಣ ಸಂಸ್ಥೆಗಳು | ಎಲ್ಲ ಸಂಸ್ಥೆಗಳ ಶಿಕ್ಷಣ ಪಡೆಯುತ್ತಿದ್ದಹೆಣ್ಣುಮಕ್ಕಳ ಸಂಖ್ಯೆ |
|---|---|---|---|
| ಮಹಾವಿದ್ಯಾಲಯ | ೧೯೦೧-೦೨ | — | ೭೫ |
| | ೧೯೩೬-೩೭ | — | ೧,೨೪೫ |
| | ೧೯೪೬-೪೭ | ೦೧ | ೪,೧೭೭ |
| ಮಾಧ್ಯಮಿಕ | ೧೯೦೧-೦೨ | ೬೭ | ೪,೯೩೪ |
| ಶಾಲೆಗಳು | ೧೯೩೬-೩೭ | ೧೦೪ | ೨೫,೮೨೦ |
| | ೧೯೪೬-೪೭ | ೧೮೪ | ೬೨,೬೨೯ |
| ಪ್ರಾಥಮಿಕ | ೧೯೦೧-೦೨ | ೭೬೮ | ೭೬,೦೬೨ |
| ಶಾಲೆಗಳು | ೧೯೩೬-೩೭ | ೧,೪೭೮ | ೨,೮೭,೦೬೧ |
| | ೧೯೪೬-೪೭ | ೧,೮೦೪ | ೪,೮೯,೭೮೯ |
| ವಿಶೇಷ | ೧೯೦೧-೦೨ | — | — |
| ಶಾಲೆಗಳು | ೧೯೩೬-೩೭ | ೫೧ | ೩,೨೯೧ |
| | ೧೯೪೬-೪೭ | ೪೦೪ | ೧೫,೪೯೮ |

ಆಧಾರ: ರಿಪೋರ್ಟ್ ಆಫ್ ಎಜುಕೇಶನ್ ಕಮೀಷನ್

ಈ ಕೋಷ್ಟಕದ ಮೂಲಕ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಗಿರುವುದನ್ನು ಕಾಣಬಹುದು. ಆದರೆ ಸ್ತ್ರೀ ಶಿಕ್ಷಣದಲ್ಲಿ ಉಂಟಾದ ಪ್ರಗತಿ ಸೀಮಿತವಾಗಿದ್ದು ನಗರವಷ್ಟೇ. ನಗರಗಳಲ್ಲಿನ ಶ್ರೀಮಂತರು ಮತ್ತು ಮೇಲವರ್ಗದವರು, ಮಾಧ್ಯಮ ವರ್ಗದವರು ತಮ್ಮತಮ್ಮ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸುವುದಕ್ಕೆ ಮುಂದಾದರು. ಹಲವಾರು ಸ್ತ್ರೀ ಶಿಕ್ಷಣದ ವಿಷಯದಲ್ಲಿ ಆಡಚಣೆಗಳ ಮಧ್ಯದಲ್ಲಿಯೂ ಬ್ರಿಟಿಷರ್ ಕಾಲಾವಧಿಯಲ್ಲಿ ಸ್ತ್ರೀ ಶಿಕ್ಷಣದಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದಿತು. ಈ ರೀತಿಯಾಗಿ ಮಹಿಳೆಯರ ಶೈಕ್ಷಣಿಕ ಅವಕಾಶಗಳಿಂದ ಬ್ರಿಟಿಷರ್ ಕಾಲಾವಧಿಯಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಈ ರೀತಿಯಾಗಿದೆ.

**ಕೋಷ್ಟಕ ೪.೨ ಬ್ರಿಟಿಷ್ ಕಾಲಾವಧಿಯಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ**

| ವರ್ಷ | ಶೇಕಡವಾರು ಪ್ರಮಾಣ |
|---|---|
| ೧೯೦೧ | ೦.೯ |
| ೧೯೧೧ | ೧.೧ |
| ೧೯೨೧ | ೧.೮ |
| ೧೯೩೧ | ೨.೯ |
| ೧೯೪೧ | ೩.೪ |

ಆಧಾರ: ನ್ಯಾಷನಲ್ ಸ್ಯಾಂಪಲ್ ಸರ್ವೆ

ಈ ಮೇಲಿನ ಕೋಷ್ಟಕದಲ್ಲಿ ಹೇಳಿರುವಂತೆ ಬ್ರಿಟಿಷ್ ಕಾಲಾವಧಿಯಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣದಲ್ಲಿ ಆಗಿರುವ ಬದಲಾವಣೆಯನ್ನು ಕಾಣಬಹುದು.

ಮಹಿಳಾ ಶಿಕ್ಷಣದ ಅಭಿವೃದ್ಧಿಗಾಗಿ ಸಂಸ್ಥೆಗಳನ್ನು ಹುಟ್ಟುಹಾಕಿ ಬೆಳೆಸುವ ತಮ್ಮ ಪ್ರಯತ್ನಗಳಲ್ಲಿ ತೊಡಗಿದ ಮಹಿಳೆಯರಿಗೆ ತಮ್ಮ ಇತಿ-ಮಿತಿಗಳ ಅರಿವು ಕೂಡ ಮೂಡತೊಡಗಿತು. ೧೯ನೆಯ ಶತಮಾನದಲ್ಲಿ ಕಾಣುತ್ತಿದ್ದ ಗಡಿರೇಖೆಗಳು ವಿಸ್ತರಿಸತೊಡಗಿದವು. ಒಂದು ತಲೆಮಾರಿನವರ ವರ್ತನೆ ಪ್ರತ್ಯೇಕವೆಂದು ತೋರುತ್ತಿದ್ದುದ್ದು ಮುಂದಿನ ತಲೆಮಾರಿನ ವೇಳೆಗೆ ಸಹಜವರ್ತನೆ ಎಂದು ಒಪ್ಪಿತವಾಗತೊಡಗಿತು. ಇವೆಲ್ಲಕ್ಕೂ ಮುಖ್ಯವಾದ ವಿಷಯವೆಂದರೆ ೨೦ನೆಯ ಶತಮಾನದ ಆರಂಭದ ವೇಳೆಗಾಗಲೇ ಭಾರತೀಯ ಮಹಿಳೆಯರು ತಮ್ಮ ಭವಿಷ್ಯವನ್ನು ತಾವೇ ಸ್ವತಃ ಹೊಸದಾಗಿ ನಿರ್ವಹಿಸಲು ಸಮರ್ಥರಾಗತೊಡಗಿದ್ದರು.

**ಸ್ವಾತಂತ್ರ್ಯ ನಂತರದಲ್ಲಿ ಮಹಿಳಾ ಶಿಕ್ಷಣ :** ಸ್ವಾತಂತ್ರ್ಯಾನಂತರದಲ್ಲಿ ಮಹಿಳಾ ಶಿಕ್ಷಣಕ್ಕೆ ವಿಶೇಷವಾದ ಮಹತ್ವವನ್ನು ನೀಡಲಾಗಿದೆ. ಅಲ್ಲದೇ ಇದನ್ನು ರಾಷ್ಟ್ರೀಯ ಕಾರ್ಯಸೂಚಿ ಎಂದು ಪರಿಗಣಿಸಲಾಗಿದೆ. ಬ್ರಿಟಿಷ್ ಶಿಕ್ಷಣ ಪದ್ಧತಿಯಿಂದ ಉಂಟಾದ ಸಾಂಸ್ಕೃತಿಕ ಜೀವನದ ವಿಷಯವನ್ನು ದೂರಿಕರಿಸಿ ಭಾರತೀಯ ಜೀವನದ ಮೂಲಭೂತ ಮೌಲ್ಯಗಳನ್ನು ಪುನರ್ ಕಾರ್ಯರೂಪದಲ್ಲಿ ತಂದು ಭಾರತೀಯರು, ಭಾರತೀಯರೇ ಆಗಿ ಮುಂದುವರೆಯುವಂತೆ ಮಾಡುವುದಾಗಿತ್ತು. ರಾಜಕೀಯ ಸ್ವಾತಂತ್ರ್ಯದೊಂದಿಗೆ ಪ್ರವೇಶಪಡೆದ ಪ್ರಜಾಸತ್ತಾತ್ಮಕ ವಿಚಾರ ಪ್ರಜೆಗಳ ಹೊಣೆಗಾರಿಕೆ, ಪ್ರಜೆಗಳಲ್ಲಿರ ಬೇಕಾದ ಅನ್ಯೋನ್ಯತೆ, ಹಳ್ಳಿಗರ ಆರ್ಥಿಕ ಪುನರ್ ರಚನೆ, ಆಧುನಿಕ ಜೀವನದ ಸೌಲಭ್ಯಗಳ ಪರಿಜ್ಞಾನ, ನಾಗರಿಕ ಜೀವನದ ನಿರ್ವಹಣೆಗಾಗಿ ಬೇಕಾದ ಅವರ ಹಕ್ಕು ಬಾಧ್ಯತೆಗಳ ಅರಿವು ಸಮಾಜವಾದಿ, ಸಮಾಜ ರಚನೆಯ ಹೊಳವು, ಸಮಾಜದಲ್ಲಿ ನೆಲೆಸಬೇಕಾದ ಸರಿಸಮಾನತೆಯ ವಾಸ್ತವಿಕ ತಿಳುವಳಿಕೆ ಇವೆಲ್ಲವುಗಳನ್ನು ತಾಳ್ಮೆಯಿಂದ ಪರಿಶೀಲಿಸಲು ಬೇಕಾದ ವ್ಯಕ್ತಿಗತ ತಾರತಮ್ಯ

ಜ್ಞಾನ ಅದನ್ನು ಪೋಷಿಸಿ ಸಮರ್ಥಿಸಬಲ್ಲ ಶಾಸ್ತ್ರೀಯ ಶಿಕ್ಷಣ ನಿರ್ಧರಿಸಬೇಕಾಗಿತ್ತು. ಅದಕ್ಕಾಗಿ ಸ್ವಾತಂತ್ರ್ಯ ನಂತರ ಶೈಕ್ಷಣಿಕ ಅವಕಾಶಗಳನ್ನು ವಿಸ್ತೃತಗೊಳಸಲಾಯಿತು. ಸರ್ಕಾರ ಹಲವಾರು ಯೋಜನೆಗಳ ಬದಲಾವಣೆಯನ್ನು ತರಲು ಪ್ರಯತ್ನಿಸಿತು. ವಿಶ್ವವಿದ್ಯಾಲಯ ಶಿಕ್ಷಣ ಆಯೋಗವು ೧೯೪೮ರಲ್ಲಿ ಸ್ತ್ರೀಯರ ಶಿಕ್ಷಣದ ಅಗತ್ಯಗಳನ್ನು ಒತ್ತಿ ಹೇಳಿತು. ಸ್ತ್ರೀಯರು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಲ್ಲಿ ತಮ್ಮ ಪಾತ್ರವನ್ನು ನಿರ್ವಹಿಸಬೇಕೆಂದು ಕರೆ ನೀಡಿದಲ್ಲದೆ ಪ್ರಾಥಮಿಕ ಶಿಕ್ಷಣ ಮತ್ತು ವಯಸ್ಕರ ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ನೀಡಲಾಯಿತು.

೧೯೬೨ರ ರಾಷ್ಟ್ರೀಯ ಶಿಕ್ಷಣ ನೀತಿ ಹಾಗೂ ೧೯೬೮ರ ಶಿಕ್ಷಣ ಆಯೋಗವು ಸಹ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಿತು. ಭಕ್ತವತ್ಸಲ ಸಮಿತಿ ೧೯೬೪ ಮತ್ತು ಕೊಠಾರಿ ಶಿಕ್ಷಣ ಆಯೋಗ ೧೯೬೬ರ ವರದಿಗಳಲ್ಲಿ ಪ್ರಗತಿ ಉಂಟಾಗಿಲ್ಲ, ನಿರೀಕ್ಷಿತ ಮಟ್ಟವನ್ನು ಕಾರ್ಯಕ್ರಮಗಳು ತಲುಪಿಲ್ಲ ಹಾಗೂ ಗಮನಾರ್ಹ ಬದಲಾವಣೆಗಳು ತಂದಿಲ್ಲ ಎಂಬುದನ್ನು ಸ್ಪಷ್ಟಪಡಿಸಿವುದರ ಜೊತೆಗೆ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗೆ ಹೆಚ್ಚಿನ ಮಹತ್ವವನ್ನು ನೀಡಿದೆ.

ಹೀಗೆ ಶಿಕ್ಷಣಕ್ಕೆ ಪ್ರಾತಿನಿಧ್ಯ ನೀಡಿದರು ಹಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೂ ಸಹ ೧೯೫೧ರಲ್ಲಿ ಶೇ. ೭.೯ ಮತ್ತು ೧೯೬೧ರಲ್ಲಿ ಶೇ. ೧೨.೮ರಷ್ಟು ಸಾಕ್ಷರತೆಯ ಪ್ರಮಾಣವನ್ನು ಕಾಣಬಹುದು. ಹೆಣ್ಣುಮಕ್ಕಳ ಶಿಕ್ಷಣಕ್ಕೆ ವಿಶೇಷವಾದ ಒತ್ತನ್ನು ನೀಡಿದ ವರದಿಗಳು, ಕಾಲದಿಂದ ಕಾಲಕ್ಕೆ ರೂಪಿಸಲ್ಪಟ್ಟ ಕಾರ್ಯಕ್ರಮಗಳು ನಿರೀಕ್ಷಿತ ಮಟ್ಟದಲ್ಲಿ ಮಹಿಳೆಯರ ಬದುಕಿನಲ್ಲಿ ಗಮನಾರ್ಹವಾದ ಬದಲಾವಣೆಗಳನ್ನು ತಂದಿಲ್ಲ ಎಂಬುದನ್ನು ಸ್ಪಷ್ಟಪಡಿಸಬಹುದು. ಸ್ತ್ರೀ ಸಾಕ್ಷರತೆಯ ಪ್ರಮಾಣದಲ್ಲಿ ರಾಜ್ಯವಾರು ವ್ಯತ್ಯಾಸಗಳಿರುವುದಷ್ಟೇ ಅಲ್ಲ, ಗ್ರಾಮ ನಗರಗಳ ನಡುವೆಯೂ ವ್ಯತ್ಯಾಸ ಸ್ಪಷ್ಟವಾಗಿ ಕಾಣುತ್ತದೆ. ನಗರ ಪ್ರದೇಶದಲ್ಲಿ ಸ್ತ್ರೀ ಸಾಕ್ಷರತೆಯ ಪ್ರಮಾಣ ಶೇ. ೬೫.೬೭ರಷ್ಟಿದ್ದರೆ ಗ್ರಾಮೀಣ ಪ್ರದೇಶಗಳಲ್ಲಿ ಈ ಪ್ರಮಾಣ ಶೇ. ೨೦.೫೮ರಷ್ಟು ಮಾತ್ರವಿದೆ. ನಗರ ಪ್ರದೇಶಗಳಲ್ಲಿಯೂ ಕೂಡ ಸ್ತ್ರೀ ಸಾಕ್ಷರತೆ ಅಥವಾ ಹೆಣ್ಣುಮಕ್ಕಳ ಶಾಲಾ ದಾಖಲಾತಿಯ ಪ್ರಮಾಣ ಏಕರೂಪವಾಗಿಲ್ಲ. ಒಂದು ಆರ್ಥಿಕ ವರ್ಗದಿಂದ ಮತ್ತೊಂದು ಆರ್ಥಿಕ ವರ್ಗಕ್ಕೆ ಒಂದು ಪ್ರವೇಶದಿಂದ ಮತ್ತೊಂದು ಪ್ರವೇಶಕ್ಕೆ ಭಿನ್ನತೆ ಕಂಡುಬರುತ್ತದೆ.

ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರು ಸರಿಸುಮಾರು ಅರ್ಧದಷ್ಟಿದ್ದಾರೆ. ಸ್ತ್ರೀ ಪುರುಷರ ಶಿಕ್ಷಣದ ನಡುವೆ ಸಾಕಷ್ಟು ಅಂತರವಿದೆ. ಈ ಮುಂದೆ ನೀಡಲಿರುವ ಕೋಷ್ಟಕದಿಂದ ಇದನ್ನು ಅರ್ಥೈಸಬಹುದು.

**ಕೋಷ್ಟಕ ೪.೩ ಭಾರತದಲ್ಲಿ ಮಹಿಳೆಯರ ಮತ್ತು ಪುರುಷರ ಶೇಕಡವಾರು ಸಾಕ್ಷರತಾ ಪ್ರಮಾಣ**

| ವರ್ಷ | ಪುರುಷ | ಮಹಿಳೆ | ದೇಶದ ಒಟ್ಟು ಸಾಕ್ಷರತಾ ಪ್ರಮಾಣ |
|---|---|---|---|
| ೧೯೫೧ | ೨೭.೧೬ | ೮.೮೬ | ೧೮.೩೩ |
| ೧೯೬೧ | ೪೦.೪೦ | ೧೫.೩೪ | ೨೮.೩೧ |
| ೧೯೭೧ | ೪೫.೬೫ | ೨೧.೬೭ | ೩೪.೪೫ |
| ೧೯೮೧ | ೫೩.೪೫ | ೨೮.೪೬ | ೪೪.೪೭ |
| ೧೯೯೧ | ೬೪.೧೩ | ೩೯.೨೯ | ೫೨.೨೧ |
| ೨೦೦೧ | ೭೫.೮೫ | ೫೪.೧೬ | ೬೫.೩೮ |

ಆಧಾರ: ೨೦೦೧ರ ಜನಗಣತಿ ಪು. ೨೫೧

ಈ ಕೋಷ್ಟಕದ ಮೂಲಕ ಪುರುಷ ಮತ್ತು ಮಹಿಳಾ ಸಾಕ್ಷರತೆಯ ಪ್ರಮಾಣದಲ್ಲಿ ವ್ಯತ್ಯಾಸವನ್ನು ಕಾಣಬಹುದು. ಅದಕ್ಕಾಗಿ ಮಹಿಳಾ ಶಿಕ್ಷಣದಲ್ಲಿ ಏಕರೂಪತೆ ಮತ್ತು ಸಮರೂಪತೆ ಎನ್ನುವುದು ಬೇಕು. ಇದಕ್ಕಾಗಿ ಮಹಿಳಾ ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸುವುದಕ್ಕೆ ೧೯೮೬ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ವ್ಯವಸ್ಥಿತವಾದ ಕಾರ್ಯಕ್ರಮವನ್ನು ರೂಪಿಸಿ ಮಹಿಳೆಯರ ಸ್ಥಾನದಲ್ಲಿ ಮೂಲಭೂತ ಬದಲಾವಣೆಗಳನ್ನು ತರುವತ್ತಾ ನಿರ್ದೇಶಿಸಿ ಆ ದಿಶೆಯಲ್ಲಿ ಶಿಕ್ಷಣ ಸಂಸ್ಥೆಗಳಿಗೆ ಕಾರ್ಯ ಪ್ರವೃತ್ತರಾಗಲು ಸೂಚಿಸಿತು. ಅವುಗಳು ಪ್ರಮುಖವಾದವುಗಳೆಂದರೆ,

೧. ಶಿಕ್ಷಣವು ಮಹಿಳೆಯರ ಸಶಕ್ತಿಕರಣ ಪ್ರಯತ್ನಗಳಲ್ಲಿ ಸಕ್ರಿಯವಾಗಿ ತನ್ನನ್ನು ತೊಡಗಿಸಿಕೊಳ್ಳುವಂಥ ವ್ಯವಸ್ಥೆಯಾಗಿ ರೂಪುಗೊಳ್ಳಬೇಕು.

೨. ಪಠ್ಯಕ್ರಮಗಳನ್ನು ಲಿಂಗಪೂರ್ವ ಗ್ರಹಗಳಿಂದ ವಿಮುಕ್ತಿಗೊಳಿಸಿ ಸಮಾಜದಲ್ಲಿ ಹೊಸ ಮೌಲ್ಯಗಳನ್ನು ಸೃಷ್ಟಿಸುವಂತಹ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳ ತಯಾರಿಕೆಗೆ ಗಮನಹರಿಸಬೇಕು.

೩. ವಿವಿಧ ಕೋರ್ಸ್‌ಗಳಲ್ಲಿ ಮಹಿಳಾ ಅಧ್ಯಯನವನ್ನು ಪಠ್ಯಕ್ರಮದ ಅಂಗವನ್ನಾಗಿ ರೂಪಿಸಬೇಕು.

ರಾಷ್ಟ್ರೀಯ ಶಿಕ್ಷಣ ನೀತಿಯು ಜಾರಿಗೆ ಬಂದ ನಂತರ ಮಹಿಳೆಯರನ್ನು ಕುರಿತಂತೆ ಶಿಕ್ಷಣ ವ್ಯವಸ್ಥೆ ತಳೆದಿದ್ದ ನಿಲುವುಗಳಲ್ಲಿ ಸ್ವಲ್ಪಮಟ್ಟಿನ ಬದಲಾವಣೆಗಳು ಗೋಚರವಾಗತೊಡಗಿದವು. ದೇಶಾದ್ಯಂತ ಕೆಲವು ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳ ಸ್ಥಾಪನೆಯಾಗಿದ್ದು ಕೂಡ ರಾಷ್ಟ್ರೀಯ ಶಿಕ್ಷಣ ನೀತಿಯ ಪ್ರಯತ್ನದಿಂದಲೇ ಎಂದು ಹೇಳಬಹುದು. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ತೆಗೆದುಕೊಂಡ ಮಹಿಳಾಪರ ಅಸಕ್ತಿಯ ಕಾರಣದಿಂದಾಗಿ ದೇಶಾದಾದ್ಯಂತ

ಮಹಿಳೆಯರಿಗೆ ಸಂಬಂಧಿಸಿದ ವಿಚಾರಗಳನ್ನು ಶಿಕ್ಷಣದ ಮುಖ್ಯವಾಹಿನಿಗೆ ತರಲು ಸಾಧ್ಯವಾಯಿತು ಎನ್ನುವುದು ಸತ್ಯವಾದರೂ ಶಿಕ್ಷಣ ನೀತಿಯಲ್ಲಿ ಅಡಕವಾಗಿದ್ದ ಎಲ್ಲಾ ವಿಚಾರಗಳಗೂ ಇಂದಿಗೂ ಪ್ರಾಮುಖ್ಯತೆ ದೊರೆತಿಲ್ಲ ಎನ್ನುವುದು ವಿಷಾದನೀಯ. ಪ್ರಸ್ತುತ ಸಂದರ್ಭದಲ್ಲಿ ಓನೆಯ ವಿಶ್ವದ ಮಹಿಳೆಯು ಮೊದಲು ತನ್ನನ್ನು ತಾನು ಅರಿತುಕೊಳ್ಳುವಂತಾಗಬೇಕು. ತನಗೆ ತಾನು ಸಹಾಯಕಳಾಗಬೇಕು. ಅನಂತರ ಇತರರಿಗೆ ತನ್ನನ್ನು ಸರಿಯಾಗಿ ಅರ್ಥಮಾಡಿಸಿಕೊಳ್ಳಬೇಕು. ಸಮುದಾಯ, ಸಮಾಜಕ್ಕೆ ಸದುಪಯೋಗವಾಗುವಂತೆ ನಡೆದುಕೊಳ್ಳಬೇಕು. ಇದು ಶಿಕ್ಷಣದಿಂದ ಸಾಧ್ಯವಾಗಬೇಕು. ಮೂರನೆಯ ವಿಶ್ವದ ದೇಶಗಳಲ್ಲಿ ವಾಸಿಸುವ ಮಹಿಳೆಯ ಸ್ಥಿತಿ ತೀರಾ ನಿರಾಶಾದಾಯಕವಾಗಿಲ್ಲದಿದ್ದರೂ ಗೌರವ ತರುವ ಸ್ಥಿತಿಯಲ್ಲಂತೂ ಇಲ್ಲ. ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ ಎಂಬ ಉಕ್ತಿಯು ಎಲ್ಲೆಲ್ಲೂ ಕಂಡುಬಂದರೂ ಕಲಿಯುದ ಹೆಣ್ಣಿನ ಗೋಳು ಒಂದಾದರೆ ಕಲಿತ ಹೆಣ್ಣಿನ ಸಂಕಟ ಇನ್ನು ಹಲವು ತೆರನಾಗಿರುವುದು ಕಂಡುಬರುತ್ತದೆ.

ಸ್ತ್ರೀ ಶಿಕ್ಷಣವನ್ನು ಕುರಿತು ನಮ್ಮ ಸರ್ಕಾರಿ ಯಂತ್ರದ ಕಲ್ಯಾಣಕಾರಿ ಕಾರ್ಯಕ್ರಮದಲ್ಲಿ ಮುಖ್ಯವಾಗಿ ಎರಡು ಬಗೆಯ ಕ್ರಿಯಾರೂಪ ಕಾಣದೊರೆಯುತ್ತದೆ. ಈ ಪ್ರಕ್ರಿಯೆಯಲ್ಲಿ ಕೊಡುವುದು ಒಂದಾದರೆ ಪಡೆದುಕೊಳ್ಳುವುದು ಇನ್ನೊಂದು ಆಗಿದೆ. ಶೈಕ್ಷಣಿಕ ವಲಯದ ಈ ಪ್ರಕ್ರಿಯೆಯಲ್ಲಿ ಕೊಡುವುದೆಲ್ಲ ಪುರುಷ ಪ್ರತಿನಿಧಿತ್ವವಾಗಿಯೂ ಪಡೆದುಕೊಳ್ಳುವುದೆಲ್ಲವೂ ಸ್ತ್ರೀ ಪ್ರತಿನಿಧಿತ್ವವಾಗಿ ಕಾಣಿಸಿಕೊಳ್ಳುತ್ತಿದೆ. ಭಾರತೀಯ ಸಂದರ್ಭದಲ್ಲಿ ಮಹಿಳಾ ಶಿಕ್ಷಣ ಬಗೆಗಿನ ಒಟ್ಟು ಪ್ರಕ್ರಿಯೆಗಳ ಹಿಂದೆ ಪಿತೃಪ್ರಧಾನ ವ್ಯವಸ್ಥೆಯ ಹಿಡಿತ ಬಲವಾಗಿದೆ. ಹೀಗಾಗಿ ವಸಾಹತು ಕಾಲಘಟ್ಟದಲ್ಲಿ ಸುಧಾರಣಾವಾದಿ ನಿಲುವುಗಳು ಹಾಗೂ ಇಂದು ದೇಶದ್ಯಾಂತ ಮಹಿಳೆಯರ ಸಶಕ್ತಿಕರಣ ಪ್ರಕ್ರಿಯೆ ನಡೆಯುತ್ತಿದೆ. ೨೦೦೧ನೇ ವರ್ಷವನ್ನು ಮಹಿಳಾ ಸಬಲೀಕರಣ ವರ್ಷವೆಂದು ಕೇಂದ್ರ ಸರ್ಕಾರವು ಘೋಷಣೆ ಮಾಡಿದೆ. ಮಹಿಳೆಯರ ಆರ್ಥಿಕ, ಸಾಮಾಜಿಕ, ರಾಜಕೀಯ ಅಭ್ಯುದಯದ ಕಾರ್ಯಗಳನ್ನು ಅನುಷ್ಠಾನಕ್ಕೆ ತರಲಾಗುತ್ತಿದೆ. ಇನ್ನೊಂದೆಡೆ ಮಹಿಳೆಯರ ಆರ್ಥಿಕ, ಸಾಮಾಜಿಕ ಸ್ವಾವಲಂಬನೆಗೆ ಸ್ವಸಹಾಯ ಗುಂಪುಗಳ ರಚನೆ ಸಂಘಟನೆಯಾಗುತ್ತಿವೆ. ನಗರ ಪ್ರದೇಶದಲ್ಲಿ ಮಹಿಳಾ ಚಳುವಳಗಳು ಚುರುಕಾಗುತ್ತಿವೆ. ವಿಶ್ವವಿದ್ಯಾನಿಲಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳು, ಮಹಿಳಾ ಅಧ್ಯಯನಗಳನ್ನು ತೆರೆಯಲಾಗುತ್ತಿವೆ. ವಸಾಹತ್ತೋತ್ತರ ಕಾಲದ ಸರ್ಕಾರಿ ಯೋಜನೆಗಳಲೆಲ್ಲ ಈ ಮೇಲಿನ ಪ್ರಮೇಯವೇ ಕಾರ್ಯಪ್ರವೃತ್ತವಾದದ್ದರ ಪರಿಣಾಮವಾಗಿ ಮಹಿಳೆಯು ಕೇವಲ ರೀಸಿವರ್ ಆಗಿ ಕಲ್ಪಿತವಾಗಿದ್ದಾಳೆ. ಈ ಕಾರಣಗಳಿಂದ ಶೈಕ್ಷಣಿಕ ಸಬಲೀಕರಣದ ಪ್ರಶ್ನೆ ಇನ್ನೂ ಕಗ್ಗಂಟಾಗಿಯೇ ಉಳಿಯುವಂತಾಗಿದೆ. ಶಿಕ್ಷಣವು ಒಂದು ಸಾಮಾಜಿಕ ಬದಲಾವಣೆಯ ನಿಯೋಗವಾಗಿದೆ. ಇದು ಸಾಮಾಜಿಕ ಚಲನೆಯ ವಾಹಕವಾಗಿದ್ದು ಮೇಲ್ಮುಖ ಚಲನೆಗೆ ಅನುವು ಮಾಡಿಕೊಡುತ್ತದೆ. ಶಿಕ್ಷಣವು ಮಹಿಳೆಯ ಅಂತಸ್ತಿನ ನಿರ್ಧಾರದ ಅಂಶವಾಗಿದೆ. ಒಂದು ಸಮುದಾಯದ ಸರ್ವತೋಮುಖ ಅಭಿವೃದ್ಧಿಯು ಶಿಕ್ಷಣವನ್ನು ಅವಲಂಬಿಸಿದೆ. ಶಿಕ್ಷಣವಿಲ್ಲದ ಒಂದು ಸಮುದಾಯ ಆ ಸಮುದಾಯದ ಪುರುಷ ಅಥವಾ ಮಹಿಳೆಯೇ ಆಗಲಿ ಉನ್ನತಿಯಾಗಲು ಸಾಧ್ಯವಿಲ್ಲ.

ಮಹಿಳೆಯ ಮತ್ತು ಸಮಾಜದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣವಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ವ್ಯಕ್ತಿ ಸಮಾಜದಲ್ಲಿ ಮತ್ತು ಮುಖ್ಯವಾಹಿನಿಯಲ್ಲಿ ಮಿಳಿತಬೇಕಾದರೆ ಶಿಕ್ಷಣ ಅಗತ್ಯವಾಗಿದೆ.

**ಕೋಷ್ಟಕ ೪.೪ ಕರ್ನಾಟಕದಲ್ಲಿ ಮಹಿಳಾ ಶಿಕ್ಷಣ ಪ್ರಮಾಣ**

| ಜಿಲ್ಲೆಗಳು | ಒಟ್ಟು | ನಗರ | ಗ್ರಾಮೀಣ | ಬುಡಕಟ್ಟು | ಎಸ್.ಸಿ. |
|---|---|---|---|---|---|
| ಬೆಂಗಳೂರು | ೭೭.೪೮ | ೭೯.೭೦ | ೬೦.೭೮ | ೬೪.೮ | ೬೧.೮ |
| ಬೆಂಗಳೂರು ಗ್ರಾಮೀಣ | ೫೪.೯೯ | ೬೯.೯೭ | ೫೦.೯೫ | ೪೬ | ೪೪.೫೬ |
| ಕೋಲಾರ | ೫೨.೨೩ | ೭೪.೨೭ | ೪೪.೯೯ | ೩೬.೨ | ೪೨.೦೯ |
| ತುಮಕೂರು | ೫೬.೯೪ | ೭೬.೩೫ | ೫೨.೨೯ | ೪೮.೭೦ | ೪೩.೩೯ |
| ಶಿವಮೊಗ್ಗ | ೬೬.೮೮ | ೭೮.೫೦ | ೬೦.೬೬ | ೫೨.೫ | ೪೬.೪೦ |
| ಚಿತ್ರದುರ್ಗ | ೫೩.೭೮ | ೭೪.೭೪ | ೪೯.೧೨ | ೪೧.೫ | ೪೦.೯೨ |
| ದಾವಣಗೆರೆ | ೫೮.೦೪ | ೭೧.೮೯ | ೫೨.೦೨ | ೪೩ | ೩೮.೧೬ |
| ಮೈಸೂರು | ೫೫.೮೧ | ೭೮.೧೨ | ೪೨.೩೧ | ೩೭.೫ | ೪೫.೫೨ |
| ಚಾಮರಾಜನಗರ | ೪೨.೪೮ | ೬೩.೮೬ | ೩೮.೫೯ | ೩೨.೮ | ೪೨.೨೨ |
| ಮಂಡ್ಯ | ೫೧.೫೩ | ೭೨.೨೬ | ೪೭.೬೫ | ೪೫.೪ | ೪೬.೨೫ |
| ಹಾಸನ | ೫೯.೦೦ | ೭೯.೩೫ | ೫೪.೭೨ | ೪೫.೬ | ೪೩.೧೪ |
| ಚಿಕ್ಕಮಗಳೂರು | ೬೪.೦೧ | ೭೭.೭೮ | ೬೦.೭೦ | ೪೯.೪ | ೫೫.೭೬ |
| ಕೊಡಗು | ೭೨.೨೬ | ೮೬.೧೧ | ೭೦.೧೦ | ೩೪.೬ | ೫೬.೫೬ |
| ದಕ್ಷಿಣ ಕನ್ನಡ | ೭೭.೨೧ | ೮೪.೪೭ | ೭೨.೬೯ | ೬೫.೭ | ೫೮.೩೬ |
| ಉಡುಪಿ | ೭೫.೧೯ | ೮೫.೩೧ | ೭೨.೯೭ | ೨೯.೫ | ೬೨.೧೮ |
| ಬೆಳಗಾವಿ | ೫೨.೩೨ | ೭೨.೫೩ | ೪೫.೮೦ | — | ೪೧.೬೩ |
| ಬಿಜಾಪುರ | ೪೩.೪೭ | ೬೪.೮೯ | ೩೭.೩೨ | ೩೧.೯ | ೩೧.೯೫ |
| ಬಾಗಲಕೋಟೆ | ೪೩.೫೬ | ೬೦.೮೭ | ೩೬.೩೩ | ೨೮.೫ | ೨೮.೭೫ |
| ಧಾರವಾಡ | ೬೧.೯೨ | ೭೩.೨೮ | ೪೭.೭೦ | ೪೨.೦ | ೪೯.೨೬ |
| ಗದಗ | ೫೨.೫೨ | ೬೩.೮೮ | ೪೬.೨೮ | ೪೨.೧ | ೩೩.೬೯ |
| ಹಾವೇರಿ | ೫೭.೩೭ | ೬೮.೧೭ | ೫೪.೫೨ | ೪೫.೨ | ೩೬.೯೪ |

| | | | | | |
|---|---|---|---|---|---|
| ಉತ್ತರ ಕನ್ನಡ | ೬೮.೪೭ | ೮೦.೫೯ | ೬೩.೫೨ | ೫೩.೬ | ೫೫.೫೫ |
| ಗುಲಬರ್ಗಾ | ೩೭.೯೦ | ೬೦.೪೯ | ೨೯.೪೩ | ೨೦.೮ | ೨೭.೦೨ |
| ಬಳ್ಳಾರಿ | ೪೫.೨೮ | ೬೦.೬೯ | ೩೬.೮೨ | ೨೮.೮ | ೨೭.೦೨ |
| ರಾಯಚೂರು | ೩೫.೯೩ | ೫೬.೫೪ | ೨೮.೮೬ | ೧೬.೯ | ೨೬.೦೯ |
| ಕೊಪ್ಪಳ | ೩೯.೬೧ | ೫೮.೩೪ | ೩೫.೮೧ | ೨೬.೫ | ೨೫.೬೨ |
| ಬೀದರ | ೪೮.೮೧ | ೬೬.೪೭ | ೪೩.೬೪ | ೧೬.೯ | ೪೦.೨೨ |
| ಕರ್ನಾಟಕ | ೫೭.೯೦ | ೭೪.೧೩ | ೪೮.೦೧ | ೩೬ | ೪೧.೭೨ |

ಕರ್ನಾಟಕವು ಶಿಕ್ಷಣ ಕ್ಷೇತ್ರದಲ್ಲಿ ಮೇಲೆ ಚರ್ಚಿಸಲಾದ ಎಲ್ಲ ಸಮಸ್ಯೆಗಳ ಮಧ್ಯದಲ್ಲಿಯೂ ಗಣನೀಯ ಸಾಧನೆ ಮಾಡುತ್ತಿದೆ. ಸಾಧನೆ ಮಾಡಿರುವುದಾದರೂ ಸ್ತ್ರೀ ಪುರುಷರ ಮತ್ತು ಗ್ರಾಮ, ನಗರ ಪ್ರದೇಶಗಳ ನಡುವೆ ಶಿಕ್ಷಣದ ಅಸಮಾನತೆಯನ್ನು ಕಾಣಬಹುದಾಗಿದೆ. ಅಲ್ಲದೆ ಮಹಿಳಾ ಸಾಕ್ಷರತೆ ಪ್ರಮಾಣದಲ್ಲಿ ಅಸಮಾನತೆಗಳು ಮುಂದುವರೆಯುತ್ತಿರುವುದು ಕಂಡುಬರುತ್ತದೆ. ಮಹಿಳಾ ಶಿಕ್ಷಣಕ್ಕೆ ಇಷ್ಟು ಪ್ರಾಮುಖ್ಯತೆ ಹಾಗೂ ಪ್ರಾತಿನಿಧ್ಯ ಕೊಡುತ್ತಬಂದರೂ ಸಹ ಮಹಿಳಾ ಶಿಕ್ಷಣದ ಪ್ರಮಾಣ ನಿರೀಕ್ಷಿತ ಮಟ್ಟವನ್ನು ತಲುಪಲು ಸಾಧ್ಯವಾಗಿಲ್ಲ ಏಕೆ ಅದಕ್ಕಿರುವ ಸಮಸ್ಯೆಗಳೇನು ಕಾರಣಗಳೇನು ಹುಡುಕುತ್ತಾ ಹೊರಟರೆ ಕೆಲವು ಅಂಶಗಳನ್ನು ಕಾಣಬಹುದು. ಅವುಯಾವುವೆಂದರೆ

೧. ಸಾಂಪ್ರದಾಯಿಕ ಶಿಕ್ಷಣವನ್ನು ಸಾಮಾಜಿಕ ಸ್ಥಿತ್ಯಂತರ ಒಂದು ಘಟ್ಟದಲ್ಲಿ ನಿಲ್ಲಿಸಲಾಯಿತು.

೨. ಅನುವಂಶಿಕವಾಗಿ ಶಿಕ್ಷಣದ ಜೊತೆಗೆ ಸ್ತ್ರೀಯರನ್ನು ಹೊರಗಿರಿಸಲಾಯಿತು.

೩. ಸಾಮಾಜಿಕ ಪಿಡುಗುಗಳಿಂದ ಶಾಲಾ ಪ್ರವೇಶವನ್ನೇ ನಿರಾಕರಿಸುವುದು.

೪. ಕೌಟುಂಬಿಕ ಸಮಸ್ಯೆ, ಆರ್ಥಿಕ ಸಮಸ್ಯೆ, ರಾಜಕೀಯ ಸಮಸ್ಯೆ ಈ ಎಲ್ಲಾ ಸಮಸ್ಯೆಗಳಿಂದ ಮಹಿಳೆಯರಿಗೆ ಸಿಗುವ ಶಿಕ್ಷಣ ಸಿಗುತ್ತಿಲ್ಲ ಎನ್ನಬಹುದು.

ಇಂದು ಸಾಕಷ್ಟು ಮುಂದುರೆದ ಸಮಾಜದಲ್ಲೇ ಕೇವಲ ಸಂಖ್ಯಾತ್ಮಕ ಹೆಚ್ಚಳದಿಂದ ಮಹಿಳಾ ಸ್ಥಿತಿಗತಿಗಳಲ್ಲಿ ಗಮನಾರ್ಹವಾದ ಬದಲಾವಣೆಗಳು ಆಗುವುದಿಲ್ಲ. ಯಾವ ಯಾವ ಮೂಲಭೂತ ಸೌಕರ್ಯಗಳ ಜೊತೆಗೆ ಕಲಿಕೆಯಲ್ಲಿ ತೊಡಗಲು ಯಾವ ಬಗೆಯ ವಾತಾವರಣವನ್ನು ಸೃಷ್ಟಿಸಬೇಕು ಎನ್ನುವ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರವನ್ನು ಹುಡುಕಬೇಕಾಗಿದೆ.

ಇನ್ನೂ ನಾಗರಿಕ ಪ್ರಪಂಚದಿಂದ ದೂರವಿದ್ದು ಅರಣ್ಯದಲ್ಲಿ ವಾಸಮಾಡುವ ಗೌಳಿಗ ಸಮುದಾಯದ ಹಾಡಿಯೊಳಗೆ ನಡೆದಾಡಿದರೆ ರಾಜ್ಯದ ಗೌಳಿ ಸಮುದಾಯವು ಶಿಕ್ಷಣ ರಂಗದಲ್ಲಿ ಮತ್ತು ಸಾಕ್ಷರತೆಯಲ್ಲಿ ಅತ್ಯಂತ ಹಿಂದುಳಿದಿದೆ. ಇವರ ಸಾಕ್ಷರತೆ ಶೇ. ೧೦ಕ್ಕಿಂತಲೂ ಕಡಿಮೆ ಮತ್ತು ರಾಜ್ಯದ ಸರಾಸರಿ ಸಾಕ್ಷರತೆಗಿಂತ ಅತ್ಯಂತ ಕಡಿಮೆ ಇದೆ. ಅರಣ್ಯ ಪ್ರದೇಶದಲ್ಲಿ ನೂರಕ್ಕೆ

ವಾಸಿಸುವ ಈ ಸಮುದಾಯದವರು ತೊಂಬತ್ತರಷ್ಟು ಅನಕ್ಷರಸ್ಥರು. ಇತ್ತೀಚೆಗೆ ರಾಜ್ಯದ ಸಾಮೂಹಿಕ ಸಾಕ್ಷರತಾ ಅಂದೋಲನದ ಪ್ರಭಾವದಿಂದಾಗಿ ಅಕ್ಷರಸ್ಥರಾಗುತ್ತಿದ್ದಾರೆ. ಔಪಚಾರಿಕ, ಆಧುನಿಕ ಶಿಕ್ಷಣ ಅಂದರೆ ಶಾಲಾ ಶಿಕ್ಷಣ ಗೌಳಿಗ ಸಮುದಾಯಕ್ಕೆ ಅತ್ಯಂತ ಹೊಸದು ಮತ್ತು ಇತ್ತೀಚಿನದು. ಹಿಂದೆ ಮಕ್ಕಳು ತಮ್ಮ ತಂದೆ ತಾಯಿ ಮತ್ತು ಕುಟುಂಬದ ಸದಸ್ಯರಿಂದ ಅನೌಪಚಾರಿಕ ಶಿಕ್ಷಣವನ್ನು ಕೆಲಸ ಕಾರ್ಯಗಳ ಮೂಲಕ ಪಡೆಯುತ್ತಿದ್ದರು. ಅಂದರೆ ದನಗಳನ್ನು ಮೇಯಿಸುವುದು, ಸಾಕುವುದು, ಕೃಷಿ ಕೆಲಸ ಹೀಗೆ ಎಂಬುದರ ಬಗ್ಗೆ ತಮ್ಮ ಕುಟುಂಬದ ಸದಸ್ಯರಿಂದಲೇ ಅನೌಪಚಾರಿಕ ಶಿಕ್ಷಣವನ್ನು ಪಡೆಯುತ್ತಿದ್ದರು. ನಲವತ್ತು ವರ್ಷದ ಮೇಲ್ಪಟ್ಟಿರುವವರಲ್ಲಿ ಔಪಚಾರಿಕ ಶಿಕ್ಷಣ ಎನ್ನುವುದಿಲ್ಲ.

ಆಧುನಿಕ ಬ್ರಿಟಿಷ್ ಔಪಚಾರಿಕ ಶಿಕ್ಷಣ ಜಾರಿಗೆ ಬಂದಮೇಲೆ ರಾಜ್ಯದ ಬೇರೆ ಬೇರೆ ಸಮುದಾಯಗಳು ಅವರವರ ಅರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಿಗೆ ತಕ್ಕಂತೆ ಶಿಕ್ಷಣವನ್ನು ಪಡೆದರು. ಅದರೆ ಗೌಳಿಗ ಸಮುದಾಯದವರಿಗೆ ಔಪಚಾರಿಕ ಶಿಕ್ಷಣದ ಅವಕಾಶ ಸಿಗಲಿಲ್ಲ. ಕಾರಣ ಇವರು ಅರಣ್ಯದಲ್ಲಿ ವಾಸಮಾಡುವುದು ಮತ್ತು ಅತೀ ಹಿಂದುಳಿದಿರುವಿಕೆಗೆ ಇದು ಇವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವ ಅಸಕ್ತಿಯನ್ನೇ ಕಡಿಮೆ ಮಾಡಿದೆ. ಈ ಸಮುದಾಯದ ಬಹುತೇಕ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದೆ ದನ ಕುರಿಗಳನ್ನು ಮೇಯಿಸಲು ಕಳುಹಿಸುತ್ತಾರೆ. ಯಾರಾದರೂ ಮಕ್ಕಳನ್ನು ಏಕೆ ಶಾಲೆಗೆ ಕಳುಹಿಸುವುದಿಲ್ಲ? ಎಂದು ಕೇಳಿದರೆ ಕಲಿತು ಏನು ಉದ್ಧಾರವಾಗಬೇಕಾಗಿದೆ? ಎನ್ನುತ್ತಾರೆ. ಇದಕ್ಕೆ ಅತ್ಯಂತ ಬಲವಾದ ಕಾರಣವೆಂದರೆ ಇವರು ಪ್ರತ್ಯೇಕವಾಗಿ ಹಟ್ಟಿಗಳಲ್ಲಿ ವಾಸಿಸುವುದರಿಂದ ಈ ಹಟ್ಟಿಗಳಲ್ಲಿ ಶಿಕ್ಷಣದ ಅರಿವು ಮತ್ತು ಶಾಲಾ ಸೌಲಭ್ಯಗಳಿರುವುದಿಲ್ಲ. ಒಂದುವೇಳೆ ಈ ಹಾಡಿಯಲ್ಲಿರುವ ಮಕ್ಕಳು ಶಾಲೆಗೆ ಹೋಗಬೇಕಾದರೆ ಹಾಡಿಯಿಂದ ಬಹುದೂರ ಹೋಗಿ ಕಲಿಯಬೇಕಾಗಿತ್ತು. ಆದರೆ ಈಗ ಬದಲಾವಣೆ ಆಗಿವೆ. ಹಾಡಿಯ ಹತ್ತಿರವೇ ಶಾಲೆಗಳು ಇವೆ. ಹಾಡಿಯಲ್ಲಿರುವ ಸಾಮಾಜಿಕ ಪರಿಸರವನ್ನು ನೋಡಿದರೆ ಗೌಳಿಗರ ಹಾಡಿಗಳು ಮೂಲ ಅಗತ್ಯ ನಾಗರೀಕ ಸೌಲಭ್ಯಗಳಿಲ್ಲದೆ ಕೊಳಗೇರಿಗಳಂತಾಗಿವೆ. ಇಂತಹ ಪರಿಸರದಲ್ಲಿ ಜನಿಸಿದ ಮಕ್ಕಳಿಗೆ ಎಂತಹ ಶಿಕ್ಷಣ ಸಿಕ್ಕೀತು? ಶಿಕ್ಷಣ ಕಲಿಯುವ ಮನಸ್ಸು ಮತ್ತು ಪ್ರೋತ್ಸಾಹ ಹಾಗೂ ಸ್ಫೂರ್ತಿ ಎನ್ನುವುದು ಹೇಗೆ ಬರುತ್ತವೆ? ಇತ್ತೀಚೆಗೆ ಕೆಲವು ಮತ್ತು ರಾಜ್ಯ ಸರ್ಕಾರಗಳ ಶಿಕ್ಷಣದ ಘೋಷಣೆಗಳಾದ ೧೪ ವರ್ಷದ ವರೆಗಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಪರಿಣಾಮದಿಂದಾಗಿ ಮತ್ತು ರಾಜ್ಯಸರ್ಕಾರದ ಪ್ರಾಥಮಿಕ ಶಿಕ್ಷಣಕ್ಕೆ ಕೊಡುತ್ತಿರುವ ಹಲವು ಉತ್ತೇಜನಗಳಿಂದಾಗಿ ಗೌಳಿಗ ಸಮುದಾಯದ ಮಕ್ಕಳು ಈಗೀಗ ಶಾಲೆಗೆ ಹೋಗಲು ಪ್ರಾರಂಭಿಸಿದ್ದಾರೆ. ಜೊತೆಗೆ ಇಂದು ಬಹುತೇಕ ಗೌಳಿಗ ಹಾಡಿಗಳಲ್ಲಿ ಕೊನೆಪಕ್ಷ ಒಂದು ಪ್ರಾಥಮಿಕ ಶಾಲೆಯನ್ನು ಸ್ಥಾಪಿಸುತ್ತಿರುವುದನ್ನು ಕಾಣಬಹುದು. ಇದು ಈಗಿನ ಪೀಳಿಗೆಯ ಮಕ್ಕಳಿಗೆ ವರದಾನವಾಗಬಹುದು. ಅದರೆ ಈ ಸಮುದಾಯದ ಬಹುತೇಕ ವಯಸ್ಕರು ಮತ್ತು ಯುವಕರು, ಮಹಿಳೆಯರು ಅನಕ್ಷರಸ್ಥರು ಮತ್ತು ಔಪಚಾರಿಕ ಶಿಕ್ಷಣದಿಂದ ವಂಚಿತರಾದವರು.

ಒಟ್ಟಾರೆ ಜನರ ಶಿಕ್ಷಣದ ಹಿನ್ನೆಲೆ ಹೀಗಿರುವಾಗ ಈ ಸಮುದಾಯದ ಮಹಿಳೆಯರ ಶಿಕ್ಷಣದ ಬಗ್ಗೆ ಮಾತನಾಡುವ ಹಾಗೆ ಇಲ್ಲ. ಇವರಲ್ಲಿ ೧೦೦ಕ್ಕೆ ೯೫ರಷ್ಟು ಮಹಿಳೆಯರು ಅನಕ್ಷರಸ್ಥರು ಮತ್ತು ಅವಿದ್ಯಾವಂತರು. ಪೂರ್ತಿ ಪ್ರಾಥಮಿಕ ಶಿಕ್ಷಣವನ್ನು ಯಾರೂ ಮುಗಿಸಿರುವುದಿಲ್ಲ. ಅಷ್ಟರಮಟ್ಟಿಗೆ ಗೌಳಿಗ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಗೌಳಿಗ ಸಮುದಾಯದ ಮಹಿಳೆಯು ಅತ್ಯಂತ ನಿರ್ಲಕ್ಷಿತ ಮಹಿಳೆಯಾಗಿದ್ದಾಳೆ ಎಂದರೆ ತಪ್ಪಾಗಲಾರದು. ಗೌಳಿಗ ಸಮುದಾಯದ ಮಹಿಳೆಯರ ಸಾಮಾಜಿಕ ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳು ತುಂಬಾ ಶೋಚನೀಯವಾಗಿವೆ. ಶಿಕ್ಷಣದ ಹಿಂದುಳಿದಿರುವಿಕೆ ಇವರನ್ನು ಇನ್ನೂ ಹಿಂದುಳಿದವರನ್ನಾಗಿ ಮಾಡಿದೆ. ರಾಜ್ಯದ ಮೊದಲನೇ ಹಿಂದುಳಿದ ವರ್ಗಗಳ (ಹಾವನೂರು ಆಯೋಗ) ಆಯೋಗದ ವರದಿಯ ಪ್ರಕಾರ ರಾಜ್ಯದ ಗೌಳಿಗ ಸಮುದಾಯದಲ್ಲಿ ಅಕ್ಷರಸ್ಥರ ಸಂಖ್ಯೆ ಶೇ. ೨.೫೭ರಷ್ಟಿದ್ದು, ೭ನೇ ತರಗತಿ ಒಳಗೆ ಶಾಲೆಯನ್ನು ಮಧ್ಯಕ್ಕೆ ಬಿಟ್ಟವರ ಸಂಖ್ಯೆ ಶೇ. ೪೩.೯ಕ್ಕಿಂತ ಹೆಚ್ಚಿದ್ದಾರೆ. ೧೯೭೫ರಲ್ಲಿ ೨೫ ಮಂದಿ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ. (೧೦ನೇ ತರಗತಿ) ಪರೀಕ್ಷೆಗೆ ಕುಳಿತು ತೇರ್ಗಡೆಯಾಗಿದ್ದರು. ಮೇಲಿನ ಅಂಕಿ-ಅಂಶಗಳನ್ನು ಗಮನಿಸಿದರೆ ರಾಜ್ಯದಲ್ಲಿ ಗೌಳಿಗ ಸಮುದಾಯದ ಶಿಕ್ಷಣ ಹಿಂದುಳಿದಿರುವಿಕೆ ಮನದಟ್ಟಾಗುತ್ತದೆ. ಇವರಲ್ಲಿ ಶೇ. ೮೫ಕ್ಕಿಂತಲೂ ಹೆಚ್ಚು ಜನ ಅನಕ್ಷರಸ್ಥರಿದ್ದಾರೆ. ಶಾಲೆಯನ್ನು ಮಧ್ಯದಲ್ಲೇ ಬಿಡುವವರ ಸಂಖ್ಯೆ ಅಧಿಕವಾಗಿದೆ. ಕಾರಣವೆಂದರೆ ಗೌಳಿ ಸಮುದಾಯದ ಜನರು ಅರಣ್ಯದಲ್ಲಿ ವಾಸಿಸುತ್ತಿದ್ದು. ಶಿಕ್ಷಣದ ಅವಕಾಶಗಳಿಂದ ವಂಚಿತರಾಗಿದ್ದಾರೆ. ಜೊತೆಗೆ ಬಡತನ, ಅಜ್ಞಾನವೂ ಕಾರಣಗಳಾಗಿವೆ. ಉನ್ನತ ಶಿಕ್ಷಣದಲ್ಲಿ ಈ ಸಮುದಾಯದ ಪ್ರತಿಶತ ಒಂದಕ್ಕಿಂತಲೂ ಕಡಿಮೆ ಎಂದು ಹೇಳಬಹುದು. ಶಾಲಾ ಕಾಲೇಜುಗಳಲ್ಲಿ ಓದುತ್ತಿರುವ ಈ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆಯನ್ನು ರಾಜ್ಯದ ಪ್ರತಿಶತ ಜನಸಂಖ್ಯೆಗೆ ಇತರೇ ಹಾಗೂ ಸಮುದಾಯಕ್ಕೆ ಹೋಲಿಸಿದರೆ ತೀರಾ ಕಡಿಮೆ.

ಎರಡನೆ ಹಿಂದುಳಿದ ವರ್ಗಗಳ ಆಯೋಗದ ವರದಿಯಲ್ಲಿ (ವೆಂಕಟಸ್ವಾಮಿ ಅಧ್ಯಕ್ಷತೆಯಲ್ಲಿ) ಗೌಳಿ ಸಮುದಾಯದ ಅನಕ್ಷರತೆ ಕುರಿತಾಗಿ ಹೇಳಿಲ್ಲ. ೧೯೯೪ರಲ್ಲಿ ಜಾರಿಗೆ ಬಂದ ಮೂರನೇ ಆಯೋಗದ ವರದಿಯಲ್ಲೂ ಹಾಗೂ ಮೊದಲನೇ ಹಿಂದುಳಿದ ವರ್ಗಗಳ ಆಯೋಗ (ಪ್ರೊ. ರವಿಕುಮಾರ ಅಧ್ಯಕ್ಷತೆ) ಇವು ಯಾವ ಆಯೋಗಗಳಲ್ಲೂ ಗೌಳಿಗರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿ ವರದಿ ಬಂದಿರುವುದಿಲ್ಲ. ಗೌಳಿಗ ಮಹಿಳೆಯರ ಶೈಕ್ಷಣಿಕ ಅನರ್ಹತೆಗಳು ಹತ್ತು ಹಲವಾರು. ಇವರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಆಯಾಮ ಗಳಿಂದ ವಿಶ್ಲೇಷಿಸಬಹುದು. ಪುರುಷನಂತೆ ಮಹಿಳೆಯರಲ್ಲಿಯೂ ನಾವು ಅನುತ್ತೀರ್ಣತೆ ಮತ್ತು ಅಪಮೌಲ್ಯವನ್ನು ಕಾಣಬಹುದು. ಶೇ. ೭೫ರಷ್ಟು ಹೆಣ್ಣುಮಕ್ಕಳು ಪ್ರೌಢಶಾಲೆಯ ಹಂತದಲ್ಲಿ ಶಾಲೆ ಬಿಟ್ಟವರಾಗಿದ್ದಾರೆ. ಪ್ರೌಢಶಾಲಾ ಹಂತದಲ್ಲಿ ಆಕೆ ಪ್ರಕೃತಿದತ್ತವಾಗಿ ಋತುಮತಿಯಾದ ದಿನದಿಂದ ಅವಳನ್ನು ಶಾಲೆಗೆ ಕಳುಹಿಸುವುದಿಲ್ಲ. ಈಗೀಗ ನಗರವಾಸಿ ವಿದ್ಯಾವಂತ ತಂದೆ ತಾಯಂದಿರು ತಮ್ಮ ಹೆಣ್ಣುಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುತ್ತಾರೆ. ಆದರೆ ಅಂಥವರು ನಗರದಲ್ಲಿರುವವರು ಬೆರಳೆಣಿಕೆಯಷ್ಟು ಮಾತ್ರ. ಶೇ. ೩ಕ್ಕಿಂತ ಕಡಿಮೆ ಎಂದರೆ ತಪ್ಪಾಗಲಾರದು.

ಈ ಸಮುದಾಯದ ತಂದೆ ತಾಯಿಗಳು ನಾನು ಕ್ಷೇತ್ರಕಾರ್ಯಕ್ಕೆಂದು ಉತ್ತರ ಕನ್ನಡ ಜಿಲ್ಲೆಯ ಗೌಳಿಗರ ಹಾಡಿಗಳಿಗೆ ತೆರಳಿದಾಗ ಹೀಗೆ ಹೇಳಿದ್ದುಂಟು "ನಾವು ನಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದಿಲ್ಲ. ಏಕೆಂದರೆ ಒಂದುವೇಳೆ ಅವರನ್ನು ಕಾಲೇಜಿಗೆ ಕಳುಹಿಸಿದರೆ ಹೊರ ಜನರ ಜೊತೆ ಬೆರೆತು ಮದುವೆ ಮಾಡಿಕೊಂಡೋ ಇಲ್ಲವೇ ಪ್ರೀತಿ-ಪ್ರೇಮ ಎಂಬುದರಲ್ಲಿ ಸಿಲುಕಿ ಸಮುದಾಯಕ್ಕೆ ಕೆಟ್ಟ ಹೆಸರು ತರುತ್ತಾರೆ". ಇದು ಅವರ ಮುಗ್ಧತೆಯನ್ನು ತೋರಿಸುತ್ತದೆ ಮತ್ತು ಹಿಂದುಳಿದಿರುವಿಕೆಯು ಕಾಣಿಸುತ್ತವೆ. ಇಂದು ದೇಶದಲ್ಲಿ ಮಹಿಳೆಯರ ಸ್ಥಾನಮಾನ ಅದರಲ್ಲಿಯೂ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ಕೊಡುತ್ತಿರುವ ಸಂದರ್ಭಗಳಲ್ಲಿ ಗೌಳಿಗ ಸಮುದಾಯದ ಮಹಿಳೆಯರ ಸಾಮಾಜಿಕ, ಶೈಕ್ಷಣಿಕ ಸ್ಥಿತಿಗತಿಗಳನ್ನು ನೋಡಿದರೆ ಸಮಾನ ರೀತಿಯ ಸವಲತ್ತುಗಳ ಸಮಾನತೆಯ ಹಂಚಿಕೆಯ ಕಂದಕ ಇದೆ ಎನ್ನುವುದನ್ನು ಕಂಡುಬರುತ್ತದೆ. ಇಡೀ ಜಗತ್ತೇ ಒಂದೆಡೆ ಸಾಗುತ್ತಿದ್ದರೆ ಹಿಂದುಳಿದ ಸಮುದಾಯವಾಗಿರುವ ಗೌಳಿಗರ ಅದರಲ್ಲಿಯೂ ಮಹಿಳೆಯರ ಒಟ್ಟಾರೆ ಸಾಮಾಜಿಕ ಪರಿಸ್ಥಿತಿ ತುಂಬಾ ಶೋಚನೀಯವಾಗಿದೆ. ಜಾಗತೀಕ ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕೆಂದರೆ ಗೌಳಿಗ ಮಹಿಳೆಯರಿಗೆ ಶಿಕ್ಷಣ ಬೇಕಾಗಿದೆ. ಆಧುನಿಕ ಔಪಚಾರಿಕ ಶಿಕ್ಷಣ ವ್ಯವಸ್ಥೆಯಿಂದ ದೂರವಿರುವ ಈ ಗೌಳಿಗ ಸಮುದಾಯದಲ್ಲಿ ಯಾವ ರೀತಿಯ ಶಿಕ್ಷಣ ಪದ್ಧತಿ ಇದೆ ಅದನ್ನು ಈವತ್ತು ಮುಂದುವರೆಸಿಕೊಂಡು ಬರುತ್ತಿದ್ದಾರೆ ಎನ್ನುವುದನ್ನು ನೋಡಿದರೆ ಪಾರಂಪರಿಕ ಶಿಕ್ಷಣದ ಜೀವಂತಿಕೆಯನ್ನು ಕಾಣಬಹುದು.

### ೪.೧ ಪಾರಂಪರಿಕ ಶಿಕ್ಷಣ

ಪರಂಪರಾಗತವಾಗಿ ನಡೆಸಿಕೊಂಡು ಬಂದಿರುವ ಒಂದು ವ್ಯವಸ್ಥೆಯನ್ನು ಪಾರಂಪರಿಕ ಎನ್ನಬಹುದು. ಪ್ರತಿಯೊಂದು ಸಮಾಜದಲ್ಲೂ ಸಮುದಾಯದಲ್ಲೂ ಕಂಡುಬರುವುದು ಈ ಪಾರಂಪರಿಕ ಶಿಕ್ಷಣವನ್ನು ಅನುಸರಿಸುವ ರೀತಿಯಲ್ಲಿ ಒಂದೊಂದು ಸಮಾಜಕ್ಕೂ, ಸಮುದಾಯಕ್ಕೂ ವ್ಯತ್ಯಾಸ, ಭಿನ್ನತೆ ಬದಲಾವಣೆ ಕಾಣುತ್ತೇವೆ. ಶಿಕ್ಷಣವೆಂದರೆ ಕೇವಲ ಅಕ್ಷರ ಕಲಿಯುವುದಲ್ಲ. ಶಿಕ್ಷಣಕ್ಕೂ ಸಂಸ್ಕೃತಿಗೂ ಬದುಕಿಗೂ ಅವಿನಾಭಾವ ಸಂಬಂಧವಿದೆ. ಭಾರತದ ಅನೇಕ ಗಿರಿಜನರಲ್ಲಿ ಅಕ್ಷರ ಕಲಿಸುವ ಶಿಕ್ಷಣ ಇರಲಿಕ್ಕಿಲ್ಲ. ಅದರೆ ಬದುಕನ್ನು ರೂಪಿಸಿಕೊಳ್ಳುವ ಶಿಕ್ಷಣವಿದೆ. ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಶಿಕ್ಷಣವಿದೆ. ಆದುದರಿಂದ ಅವರನ್ನು ಅನಕ್ಷರಸ್ಥರೆಂದು ಕರೆಯಬಹುದೇ ಹೊರತು ಅಶಿಕ್ಷಿತರೆಂದು, ಅಸಂಸ್ಕೃತರೆಂದು ಕರೆಯಲಾಗದು. ಸಂಸ್ಕೃತಿಯ ಮೂಲ ಆಕರಗಳು ಅವರ ಶಿಕ್ಷಣ ಪದ್ಧತಿಯಲ್ಲಿವೆ. ಅರಣ್ಯವಾಸಿಗಳಾದ ಗೌಳಿಗರಲ್ಲೂ ತಮ್ಮ ಪೂರ್ವಜರಿಂದ ಕಲಿತುಕೊಂಡ ಭಾಷೆ, ಊಟ, ಉಡುಗೆ-ತೊಡುಗೆ, ಸಂಪ್ರದಾಯ, ಮದುವೆಯ ಪದ್ಧತಿ, ರೂಢಿ, ಆಚಾರ-ವಿಚಾರ, ಸಾಧನ, ಸಾಮಗ್ರಿ, ಮನೆ-ಮಠ, ಸಂಘ-ಸಂಸ್ಥೆ, ಕೆಲಸ ಮಾಡುವ ಪದ್ಧತಿ, ಧ್ಯೇಯ-ಧೋರಣೆ ಮುಂತಾದ ಎಲ್ಲಾ ಬಗೆಯ ನಂಬಿಕೆಗಳು ಮತ್ತು ನಡೆನುಡಿಗಳು ಸಂಸ್ಕೃತಿ ಎನಿಸಿಕೊಳ್ಳುತ್ತವೆ. ಗೌಳಿಗ ಸಮುದಾಯದ ಜನರು ತಮ್ಮದೇ ಆದ ಸಂಸ್ಕೃತಿಯನ್ನು ಮತ್ತು ಶಿಕ್ಷಣ ಪದ್ಧತಿಯನ್ನು ಕಟ್ಟಿಕೊಂಡಿದ್ದಾರೆ. ಅವರ ಬಾಳಿನ ಅವಿಭಾಜ್ಯ ಅಂಗವಾಗಿ ಅನೇಕ ಕಲೆಗಳು, ಸ್ವರಗಳು, ಚಿಹ್ನೆಗಳು, ಅಕ್ಷರಗಳ ಚಿಹ್ನೆಗಳು,

ಅಕ್ಷರಗಳು, ಚಿತ್ರಗಳು, ವಿನ್ಯಾಸಗಳಿಗೆ ತಮ್ಮದೇ ಆದ ಶೈಲಿಯಲ್ಲಿ ರೂಪಕೊಟ್ಟಿರುವಂಥವರು. ತಮ್ಮ ನೋವು ನಲಿವು, ಸುಖದುಃಖ, ಮೋಸ ವಂಚನೆ, ಜಾಣ್ಮೆ ಸಂತೋಷ ಎಲ್ಲವನ್ನು ಆಡುಮಾತಿನಲ್ಲಿಯೇ ಕಾವ್ಯರಸವನ್ನು ಮನಕ್ಕೆ ಮುದ ನೀಡುವಂತೆ ಚಿತ್ರಿಸಿದ್ದುದನ್ನು ಅವರ ಪರಂಪರಾಗತ ಶಿಕ್ಷಣ ಪದ್ಧತಿಯಲ್ಲಿ ಕಾಣಬಹುದು.

ಕರಕುಶಲತೆಗಳಲ್ಲಿ ಅಗಾಧ ಜ್ಞಾನವನ್ನು ಸಂಪಾದಿಸಿದ ಗೌಳಿಗರು ವಿಶಿಷ್ಟ ಕಲಾಕೃತಿಗಳ ಮೂಕ, ಸಂಕೇತ ಸಂಜ್ಞೆಗಳ ಮೂಲಕ ಸಮುದಾಯದಲ್ಲಿ ಸಾಕ್ಷರತೆಯನ್ನು ಪಸರಿಸುವ ಕೆಲಸವನ್ನು ಪರಂಪರಾಗತವಾಗಿ ಮಾಡಿಕೊಂಡು ಬರುತ್ತಿದ್ದಾರೆ. ಅವರ ಒಡಲಿನಲ್ಲಿ ಭಾವಸಂಪತ್ತು ಇದೆ. 'ತಾಳ್ಮೆ' ಎನ್ನುವುದು ಪರಂಪರಾಗತವಾಗಿ ಬಂದಿರುವ ಶಿಕ್ಷಣವಾಗಿದೆ. "ನೋಡಿ ತಿಳಿ; ಮಾಡಿ ಕಲಿ" ಇದು ಗೌಳಿಗರ ಸಮುದಾಯದ ಶಿಕ್ಷಣ ಪದ್ಧತಿಯಾಗಿದೆ. ಅವರಿಗೆ ಶಿಕ್ಷಣ ಸಂಸ್ಕೃತಿ-ಸಾಹಿತ್ಯ-ಬದುಕು ಹೀಗೆ ಬೇರೆ ಬೇರೆಯಾಗಿ ಕಾಣುವುದಿಲ್ಲ. ಶಿಕ್ಷಣ ಪಡೆಯಲಿಕ್ಕೆಂದು ಇಷ್ಟು ವರ್ಷ, ಶಿಕ್ಷಣ ಪಡೆದ ಮೇಲೆ ಕೆಲಸಮಾಡಲೆಂದು ಇಷ್ಟು ವರ್ಷ ನಿಗದಿಯಾಗಿರುವುದಿಲ್ಲ. ಅವರು ಶಿಕ್ಷಣ ಪಡೆಯುತ್ತಲೇ ದುಡಿಯುತ್ತಿದ್ದಾರೆ. ಕಲಿಕೆ-ಗಳಿಕೆ ಅವರಲ್ಲಿ ಏಕಕಾಲದಲ್ಲಿಯೇ ನಡೆದಿರುತ್ತದೆ. ಅವರಲ್ಲಿ ಇರುವ ನ್ಯಾಯ ಪದ್ಧತಿ ಪರಂಪರಾಗತವಾಗಿ ನಡೆದುಕೊಂಡು ಬಂದಿರುವುದು, ಇನ್ನೂ ಕೋರ್ಟ್ ಕಛೇರಿಗಳ ಮೆಟ್ಟಿಲು ಹತ್ತುವುದು ಕಡಿಮೆ ಎನ್ನಬಹುದು. ಪೂಜೆ ಎನ್ನುವುಉದ ಯಡಿಗ್ಯ ಎಂದು ಕರೆಯಿಸಿಕೊಳ್ಳುವ ಪೂಜಾರಿಯ ಮೂಲಕ ನಡೆಯುತ್ತದೆ. ಗೌಳಿಗರು ಅಡವಿಗಳಲ್ಲಿ ನೆಲೆಸಿರುವುದರಿಂದ ಸಹಜವಾಗಿಯೇ ಅವರು ತಮ್ಮ ರೋಗರುಜಿನಗಳಿಗೆ ಅಡವಿಯಲ್ಲಿ ದೊರಕುವ ಸಸ್ಯೋತ್ಪನ್ನಗಳಿಂದ ಮದ್ದು ಮಾಡುವುದನ್ನು ಕಲಿತಿದ್ದಾರೆ. ಪಶುಪಾಲನೆಯೇ ಇವರ ಮೂಲ ಕಸುಬಾಗಿ ಬಂದಿರುವುದರಿಂದ ಪಶುವೈದ್ಯರನ್ನು ಹೆಚ್ಚಾಗಿ ಕಾಣುತ್ತೇವೆ. ಮಾನವ ವೈದ್ಯೋಪಚಾರ ಎನ್ನುವುದು ವಂಶಪಾರಂಪರ್ಯವಾಗಿ ಮುಂದುವರೆಯುತ್ತವೆ. ತಮ್ಮ ಮೂಲ ಬದುಕಿನ ಸಂಸ್ಕೃತಿ, ಭಾಷೆ, ಮೌಲ್ಯಗಳನ್ನು ಗೌರವಿಸುವ ಮೂಲಕ ಸರಳಬದುಕು ಸಹಬಾಳ್ವೆಯಿಂದ ಕೂಡಿ ಬಾಳುವುದು, ಹಂಚಿತಿನ್ನುವುದು, ಗಂಡು ಹೆಣ್ಣಿನ ತಾರತಮ್ಯ ಇಲ್ಲದೇ ಇರುವುದು ಮಕ್ಕಳನ್ನು ಪ್ರೀತಿಸುವುದು ಈ ರೀತಿಯ ಮೌಲ್ಯಗಳನ್ನು ಒಳಗೊಂಡಿರುವ ಒಂದು ಶಿಕ್ಷಣ ವ್ಯವಸ್ಥೆ ಗೌಳಿಗರಲ್ಲಿದೆ.

ಗೌಳಿಗರ ಮಹಿಳೆಯರು ಓದಿ ಬರೆದವಳಲ್ಲವಾದರೂ ಜೀವನದ ಅನುಭವದಲ್ಲಿ ಕಷ್ಟ ಸುಖಗಳಲ್ಲಿ ನೊಂದು, ಬೆಂದು ಮಾಗಿದವಳು. ದೇವರನ್ನು ನಂಬಿ ತನ್ನ ಮೂಲ ವೃತ್ತಿಯಾದ ಪಶುಪಾಲನೆಯನ್ನು ಅವಲಂಬಿಸಿ ಗುರುಹಿರಿಯರನ್ನು ಗೌರವಿಸುತ್ತಾ ಗಂಡನೇ ತನ್ನ ಜೀವನದ ಸರ್ವಸ್ವವೆಂದು ಭಾವಿಸಿ ಯಾರಿಗೂ ಎದುರು ಮಾತನಾಡದೆ ಬದುಕಿನಲ್ಲಿ ಬಂದುದ್ದನ್ನೆಲ್ಲ ಮೌನವಾಗಿ ಸ್ವೀಕರಿಸುತ್ತಾ ಪರಿಸ್ಥಿತಿಯೊಡನೆ ಹೊಂದಾಣಿಕೆ ಮಾಡಿಕೊಂಡು ಬದುಕಿರುತ್ತಿರುತ್ತಾಳೆ. ಆದ್ದರಿಂದಲೇ ಅವಳ ಜೀವನದಲ್ಲಿ ಇಂದಿನ ವಿದ್ಯಾವಂತ ಮಹಿಳೆಯರ ಬದುಕಿನಲ್ಲಿರುವ ಮಾನಸಿಕ ಹೋರಾಟ ಸಂಘರ್ಷಗಳಿಲ್ಲ ಎನ್ನಬಹುದು. ಗೌಳಿಗರು ತಮ್ಮದೇ ಆದ ಭಾಷೆಯನ್ನು ಹೊಂದಿದ್ದಾರೆ. ಭಾಷೆ

ಎನ್ನುವುದು ಅಭಿವ್ಯಕ್ತಿಯ ಒಂದು ಮಾಧ್ಯಮ. ಭಾಷೆಯನ್ನು ಕಲಿಯುವ ಮತ್ತು ಕಲಿಸುವ ಪ್ರಕ್ರಿಯೆಗಳಲ್ಲಿ ಅವರ ಕೌಶಲ್ಯಗಳಾದ ಆಲಿಸುವಿಕೆ, ಮಾತನಾಡುವಿಕೆ ಹಾಗೂ ಓದುವಿಕೆ ಮತ್ತು ಬರೆಯುವಿಕೆ ಸಮ್ಮಿಲನಗೊಂಡಿರುತ್ತದೆ. ಇವುಗಳು ಒಂದಕ್ಕೊಂದು ಪೂರಕವಾಗಿದ್ದು ಕಲಿಕೆಯ ಸನ್ನಿವೇಶದಲ್ಲಿ ಎಲ್ಲೋ ಒಂದು ಕಡೆ ಓದಾಗಲಿ, ಬರವಣಿಗೆಯಾಗಲಿ ತಮ್ಮ ಸ್ಥಾನವನ್ನು ಪ್ರಧಾನವಾಗಿ ಸೃಷ್ಟಿಸಿಕೊಳ್ಳುತ್ತವೆ. ಭಾಷೆಯ ಕಲಿಕೆ ವ್ಯಕ್ತಿಯಲ್ಲಿ ದೃಢವಾದಂತೆ, ಸಮಾಜದೊಂದಿಗೆ ಅವರು ವ್ಯವಹರಿಸುವ ಅಭಿವ್ಯಕ್ತಪಡಿಸುವ ಮತ್ತು ವಿಚಾರ ವಿನಿಮಯಗೊಳ್ಳುವ ಚಟುವಟಿಕೆಗಳು ಸುಲಭವಾಗಿಯೂ ನಡೆಯುತ್ತದೆ.

ವ್ಯಕ್ತಿಯೂ ಭಾಷೆಯ ಕೌಶಲ್ಯದಲ್ಲಿ ಹೊಂದುವ ಪ್ರಭುತ್ವ ಮುಖ್ಯವಾಗುವುದು ಭಾಷೆಯ ಬಗ್ಗೆ ವ್ಯಕ್ತಿಗೆ ಹಿಡಿತವನ್ನು ಹೊಂದಲು ಅದರಲ್ಲಿನ ಕೌಶಲ್ಯಗಳು ನೆರವು ನೀಡುತ್ತದೆ. ಇಂತಹ ಕೌಶಲ್ಯಗಳ ಒಂದು ಸಮುದಾಯದ ಜನರಿಗೆ ಸಿಗುವಂತೆ ಮಾಡುವ ಇದರೊಂದಿಗೆ ಅವರನ್ನು ಪರಿಪೂರ್ಣತೆಯ ವ್ಯಕ್ತಿವಿಕಾಸಕ್ಕೆ ಸಿದ್ಧತೆ ಮಾಡುವುದೇ ಕಲಿಕೆ ಎನಿಸಿಕೊಳ್ಳುವುದು. ಮಾಧ್ಯಮದ ಸಹಕಾರವಿಲ್ಲದೆ ಕೇಳುವ, ನೋಡುವ ಜೀವನಾನುಭವ ಮೂಲಕ ಕಲಿಯುವುದು ಅಸಂಪ್ರದಾಯ ಶಿಕ್ಷಣ ನಮ್ಮ ಗಿರಿಜನರ ಹಾಗೂ ಗೌಳಿಗ ಸಮುದಾಯದಲ್ಲಿ ಕಾಣಬಹುದು. ಅವರು ಈ ಬಗೆಯ ಶಿಕ್ಷಣವಂತರೇ ಆಗಿರುತ್ತಾರೆ. ಅದರೆ ಇವತ್ತಿನ ಆಧುನಿಕ, ಔಪಚಾರಿಕ ಶಿಕ್ಷಣ ಕಡ್ಡಾಯ ಮಾಡಿರುವುದರಿಂದ ಇವರಲ್ಲಿ ಪಾರಂಪರಿಕ ಶಿಕ್ಷಣ ಕ್ರಮೇಣ ಮರೆಯಾಗುತ್ತಿದೆ. ಆಧುನಿಕ ಶಿಕ್ಷಣದ ಕಡೆಗೆ ಮಕ್ಕಳು ಇವತ್ತು ಬರುತ್ತಿದ್ದಾರೆ. ತಮ್ಮದೇ ಆದ ಸಾಂಪ್ರದಾಯಿಕ ಚೌಕಟ್ಟಿನಲ್ಲಿರುವ ಆಧುನಿಕ, ನಾಗರಿಕ ಪ್ರಪಂಚದ ಕಡೆ ಬರುತ್ತಿದ್ದಾರೆ. ಕಾರಣವೆಂದರೆ ಇವರ ಮಕ್ಕಳಲ್ಲಿ ಪರಂಪರೆಯ ಬಗೆಗಿರುವ ಅಸಕ್ತಿ ಕಡಿಮೆ ಯಾಗುತ್ತಿರುವುದು ಹಾಗೂ ಸರ್ಕಾರದ ಯೋಜನೆಗಳು, ಕೆಲವೊಂದು ಸರ್ಕಾರೇತರ ಸಂಸ್ಥೆಗಳ ಪರಿಶ್ರಮದಿಂದ ಔಪಚಾರಿಕ ಶಿಕ್ಷಣ ಸಿಗುವುದರ ಮೂಲಕ ಅಕ್ಷರಸ್ಥರ ಪ್ರಮಾಣ ಹೆಚ್ಚಾಗುತ್ತಿದೆ.

### ೪.೨ ಶಿಕ್ಷಣದ ಸ್ವರೂಪ

ಶಿಕ್ಷಣ ಮುಖ್ಯವಾಗಿ ಒಂದು ಸಂಸ್ಕಾರ, ಸಾಧನೆ. "ವ್ಯಕ್ತಿಯ ಅಂತರಂಗದ ಅರಿವಿನ ಜೊತೆಗೆ ಬಹಿರಂಗದ ಪರಿಜ್ಞಾನವನ್ನು ಕ್ರೋಢೀಕರಿಸಿ ಪರಿಪೂರ್ಣ ಜೀವನದತ್ತ ಮುನ್ನಡೆಸುವುದೇ ನಿಜವಾದ ಶಿಕ್ಷಣ". ಶಿಕ್ಷಣದಲ್ಲಿ ಮೂರು ವಿಧಗಳನ್ನು ಕಾಣಬಹುದು. ೧. ಔಪಚಾರಿಕ ಶಿಕ್ಷಣ ೨. ಅನೌಪಚಾರಿಕ ಶಿಕ್ಷಣ ೩. ಅಸಂಪ್ರದಾಯಿ ಶಿಕ್ಷಣ. ಶಿಕ್ಷಣವೆಂಬುದು ಕಲಿಕೆಗೆ ಸಂಬಂಧಪಟ್ಟಿರುವ ಸಂಗತಿಯಾಗಿದೆ.

'ವ್ಯಾಪ್ತಿ' ಎಂದರೆ ಸಾಮಾನ್ಯ ಅರ್ಥದಲ್ಲಿ ಎಲ್ಲೆ, ಎಲ್ಲೆಕಟ್ಟು, ಕ್ಷೇತ್ರ, ಸರಹದ್ದು, ಗತಿ, ವ್ಯಾಪ್ತಿಯು ನಿರ್ದಿಷ್ಟ ವಸ್ತು ಇಲ್ಲವೇ ವಿಷಯವು ಎಲ್ಲಿಯವರೆಗೆ ಪಸರಿಸಿದೆ ಎಂಬುದನ್ನು ಸೂಚಿಸುತ್ತದೆ. ಪ್ರಪಂಚದಲ್ಲಿ ಪ್ರತಿಯೊಂದು ಪದಾರ್ಥಕ್ಕೂ ತನ್ನದೇ ಆದ ವ್ಯಾಪ್ತಿ ಅಥವಾ ಕ್ಷೇತ್ರವಿರುತ್ತದೆ. ಕೇವಲ ಪ್ರದೇಶಗಳನ್ನು ಮಾತ್ರ ಕ್ಷೇತ್ರ ಎಂಬುದಾಗಿ ಪರಿಗಣಿಸಬೇಕಾಗಿಲ್ಲ. ಪ್ರತಿಯೊಂದು ಶಾಖೆಗೂ ಅವರದೇ ಆದ ಕ್ಷೇತ್ರ ಅಥವಾ ವ್ಯಾಪ್ತಿ ಇರುತ್ತದೆ. ಅಂತೆಯೇ ಶಿಕ್ಷಣಕ್ಕೆ ತನ್ನದೇ ಆದ ವ್ಯಾಪ್ತಿ ಇದೆ.

ಐದು ಸಾವಿರ ವರ್ಷಗಳ ಸುದೀರ್ಘ ಇತಿಹಾಸ ಹೊಂದಿರುವ ಭಾರತವು ಅನೇಕ ಜನಾಂಗಗಳನ್ನು ಒಗ್ಗೂಡಿಸಿಕೊಂಡು ಬದುಕುತ್ತಿರುವ ರಾಷ್ಟ್ರವಾಗಿದೆ. ಅನೇಕ ಭಾಷೆಗಳು, ಸಂಸ್ಕೃತಿಗಳು, ಧರ್ಮಗಳು ಮತ್ತು ಪರಂಪರೆಗಳು ಇಲ್ಲಿ ಕಾಲಾನುಕಾಲದಿಂದ ಜೊತೆಗೂಡಿ ಮುನ್ನಡೆಯುತ್ತಿವೆ. ಇಂಥಹ ವೈವಿಧ್ಯಮಯವಾದ ಸಮ್ಮಿಶ್ರ ರೀತಿ-ನೀತಿಗಳು ಮತ್ತು ಅರ್ಥಿಕ ಸ್ವರೂಪಗಳು ಜಾರಿಯಲ್ಲಿರುವ ರಾಷ್ಟ್ರದ ಶೈಕ್ಷಣಿಕ ಆಯಾಮಗಳನ್ನು ವಿವರಿಸಬಹುದು. ಶಿಕ್ಷಣದ ಸ್ವರೂಪಗಳನ್ನು ಮೂರು ಹಂತಗಳಲ್ಲಿ ವಿವರಿಸಬಹುದು. ಅವುಗಳು ಯಾವುವೆಂದರೆ, ೧. ಪರಂಪರಾಗತ ಭಾರತದಲ್ಲಿ ಮಹಿಳೆಯರ ಶಿಕ್ಷಣದ ಸ್ವರೂಪ ೨. ಬ್ರಿಟಿಷ್ ಆಡಳಿತಾವಧಿಯಲ್ಲಿ ಮಹಿಳೆಯರ ಶಿಕ್ಷಣದ ಸ್ವರೂಪ ೩. ಸ್ವಾತಂತ್ರ್ಯನಂತರದಲ್ಲಿ ಮಹಿಳೆಯರ ಶಿಕ್ಷಣದ ಸ್ವರೂಪ.

೧. **ಪರಂಪರಾಗತ ಭಾರತದಲ್ಲಿ ಮಹಿಳೆಯರ ಶಿಕ್ಷಣದ ಸ್ವರೂಪ :** ವೇದೋಪನಿಷತ್ತು ಕಾಲದಲ್ಲಿ ಮೌಖಿಕ ಶಿಕ್ಷಣವೇ ಪ್ರಧಾನವಾಗಿತ್ತೆಂದು ತೋರುತ್ತದೆ. ಆಶ್ರಮ ವ್ಯವಸ್ಥೆ ಇತ್ತು. ಕೆಲವೊಂದು ಉದಾಹರಣೆಗಳ ಮೂಲಕ ಶೈಕ್ಷಣಿಕ ಅವಕಾಶ ಮುಕ್ತವಾಗಿ ಇತ್ತು ಎನ್ನಬಹುದು. ಗುರುಕುಲ ಪದ್ಧತಿಗಳ ಮೂಲಕ ಶಿಕ್ಷಣ ಕಲಿಯುವ ವ್ಯವಸ್ಥೆ ಪ್ರಾಚೀನ ಕಾಲದಲ್ಲಿ ಇತ್ತು ಎನ್ನಬಹುದು.

೨. **ಬ್ರಿಟಿಷರ್ ಕಾಲಾವಧಿಯಲ್ಲಿ ಶಿಕ್ಷಣದ ಸ್ವರೂಪ :** ವಸಾಹತುಶಾಹಿಯ ಕಾಲಮಾನದಲ್ಲಿ ಶಿಕ್ಷಣದ ಸಾರ್ವತ್ರಿಕರಣ ಕಂಡುಬಂತು. ಸಂಪ್ರದಾಯ, ನಂಬಿಕೆಗಳು ಸಡಿಲಗೊಂಡು ಶಾಲಾ ಕಾಲೇಜುಗಳು ಪ್ರಾರಂಭವಾದವು. ವಿಶ್ವವಿದ್ಯಾಲಯಗಳು ಸ್ಥಾಪನೆಯಾದವು. ಶಾಲೆ ಎನ್ನುವ ಒಂದು ಚೌಕಟ್ಟಿನಲ್ಲಿ ಕಲಿಕೆ ಎನ್ನುವುದು ಆರಂಭವಾಯಿತು.

೩. **ಸ್ವಾತಂತ್ರ್ಯಾನಂತರದ ಕಾಲಾವಧಿ ಶಿಕ್ಷಣದ ಸ್ವರೂಪ :** ಸಮಾನತೆ, ಸ್ವಾತಂತ್ರ್ಯ, ಸಾರ್ವತ್ರೀಕರಣ ನಮ್ಮ ಸಂವಿಧಾನಾತ್ಮಕವಾಗಿ ಶಿಕ್ಷಣದ ಸ್ವರೂಪದಲ್ಲಿ ಕಾಣಬಹುದು. ಇಂಗ್ಲೀಷ್ ಶಿಕ್ಷಣ ಪದ್ಧತಿಯನ್ನೇ ಮುಂದುವರೆಸಿಕೊಂಡು ಈಗಲೂ ಸಹ ಬರುತ್ತಿದ್ದೇವೆ. ಪ್ರಾಥಮಿಕ ಶಿಕ್ಷಣ ಕಡ್ಡಾಯ ಎನ್ನುವುದು ಜಾರಿಯಲ್ಲಿ ಬಂತು. ನಮ್ಮಲ್ಲಿ ೬-೧೩ ಪ್ರಾಥಮಿಕ ಶಿಕ್ಷಣ, ೧೩-೧೫ ಪ್ರೌಢಶಾಲಾ ಶಿಕ್ಷಣ ಆನಂತರದಲ್ಲಿ ಕಾಲೇಜು ಶಿಕ್ಷಣ ವ್ಯವಸ್ಥೆ ಇದೆ ದಾಖಲಾತಿ ಮತ್ತು ಹಾಜರಾತಿ ಇದೆ. ಶಿಕ್ಷಣ ಎನ್ನುವುದು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಅದು ಕಂಡುಬರುತ್ತದೆ. ಶಿಕ್ಷಣವೆಂಬುದು ಕಲಿಕೆಗೆ ಸಂಬಂಧಪಟ್ಟಿರುವ ಸಂಗತಿಯಾಗಿದೆ. ಶಿಕ್ಷಣ ಎನ್ನುವುದು ಬಹುವಿಷಯ ವಸ್ತುಸ್ವರೂಪವನ್ನು ಒಳಗೊಂಡಿದೆ. ಭೌತಿಕ, ಜೈವಿಕ ಹಾಗೂ ಸಾಮಾಜಿಕ ಹಾಗೂ ಅದಕ್ಕೆ ಸಂಬಂಧಿಸಿದ ಎಲ್ಲಾ ಅಂಶಗಳನ್ನು ಇದು ಒಳಗೊಂಡಿದೆ. ಇದು ಹಲವು ಆಯಾಮಗಳಿಂದ ಕೂಡಿರುವುದು ಇದಲ್ಲದೇ ಮಾನವ ಮತ್ತು ಶಿಕ್ಷಣ ಸಂಬಂಧವು ಇದರ ವ್ಯಾಪ್ತಿಗೆ ಸೇರಿದೆ. ಶಿಕ್ಷಣ ಎನ್ನುವುದು ಒಂದು ಶಿಸ್ತಿಗೆ ಸೀಮಿತವಾದದ್ದು. ಸಹಜವಾಗಿ ಶಿಕ್ಷಣದಲ್ಲಿ ಒಂದು ವ್ಯವಸ್ಥೆ ಸಮತೋಲನ ಮತ್ತು ಸಮನ್ವಯತೆ ಇರುತ್ತದೆ. ಶಿಕ್ಷಣದಲ್ಲಿ ಮೂಲಭೂತ ಕಲ್ಪನೆಯನ್ನು ಕಾಣುತ್ತೇವೆ. ಸಮಾಜ ಮತ್ತು ಮಾನವ ಸಂಬಂಧಗಳು ಇರುತ್ತವೆ. ನಮ್ಮಲ್ಲಿ ಔಪಚಾರಿಕ ಶಿಕ್ಷಣ ವ್ಯವಸ್ಥೆ ಇದ್ದು ಪ್ರಾಥಮಿಕ ಶಿಕ್ಷಣ ೬-೧೩ದ ವರ್ಷದವರೆಗೆ ಪ್ರೌಢಶಿಕ್ಷಣ ೧೩-೧೫ ವರ್ಷ

ಅನಂತರದಲ್ಲಿ ಪದವಿಪೂರ್ವ ಕಾಲೇಜು, ಕಾಲೇಜ್ ಶಿಕ್ಷಣ ಹೀಗೆ ಮುಂದುವರೆಯುತ್ತವೆ. ದಾಖಲಾತಿ ಮತ್ತು ಹಾಜರಾತಿ ಪದ್ಧತಿ ಇದೆ. ಹೀಗೆ ನಿರ್ದಿಷ್ಟವಾದ ಚೌಕಟ್ಟಿನಲ್ಲಿ ತನ್ನದೇ ಆದ ಕ್ಷೇತ್ರಕಾರ್ಯವನ್ನು ಹೊಂದಿದೆ. ಅಂದರೆ ಶಿಕ್ಷಣದ ವ್ಯಾಪ್ತಿಯು ಶಾಲಾ ಕಾಲೇಜುಗಳಿಗೆ ಸೀಮಿತವಾಗಿದೆ. ಶಿಕ್ಷಣ ಸ್ವರೂಪದಲ್ಲಿನ ಲಿಂಗತಾರತಮ್ಯವನ್ನು ಪ್ರತಿಪಾದಿಸಬಹುದು. 'ಕಲಿಕೆ' ಎಂಬ ವ್ಯವಸ್ಥೆಯಲ್ಲಿ ಕಲಿಸುವವರು ಹಾಗೂ ಕಲಿಯುವವರನ್ನು ಒಳಗೊಂಡ ಒಂದು ಪ್ರಕ್ರಿಯೆ ಇರುತ್ತದೆ. ಅಲ್ಲಿನ ತಾರತಮ್ಯದ ಸ್ವರೂಪ, ಏಣಿಶ್ರೇಣಿಗಳು ಅನಾವರಣಗೊಳ್ಳುತ್ತವೆ ಮತ್ತು ಶಿಕ್ಷಣ ವ್ಯವಸ್ಥೆ ಹೇಗಿದೆ ಅಂದರೆ ನಮ್ಮ ಪಂಚವಾರ್ಷಿಕ ಯೋಜನೆಗಳು, ಶೈಕ್ಷಣಿಕ ಅಭಿವೃದ್ಧಿಗಾಗಿ ನಿಯಮಿಸಲ್ಪಟ್ಟ ಕಮೀಶನ್ ವರದಿಗಳಲ್ಲಿ ಕಲ್ಯಾಣಕಾರಿಯಾದ ರೂಪಿಸುತ್ತಾ ಸಾಗಲಾಗಿದೆಯೋ ಹೊರತು ಕಲಿಯುವವರ ಸಾಮರ್ಥ್ಯತೆ ಮತ್ತು ಚಲನೆಯನ್ನು ಪರಿಗಣನೆಗೆ ತೆಗೆದುಕೊಳ್ಳಲು ಸಾಧ್ಯವಾಗಿಲ್ಲ. ಹಾಗಾಗಿ ಕಲಿಯುವವರ ಅಗತ್ಯತೆ ಹಾಗೂ ಚಿಂತನಶೀಲತೆಗಳು ಕುಂಠಿತವಾಗಿ ಸಾಗಿವೆ. ಔಪಚಾರಿಕ ಶಿಕ್ಷಣದ ಕಾರ್ಯಕ್ರಮದಲ್ಲಿ ಮಹಿಳಾ ಶಿಕ್ಷಣದ ಮೂಲ ಅಗತ್ಯಗಳು ಪೂರೈಕೆಯಾಗುವುದಕ್ಕಿಂತ ಹೆಚ್ಚಾಗಿ ಶೇಕಡವಾರು ಅಂಕಿ ಸಂಖ್ಯಾಶಾಸ್ತ್ರದ ಮಾಹಿತಿ ಪ್ರದಾನವಾದ ತಿಳುವಳಿಕೆಯ ದಾಖಲೀಕರಣಕ್ಕಾಗಿ ಕಾರ್ಯ ನಿರ್ವಹಿಸುತ್ತಿದೆ. ನಮ್ಮಲ್ಲಿ ಇವತ್ತು ಶಿಕ್ಷಣ ಎನ್ನುವುದು 'ಕಂಠಪಾಠ' ಕಲಿಕಾ ಪ್ರಕ್ರಿಯೆ ಜಾರಿಯಲ್ಲಿದೆ. ಇನ್ನೂ ಕೆಲವುಕಡೆ ನೆನಪಿಸಿಕೊಳ್ಳುವ ಬಗೆಗಳು 'ಅಬ್ಜಕ್ಟಿವ್' ಮಾದರಿ ಪ್ರಶ್ನೆಗಳಲ್ಲಿ 'ಇಂಟಲಿಜನ್ಸಿ' ಪರೀಕ್ಷೆಗಳಲ್ಲಿ ಸಮಯಾಧಾರಿತ ಪರೀಕ್ಷೆಗಳಲ್ಲಿ ಬಳಕೆಯಾಗುತ್ತಿವೆ. ಇತ್ತೀಚೆಗೆ ಇಂಗ್ಲಿಷ್ 'ನುಡಿಗಟ್ಟು' ಎಂಬುದು ಬಳಕೆಯಾಗುತ್ತಿದೆ. ಅಂದರೆ ನೆನಪಿನಶಕ್ತಿಯನ್ನು ತಿರುಗು-ಮುರುಗಾದ ಪ್ರಕ್ರಿಯೆ ಇದು. ಒಂದೆಡೆ ಮಾಹಿತಿಯನ್ನು ಜ್ಞಾನವೆಂದು ಬಿಂಬಿಸುವ ಗಿಳಿ ಪಾಠದ ಮಾದರಿಯಾದರೆ ಇನ್ನೊಂದೆಡೆ ಈ ಬಗೆಯ ಜ್ಞಾನವನ್ನೇ ಹಣಗಳಿಕೆಯ ಸಾಧನವನ್ನಾಗಿ ನಿರ್ವಚಿಸಿಕೊಳ್ಳುವ ಹುಸಿ ಅಭಿವೃದ್ಧಿ ಕಲ್ಪನೆಯ ನೆಲೆಯು ಜಾರಿಯಲ್ಲಿದೆ. ಇನ್ನು ಕಂಪ್ಯೂಟರ್ ತಂತ್ರಜ್ಞಾನದ ಬಳಕೆಯಲ್ಲಿ ನೆನಪಿನ ಆಗಾಧಶಕ್ತಿಯು ಸಂಪೂರ್ಣವಾಗಿ ಮಾಹಿತಿಸಂಗ್ರಹಣೆ ಹಾಗೂ ಮಾಹಿತಿ ಮೂಲವನ್ನೇ ಜ್ಞಾನದ ಚೌಕಟ್ಟಾಗಿ ಬಿಂಬಿಸುವ ಒಪ್ಪಿಸುವ ಪ್ರಕ್ರಿಯೆ ಸಮರೋಪಾದಿಯಲ್ಲಿ ನಡೆದಿದೆ. ಉದ್ಯೋಗಕ್ಕೆ ಅಷ್ಟೇ ಸೀಮಿತವಾಗಿರುವ ಒಂದು ಶಿಕ್ಷಣದ ಸ್ವರೂಪವನ್ನು ನಮ್ಮಲ್ಲಿ ಕಾಣುವುದು.

ಇನ್ನೂ ತಮ್ಮದೇ ಆದ ವಂಶಪಾರಂಪರೆಯಾಗಿ ರೂಢಿಸಿಕೊಂಡು ಬಂದಿರುವ ತಮ್ಮ ಪಾಡಿಗೆ ಅನೌಪಚಾರಿಕ ಸಾಂಸ್ಕೃತಿಕ ಶಿಕ್ಷಣವನ್ನು ಮುಂದುವರೆಸಿಕೊಂಡು ಬಂದಿರುವ ಗೌಳಿ ಸಮುದಾಯಗಳಿಗೆ ಇಂದಿನ ಸಾಮಾಜಿಕ ವ್ಯವಸ್ಥೆಗೆ ಶಿಕ್ಷಣ ಎಷ್ಟು ಮುಖ್ಯವೋ ಈ ಸಮುದಾಯಗಳಿಗೂ ಶಿಕ್ಷಣ ಎನ್ನುವುದು ಅಷ್ಟೇ ಮುಖ್ಯವಾಗಿದೆ. ಜೀವನಕ್ಕೆ ಅತಿಮುಖ್ಯವಾಗಿ ಬೇಕಾಗಿರುವ ಶಿಕ್ಷಣ ಎಷ್ಟರಮಟ್ಟಿಗೆ ಅಳವಡಿಸಿದೆ ಎಂಬುದು ಬಹಳ ಮುಖ್ಯವಾಗಿರುತ್ತವೆ. ಒಂದುಕಡೆ ನಿಂತು ತಮ್ಮ ನೆಲೆಯಾಗಿ ಗುರುತಿಸಿಕೊಂಡು ತಮ್ಮದೇ ಆದ ವೃತ್ತಿಯನ್ನು ಮೈಗೂಡಿಸಿಕೊಂಡಿರುವ ಗೌಳಿ ಸಮುದಾಯಗಳು ತಮ್ಮ ಅಗತ್ಯತೆಗಳನ್ನು ರೂಪಿಸಿಕೊಂಡು ಮಾನಸಿಕವಾಗಿ ನೆಮ್ಮದಿಯಿಂದ ಬದುಕುತ್ತಿವೆ. ಇಂತಹ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ಶಿಕ್ಷಣ ಯಾಕೆ? ಶಿಕ್ಷಣ ಪೂರೈಸುತ್ತವೆ ಎಂದು

ನಂಬುವುದಾದರೆ ಆ ಶಿಕ್ಷಣದ ಸ್ವರೂಪ ಮಹತ್ವವೆಂತಹದು, ಗೌಳಿಗರಿಗೆ ಶಿಕ್ಷಣ ಕೊಡಬೇಕಾದರೆ ಮಾಧ್ಯಮ ಯಾವುದಿರಬೇಕು. ಎಂಬುದನ್ನು ಮುಖ್ಯವಾಗುತ್ತವೆ. ಇವತ್ತು ಪ್ರಾಥಮಿಕ ಶಿಕ್ಷಣ ಆಯಾ ರಾಜ್ಯದ ಭಾಷೆಗಳಿಗೆ ಅನುಗುಣವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಗೌಳಿಗ ಸಮುದಾಯಗಳಿಗೆ ನಾವು ಕೊಡುತ್ತಿರುವ ಶಿಕ್ಷಣ ಎಷ್ಟರಮಟ್ಟಿಗೆ ತಲುಪುತ್ತಿದೆ ಎಂಬುದು ಗಮನಿಸಬೇಕು. ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಿಸಿದಂತೆ ಮಕ್ಕಳನ್ನು ಶಾಲೆಗೆ ಕಳಿಸಿರುವುದನ್ನು ಕಾಣಬಹುದು. ಆದರೆ ಅಲ್ಲಿ ಒಂದು ಸಮಸ್ಯೆ ಎಂದರೆ ಮರಾಠಿ ಇವರ ಮಾತೃಭಾಷೆಯಾಗಿದೆ. ಆದರೆ ಶಾಲೆಗಳಲ್ಲಿ ಕನ್ನಡದಲ್ಲಿ ಪಾಠ ಹೇಳುತ್ತಾರೆ. ಈ ಮಕ್ಕಳಿಗೆ ಕನ್ನಡದಲ್ಲಿ ಪಾಠ ಹೇಳುವುದು ಬಹಳಕಷ್ಟವೆಂದು ಶಿಕ್ಷಕರ ಮಾತಿನಿಂದ ತಿಳಿದುಬರುತ್ತದೆ. ಇದರಿಂದಾಗಿ ಈ ಗೌಳಿ ಸಮುದಾಯಗಳಿಗೆ ಯಾವ ರೀತಿಯ ಶಿಕ್ಷಣ ಕೊಡಬೇಕು ಎಂಬುದನ್ನು ಆಲೋಚಿಸಬೇಕಾದ ಸಂಗತಿಯಾಗಿದೆ. ಗೌಳಿಗರ ಮಕ್ಕಳಿಗೂ ಕರ್ನಾಟಕ ಸರ್ಕಾರದವರು ನೀಡುವ ಶಿಕ್ಷಣಪದ್ಧತಿಗೆ ಹೊಂದಿಕೊಳ್ಳಲು ಆಗುತ್ತಿಲ್ಲ. ಇದಕ್ಕೆ ಮುಖ್ಯ ಪರಿಹಾರ ಎಂದರೆ ಈಗ ನಡೆಸುತ್ತಿರುವ ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಹಾಜರಾತಿ ಮಟ್ಟವನ್ನು ಸುಧಾರಿಸುವಲ್ಲಿ ಶಿಕ್ಷಣ ಇಲಾಖೆಯೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡು ಸ್ವಯಂಸೇವಾ ಸಂಸ್ಥೆಗಳ ಮುಖಾಂತರ ಸ್ವಯಂಸೇವಾ ಶಿಕ್ಷಕರನ್ನು ನೇಮಿಸಿ ಹಾಡಿಯಿಂದ ಮಕ್ಕಳನ್ನು ಶಾಲೆಗೆ ಕರೆತರುವುದು ಹಾಗೂ ಶಾಲೆಬಿಟ್ಟ ಮಕ್ಕಳನ್ನು ಗುರುತಿಸಿ ಅವರಿಗೆ ಪ್ರತ್ಯೇಕವಾದಂತಹ ತರಬೇತಿಗಳನ್ನು ನೀಡುವುದರ ಮುಖಾಂತರ ಮತ್ತೆ ಶಾಲೆಗೆ ಬರುವಂತೆ ಮಾಡುವುದು. ವಿಶೇಷವಾಗಿ ಹೆಚ್ಚು ಹೆಚ್ಚು ಆಶ್ರಮಶಾಲೆಗಳನ್ನು ಮತ್ತು ವಸತಿ ಶಾಲೆಗಳನ್ನು ಪ್ರಾರಂಭಿಸುವುದರ ಮೂಲಕ ಉತ್ತಮ ಗುಣಮಟ್ಟದ ಶಿಕ್ಷಣ ನೀಡಿಬಹುದು. ಅವರದ್ದೇ ಆದ ಭಾಷೆ ಗೊತ್ತಿರುವ ಸ್ವಯಂಸೇವಕ ಶಿಕ್ಷಕರನ್ನು ತೆಗೆದುಕೊಂಡರೆ ಆಶ್ರಮಶಾಲೆ ಮತ್ತು ವಸತಿ ಶಾಲೆಗಳಲ್ಲಿ ಹೆಚ್ಚಿನ ಸಮಯವನ್ನು ಮಕ್ಕಳ ಜೊತೆಗೆ ಕಳೆಯುವುದರ ಮೂಲಕ ಮಕ್ಕಳಿಗೆ ಒಳಾಂಗಣ ಮತ್ತು ಹೊರಾಂಗಣ ಚಟುವಟಿಕೆಗಳು ಹೆಚ್ಚಿನ ಆಸಕ್ತಿಯನ್ನು ತರಬಹುದು. ಮತ್ತೊಂದು ವಯಸ್ಕ ಶಿಕ್ಷಣ ಕಾರ್ಯಕ್ರಮ ಜಾರಿಗೆ ತಂದು ಹಲವು ವರ್ಷಗಳಾದರೂ ಯಾವ ರೀತಿ ಸಾಧನೆ ಇಲ್ಲ ಎನ್ನಬಹುದು. ಇದು ಏಕೆಂದರೆ ಗಿರಿಜನೇತರರು ಈ ಹಾಡಿಗಳಿಗೆ ಬಂದು ರಾತ್ರಿ ಶಾಲೆಯನ್ನು ನಡೆಸುವುದು. ಆದರೆ ಪರಿಸ್ಥಿತಿ ಭಿನ್ನವಾಗಿರುವುದು ಗಿರಿಜನೇತರು ರಾತ್ರಿ ಶಾಲೆಯನ್ನು ನಡೆಸದೇ ಇರುವುದು. ಹಾಗೂ ಗಿರಿಜನರ ಮತ್ತು ಗಿರಿಜನೇತರರ ಮಧ್ಯೆ ಪರಸ್ಪರ ಹೊಂದಾಣಿಕೆ ಇಲ್ಲದೇ ಇರುವುದು. ಇವುಗಳಿಂದ ವಯಸ್ಕ ಶಿಕ್ಷಣ ಶಾಲೆಗಳಿಂದ ಸಾಧನೆ ಏನು ಇಲ್ಲ ಎನ್ನಬಹುದು. ಅದಕ್ಕಾಗಿ ಅವರಲ್ಲಿ ಶಿಕ್ಷಣ ಎನ್ನುವುದು ಹೆಚ್ಚು ಹೆಚ್ಚು ಸಿಗಬೇಕು. ಅಂದರೆ ಇದು ಆಶ್ರಮ ಶಾಲೆಗಳಿಂದ ಸಾಧ್ಯ. ಅದು ಹೇಗೆ ಎಂದರೆ ಸಭೆಗಳು, ನಾಟಕಗಳು, ಗುಂಪುಚರ್ಚೆಗಳು, ಹಾಡುಗಳನ್ನು ಹಾಡುವುದು, ಆಟಗಳನ್ನು ಆಡುವುದು, ಕಥೆಗಳನ್ನು ಕೇಳಿಸುವುದರ ಮೂಲಕ ಔಪಚಾರಿಕ ಶಿಕ್ಷಣವನ್ನು ಹೊರಗಿಟ್ಟು ಅನೌಪಚಾರಿಕ ಮಾಧ್ಯಮಗಳ ಮುಖಾಂತರ ಓದು ಬರಹ ಅವಶ್ಯಕತೆ ಎಷ್ಟು ಅಗತ್ಯ ಎಂಬುದನ್ನು ಮನವರಿಕೆ ಮಾಡಿಕೊಟ್ಟರೆ ಸಾಕ್ಷರತೆ ಪ್ರಮಾಣ ಹೆಚ್ಚು ಮಾಡಬಹುದು.

ಮಾನವೀಯ ಮೌಲ್ಯಗಳನ್ನು ಬೆಳೆಸುವ ಶಿಕ್ಷಣ ಮಾನವನನ್ನು ಇತರ ಜೀವಿಗಳಿಗಿಂತ ಉನ್ನತ ಸ್ತರದಲ್ಲಿ ನಿಲ್ಲಿಸುತ್ತದೆ. ಸಮಾಜದಲ್ಲಿ ಬಾಳಬದುಕುವ ರೀತಿನೀತಿ ಹಾಗೂ ನೆಲೆಗಟ್ಟನ್ನು ಒದಗಿಸುತ್ತದೆ. ಈ ದಿಸೆಯಲ್ಲಿ ಅದರಲ್ಲೂ ಮಗುವಿನ ಸರ್ವತೋಮುಖ ಬೆಳವಣಿಗೆಗೆ ಭದ್ರ ನೆಲೆಗಟ್ಟನ್ನು ಒದಗಿಸುವುದು ಪ್ರಾಥಮಿಕ ಶಿಕ್ಷಣ. ಆದರೆ ನಮ್ಮ ಇವತ್ತಿನ ಶಿಕ್ಷಣ ಮುಖ್ಯವಾಗಿ ಲೌಕಿಕ ಶಿಕ್ಷಣವಾಗಿದೆ. ನೈತಿಕ ಶಿಕ್ಷಣ, ಆತ್ಮ ಶಿಕ್ಷಣ, ವಿಶೇಷ ಒತ್ತು ಕೊಡದೇ ಲೋಕ ಪರಿಜ್ಞಾನ, ದೇಹೇಂದ್ರಿಯ ಭೋಗ ಶಿಕ್ಷಣ, ಮಾಹಿತಿ ಸಂಗ್ರಹ, ವಿಷಯ ಸಂಗ್ರಹದತ್ತ ಮಾತ್ರ ಗಮನವಿರಿಸುತ್ತಿರುವುದು ಶೋಚನೀಯ ಸಂಗತಿ. ಪ್ರತಿಯೊಂದು ಮಗುವಿಗೆ ತನ್ನದೇ ಆದ ವ್ಯಕ್ತಿತ್ವವಿದೆ. ಒಂದೊಂದು ವೈಶಿಷ್ಟ್ಯವಿದೆ ಎಂಬುದನ್ನು ತಿಳಿಯದೆ ಎಲ್ಲಾ ಮಕ್ಕಳಿಗೂ ಸಮವಾಗಿ ಮಾಹಿತಿಯನ್ನು ಹೊಸ ಹೊಸ ಸಂಗತಿಗಳನ್ನು ತುರುಕುವುದಾಗಿದೆ. ಮಗುವಿನ ಆಸಕ್ತಿಗಳು, ಪ್ರವೃತ್ತಿಗಳು ಹಾಗೂ ಧಾನಕಾಶಕ್ತಿಗಳ್ನು ಬಹಳ ಜಾಗರೂಕತೆಯಿಂದ ಪರಿಶೀಲಿಸಬೇಕು. ಹೊರಗಿನ ಬಲವಾದ ಒತ್ತಡಗಳಿಂದ ಶಿಕ್ಷಣವನ್ನು ಹೇರುವ ಬದಲು ಮಕ್ಕಳ ವ್ಯಕ್ತಿತ್ವವು ಅಂತರ್ಯದಿಂದಲೇ ವಿಕಾಸಗೊಳ್ಳುವಂತಾಗಬೇಕು. ಸಾಮಾಜಿಕ ಹಿತದೃಷ್ಟಿಯಿಂದ ಮಗುವು ಸಹಜ ಹಾಗೂ ಹುಟ್ಟಿನಿಂದಲೇ ಪಡೆದ ಶಕ್ತಿ ಸಾಮರ್ಥ್ಯ ಹಾಗೂ ಯೋಗ್ಯತೆಗಳನ್ನು ವಾಸ್ತವಿಕ ರೀತಿಯಲ್ಲಿ ಬೆಳೆಸಿಕೊಳ್ಳುವ ಶಿಕ್ಷಣ ಇವರಿಗೆ ಬೇಕಾಗಿದೆ. ಶಿಕ್ಷಣವು ಜೀವನದ ಎಲ್ಲಾ ಕ್ಷೇತ್ರಗಳಿಗೆಲ್ಲಾ ಅನ್ವಯಿಸಿ ನಿರ್ದಿಷ್ಟ ರೂಪದ ಮಾರ್ಗದರ್ಶನ ನೀಡುವಂತಿರಬೇಕು. ಸದಾ ವೈವಿಧ್ಯತೆಯಿಂದ ಕೂಡಿದ್ದು ಪರಸ್ಪರ ಘರ್ಷಣೆ ಹೊಂದುತ್ತಿರುವ ಜೀವನದೃಷ್ಟಿ, ಧ್ಯೆಯಗಳು, ಶಿಕ್ಷಣದ ವ್ಯಕ್ತಿತ್ವ ಬೆಲೆಯನ್ನು ಹೆಚ್ಚಿಸುವಂತ ಶಿಕ್ಷಣ ಇವರಿಗೆ ಬೇಕಾಗಿದೆ. ಅದೇ ಹಳೆಕಾಲದ ಔಪಚಾರಿಕ ಶಿಕ್ಷಣ ವ್ಯವಸ್ಥೆಯ ರೂಪ ರಚನೆಗಳನ್ನು ಪುನರ್ ವ್ಯಾಖ್ಯಾನ ಮಾಡಿ ಎಲ್ಲಾ ಬಗೆಯ ನೀತಿ ನಿರೂಪಣೆಯ ಚಟುವಟಿಕೆಗಳಲ್ಲಿ ಮತ್ತು ಅವುಗಳ ಅನುಷ್ಠಾನದ ಹಂತದಲ್ಲಿ ಬದಲಾವಣೆತಂದು ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿದರೆ ಮಹಿಳೆಯರ ಭಾಗೀದಾರಿಕೆ ಹಾಗೂ ಗಿರಿಜನರಾದ ಗೌಳಿಗರ ಮಹಿಳೆಯರ ಪ್ರತಿನಿಧಿತ್ವ ಇರುವುದರ ಮೂಲಕ ವ್ಯಕ್ತಿತ್ವದ ಬಲವರ್ಧನೆಯು ಶಿಕ್ಷಣದಿಂದ ರೂಪಿಸಲ್ಪಡುತ್ತದೆ.

**೪.೩ ಸಾರ್ವತ್ರಿಕ ಶಿಕ್ಷಣ**

"ಸರ್ವರಿಗೂ ಪ್ರಾಥಮಿಕ ಶಿಕ್ಷಣ ದೊರಿಸಿ ಕೊಡುವುದೇ" ಸಾರ್ವತ್ರಿಕ ಶಿಕ್ಷಣ. ಸಾರ್ವತ್ರಿಕ ಶಿಕ್ಷಣ ಎಂದರೆ ಎಲ್ಲ ವರ್ಗ, ಜಾತಿ, ಜನಾಂಗ ಮತ್ತು ಗುಂಪಿಗೆ ಸೇರಿದ ಸರ್ವರಿಗೂ ಪ್ರಾಥಮಿಕ ಶಿಕ್ಷಣದ ಅನುಕೂಲತೆಗಳನ್ನು ಒದಗಿಸುವುದು. ಭಾರತದಲ್ಲಿ ಶಿಕ್ಷಣದ ಸಾರ್ವತ್ರಿಕರಣವೆಂದರೆ ೬ ರಿಂದ ೧೪ ವರ್ಷದ ಅಥವಾ ೧ ರಿಂದ ೮ನೇ ತರಗತಿಯ ಎಲ್ಲ ಮಕ್ಕಳಿಗೂ ಶಿಕ್ಷಣದ ಅವಕಾಶ ಕಲ್ಪಿಸುವುದು. "ಶಿಕ್ಷಣವು ಪ್ರತಿ ಮಗುವಿನ ಆಜನ್ಮಸಿದ್ಧ ಹಕ್ಕು" ಎಂಬುದು ಸ್ಪಷ್ಟವಾಗುತ್ತದೆ.

ಶಿಕ್ಷಣ ಎನ್ನುವ ಸಾಮಾಜಿಕ ಸಂಸ್ಥೆಗೆ ಎಲ್ಲಾ ಸಮಾಜಗಳಲ್ಲೂ ಎರಡು ಪ್ರಮುಖ ಜವಾಬ್ದಾರಿಗಳಿವೆ. ಒಂದು ಆ ಸಮಾಜದ ಸಾಂಸ್ಕೃತಿಕ ಪರಂಪರೆಯನ್ನು ಒಂದು ತಲೆಮಾರಿನಿಂದ ಮತ್ತೊಂದು

ತಲೆಮಾರಿಗೆ ವರ್ಗಾಯಿಸುವುದು. ಎರಡನೆದು ಆ ಸಮಾಜದಲ್ಲಿ ಬದಲಾವಣೆಯನ್ನು ತರುವುದಕ್ಕೆ ಪೂರಕವಾದ ವಾತಾವರಣವನ್ನು ಸೃಷ್ಟಿಸುವುದು. ಈ ಎರಡು ಕಾರ್ಯಗಳು ಮಹಿಳೆಯರ ಬದುಕಿನ ಮೇಲೆ ವಿಶೇಷವಾದ ಪ್ರಭಾವವನ್ನು ಬೀರುವಂಥಹವು. ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋಗುವುದರ ಮೂಲಕ ಶಿಕ್ಷಣ ಮಹಿಳೆಯರಿಗೆ ಬದಲಾವಣೆಗೆ ಇರಬಹುದಾದ ಅನೇಕ ಅವಕಾಶ ಗಳನ್ನು ಕೂಡ ಮಹಿಳೆಯರಿಗೆ ನೀಡುತ್ತಾ ಬಂದಿದೆ. ಶಿಕ್ಷಣ ವ್ಯಕ್ತಿ ಮತ್ತು ಸಮಾಜದ ಕಾರಣ ವಾಗಿರುವಂಥ ಅತ್ಯಂತ ಪ್ರಮುಖ ಹಾಗೂ ಪ್ರಬಲ ಸಾಧನ. ಆದರೆ ಭಾರತೀಯ ಸಮಾಜದಲ್ಲಿ ಶತಮಾನಗಳಿಂದಲೂ ಮಹಿಳೆಯರಿಗೆ ಲಭ್ಯವಿರುವ ಶಿಕ್ಷಣಾವಕಾಶಗಳು ಪುರುಷನಿಗೆ ಹೋಲಿಸಿದಾಗ ಕಡಿಮೆ. ಇಂದಿಗೂ ಭಾರತದ ಒಟ್ಟು ಮಹಿಳಾ ಜನಸಂಖ್ಯೆಯಲ್ಲಿ ಶೇ. ೩೯.೪೭ರಷ್ಟು ಮಾತ್ರ ಸಾಕ್ಷರರಾಗಿದ್ದು ಇನ್ನೂಳಿದ ಮಹಿಳೆಯರ ಪಾಲಿಗೆ ಶಿಕ್ಷಣವನ್ನು ಪಡೆಯುವ ಅವಕಾಶ ದೊರೆಯ ದಿರುವುದು ಆಹಾರದಷ್ಟೇ ಮೂಲಭೂತ ಅವಶ್ಯಕತೆಯಾದ ಶಿಕ್ಷಣವನ್ನು ಪಡೆಯುವುದರಲ್ಲಿ ಎಷ್ಟರ ಮಟ್ಟಿನ ಲಿಂಗತಾರತಮ್ಯ ಅಡಕವಾಗಿದೆ ಎಂದು ತಿಳಿಯುತ್ತದೆ.

ಸ್ವಾತಂತ್ರ್ಯಾನಂತರ ಸರ್ಕಾರಗಳು ಸಮಾಜದಲ್ಲಿದ್ದ ಅಸಮಾನತೆಯನ್ನು ತೊಡೆದು ಹಾಕಲು ಮತ್ತು ಅಲಕ್ಷಿತ ಸಮುದಾಯಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುವುದಕ್ಕೋಸ್ಕರ ಹಲವು ಯೋಜನೆ ಮತ್ತು ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಕೆಲವು ಸೌಲಭ್ಯಗಳನ್ನು ಸಂವಿಧಾನದಲ್ಲಿ ಒದಗಿಸಲಾದ ಅಧ್ಯತೆಗಳಿಗೆ ಅನುಗುಣವಾಗಿ ನೀಡಿದೆ. ಇಂತಹ ನಿರ್ಲಕ್ಷ್ಯಕ್ಕೊಳಗಾದ ಸಮುದಾಯ ಗಳಿಗೆ ನೇರವಾಗಿ ಅಲ್ಲದಿದ್ದರೂ ಸಂವಿಧಾನದಲ್ಲಿ ಮಾಡಲಾದ ನಿಯಮಗಳ ೧೫(೪) ಮತ್ತು ೧೬(೪) ಅಡಿಯಲ್ಲಿ ಸರ್ಕಾರವು ಸಾಮಾಜಿಕ ನ್ಯಾಯವನ್ನು ಒದಗಿಸಲು ಕೇಂದ್ರ ಸಮಿತಿ ಮತ್ತು ಆಯೋಗಗಳನ್ನು ನೇಮಕ ಮಾಡಿತು. ಈ ಹಿಂದುಳಿದ ವರ್ಗಗಳ ರಾಷ್ಟ್ರಮಟ್ಟದ ಆಯೋಗಗಳೆಂದರೆ ಕಾ·ಲೇಕರ್ ಮತ್ತು ಬಿ.ಪಿ. ಮಂಡಲ್ ಆಯೋಗಗಳು. ರಾಜ್ಯದ ಆಯೋಗಗಳೆಂದರೆ ಹಾವನೂರು ವೆಂಕಟಸ್ವಾಮಿ ಮತ್ತು ಚೆನ್ನಪ್ಪರೆಡ್ಡಿ ಆಯೋಗಗಳು. ಹಾವನೂರು ಆಯೋಗದಲ್ಲಿ ಹಿಂದುಳಿದ ವರ್ಗಗಳ ಅವರಲ್ಲಿ ಗೌಳಿಗರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ಮಾಹಿತಿ ಸಿಗುತ್ತದೆ. ಕರ್ನಾಟಕದ ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯು ಪೂರ್ವ, ಪ್ರಾಥಮಿಕ ಶಿಕ್ಷಣ ಹಂತದಿಂದ ಆರಂಭವಾಗಿ ಪ್ರೌಢಶಿಕ್ಷಣ ಹಂತದವರೆಗೂ ವ್ಯಾಪಿಸಿದೆ. ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣಕ್ಕೆ ಸಂವಿಧಾನಾತ್ಮಕ ಅವಕಾಶಗಳು ೧೯೫೦ ರಿಂದ ೧೯೬೦ರವರೆಗೆ ದೇಶದಲ್ಲಿಯ ೧೪ರ ವಯೋಮನದ ಎಲ್ಲ ಮಕ್ಕಳಿಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣ ಒದಗಿಸಲು ಘೋಷಿಸಲಾಯಿತು. ಸಂವಿಧಾನದ ೪೫ನೇ ವಿಧಿ ೨೯ನೇ ವಿಧಿ ೨ನೇ ಕಾಲಂ, ೨೮ನೇ ವಿಧಿ, ೧೫ನೇ ವಿಧಿ. ೩ನೇ ಕಾಲಂ ಈ ರೀತಿಯಾಗಿ ಶೈಕ್ಷಣಿಕ ಅವಕಾಶವನ್ನು ಒದಗಿಸಿದೆ. ಇನ್ನು ಭಾರತದಲ್ಲಿ ಪಂಚವಾರ್ಷಿಕ ಯೋಜನೆಗಳ ಮೂಲಕ ಮಹಿಳೆಯರ ಪ್ರಾಥಮಿಕ ಶಿಕ್ಷಣದ ಬೆಳವಣಿಗೆ ಮತ್ತು ವಿಕಾಸಕ್ಕಾಗಿ ವಿಶೇಷ ಆಧ್ಯತೆಯನ್ನು ನೀಡಲಾಯಿತು.

೧. ಪ್ರಥಮ ಪಂಚವಾರ್ಷಿಕ ಯೋಜನೆ ೧೯೫೧-೫೬ರಲ್ಲಿ ಅನಕ್ಷರತೆ ನಿರ್ಮೂಲನೆಗೆ ಅದ್ಯತೆ ನೀಡಲಾಯಿತು. ೧೯೬ ಕೋಟಿ ಶಿಕ್ಷಣಕ್ಕೆ ಹಾಗೂ ೬-೧೪ ವರ್ಷದ ಮಕ್ಕಳಿಗೆ ಕಡ್ಡಾಯ ಶಿಕ್ಷಣ ಒತ್ತಾಯತರಲಾಯಿತು.

೨. ಎರಡನೇ ಪಂಚವಾರ್ಷಿಕ ಯೋಜನೆ ೧೯೫೬-೬೧ರಲ್ಲಿ ೩೦೭ ಕೋಟಿ ಶಿಕ್ಷಣಕ್ಕೆ ೧೯೬೧ ಉಚಿತ ಶಿಕ್ಷಣ ಮತ್ತು ಕಡ್ಡಾಯ ಶಿಕ್ಷಣ ಜಾರಿಗೆ ಬಂದವು. ಶಾಲೆಗಳ ಸಂಖ್ಯೆ ಹೆಚ್ಚಾದವು. ಶಿಕ್ಷಣ ವಿತರಣಾ ಇಲಾಖೆ ಸ್ಥಾಪಿಸಲಾಯಿತು.

೩. ಮೂರನೇ ಪಂಚವಾರ್ಷಿಕ ಯೋಜನೆ ೧೯೬೧-೬೬ರಲ್ಲಿ ೫೬೦ ಕೋಟಿ ಖರ್ಚು, ಶಿಕ್ಷಕರ ತರಬೇತಿಗೆ ಪ್ರಾಮುಖ್ಯತೆ ನೀಡಲಾಯಿತು. ಪಠ್ಯಕ್ರಮದ ಪುನರ್ ರಚನೆ ಮಾಡಲಾಯಿತು.

೪. ನಾಲ್ಕನೇ ಪಂಚವಾರ್ಷಿಕ ಯೋಜನೆ ೧೯೬೯-೭೪ರಲ್ಲಿ ೩೯೮.೫ ಕೋಟಿ ಖರ್ಚು. ಇದರಲ್ಲಿ ಅಪವ್ಯಯ ಮತ್ತು ಅನುತ್ತೀರ್ಣತೆಯನ್ನು ಕಡಿಮೆ ಮಾಡುವುದು.

೫. ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ೧೯೭೪-೭೯ರಲ್ಲಿ ೯೨ ಕೋಟಿ ಖರ್ಚು. ಇದರಲ್ಲಿ ಮಕ್ಕಳ ದಿನದ ಹಾಜರಿ ಸುಧಾರಣೆ, ಪಠ್ಯ ವಸ್ತುವಿನ ವಿಮರ್ಶೆ, ಶಿಶುವಿಹಾರ ಮುಂತಾದವುಗಳ ಬಗ್ಗೆ ಮಹತ್ವ ನೀಡಲಾಯಿತು.

೬. ಆರನೇ ಪಂಚವಾರ್ಷಿಕ ಯೋಜನೆ ೧೯೮೦-೮೫ರಲ್ಲಿ ೧೨೫೩ ಕೋಟಿ ಖರ್ಚು. ಇದರಲ್ಲಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣಕ್ಕೆ ಹೆಚ್ಚಿನ ಗಮನ ನೀಡಲಾಯಿತು.

೭. ಏಳನೆಯ ಪಂಚವಾರ್ಷಿಕ ಯೋಜನೆ ೧೯೮೫-೯೦ರಲ್ಲಿ ೭೬.೩೩ಕೋಟಿ ಖರ್ಚು. ಉಚಿತ ಬಟ್ಟೆ, ಮಧ್ಯಾಹ್ನ ಉಪಹಾರ, ವಸತಿ ಇವುಗಳ ಮೂಲಕ ಮಕ್ಕಳನ್ನು ಶಾಲೆಗೆ ಬರಲು ಪ್ರೇರೆಪಿಸುವುದು.

೮. ಎಂಟನೆಯ ಪಂಚವಾರ್ಷಿಕ ಯೋಜನೆ ೧೯೯೨-೯೭ರಲ್ಲಿ ೯.೨೦೧ ಕೋಟಿ ಖರ್ಚು. ಈ ಯೋಜನೆ ಅಡಿ ಯಾವುದೇ ಮಗು ಪ್ರಾಥಮಿಕ ಶಾಲೆ ತಲುಪಲು ಒಂದು ಕಿ.ಮೀ.ಗಿಂತ ಹೆಚ್ಚು ನಡೆಯಬಾರದು ಎಂದು ಸೂಚಿಸಲಾಯಿತು.

ಅನಂತರ ಕಾಯ್ದೆಗಳ ಮೂಲಕ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯ ಬೆಳವಣಿಗೆಗಳಾದವು. ಅವು ಯಾವುದೆಂದರೆ,

೧. ಮೈಸೂರು ಕಡ್ಡಾಯ ಶಿಕ್ಷಣ ಕಾಯ್ದೆ ೧೯೬೧ ಈ ಕಾಯ್ದೆಯ ಅನ್ವಯ ಮಕ್ಕಳಿಗಾಗಿ ಉಚಿತ ಕಡ್ಡಾಯ ಶಿಕ್ಷಣ ಮತ್ತು ಸಾರ್ವತ್ರಿಕ ಶಿಕ್ಷಣವನ್ನು ಪ್ರಾರಂಭಿಸಲಾಯಿತು.

೨. ೧೯೮೫ರ ಕರ್ನಾಟಕ ಶಿಕ್ಷಣ ಕಾಯ್ದೆ ಈ ಅಧಿನಿಯಮದ ಮೂಲ ಉದ್ದೇಶವೆಂದರೆ ರಾಜ್ಯದಲ್ಲಿರುವ ಶಿಕ್ಷಣ ಸಂಸ್ಥೆಗಳ ಸಂಘಟನೆ ಅಭಿವೃದ್ಧಿ ಮತ್ತು ನಿಯಂತ್ರಣವನ್ನು ಸಾಧಿಸುವ

ಉಪಬಂಧಗಳನ್ನು ಕಲ್ಪಿಸುವುದಾಗಿದೆ. ಇದರ ಜೊತೆಗೆ ಕರ್ನಾಟಕದಲ್ಲಿ ಹೆಣ್ಣುಮಕ್ಕಳ ದಾಖಲಾತಿ ಮತ್ತು ಹಾಜರಾತಿ ಹಾಗೂ ಸ್ತ್ರೀಯರ ಸಾಕ್ಷರತೆಗೆ ಕಾಳಜಿವಹಿಸಿ ಹೆಣ್ಣುಮಕ್ಕಳ ಪ್ರಾಥಮಿಕ ಶಿಕ್ಷಣಕ್ಕೆ ವಿಶೇಷ ಅಧ್ಯತೆ ನೀಡಿದ್ದು, ಪ್ರಾಥಮಿಕ ಶಾಲಾ ಶಿಕ್ಷಕರಲ್ಲಿ ಮಹಿಳಾ ಶಿಕ್ಷಕಿಯರ ನೇಮಕ ಅಗತ್ಯವಿರುವ ಕಡೆ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿ ಗ್ರಾಮೀಣ ಬಾಲಕಿಯರಿಗೆ ಹಾಜರಾತಿ, ಶಿಷ್ಯವೇತನ ಹೀಗೆ ಹಲವಾರು ಕಾರ್ಯಕ್ರಮಗಳು ಹಾಗೂ ಮಹಿಳಾ ಶಿಕ್ಷಣಕಕೆ ಅಧ್ಯತೆ ನೀಡಿ ಪ್ರತ್ಯೇಕ ಶಾಲಾ ಕಾಲೇಜುಗಳು ಮತ್ತು ಸಹ ಶಿಕ್ಷಣದ ಕಾಲೇಜುಗಳು ವಿಸ್ತರಿಸಲಾಯಿತು. ಮಹಿಳಾ ಶಿಕ್ಷಣಕ್ಕೆ ಸರ್ಕಾರ ಹಮ್ಮಿಕೊಂಡಿರುವ ಹಲವಾರು ಕಾರ್ಯಕ್ರಮಗಳು ಅವು ಯಾವುದೆಂದರೆ,

೧. ೬ ರಿಂದ ೧೪ ವರ್ಷದ ಹೆಣ್ಣುಮಕ್ಕಳಿಗೆ ಉಚಿತ ಶಿಕ್ಷಣ

೨. ಉಚಿತ ಸಮವಸ್ತ್ರ, ಪಠ್ಯಪುಸ್ತಕ, ಸಲಕರಣೆಗಳು

೩. ಮಧ್ಯಾಹ್ನ ಉಪಹಾರ ಯೋಜನೆ

೪. ಬಾಲಕಿಯರಿಗೆ ಹಾಜರಾತಿ, ಶಿಷ್ಯವೇತನ

೫. ವಿದ್ಯಾರ್ಥಿ ವೇತನ

೬. ವಸತಿ ಶಾಲೆ ಮತ್ತು ವಸತಿನಿಲಯಗಳು

೭. ಬಾಲಿಕಾ ಸಮೃದ್ಧಿ ಯೋಜನೆ

೮. ಮಹಿಳೆಯರಿಗಾಗಿ ಪ್ರತ್ಯೇಕ ಕೋರ್ಸ್ ಮತ್ತು ತರಬೇತಿಗಳು

೯. ಸಹ ಶಿಕ್ಷಣದಲ್ಲಿ ಅವಕಾಶ

೧೦. ಬಾ ಬಾಲೆ ಶಾಲೆಗೆ

೧೧. ಮೀಸಲಾತಿ

ಈ ಮೇಲಿನ ಸೌಲಭ್ಯಗಳನ್ನು ಸ್ತ್ರೀಯರ ಶೈಕ್ಷಣಿಕ ಅಭಿವೃದ್ಧಿಗೆ ಹಮ್ಮಿಕೊಂಡಿರುವುದು ಇದರ ಜೊತೆಗೆ ಪೂರಕವಾದ ಅಂಗನವಾಡಿ, ಶಿಶುಪಾಲನಾ ಕೇಂದ್ರಗಳ ಸೌಲಭ್ಯ, ಸಮಗ್ರ ಶಿಶು ಅಭಿವೃದ್ಧಿ ಯೋಜನೆ ಹಾಗೂ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ಮತ್ತು ಪದವಿಪೂರ್ವ ಶಿಕ್ಷಣದವರೆಗೆ ಮಹಿಳೆಯರಿಗೆ ಉಚಿತ ಶಿಕ್ಷಣ ಮತ್ತು ಕಡಿಮೆಶುಲ್ಕ ಜಾರಿಯಲ್ಲಿ ಬಂದಿದೆ. ಹೀಗೆ ಕರ್ನಾಟಕ ಸರ್ಕಾರ ಮಹಿಳೆಯರಿಗಾಗಿ ವಿವಿಧ ಶೈಕ್ಷಣಿಕ ಸೌಲಭ್ಯಗಳನ್ನು ಕಲ್ಪಿಸಿದ್ದರಿಂದ ಕರ್ನಾಟಕದಲ್ಲಿ ೫೧,೨೬೩ ಹಿರಿಯ ಮತ್ತು ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ೭೪,೦೧೪,೧೦೦ ಮತ್ತು ೮,೫೮೨ ಪ್ರೌಢಶಾಲೆಗಳಲ್ಲಿ ೮,೯೯,೩೫೨ ಬಾಲಕಿಯರು ಹಾಗೂ ೨,೦೪೨ ಪದವಿಪೂರ್ವ ಕಾಲೇಜುಗಳಲ್ಲಿ ೬,೪೦,೩೭೫ ವಿದ್ಯಾರ್ಥಿಗಳಿದ್ದು ಇದರಲ್ಲಿ ಸುಮಾರು ಶೇ. ೪೦ರಷ್ಟು ಬಾಲಕಿಯರು ಇದ್ದಾರೆ. ಕರ್ನಾಟಕದಲ್ಲಿ ಪುರುಷ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ಈ ರೀತಿಯಾಗಿದೆ.

**ಕೋಷ್ಟಕ ೪.೫ ಪುರುಷರ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣದಲ್ಲಿನ ವ್ಯತ್ಯಾಸಗಳು**

| ವರ್ಷ | ಒಟ್ಟು | ಸಾಕ್ಷರತಾ ಪ್ರಮಾಣ | | ವ್ಯತ್ಯಾಸಗಳು |
|---|---|---|---|---|
| | | ಪುರುಷ | ಮಹಿಳೆ | |
| ೧೯೬೧ | ೨೯.೮೦ | ೪೨.೨೯ | ೧೬.೭೦ | ೨೫.೫೯ |
| ೧೯೭೧ | ೩೬.೮೩ | ೪೮.೫೧ | ೨೪.೫೫ | ೨೩.೯೬ |
| ೧೯೮೧ | ೪೬.೨೧ | ೫೮.೭೩ | ೩೩.೦೭ | ೨೫.೫೬ |
| ೧೯೯೧ | ೫೬.೦೪ | ೬೭.೨೬ | ೪೪.೩೪ | ೨೨.೯೨ |
| ೨೦೦೧ | ೬೭.೦೪ | ೭೬.೨೯ | ೫೭.೪೫ | ೧೫.೮೪ |

ಆಧಾರ: ಶಿಕ್ಷಣ ಮಂಡಳ

ಈ ಮೇಲಿನ ಕೋಷ್ಟಕವನ್ನು ನೋಡಿದಾಗ ರಾಜ್ಯಮಟ್ಟದಲ್ಲಿ ೧೯೬೧ ರಿಂದ ೧೯೯೧ರವರೆಗೆ ಪುರುಷಹಾಗೂ ಸಾಕ್ಷರತಾ ಪ್ರಮಾಣದಲ್ಲಿ ಅರ್ಧದಷ್ಟು ವ್ಯತ್ಯಾಸವಿದೆ. ೧೯೯೧ ರಿಂದ ೨೦೦೧ನ್ನು ಗಮನಿಸಿದಾಗ ಪುರುಷರಿಗೆ ಮತ್ತು ಸ್ತ್ರೀಯರ ನಡುವಿನ ಅಂತರ ಕಡಿಮೆಯಾಗಿದ್ದು ಶಿಕ್ಷಣದಿಂದ ಮಹಿಳೆ ಸಾಮಾಜಿಕವಾಗಿ ಬದಲಾವಣೆಯಾಗಿರುವುದು ಸತ್ಯವಾದರೂ ಇಂದು ಇನ್ನೂ ಶೇ. ೪೨.೦೬ರಷ್ಟು ಮಹಿಳೆಯರನ್ನು ಶಿಕ್ಷಣದ ಮುಖ್ಯವಾಹಿನಿಗೆ ತರಲು ಸಾಧ್ಯವಾಗಿಲ್ಲ. ಸರ್ಕಾರ ಹಮ್ಮಿಕೊಂಡಿರುವ ಎಲ್ಲಾ ಯೋಜನೆಗಳು ಸಹ ಗಿರಿಜನರಾದ ಗೌಳಿಗರ ಮಕ್ಕಳಿಗೂ ಅನ್ವಯವಾಗುತ್ತದೆ. ಇತ್ತೀಚೆಗೆ ವಿಶ್ವಬ್ಯಾಂಕ್ ನೆರವಿನಿಂದ ಆರಂಭವಾದ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಗೆ ಒಬ್ಬ ನಿರ್ದೇಶಕರು ನೇಮಕಗೊಂಡಿದ್ದಾರೆ. ಇದು ವಿಶೇಷ ಕಾಳಜಿಯುಳ್ಳ ಒಂದು ಬೆಳವಣಿಗೆಯಾಗಿದೆ.

ಇನ್ನು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಕ್ಕೆ ಸಂಬಂಧಿಸಿದ ಮಕ್ಕಳ ವಿವಿಧ ಆಯಾಮಗಳನ್ನು ಮೂರು ನೆಲೆಗಳಲ್ಲಿ ನಾವು ವಿಶ್ಲೇಷಿಸಹುದು. ದಾಖಲಾತಿಗೆ ಸಂಬಂಧಿಸಿದ ಸ್ಥಿತಿಯನ್ನು ಅದರ ಪ್ರಾದೇಶಿಕ ಸ್ವರೂಪವನ್ನು, ದಲಿತರು ಹಾಗೂ ದಲಿತೇತರ ಆಯಾಮಗಳನ್ನು ಹಾಗೂ ದಾಖಲಾತಿಯ ಲಿಂಗಸಂಬಂಧಿ ನೆಲೆಗಳನ್ನು ಒಳಪಡಿಸಬಹುದು. ಕೋಷ್ಟಕ ೪.೫ರಲ್ಲಿ ೨೦೦೫ಕ್ಕೆ ಸಂಬಂಧಿಸಿದಂತೆ ಒಂದರಿಂದ ಏಳನೆಯ, ಎಂಟರಿಂದ ಹತ್ತನೆಯ ಹಾಗೂ ಒಟ್ಟು ಒಂದರಿಂದ ಹತ್ತನೆಯ ತರಗತಿಗಳ ದಾಖಲಾತಿ ವಿವರಗಳನ್ನು ವಿಭಾಗವಾರು ಹಾಗೂ ರಾಜ್ಯಕ್ಕೆ ಸಂಬಂಧಿಸಿದಂತೆ ನೀಡಲಾಗಿದೆ.

**ಕೋಷ್ಟಕ ೪.೬ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದಲ್ಲಿ ೧ ರಿಂದ ೧೦ನೇ ತರಗತಿ ದಾಖಲಾತಿ ಪ್ರಮಾಣ ಕರ್ನಾಟಕ - ೨೦೦೫**

| ವಿಭಾಗಗಳು ಪ್ರದೇಶ ರಾಜ್ಯ | ಜನಸಂಖ್ಯೆ ೨೦೦೧ | ದಾಖಲಾತಿ ೧-೭ ತರಗತಿ | ೮-೧೦ ತರಗತಿ | ೧-೧೦ ತರಗತಿ |
|---|---|---|---|---|
| ಬೆಂಗಳೂರು | ೧೮,೪೯೦,೮೧೧ | ೩.೫೩೯.೯೪೫ | ೭೫೪.೪೪೬ | ೩.೨೮೪.೩೯೧ |
| | (೩೪.೯೯) | (೩೨.೦೩) | (೩೭.೦೫) | (೩೩.೦೫) |
| ಮೈಸೂರು | ೧೧,೭೯೧.೩೦೨ | ೧.೫೨೭.೩೫೭ | ೫೦೧.೯೪೪ | ೨.೦೨೯.೩೦೧ |
| | (೨೨.೩೧) | (೧೯.೩೨) | (೨೪.೬೫) | (೨೦.೪೨) |
| ದಕ್ಷಿಣ ಕನ್ನಡ | ೩೦,೨೮೨,೧೧೩ | ೪.೦೫೭.೩೦೨ | ೧.೨೫೬.೩೯೦ | ೫.೩೧೩.೬೯೨ |
| | (೫೭.೩೦) | (೫೧.೩೫) | (೬೧.೭೧) | (೫೩.೪೮) |
| ಬೆಳಗಾವಿ | ೧೩,೦೪೨,೧೬೩ | ೨.೧೪೧.೭೨೪ | ೫೦೪.೮೫೪ | ೨.೬೪೬.೫೭೮ |
| | (೨೪.೬೮) | (೨೭.೧೧) | (೨೪.೮೦) | (೨೬.೬೩) |
| ಗುಲಬರ್ಗಾ | ೯,೫೨೬,೨೮೬ | ೧.೭೦೧.೭೦೭ | ೨೭೪.೬೩೪ | ೧.೯೭೬.೩೪೧ |
| | (೧೮.೦೨) | (೨೧.೫೪ | (೧೩.೪೯) | (೧೯.೮೯) |
| ಉತ್ತರ ಕರ್ನಾಟಕ | ೨೨,೫೬೮,೪೪೯ | ೩.೮೪೩.೪೨೧ | ೭೭೯.೪೮೮ | ೪.೬೨೨.೯೧೯ |
| | (೪೨.೭೦) | (೪೮.೬೫) | (೩೮.೨೯) | (೪೬.೫೨) |
| ರಾಜ್ಯ | ೫೨,೫೮೦,೫೧೨ | ೭.೯೦೦.೭೩೩ | ೨.೦೩೫.೮೭೮ | ೯.೯೩೬.೬೧೧ |
| | (೧೦೦.೦೦) | (೧೦೦.೦೦) | (೧೦೦.೦೦) | (೧೦೦.೦೦) |

ಮೂಲ: ಕರ್ನಾಟಕ ಸರ್ಕಾರ ೨೦೦೫, ತಾಲೂಕುವಾರು ಶೈಕ್ಷಣಿಕ ಅಂಕಿ-ಅಂಶ ೨೦೦೫

ಈ ಕೋಷ್ಟಕವು ತೋರಿಸುತ್ತಿರುವ ಮಾಹಿತಿ ಎಂದರೆ ಒಟ್ಟು ಮಕ್ಕಳ ದಾಖಲಾತಿಯ ಪ್ರಾದೇಶಿಕ ಸ್ವರೂಪಕ್ಕೆ ಇದು ಸಂಬಂಧಿಸಿದೆ. ಕರ್ನಾಟಕ ರಾಜ್ಯದ ಎರಡು ಪ್ರದೇಶಗಳಾದ ದಕ್ಷಿಣ ಕರ್ನಾಟಕ ಮತ್ತು ಉತ್ತರ ಕರ್ನಾಟಕಗಳ ನಡುವೆ ಜನಸಂಖ್ಯೆ ಹಂಚಿಕೆಗಿಂತ ದಾಖಲಾದ ಮಕ್ಕಳ ಹಂಚಿಕೆಯು ಭಿನ್ನವಾಗಿದೆ. ಇದಕ್ಕೆ ಪೂರಕವಾಗಿ ನಾವು ರಾಜ್ಯದಲ್ಲಿನ ೦೬ ವಯೋಮಾನದ ಮಕ್ಕಳ ಹಂಚಿಕೆಯನ್ನು ಮುಂದಿನ ಕೋಷ್ಟಕದಲ್ಲಿ ನೀಡಲಾಗಿದೆ. ಅದು ಈ ರೀತಿಯಾಗಿದೆ.

**ಕೋಷ್ಟಕ ೪.೭ ಕರ್ನಾಟಕದಲ್ಲಿ ೦೬ ವಯೋಮಾನದ ಮಕ್ಕಳ ಸಂಖ್ಯೆ ೧೯೯೧-೨೦೦೧**

| ವಿಭಾಗಗಳು ಪ್ರದೇಶ ರಾಜ್ಯ | ೦-೬ ವಯೋಮಾನದ ಮಕ್ಕಳು ೧೯೯೧ | | ೦-೬ ವಯೋಮಾನದ ಮಕ್ಕಳು ೨೦೦೧ | | ೧೯೯೧-೨೦೦೧ ದಶಕವಾರು ಬೆಳವಣಿಗೆ | |
|---|---|---|---|---|---|---|
| | ಸಂಖ್ಯೆ (ಲಕ್ಷಗಳಲ್ಲಿ) | ಪ್ರಮಾಣ (ಶೇ.) | ಸಂಖ್ಯೆ (ಲಕ್ಷಗಳಲ್ಲಿ) | ಪ್ರಮಾಣ (ಶೇ.) | ಸಂಖ್ಯೆ (ಲಕ್ಷಗಳಲ್ಲಿ) | ಪ್ರಮಾಣ (ಶೇ.) |
| ಬೆಂಗಳೂರು ವಿಭಾಗ | ೨೩.೧೮ | ೩೧.೦೧ | ೨೨.೯೦ | ೩೧.೮೮ | -೦.೩೮ | -೦.೨೧ |
| ಮೈಸೂರು ವಿಭಾಗ | ೧೫.೬೩ | ೨೦.೯೧ | ೧೩.೯೫ | ೧೯.೪೨ | -೧.೬೮ | -೧೦.೭೫ |
| ದಕ್ಷಿಣ ಕನ್ನಡ ವಿಭಾಗ | ೩೮.೮೧ | ೫೧.೯೨ | ೩೬.೮೫ | ೫೧.೩೦ | ೧.೯೬ | -೫.೦೫ |
| ಬೆಳಗಾವಿ ವಿಭಾಗ | ೧೯.೭೦ | ೨೬.೩೫ | ೧೯.೧೦ | ೨೬.೨೯ | -೦.೬೦ | -೩.೦೫ |
| ಗುಲಬರ್ಗಾ ವಿಭಾಗ | ೧೬.೨೫ | ೨೧.೭೩ | ೧೫.೮೮ | ೨೨.೧೧ | ೦.೩೭ | -೨.೨೮ |
| ಉ.ಕ ವಿಭಾಗ | ೩೫.೯೫ | ೪೮.೦೮ | ೩೪.೯೮ | ೪೮.೭೦ | ೦.೯೭ | -೨.೭೦ |
| ಕರ್ನಾಟಕ ರಾಜ್ಯ | ೭೪.೭೬ | ೧೦೦.೦೦ | ೭೧.೮೩ | ೧೦೦.೦೦ | -೨.೯೩ | ೨.೯೨ |

ಕೋಷ್ಟಕದಲ್ಲಿ ಕಾಣುವಂತೆ ರಾಜ್ಯಮಟ್ಟದಲ್ಲಿ ೧೯೯೧ರಿಂದ ೨೦೦೧ರ ಅವಧಿಯಲ್ಲಿ ೦-೬ ವಯೋಮಾನದ ಮಕ್ಕಳ ಸಂಖ್ಯೆ ಕಡಿಮೆಯಾಗಿದೆ. ಎಲ್ಲಾ ವಿಭಾಗಗಳಲ್ಲೂ ಅವರ ಗಾತ್ರ ಕಡಿಮೆಯಾಗಿದೆ. ಮಕ್ಕಳ ಸಂಖ್ಯೆಯಲ್ಲಿನ ಕಡಿತವು ಎಲ್ಲಾ ವಿಭಾಗಗಳಲ್ಲಿ ಸಮನಾಗಿಲ್ಲ. ಜನಸಂಖ್ಯೆಯ ವಿಭಾಗವಾರು ಹಂಚಿಕೆ ಪ್ರಮಾಣವು ಭಿನ್ನವಾಗಿದೆ. ರಾಜ್ಯದ ಜನಸಂಖ್ಯೆಯಲ್ಲಿ ದಕ್ಷಿಣ ಕರ್ನಾಟಕದ ಪಾಲು ಶೇ. ೫೭.೩೦. ಶಾಲಾ ದಾಖಲಾತಿಯಲ್ಲಿ ಅದರ ಪ್ರಮಾಣ ಶೇ. ೫೩.೪೮ ಎಂದು ನಾವು ಗುರುತಿಸಬಹುದು. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಕೇವಲ ೪೭.೭೦ ಪಾಲು ಉತ್ತರ ಕರ್ನಾಟಕ ಪ್ರದೇಶವು ಶಾಲಾ ದಾಖಲಾತಿಯಲ್ಲಿ ಶೇ. ೪೬.೫೨ರಷ್ಟು ಇದೆ.

ಇನ್ನೂ ವಿಭಾಗವಾರು ಶಾಲಾ ದಾಖಲಾತಿಯಲ್ಲಿ ಒಂದರಿಂದ ಏಳನೆಯ ಹಾಗೂ ಎಂಟರಿಂದ ಹತ್ತನೆಯ ತರತಿಗಳಗೆ ಪ್ರಾದೇಶಿಕ ಅಸಮಾನತೆ ಹೇಗಿದೆ ಎನ್ನುವುದನ್ನು ಮುಂದಿನ ಕೋಷ್ಟಕದಲ್ಲಿ ಗಮನಿಸೋಣ.

**ಕೋಷ್ಟಕ ೪.೮ ೧ ರಿಂದ ೭ನೇ ಹಾಗೂ ೧ ರಿಂದ ೧೦ನೇ ತರಗತಿಗಳ ದಾಖಲಾತಿ ಪ್ರಮಾಣ**

| ಸಂ. | ವಿಭಾಗಗಳು | ದಾಖಲಾತಿ ಪ್ರಮಾಣ ಶೇಕಡ | |
|---|---|---|---|
| | | ೧-೭ನೆಯ ತರಗತಿ | ೮-೧೦ನೆ ತರಗತಿ |
| ೧. | ಬೆಂಗಳೂರು | ೭೭.೦೩ | ೨೨.೯೭ |
| ೨. | ಮೈಸೂರು | ೭೫.೨೭ | ೨೪.೭೩ |
| ೩. | ದ.ಕ.ಪ್ರದೇಶ | ೭೬.೩೪ | ೨೩.೬೬ |

| | | | |
|---|---|---|---|
| ೪. | ಬೆಳಗಾವಿ | ೮೦.೯೨ | ೧೯.೦೮ |
| ೫. | ಗುಲಬರ್ಗಾ | ೮೬.೧೦ | ೧೩.೯೦ |
| ೬. | ಉ.ಕ. ಪ್ರದೇಶ | ೮೩.೧೪ | ೧೬.೮೬ |
| ೭. | ಕರ್ನಾಟಕ | ೭೯.೫೧ | ೨೦.೪೯ |

ಈ ಕೋಷ್ಟಕದಲ್ಲಿ ಹೇಳಿರುವಂತೆ ರಾಜ್ಯಮಟ್ಟದಲ್ಲಿ, ಪ್ರಾದೇಶಿಕ ಮಟ್ಟದಲ್ಲಿ ಹಾಗೂ ವಿಭಾಗ ಮಟ್ಟದಲ್ಲಿ ಒಂದರಿಂದ ಏಳನೆಯ ತರಗತಿವರೆಗಿನ ಮಕ್ಕಳ ದಾಖಲಾತಿಯು ಎಂಟರಿಂದ ೧೦ನೆಯ ತರಗತಿವರೆಗಿನ ದಾಖಲಾತಿ ಪ್ರಮಾಣಕ್ಕಿಂತ ಅಧಿಕವಾಗಿದೆ. ಗುಲಬರ್ಗಾ ವಿಭಾಗದಲ್ಲಿ ಉಳಿದೆಲ್ಲ ವಿಭಾಗಗಳಿಗಿಂತ ಕೆಳಮಟ್ಟದಲ್ಲಿದೆ. ಶಾಲಾ ದಾಖಲಾತಿಗೆ ಸಂಬಂಧಿಸಿದ ಒಟ್ಟು ಸಾಧನೆ ಹಾಗೂ ಅದರ ಪ್ರಾದೇಶಿಕ ಸ್ವರೂಪವನ್ನು ಸ್ಪಷ್ಟವಾಗಿ ತೋರಿಸುತ್ತದೆ. ಕೋಷ್ಠಕದಲ್ಲಿನ ಅಂಕಿ ಅಂಶಗಳ ಮೂಲಕ ರೂಪಿಸಬಹುದು.

ಶಾಲಾ ದಾಖಲಾತಿಯ ಲಿಂಗ ಸ್ವರೂಪವನ್ನು ಸರಳವಾದ ಲಿಂಗ ಸಮಾನತಾ ಸೂಚಿ ಎಂಬ ಮಾಪನದ ಮೂಲಕ ಗುರುತಿಸಬಹುದು. ದಾಖಲಾತಿಗೆ ಸಂಬಂಧಿಸಿದಂತೆ ಮಹಿಳೆಯರ ಪ್ರಮಾಣ ಎಷ್ಟಿದೆ ಎನ್ನುವುದನ್ನು ಮುಂದಿನ ಕೋಷ್ಠಕದ ಮೂಲಕ ವಿವರಿಸಲಾಗಿದೆ.

**ಕೋಷ್ಟಕ ೪.೯ ಪ್ರಾಥಮಿಕ ಹಾಗೂ ಪ್ರೌಢಶಾಲಾ ದಾಖಲಾತಿಯಲ್ಲಿ ಮಹಿಳೆಯರ ಪ್ರಮಾಣ (೨೦೦೪-೨೦೦೫)**

| ವಿಭಾಗಗಳು | ಮಹಿಳೆಯರ ಸಮಾನತಾ ಸೂಚಿ | | |
|---|---|---|---|
| ಪ್ರದೇಶ/ರಾಜ್ಯ | ೧-೭ | ೮-೧೦ | ೧-೧೦ |
| ಬೆಂಗಳೂರು ವಿಭಾಗ | ೬೪.೯೧ | ೮೯.೯೬ | ೯೩.೭೫ |
| ಮೈಸೂರು ವಿಭಾಗ | ೯೪.೫೮ | ೯೪.೬೭ | ೯೪.೬೦ |
| ದಕ್ಷಿಣ ಕನ್ನಡ ಪ್ರದೇಶ | ೯೪.೭೯ | ೯೧.೮೧ | ೯೪.೦೮ |
| ಬೆಳಗಾವಿ ವಿಭಾಗ | ೯೨.೭೨ | ೭೮.೭೦ | ೮೯.೮೮ |
| ಗುಲಬರ್ಗಾ ವಿಭಾಗ | ೮೯.೮೬ | ೭೫.೨೩ | ೮೭.೬೯ |
| ಉತ್ತರ ಕನ್ನಡ ಪ್ರದೇಶ | ೯೧.೪೪ | ೭೭.೪೬ | ೮೮.೯೩ |
| ಕರ್ನಾಟಕ ರಾಜ್ಯ | ೯೩.೧೪೭ | ೮೬.೦೫ | ೯೧.೬೫ |

ಈ ಕೋಷ್ಟಕದಿಂದ ಸ್ಪಷ್ಟವಾಗಿ ಗೋಚರಿಸುವ ಸಂಗತಿಯೆಂದರೆ ಮಹಿಳೆಯರ ಸಮಾನತಾ ಸೂಚಿಯ ಮಟ್ಟವು ೧-೭ನೆಯ ತರಗತಿಗಳಲ್ಲಿ ಅಧಿಕವಾಗಿದ್ದು, ೮-೧೦ನೆಯ ತರಗತಿಗಳಲ್ಲಿ ಅದು ಕಡಿಮೆ ಇದೆ. ಪ್ರದೇಶ ವಿಭಾಗವೊಂದರ ಅಭಿವೃದ್ಧಿ ಮಟ್ಟಕ್ಕೂ ಮತ್ತು ಅದಕ್ಕೆ ಸಂಬಂಧಿಸಿದ

ಸೂಚಿಯ ಪ್ರಮಾಣಕ್ಕೂ ಸಂಬಂಧವಿರುವಂತೆ ಕಾಣುತ್ತದೆ. ಅಭಿವೃದ್ಧಿಯ ಗತಿ ಉನ್ನತಮಟ್ಟಕ್ಕೆ ಏರಿದಂತೆ ಲಿಂಗ ಸಮಾನತೆ ಉಂಟಾಗುತ್ತದೆ ಎನ್ನುವುದು ಹೇಳಲು ಖಚಿತವಾದ ಆಧಾರಗಳಿರುವುದಿಲ್ಲ. ಆದರೆ ಸ್ವಲ್ಪ ಮಟ್ಟಿನ ಬದಲಾವಣೆಯನ್ನು ಕಾಣಬಹುದು.

ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ ನಾವು ಎದುರಿಸುತ್ತಿರುವ ಸಮಸ್ಯೆಯೆಂದರೆ ಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವ ಸಂಗತಿಯಾಗಿದೆ. ಪ್ರತಿಯೊಂದು ಮಗುವಿಗೆ ೧೦ವರ್ಷಗಳ ಶಾಲಾ ಶಿಕ್ಷಣವನ್ನು ಕಡ್ಡಾಯವಾಗಿ ಉಚಿತವಾಗಿ ಒದಗಿಸುವ ಜವಾಬ್ದಾರಿಗೆ ಸಮಾಜವು ಬದ್ಧವಾಗಿದೆ. ಆದರೆ ೧೦ ವರ್ಷಗಳ ಶಾಲಾ ಶಿಕ್ಷಣವನ್ನು ಪಡೆಯುವ ಭಾಗ್ಯ ಅನೇಕ ಮಕ್ಕಳಿಗೆ ಇರುವುದಿಲ್ಲ. ಆವರ್ತನ ರೀತಿಯ ವಲಸೆಯು ವ್ಯಾಪಕವಾಗಿರುವ ಪ್ರದೇಶಗಳಲ್ಲಿ ಉದ್ಯೋಗದ ಭದ್ರತೆಯ ಪಾತ್ರ ತುಂಬಾ ಮುಖ್ಯವಾಗಿರುತ್ತದೆ. ಈ ಸಮಸ್ಯೆಯು ಕೆಳವರ್ಗಗಳಲ್ಲಿ ಮಕ್ಕಳಲ್ಲಿ ಅಧಿಕವಾಗಿರುವುದು. ಹಾಗೆಯೆ ಗಂಡು ಮಕ್ಕಳಿಗಿಂತ ಹೆಣ್ಣುಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವುದು ಅಧಿಕ. ಜಿಲ್ಲಾವಾರು ಮಟ್ಟದಲ್ಲಿ ಶಾಲೆ ಬಿಡುವ ಮಕ್ಕಳ ಪ್ರಮಾಣವನ್ನು ಈ ಮುಂದಿನ ಕೋಷ್ಟಕದಲ್ಲಿ ತೋರಿಸಲಾಗಿದೆ.

**ಕೋಷ್ಟಕ ೪.೧೦ ಶಾಲೆಯನ್ನು ಮಧ್ಯದಲ್ಲಿ ಬಿಡುವ ಮಕ್ಕಳ ಪ್ರಮಾಣ: ೨೦೦೫**

**(೧೯೯೬-೯೭ರಲ್ಲಿ ದಾಖಲಾದ ಮಕ್ಕಳು)**

| ಸಂ. | ಜಿಲ್ಲೆಗಳು | ೧ ರಿಂದ ೭ನೆಯ ತರಗತಿ (ಶೇಕಡ) | | |
|---|---|---|---|---|
| | | ಗಂಡು | ಹೆಣ್ಣು | ಒಟ್ಟು |
| ೧. | ಬೆಂಗಳೂರು ನಗರ | ೧೭.೫೮ | ೧೫.೨೪ | ೧೫.೯೩ |
| ೨. | ದಾವಣಗೆರೆ | ೧೫.೪೫ | ೧೩.೩೮ | ೧೪.೪೦ |
| ೩. | ಕೋಲಾರ | ೧೨.೫೩ | ೧೧.೧೭ | ೧೧.೮೮ |
| ೪. | ಶಿವಮೊಗ್ಗ | ೧೦.೪೦ | ೯.೩೬ | ೯.೯೦ |
| ೫. | ಚಿತ್ರದುರ್ಗ | ೯.೫೩ | ೯.೭೪ | ೯.೬೩ |
| ೬. | ಬೆಂಗಳೂರು ಗ್ರಾಮಾಂತರ | ೭.೧೦ | ೬.೪೧ | ೬.೭೭ |
| ೭. | ತುಮಕೂರು | ೬.೦೧ | ೫.೯೦ | ೫.೯೬ |
| | (ಬೆಂಗಳೂರ ವಿಭಾಗ) | | | |
| ೮. | ಮಂಡ್ಯ | ೧೧.೦೭ | ೧೦.೨೭ | ೧೦.೬೯ |
| ೯. | ಚಾಮರಾಜ ನಗರ | ೧೦.೪೨ | ೧೦.೫೧ | ೧೦.೪೬ |
| ೧೦. | ಮೈಸೂರು | ೮.೨೯ | ೯.೧೦ | ೮.೬೮ |

| | | | | |
|---|---|---|---|---|
| ೧೧. | ಹಾಸನ | ೮.೮೩ | ೭.೮೬ | ೮.೩೫ |
| ೧೨. | ಕೊಡಗು | ೭.೬೧ | ೭.೬೫ | ೭.೬೩ |
| ೧೩. | ಚಿಕ್ಕಮಗಳೂರು | ೫.೫೪ | ೫.೧೯ | ೫.೩೬ |
| ೧೪. | ದಕ್ಷಿಣ ಕನ್ನಡ | ೩.೯೫ | ೩.೭೦ | ೩.೮೩ |
| ೧೫. | ಉಡುಪಿ | ೩.೨೭ | ೩.೫೮ | ೩.೪೨ |
| | (ಮೈಸೂರು ವಿಭಾಗ) | | | |
| ೧೬. | ಬಿಜಾಪುರ | ೨೪.೬೬ | ೨೭.೨೭ | ೨೫.೮೧ |
| ೧೭. | ಬಾಗಲಕೋಟೆ | ೨೦.೨೯ | ೨೦.೭೪ | ೨೦.೫೦ |
| ೧೮. | ಗದಗ | ೨೦.೩೭ | ೧೯.೮೫ | ೨೦.೧೨ |
| ೧೯. | ಹಾವೇರಿ | ೧೫.೦೪ | ೧೪.೬೯ | ೧೪.೮೭ |
| ೨೦. | ಉತ್ತರ ಕನ್ನಡ | ೮.೮೯ | ೮.೫೨ | ೮.೭೧ |
| ೨೧. | ಬೆಳಗಾವಿ | ೭.೮೪ | ೯.೧೨ | ೮.೪೪ |
| ೨೨. | ಧಾರವಾಡ | ೬.೪೦ | ೬.೯೧ | ೬.೬೪ |
| | (ಬೆಳಗಾವಿ ವಿಭಾಗ) | | | |

ಕೋಷ್ಟಕ ೪.೧೦ರಲ್ಲಿ ೧ ರಿಂದ ೭ನೇ ತರಗತಿಗೆ ಸಂಬಂಧಿಸಿದ ಶಾಲೆಯನ್ನು ಮಧ್ಯದಲ್ಲಿ ಬಿಟ್ಟ ಮಕ್ಕಳ ಪ್ರಮಾಣವನ್ನು ಜಿಲ್ಲಾವಾರು ನೀಡಲಾಗಿದೆ. ಈ ಕೋಷ್ಟಕ ಹಾಗೂ ನಕ್ಷೆಗಳು ಸಮಸ್ಯೆಯ ಪ್ರಮಾಣ ಹಾಗೂ ಅದರ ಪ್ರಾದೇಶಿಕ ಸ್ವರೂಪವನ್ನು ತೋರಿಸುತ್ತವೆ. ರಾಜ್ಯಮಟ್ಟದಲ್ಲಿ ಶಾಲೆಯನ್ನು ಮಧ್ಯದಲ್ಲಿ ಬಿಟ್ಟ ಮಕ್ಕಳ ಪ್ರಮಾಣವು ಶೇ. ೧೪.೪೨ರಷ್ಟಿದೆ. ರಾಜ್ಯದ ಬೆಳಗಾವಿ ಹಾಗೂ ಗುಲಬರ್ಗಾ ವಿಭಾಗಗಳಲ್ಲಿ ಸಮಸ್ಯೆಯ ಪ್ರಮಾಣ ತೀವ್ರವಾಗಿದೆ. ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಾದೇಶಿಕ ಅಸಮಾನತೆಯು ರಾಜ್ಯದ ಯಾವ ಯಾವ ವಿಭಾಗದಲ್ಲಿ ಮತ್ತು ಯಾವ ಯಾವ ಜಿಲ್ಲೆಗಳಲ್ಲಿ ಹೆಚ್ಚಾಗಿವೆ ಎಂಬುದು ಈ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ.

ಮಕ್ಕಳು ಶಾಲೆಯನ್ನು ಬಿಡಲು ಅನೇಕ ಕಾರಣಗಳು ಉಂಟು. ಬಡತವನ್ನೇ ಮುಖ್ಯ ಕಾರಣ ಎಂದು ಹೇಳಲು ಸಾಧ್ಯವಿಲ್ಲ. ಅದರ ಜೊತೆಗೆ,

೧. ಲಿಂಗತಾರತಮ್ಯ ಅಂದರೆ ಗಂಡು ಮಕ್ಕಳನ್ನು ಪ್ರೋತ್ಸಾಹಿಸಿ ಹೆಣ್ಣುಮಕ್ಕಳನ್ನು ನಿರ್ಲಕ್ಷಿಸುವುದು

೨. ಖರ್ಚನ್ನು ನಿಯಂತ್ರಿಸಲು ಯತ್ನಿಸುವುದು.

೩. ಹೆಣ್ಣುಮಕ್ಕಳನ್ನು ಶಾಲೆ ಬಿಡಿಸಿ ಬೇಗನೇ ಮದುವೆ ಮಾಡಿಕೊಡುವುದು.

೪. ಸಾಮಾಜಿಕ, ಆರ್ಥಿಕ ಶೋಷಣೆ ಅಂದರೆ ಹೆಣ್ಣುಮಗು ಹೆಚ್ಚು ಕಲಿಯಬಾರದು. ಹೆಚ್ಚು ಕಲಿತರೆ ಗಂಡಿನ ಸಮಸ್ಯೆ. ಅವಳನ್ನು ನಿಯಂತ್ರಿಸುವುದು ಕಷ್ಟ.

೫. ತಂದೆ-ತಾಯಿಯರಲ್ಲಿ ಶಾಲೆ ಮತ್ತು ಮನೆಯ ಹೊರಗಿನ ಪರಿಸರದಲ್ಲಿ ಹೆಣ್ಣುಮಕ್ಕಳ ಮೇಲೆ ಲೈಂಗಿಕ ದೌರ್ಜನ್ಯವಾಗಬಹುದೆಂಬ ಅಂಜಿಕೆ.

೬. ಸರಿಯಾದ ಶಾಲಾ ವ್ಯವಸ್ಥೆ, ಶಾಲೆಗೆ ಶಿಕ್ಷಕ, ಶಿಕ್ಷಕಿಯರು ಇಲ್ಲದಿರುವುದು.

೭. ಶಾಲೆಯ ಅಕ್ಕಪಕ್ಕ ವಿದ್ಯಾರ್ಥಿನಿಯರಿಗೆ ವಸತಿ ನಿಲಯ ಇಲ್ಲದಿರುವುದು.

ಹೀಗೆ ಈ ಎಲ್ಲಾ ಕಾರಣಗಳಿಂದ ಮಕ್ಕಳು ಮಧ್ಯದಲ್ಲೇ ಶಾಲೆಯನ್ನು ಬಿಡುವವರ ಪ್ರಮಾಣ ಹೆಚ್ಚಾಗಿದೆ. ಇದಕ್ಕೆ ಪೂರಕವಾಗಿ ಸರ್ಕಾರ ಶಿಕ್ಷಣ ಇಲಾಖೆಯವತಿಯಿಂದ ಉಚಿತ ಊಟ, ಪಠ್ಯಪುಸ್ತಕ, ಸಮವಸ್ತ್ರ, ಶಿಷ್ಯವೇತನ, ಮುಂತಾದವುಗಳನ್ನು ಒದಗಿಸಿದರೆ ಮಕ್ಕಳು ಶಾಲೆಯನ್ನು ಬಿಡುವುದು ಕಡಿಮೆ ಮಾಡಬಹುದು. ಸರ್ಕಾರದ ಈ ಎಲ್ಲ ಪ್ರಯತ್ನಗಳಿಂದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಓದುವ ಮಕ್ಕಳ ಸಂಖ್ಯೆ ಹೆಚ್ಚಾಗುತ್ತಿದೆ. ವಿಭಾಗವಾರು ಅವು ಹೇಗಿವೆ ಎಂಬುದನ್ನು ಮುಂದಿನ ಕೋಷ್ಟಕದ ಮೂಲಕ ವಿವರಿಸಬಹುದಾಗಿದೆ.

**ಕೋಷ್ಟಕ ೪.೧೧ : ಶಾಲಾದಾಖಲಾತಿ ೧-೭ನೇ ತರಗತಿ ಲಿಂಗ ಸ್ವರೂಪ**

| ವಿಭಾಗಗಳು | ಗಂಡು | ಹೆಣ್ಣು | ಒಟ್ಟು |
|---|---|---|---|
| ಬೆಂಗಳೂರು | ೧,೨೯,೭೯೮೫ | ೧,೨೩೧೯೬೦ | ೨,೫೨೯,೯೪೫ |
| ಮೈಸೂರು | ೭೮೪೯೫೦ | ೭೪೨೪೦೭ | ೧,೫೨೭,೩೫೭ |
| ದಕ್ಷಿಣ ಕನ್ನಡ ಪ್ರದೇಶ | ೨,೦೮೨,೯೩೫ | ೧,೯೭೪,೩೬೭ | ೪,೦೫೭,೩೦೨ |
| ಬೆಳಗಾವಿ | ೧,೧೧೧,೩೨೦ | ೧,೦೩೦,೪೦೪ | ೨,೧೪೧,೭೨೪ |
| ಗುಲಬರ್ಗಾ | ೯೬,೨೭೩ | ೮೦೫,೪೩೪ | ೧,೭೦೧,೭೦೦ |
| ಉತ್ತರ ಕನ್ನಡ ಪ್ರದೇಶ | ೨,೦೦೭,೫೯೨ | ೧,೨೩೫,೮೩೮ | ೩,೮೪೩,೪೩೧ |
| **ಒಟ್ಟು** | **೪,೦೯೦,೫೨೮** | **೩,೮೧೦,೨೦೫** | **೭,೯೦೦೭೩೩** |

**ಅನುಬಂಧ ೨ : ಶಾಲಾದಾಖಲಾತಿ ೮-೧೦ನೇ ತರಗತಿ ಲಿಂಗ ಸ್ವರೂಪ**

| ವಿಭಾಗಗಳು | ಗಂಡು | ಹೆಣ್ಣು | ಒಟ್ಟು |
|---|---|---|---|
| ಬೆಂಗಳೂರು | ೩,೯೭,೧೬೬ | ೩,೫೭,೨೮೦ | ೭,೫೪,೪೪೬ |
| ಮೈಸೂರು | ೨,೫೭೮೪೦ | ೨,೪೪೧೦೪ | ೫,೦೧೯೪೪ |
| ದಕ್ಷಿಣ ಕನ್ನಡ ಪ್ರದೇಶ | ೬,೫೫,೦೦೬ | ೬,೦೭,೩೮೪ | ೧,೨೫೬,೩೯೦ |
| ಬೆಳಗಾವಿ | ೨,೮೨,೫೧೪ | ೨,೨೨೩೪೦ | ೫,೦೪೮೫೪ |

| | | | |
|---|---|---|---|
| ಗುಲಬರ್ಗಾ | ೧,೫೬,೭೨೮ | ೧,೧೭,೯೦೬ | ೨,೭೪೬೩೪ |
| ಉತ್ತರ ಕನ್ನಡ ಪ್ರದೇಶ | ೪,೩೯,೨೪೨ | ೩,೪೦೨೪೬ | ೭,೭೯,೪೮೮ |
| **ಒಟ್ಟು** | **೧,೦೯೪,೨೪೮** | **೯,೪೧೬೩೦** | **೨,೦೩೫,೮೭೮** |

**ಅನುಬಂಧ ೩ : ಶಾಲಾದಾಖಲಾತಿ ೧-೧೦ನೇ ತರಗತಿ ಲಿಂಗ ಸ್ವರೂಪ**

| ವಿಭಾಗಗಳು | ಗಂಡು | ಹೆಣ್ಣು | ಒಟ್ಟು |
|---|---|---|---|
| ಬೆಂಗಳೂರು | ೧,೫೮೯೨೪೦ | ೧,೬೯೫೧೫೧ | ೩,೨೮೪,೩೯೧ |
| ಮೈಸೂರು | ೯೮೬,೫೧೧ | ೧,೦೪೨,೭೯೦ | ೨,೦೨೯,೩೦೧ |
| ದಕ್ಷಿಣ ಕನ್ನಡ ಪ್ರದೇಶ | ೨,೫೭೫,೭೫೧ | ೨,೭೩೭,೯೪೧ | ೫,೨೧೩,೬೯೨ |
| ಬೆಳಗಾವಿ | ೧,೫೨೫,೭೪೪ | ೧,೩೯೩೮೩೪ | ೨,೬೪೬,೫೭೮ |
| ಗುಲಬರ್ಗಾ | ೯೨೩,೩೪೦ | ೧,೦೫೩,೦೦೧ | ೧,೯೭೬,೩೪೧ |
| ಉತ್ತರ ಕನ್ನಡ ಪ್ರದೇಶ | ೨,೧೭೬,೦೮೪ | ೨,೪೪೬೮೩೪ | ೪,೬೨೨,೯೧೯ |
| **ಒಟ್ಟು** | **೪,೭೫೧,೮೩೫** | **೫,೧೮೪,೭೭೬** | **೯,೯೩೬,೬೧೧** |

ಕರ್ನಾಟಕದಲ್ಲಿ ಇಂದು ೧ ರಿಂದ ೧೦ನೆಯ ತರಗತಿಗಳಲ್ಲಿ ಕಲಿಯುತ್ತಿರುವ ಮಕ್ಕಳ ಸಂಖ್ಯೆ ಸರಿಸುಮಾರು ೧೦೦ ಲಕ್ಷ ಇದೆ. ಪ್ರಾಥಮಿಕ ಹಂತದ ೭ನೇ ತರಗತಿಯಿಂದ ಪ್ರೌಢ ಹಂತದ ೮ನೇ ತರಗತಿಗೆ ಮಕ್ಕಳು ಸಾಗುವ ಪ್ರಕ್ರಿಯೆಯನ್ನು ಶೈಕ್ಷಣಿಕ ಪರಿವರ್ತನಾ ಪ್ರಕ್ರಿಯೆ ಎನ್ನಬಹುದು. ಈ ದಿಶೆಯಲ್ಲಿ ಕರ್ನಾಟಕವು ರಾಜ್ಯಮಟ್ಟದಲ್ಲಿ ಸಾಧಿಸಿಕೊಂಡಿರುವ ಸಾಧನೆ ನಿಜಕ್ಕೂ ಅದ್ಭುತವಾಗಿದೆ. ಶಿಕ್ಷಣದ ಸಾರ್ವತ್ರಿಕರಣದ ಸ್ವರೂಪವು ರಾಜ್ಯಾದ್ಯಂತ ಏಕರೂಪವಾಗಿಲ್ಲ.

ಇನ್ನೂ ಉತ್ತರಕನ್ನಡ ಜಿಲ್ಲೆಯಲ್ಲಿ ೧೧ ತಾಲೂಕುಗಳನ್ನೊಳಗೊಂಡ ಜನಸಂಖ್ಯೆ ಒಟ್ಟು ೨೦೦೧ರ ಜನಗಣತಿಯ ಪ್ರಕಾರ ೧,೩೫೩,೬೪೪. ಪುರುಷರು ೬೮೬,೮೭೬ ಹಾಗೂ ಮಹಿಳೆಯರು ೬೬೬,೭೮೬ರಷ್ಟಿದ್ದು, ಮಕ್ಕಳ ಸಂಖ್ಯೆ ೧೭೩,೫೦೩ ಅದರಲ್ಲಿ ೮೦೧೪೯ ಗಂಡುಮಕ್ಕಳು, ೮೪,೩೫೪ ಹೆಣ್ಣುಮಕ್ಕಳು ಇದ್ದು ಸಾಕ್ಷರ ಜನರು ೯೦೪,೦೨೪ರಷ್ಟಿದ್ದು ಅದರಲ್ಲಿ ಪುರುಷರು ೫೦೫,೨೭೦, ಮಹಿಳೆಯರು ೩೯೮೧೭೫೪ರಷ್ಟಿದ್ದಾರೆ. ಸಾಕ್ಷರತಾ ಪ್ರಮಾಣ ಪುರುಷರದ್ದು ಶೇ. ೭೬.೪ ಹಾಗೂ ಮಹಿಳೆಯರದ್ದು ಶೇ. ೫೬.೮ರಷ್ಟಿದೆ.

೨೦೦೧ರ ಜನಗಣತಿಯಂತೆ ಪುರುಷರ ಸಾಕ್ಷರತಾ ಪ್ರಮಾಣ ಶೇ. ೮೨.೧ರಷ್ಟಿದ್ದು ಮಹಿಳೆಯರ ಶೇ. ೫೮.೪ರಷ್ಟಿದೆ. ಹಾಗೂ ಗ್ರಾಮೀಣ ಶೇ. ೬೩.೫೨ ಮತ್ತು ನಗರ ಶೇ. ೮೦.೫೯. ಒಟ್ಟು ಸಾಕ್ಷರತೆಯ ಪ್ರಮಾಣ ಶೇ. ೬೮.೪೭ರಷ್ಟಿದೆ. ವಿದ್ಯಾಭ್ಯಾಸದ ಪ್ರಗತಿಯಲ್ಲಿ ರಾಜ್ಯದ ೨೯ ಜಿಲ್ಲೆಗಳಲ್ಲಿ ಉನ್ನತಮಟ್ಟದಲ್ಲಿರುವ ೪.೫ ಜಿಲ್ಲೆಗಳಲ್ಲಿ ಇದು ಒಂದಾಗಿದೆ.

**ಕೋಷ್ಟಕ ೪.೧೨ ಸಾಕ್ಷರತೆಯ ಪ್ರಮಾಣ ತಾಲೂಕು ಶೇಕಡವಾರು ೨೦೦೧**

| ಕ್ರ.ಸಂ. | ತಾಲೂಕು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| ೧. | ಅಂಕೋಲಾ | ೭೮ | ೫೬ | ೬೭ |
| ೨. | ಭಟ್ಕಳ | ೭೧ | ೫೨ | ೬೧ |
| ೩. | ಹಳಿಯಾಳ | ೭೧ | ೪೮ | ೬೦ |
| ೪. | ಹೊನ್ನಾವರ | ೭೭ | ೫೭ | ೬೭ |
| ೫. | ಕಾರವಾರ | ೮೫ | ೬೭ | ೭೬ |
| ೬. | ಕುಮಟಾ | ೮೦ | ೫೯ | ೭೦ |
| ೭. | ಮುಂಡಗೋಡ | ೬೩ | ೪೧ | ೫೨ |
| ೮. | ಸಿದ್ಧಾಪುರ | ೭೯ | ೬೦ | ೭೦ |
| ೯. | ಶಿರಸಿ | ೮೧ | ೬೭ | ೭೪ |
| ೧೦. | ಜೋಯಿಡಾ | ೬೭ | ೪೨ | ೫೫ |
| ೧೧. | ಯಲ್ಲಾಪುರ | ೭೫ | ೫೮ | ೬೬ |
| | ಒಟ್ಟು | ೭೬ | ೫೭ | ೬೭ |

ಈ ಕೋಷ್ಠಕವನ್ನು ನೋಡಿದರೆ ಸಾಕ್ಷರತೆಯ ಪ್ರಮಾಣವು ತಾಲೂಕುಗಳಲ್ಲಿ ಜೋಯಿಡಾ ಮತ್ತು ಮುಂಡಗೋಡ ತಾಲೂಕುಗಳಲ್ಲಿ ಉಳಿದ ತಾಲೂಕುಗಳಿಗೆ ಹೋಲಿಕೆ ಮಾಡಿದರೆ ಸ್ವಲ್ಪ ಮಟ್ಟಿನ ಕಡಿಮೆ ಸಂಖ್ಯಾ ಪ್ರಮಾಣವನ್ನು ನೋಡಬಹುದು. ಕಾರಣವೆಂದರೆ ಇದು ಹಿಂದುಳಿದ ತಾಲೂಕುಗಳಾಗಿವೆ ಹಾಗೂ ಪರಿಶಿಷ್ಟ ಜನರನ್ನು ಹೊಂದಿರುವ ಎರಡು ತಾಲೂಕುಗಳಾಗಿರುವ ಅಕ್ಷರತೆಯ ಪ್ರಮಾಣ ಕಡಿಮೆ ಇದೆ. ಅವರ ಸಾಕ್ಷರತೆಯ ಪ್ರಮಾಣ ಈ ರೀತಿಯಾಗಿದೆ.

**ಕೋಷ್ಟಕ ೪.೧೩ ಸಾಕ್ಷರತಾ ಮಹಿಳೆಯರದ್ದು (ಶೇಕಡ)**

| ವರ್ಷ | ಸಾಕ್ಷರತಾ ಪ್ರಮಾಣ ಶೇ. |
|---|---|
| ೧೯೬೧ | ೨.೦ |
| ೧೯೭೧ | ೩.೨ |
| ೧೯೮೧ | ೪.೫ |
| ೧೯೯೧ | ೫.೨ |
| ೨೦೦೧ | ೬.೦ |

ಈ ಕೋಷ್ಟಕವನ್ನು ನೋಡಿದರೆ ಸರ್ಕಾರದ ಯೋಜನೆಗಳು ಇವರಿಗೆ ತಲುಪಿ ಸ್ವಲ್ಪಮಟ್ಟಿನ ಸಾಕ್ಷರತೆಯಲ್ಲಿ ಬದಲಾವಣೆಯನ್ನು ಕಾಣಬಹುದು. ಹಾಗೆಯೆ ಶಾಲಾ ಪ್ರಮಾಣದಲ್ಲಿ ಅಂದರೆ ಪ್ರಾಥಮಿಕದಿಂದ ಮಾಧ್ಯಮಿಕದವರೆಗೆ ಶೇಕಡವಾರು ಹೇಗೆ ಏರಿಕೆ ಉಂಟಾಗಿದೆ ಎನ್ನುವುದನ್ನು ಈ ಮುಂದಿನ ಕೋಷ್ಟಕದಿಂದ ಗಮನಿಸಬಹುದು.

**ಕೋಷ್ಟಕ ೪.೧೪ ಗೌಳಿಗರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಏರಿಕೆ (ಶೇಕಡ)**

| ವರ್ಷ | ಪ್ರಾಥಮಿಕ | ಮಾಧ್ಯಮಿಕ |
|---|---|---|
| ೧೯೯೧-೯೨ | ೮೪.೭೨ | ೬೪.೫೩ |
| ೧೯೯೨-೯೩ | ೮೬.೬೨ | ೬೫.೨೧ |
| ೧೯೯೩-೯೪ | ೮೭.೨೬ | ೬೫.೫೬ |
| ೧೯೯೪-೯೫ | ೮೭.೬೨ | ೬೬.೧೨ |
| ೧೯೯೫-೯೬ | ೮೭.೭೨ | ೬೯.೪೦ |
| ೧೯೯೬-೯೭ | ೮೮.೭೨ | ೭೦.೪೩ |
| ೧೯೯೭-೯೮ | ೮೯.೫೯ | ೭೨.೪೪ |
| ೧೯೯೮-೯೯ | ೯೦.೪೨ | ೭೪.೦೦ |
| ೧೯೯೯-೦೦ | ೯೧.೧೮ | ೭೫.೬೬ |
| ೨೦೦೦-೦೧ | ೯೧.೬೫ | ೭೮.೦೮ |

ಈ ಕೋಷ್ಟಕವನ್ನು ನೋಡಿದರೆ ಗೌಳಿಗರ ಮಕ್ಕಳಲ್ಲಿ ಶಾಲೆಗೆ ಬರುವ ಪ್ರಮಾಣ ಪ್ರಾಥಮಿಕದಿಂದ ಮಾಧ್ಯಮಿಕದವರೆಗೂ ಹೆಚ್ಚಾಗಿದೆ ಎನ್ನುವುದನ್ನು ತೋರಿಸುತ್ತದೆ. ಮೇಲಿನ ಕೋಷ್ಟಕದಲ್ಲಿ ಚರ್ಚಿಸಿರುವಂತೆ ಮಕ್ಕಳ ಸಂಖ್ಯಾ ಪ್ರಮಾಣದಲ್ಲಿ ಏರಿಕೆ ಕಂಡುಬಂದರೂ ಅವರು ಶಾಲೆಯನ್ನು ಮಧ್ಯದಲ್ಲೇ ಬಿಡುವುದನ್ನು ಕಾಣಬಹುದು. ಉತ್ತರ ಕನ್ನಡದಲ್ಲಿ ೧೯೯೧ರಲ್ಲಿ ಶಾಲೆ ಬಿಡುವವರ ಪ್ರಮಾಣ ಬಾಲಕರು ಶೇ. ೨೨.೭ರಷ್ಟು ಮತ್ತು ಬಾಲಕಿಯರು ಶೆ. ೩೩.೧ರಷ್ಟಿತ್ತು. ಈಗ ಬದಲಾವಣೆಯೊಂದಿಗೆ ಬಾಲಕರು ಶೇ. ೮.೮೯ರಷ್ಟು ಬಾಲಕಿಯರು ಶೇ. ೮.೫೨ರಷ್ಟು ಶಾಲೆಯನ್ನು ಮಧ್ಯದಲ್ಲಿ ಬಿಡುತ್ತಿದ್ದಾರೆ. ಕರ್ನಾಟಕದಲ್ಲಿ ಮಕ್ಕಳ ಉಳಿಕೆಯ ಸ್ಥಿತಿ ಹೇಗಿದೆ ಎಂಬುದನ್ನು ಮುಂದಿನ ಕೋಷ್ಠದಲ್ಲಿ ತಿಳಿಯೋಣ.

**ಮಕ್ಕಳ ದಾಖಲಾತಿ - ೨೦೦೪**

**ದಾಖಲಾತಿ ಉಳಿಕೆ ಪ್ರಮಾಣ**

೧ನೇ ವರ್ಗಕ್ಕೆ ೧೦೦ ೩ನೇ ವರ್ಗಕ್ಕೆ ೫೦

೧ನೇ ವರ್ಗಕ್ಕೆ ೧೦೦ ೭ನೇ ವರ್ಗಕ್ಕೆ ೪೪

೧ನೇ ವರ್ಗಕ್ಕೆ ೧೦೦ ೧೨ನೇ ವರ್ಗಕ್ಕೆ ೧೨

ಅಂದರೆ ಗ್ರಾಮೀಣ ಪ್ರದೇಶದಲ್ಲಿ ೧೦೦ರಲ್ಲಿ ೩ ವಿದ್ಯಾರ್ಥಿಗಳು ಮಾತ್ರ ೧೨ ವರ್ಷದ ಶಿಕ್ಷಣ ಪಡೆಯುತ್ತಾರೆ. ಯಾಕೆ ಶಾಲೆಯನ್ನು ಮಧ್ಯದಲ್ಲಿ ಬಿಡುತ್ತಾರೆ ಅದಕ್ಕೆ ಕಾರಣಗಳೇನು ಸಮಸ್ಯೆಗಳೇನು ಎನ್ನುವುದನ್ನು ನೋಡಿದರೆ,

೧. ಅರಣ್ಯ ಪ್ರದೇಶದಲ್ಲಿ ವಾಸಮಾಡುವುದು ಹಾಗೂ ನಾಗರಿಕ ಜನರ ಜೊತೆ ಇವತ್ತು ಇದ್ದರೂ ಸಹ ಶಿಕ್ಷಣದ ಬಗ್ಗೆ ತಿಳುವಳಿಕೆ ಇಲ್ಲದಿರುವುದು.

೨. ಬಡತನವು ಸಹ ಶಿಕ್ಷಣ ಪಡೆಯುವಲ್ಲಿ ಮಾರಕವಾಗಿದೆ.

೩. ಭಾಷಾ ಮಾಧ್ಯಮವು ಕೂಡ ಜನರಿಗೆ ಶಿಕ್ಷಣ ಪಡೆಯುವಲ್ಲಿ ಬಹಳ ತೊಡಕಾಗಿದೆ.

೪. ಚಿಕ್ಕ ವಯಸ್ಸಿನಲ್ಲೇ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದು. ಹೆಣ್ಣುಮಕ್ಕಳ ಶಾಲಾ ದಾಖಲಾತಿ, ಹಾಜರಾತಿಗಳು ಇಂದಿಗೂ ಕಡಿಮೆ ಮಟ್ಟದಲ್ಲಿರುವುದಕ್ಕೆ ಕಾರಣ ಎನ್ನಬಹುದು.

೫. ಅರಣ್ಯದಲ್ಲಿ ಸ್ವಚ್ಛಂದವಾಗಿ ಬದುಕಿದ್ದವರಿಗೆ ಶಾಲೆಗೆ ಹಾಜರಾದ ಕೂಡಲೇ ಒಮ್ಮೆಲ್ಲೇ ಹೇರಲ್ಪಡುವ ಕಟ್ಟುನಿಟ್ಟಾದ ಶಿಸ್ತು ಹಿಡಿಸದೇ ಇರುವುದರಿಂದ ಶಾಲೆಯನ್ನು ಮಧ್ಯದಲ್ಲಿ ಬಿಡುವುದು.

ಹೀಗೆ ಶಾಲೆ ಬಿಡುವುದನ್ನು ಕಡಿಮೆ ಮಾಡಲು ಹಲವಾರು ಪ್ರಯತ್ನಗಳನ್ನು ಕೈಗೊಳ್ಳಲಾಯಿತು. ಅವು ಯಾವುವೆಂದರೆ,

೧. ಶಾಲೆಗಳಲ್ಲಿ ಬಾಲಕಿಯರ ನೋಂದಣಿ ಹೆಚ್ಚಿಸಲು ೧೯೯೭ರ ಅಕ್ಟೋಬರ್ ೨ರಿಂದ ಜಾರಿಗೆ ಬಂದ ಬಾಲಿಕ ಸಮೃದ್ಧಿ ಯೋಜನೆಯಡಿಯಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶದ ಕುಟುಂಬದಲ್ಲಿ ೧೯೯೭ರ ಅಗಸ್ಟ್ ೧೫ರ ನಂತರ ಜನಿಸುವ ಬಾಲಕಿಯರಿಗೆ ಶಿಕ್ಷಣಕ್ಕಾಗಿ ವಾರ್ಷಿಕ ರೂ. ೫೦೦.೦೦ಗಳನ್ನು ಸಹಾಯಧನವಾಗಿ ಕೊಡಲಾಗುತ್ತಿದೆ. ನಂತರದಲ್ಲಿ ೨೦೦೩ರ ನವ್ಹೆಂಬರ್ ತಿಂಗಳಿನಿಂದ ಸರ್ವಶಿಕ್ಷಣ ಅಭಿಯಾನ ಎನ್ನುವ ವಿನೂತನ ಯೋಜನೆ ಜಾರಿಗೆ ಬಂದಿತು.

**ಸರ್ವ ಶಿಕ್ಷಣ ಅಭಿಯಾನದ ಉದ್ದೇಶಗಳು**

೧. ಪ್ರತಿ ೪೦ ಮಕ್ಕಳಿಗೆ ಒಬ್ಬ ಶಿಕ್ಷಕ

೨. ಒಂದು ಪ್ರಾಥಧಮಿಕ ಶಾಲೆಯಲ್ಲಿ ೨ ಶಿಕ್ಷಕರು

೩. ಪ್ರತಿ ಜನವಸತಿ ೧ ಕಿ.ಮೀ. ವ್ಯಾಪ್ತಿಯೊಳಗೆ ಶಾಲಾ ಸ್ಥಾಪನೆ

೪. ಉಚಿತ ಪುಸ್ತಕ

೫. ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣಕ್ಕಾಗಿ ಪ್ರತಿ ಮಗುವಿಗೆ ಒಂದು ವರ್ಷಕ್ಕೆ ೧೫೦೦ ರೂ.ಗಳ ನೆರವು.

ಈ ಸರ್ವಶಿಕ್ಷಣ ಅಭಿಯಾನದಡಿಯಲ್ಲಿ ಬಂದಿರುವ ಯೋಜನೆಗಳು ಮತ್ತು ಕಾರ್ಯಕ್ರಮಗಳು ಯಾವುವೆಂದರೆ,

**ಅ. ಸಾರ್ವತ್ರಿಕ ದಾಖಲಾತಿಗಾಗಿ ಕಾರ್ಯಕ್ರಮಗಳು :** ೬ ರಿಂದ ೧೪ ವರ್ಷದ ಪ್ರತಿ ಮಗುವಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕೊಡುವುದು. ೮ ವರ್ಷಗಳ ಶಿಕ್ಷಣ ಮಗುವಿನ ಸಂವಿಧಾನದ ಹಕ್ಕು ಕೂಡ ಆಗಿದೆ. ಈ ದಿಸೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಮ್ಮಿಕೊಂಡಿರುವ ಕಾರ್ಯಕ್ರಮಗಳು.

**೧. ಗಣತಿ :** ೧೯೬೧ರ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ವಯ ೧೯೬೩ರಿಂದಲೂ ಪ್ರತಿವರ್ಷ ಸೆಪ್ಟೆಂಬರ್ ತಿಂಗಳಿನಲ್ಲಿ ಕೇವಲ ೫ ವರ್ಷ ತುಂಬಿದ ಮುಂದಿನ ಜೂನ್‌ನಲ್ಲಿ ಶಾಲೆಗೆ ದಾಖಲಾಗಬಹುದಾದ ಮಕ್ಕಳ ಗಣತಿ ಮಾಡುವ ಕಾರ್ಯಕ್ರಮ.

**೨. ದಾಖಲಾತಿ ಆಂದೋಲನ :** ಪ್ರತಿವರ್ಷ ಜುಲೈ ತಿಂಗಳಿನಲ್ಲಿ ಮಕ್ಕಳ ಗಣತಿಗಾಗಿ ಜೂನ್ ತಿಂಗಳಿನಲ್ಲಿ ದಾಖಲಾಗದೇ ಉಳಿದ ಮಕ್ಕಳನ್ನು ಗುರುತಿಸಿ ಅವರ ಸಮಸ್ಯೆಯನ್ನು ತಿಳಿದು ದಾಖಲಿಸುವಂತೆ ಅವರ ಮನವೊಲಿಸುವ ದಾಖಲಾತಿ ಕಾರ್ಯಕ್ರಮ.

**ಆಂದೋಲನ:** ಇಷ್ಟೆಲ್ಲಾ ಸರ್ಕಾರ ಸಾಕ್ಷರತಾ ಆಂದೋಲನದ ಕಾರ್ಯಕ್ರಮಗಳನ್ನು ಹಾಕಿಕೊಂಡರು ಇನ್ನೂ ತಲುಪದೇ ಇರುವ ಸಮುದಾಯದ ಮಕ್ಕಳಿಗಾಗಿಯೇ ಕೆಲವೊಂದು ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಿದೆ. ಅವು ಯಾವುದೆಂದರೆ,

೧. ಚಿಣ್ಣರ ಅಂಗಳ
೨. ಬಾ ಮರಳಿ ಶಾಲೆಗೆ
೩. ಕೂಲಿಯಿಂ ಶಾಲೆಗೆ
೪. ವಿದ್ಯಾಚೇತನ
೫. ಅಕ್ಷರ
೬. ಸಮನ್ವಯ ಶಿಕ್ಷಣ
೭. ಸೂಕ್ಷ್ಮ ಯೋಜನೆ
೮. ಗ್ರಾಮನಕ್ಷೆ
೯. ನಲಿ ಕಲಿ
೧೦. ಚೈತನ್ಯ
೧೧. ಶಾಲಾ ಪಾರ್ಲಿಮೆಂಟು
೧೨. ಬಿಸಿಯೂಟ (ಅಕ್ಷರ ದಾಸೋಹ)
೧೩. ಮಕ್ಕಳಲ್ಲಿ ಶೇ. ೮೦ರಷ್ಟು ಹಾಜರಾತಿ ಇದ್ದಲ್ಲಿ ೩ಕೆ.ಜಿ. ಅಕ್ಕಿ ಅಥವಾ ಗೋದಿ ನೀಡಿಕೆ
೧೪. ಶಾಲೆಯಿಲ್ಲದ ಕಡೆ ಇ.ಜಿ.ಸ್. ಕೇಂದ್ರ ಸ್ಥಾಪನೆ
೧೫. ವಿದ್ಯಾಲಯ ಶಾಲೆಗಳ ಸ್ಥಾಪನೆ
೧೬. ಸೇತು ಬಂಧ ಪರಿಹರ ಬೋಧನೆ
೧೭. ಹಾಜರಾತಿ ವೇತನ
೧೮. ಉಚಿತ ಯೋಗ್ಯ ತಪಾಸಣೆ

ಇವುಗಳ ಜೊತೆಗೆ ಸರ್ಕಾರ ವಯಸ್ಕರ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿ ಸಾಕ್ಷರತಾ ಅಂದೋಲವನ್ನು ಈ ಸಮುದಾಯಗಳಿಗೆ ನೀಡುತ್ತಿದೆ. ಹಾಗೆಯೇ ಇವರ ಶೈಕ್ಷಣಿಕ ಅವಶ್ಯಕ್ಕಾಗಿ ವಸತಿನಿಲಯ, ಶಿಷ್ಯವೇತನ ಅವಕಾಶವನ್ನು ಸರ್ಕಾರ ನೀಡಿದೆ. ಅವು ಯಾವುದೆಂದರೆ,

ವಿದ್ಯಾರ್ಥಿ ನಿಲಯಗಳು ವಿದ್ಯಾರ್ಥಿನಿ ನಿಲಯಗಳು ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು ಜಿಲ್ಲಾವಲಯ ಕಾರ್ಯಕ್ರಮ

ಈ ಕಾರ್ಯಕ್ರಮದ ಉದ್ದೇಶ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಜೀವಿಸುತ್ತಿರುವ ಬುಡಕಟ್ಟು ಕುಟುಂಬಗಳ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿಕೊಂಡು ಹೋಗುವುದು ಇದನ್ನು ಕರ್ನಾಟಕ ಸರ್ಕಾರ ಜಾರಿಗೆ ತಂದಿದೆ. ದೂರದ ಹಳ್ಳಿಯಲ್ಲಿ ವಾಸಿಸುವ ಮಕ್ಕಳು ತಮ್ಮ ವಿದ್ಯಾಭ್ಯಾಸವನ್ನು ಮುಂದವರೆಸದೇ ಶಾಲೆ ಬಿಡುವ ಪ್ರವೃತ್ತಿಯಿರುವುದರಿಂದ ಅದನ್ನು ತಪ್ಪಿಸಲು ಬಾಲಕ ಮತ್ತು ಬಾಲಕಿಯರಿಗೆ ಪ್ರತ್ಯೇಕ ನಿಲಯಗಳನ್ನು ಸ್ಥಾಪಿಸಲಾಗಿದೆ. ಈ ನಿಲಯಗಳಲ್ಲಿ ೫ ರಿಂದ ೧೦ನೇ ತರಗತಿಯವರೆಗೆ ಅಭ್ಯಾಸ ಮಾಡುತ್ತಿರುವ ಬಾಲಕರಿಗೆ ಮತ್ತು ೩ ರಿಂದ ೧೦ನೇ ತರಗತಿಯಲ್ಲಿ ಅಭ್ಯಾಸಿಸುತ್ತಿರುವ ಬಾಲಕಿಯರಿಗೆ ಅವಕಾಶಗಳನ್ನು ನೀಡಲಾಗುತ್ತದೆ. ಈ ವಿದ್ಯಾರ್ಥಿನಿ ನಿಲಯದಲ್ಲಿ ವಿದ್ಯಾರ್ಥಿನಿಯರಿಂದ ಅರ್ಜಿಗಳನ್ನು ಆಹ್ವಾನಿಸುವುದರ ಮೂಲಕ ಅರ್ಜಿ ಪಡೆದು ಪಟ್ಟಿಮಾಡಿ ಅವುಗಳನ್ನು ತಾಲೂಕುಮಟ್ಟದಲ್ಲಿರುವ ಆಯ್ಕೆ ಸಮಿತಿಯ ಮುಂದೆ ಇಟ್ಟು ಆಯ್ಕೆ ಮಾಡುತ್ತಾರೆ. ಈ ಆಯ್ಕೆ ಸಮಿತಿಗೆ ಈ ಕೆಳಕಂಡಂತೆ ಅಧ್ಯಕ್ಷರು ಮತ್ತು ಸದಸ್ಯರು ಇರುತ್ತಾರೆ.

| | |
|---|---|
| ೧. ತಾಲೂಕು ಪಂಚಾಯತ್ ಸಮಿತಿ ಅಧ್ಯಕ್ಷರು | ಅಧ್ಯಕ್ಷರು |
| ೨. ಕಾರ್ಯನಿರ್ವಾಹಕ ಅಧಿಕಾರಿಗಳು ತಾಲೂಕು ಪಂಚಾಯತ್ | ಸದಸ್ಯರು |
| ೩. ಆಯಾ ಕ್ಷೇತ್ರಗಳ ವಿಧಾನಸಭೆ ಹಾಗೂ ಪರಿಷತ್ ಸದಸ್ಯರು | ಸದಸ್ಯರು |
| ೪. ಆಯಾ ತಾಲೂಕಿನ ತಹಶೀಲ್ದಾರರು | ಸದಸ್ಯರು |
| ೫. ಕ್ಷೇತ್ರ ಶಿಕ್ಷಣಾಧಿಕಾರಿಗಳು | ಸದಸ್ಯರು |
| ೬. ಸ್ಥಳೀಯ ಸರ್ಕಾರಿ ಅಸ್ಪತ್ರೆಯ ವೈದ್ಯಧಿಕಾರಿಗಳು | ಸದಸ್ಯರು |
| ೭. ತಾಲೂಕು ಸಮಾಜ ಕಲ್ಯಾಣ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿಗಳು |

ಈ ನಿಲಯಗಳಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿನಿಯರಿಗೂ ಉಚಿತ ಊಟ ಮತ್ತು ವಸತಿಯನ್ನು ನೀಡುತ್ತಿದ್ದು ಅದಕ್ಕೆ ತಗಲುವ ವೆಚ್ಚವನ್ನು ಈ ಮುಂದಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೪.೧೫ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿ ನಿಲಯಗಳಲ್ಲಿಯ ವಿದ್ಯಾರ್ಥಿನಿಯರಿಗೆ ನೀಡುವ ಸೌಲಭ್ಯಗಳಿಗೆ ತಗಲುವ ವೆಚ್ಚದ ವಿವರ**

| | | |
|---|---|---|
| **ಅ. ಪ್ರತಿಯೊಬ್ಬ ವಿದ್ಯಾರ್ಥಿನಿಗೆ** | | |
| ೧. ಆಹಾರದ ವೆಚ್ಚ (ಮಾಸಿಕ) | ರೂ. | ೪೦೦.೦೦ |
| ೨. ಎರಡು ಜೊತೆ ಉಡುಪು (ವಾರ್ಷಿಕ) | ರೂ. | ೩೫೦.೦೦ |
| ೩. ಪಠ್ಯಪುಸ್ತಕ, ಲೇಖನಸಾಮಗ್ರಿ (ವಾರ್ಷಿಕ) | ರೂ. | ೨೫೦.೦೦ |
| ೪. ಹಾಸಿಗೆ ಹೊದಿಕೆ (೨ ವರ್ಷಗಳಿಗೊಮ್ಮೆ) | ರೂ. | ೩೫೦.೦೦ |
| ೫. ಇತರೆ ವೆಚ್ಚಗಳು (ವಾರ್ಷಿಕ) | ರೂ. | ೫೦.೦೦ |
| **ಆ. ಪ್ರತಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿ ನಿಲಯಕ್ಕೆ** | | |
| ೧. ವಿದ್ಯಾರ್ಥಿನಿ ನಿಲಯಕ್ಕೆ ಪ್ರತಿ ಅರೆಕಾಲಿಕ ಬೋಧಕರಿಗೆ | ರೂ. | ೧೫೦೦.೦೦ |
| ೨. ವಾರಪತ್ರಿಕೆ, ದಿನಪತ್ರಿಕೆಗಾಗಿ (ವಾರ್ಷಿಕ) | ರೂ. | ೧೦೦೦.೦೦ |
| ೩. ವೈದ್ಯಕೀಯ ವೆಚ್ಚ (ವಾರ್ಷಿಕ) | ರೂ. | ೧೦೦೦.೦೦ |
| ೪. ಪಾತ್ರೆ ಸಾಮಾನುಗಳ ಕಲಾಯಿ (ವಾರ್ಷಿಕ) | ರೂ. | ೬೦೦.೦೦ |
| ೫. ವಿದ್ಯುಚ್ಛಕ್ತಿ ಮತ್ತು ನೀರು ಅಥವಾ ವಾಸ್ತವಿಕವಾಗಿ ತಗಲುವ ವೆಚ್ಚ | ರೂ. | ೧೦೦೦.೦೦ |
| ೬. ಸ್ವಂತ ಕಟ್ಟಡಗಳಿಲ್ಲದ ವಿದ್ಯಾರ್ಥಿ ನಿಲಯಗಳ ಬಾಡಿಗೆ ವಾರ್ಷಿಕ ಅಥವಾ ಲೋಕೋಪಯೋಗಿ ಇಲಾಖೆ ನಿಗದಿಪಡಿಸುವ ದರ | ರೂ. | ೧೨೦೦.೦೦ |
| ೭. ಕ್ರೀಡಾ ಸಾಮಗ್ರಿಗಳನ್ನು ನಿಲಯವನ್ನು ಪ್ರಾರಂಭಿಸುವ ವೇಳೆಯಲ್ಲಿ | ರೂ. | ೧೦೦೦.೦೦ |

ಕೃಪೆ: ಕರ್ನಾಟಕ ಸರ್ಕಾರ ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ೨೦೦೦

ಇಂತಹ ವಿದ್ಯಾರ್ಥಿನಿ ನಿಲಯಗಳು ಗಿರಿಜನರ ವಿದ್ಯಾರ್ಥಿನಿಯರಿಗಾಗಿ ರಾಜ್ಯಾದ್ಯಂತ ೬೧ ಮೆಟ್ರಿಕ್ ಪೂರ್ವ ಬಾಲಕ, ಬಾಲಕಿಯರ ವಿದ್ಯಾರ್ಥಿನಿ ನಿಲಯಗಳಿದ್ದು, ಇವುಗಳಲ್ಲಿ ಪ್ರತಿವರ್ಷ ೨೦೦೦ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ.

ಈ ಗಿರಿಜನರ ವಿದ್ಯಾರ್ಥಿನಿಯರಿಗೆ ಉತ್ತರ ಕನ್ನಡ ಜಿಲ್ಲೆಯಲ್ಲಿ ೧೦ ವಿದ್ಯಾರ್ಥಿನಿ ನಿಲಯಗಳಿದ್ದು ಅವುಗಳು ಈ ಕೆಳಕಂಡ ಸ್ಥಳಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಉತ್ತರ ಕನ್ನಡದ ೧೦

ತಾಲೂಕುಗಳಲ್ಲಿ ವಿದ್ಯಾರ್ಥಿನಿ ನಿಲಯಗಳನ್ನು ಕಾಣಬಹುದು. ಜೊಯಿಡಾ ತಾಲೂಕು ಒಂದನ್ನು ಬಿಟ್ಟು ಉಳಿದ ತಾಲೂಕುಗಳಲ್ಲಿ ವಿದ್ಯಾರ್ಥಿನಿ ನಿಲಯಗಳನ್ನು ಕಾಣಬಹುದು.

ಈ ವಿದ್ಯಾರ್ಥಿನಿ ನಿಲಯಗಳಲ್ಲಿ ಪ್ರವೇಶವನ್ನು ಶೇ. ೭೫ರಷ್ಟು ಪರಿಶಿಷ್ಟ ಪಂಗಡಗಳಿಗೆ ಉಳಿದ ಶೇ. ೨೫ರಷ್ಟು ಜಾತಿ ಹಾಗೂ ಹಿಂದುಳಿದ ವರ್ಗಗಳಿಗೆ ಕಾಯ್ದಿರಿಸಲಾಗಿದೆ.

**ಸಲಹೆಗಳು**

೧. ವಿದ್ಯಾರ್ಥಿನಿ ನಿಲಯ ವಿದ್ಯಾರ್ಥಿನಿಯರಿಗೆ ನೀಡುತ್ತಿರುವ ಎಲ್ಲಾ ಸೌಲಭ್ಯಗಳ ಜೊತೆಗೆ ವರ್ಷಕ್ಕೆ ಒಂದು ಬಾರಿ ರಾಜ್ಯದ ವಿವಿಧ ಐತಿಹಾಸಿಕ, ಶೈಕ್ಷಣಿಕ, ಪ್ರೇಕ್ಷಣಿಕ ಪ್ರವಾಸಿ ಸ್ಥಳಗಳಿಗೆ ಕರೆದುಕೊಂಡು ಹೋಗಿ ಆ ಸ್ಥಳದ ಇತಿಹಾಸ, ಅಲ್ಲಿನ ನಿಸರ್ಗ, ಪ್ರಕೃತಿ, ಜಲಪಾತ, ಸಮುದ್ರ ಅಲ್ಲಿನ ಜನರ ಉಡುಗೆ ತೊಡುಗೆ, ಆಚಾರ, ಭಾಷೆ, ಸಂಸ್ಕೃತಿ ಇತ್ಯಾದಿಗಳ ಬಗ್ಗೆ ಪರಿಚಯಿಸಿ ವಿದ್ಯಾರ್ಥಿಗಳ ಜ್ಞಾನ ಭಂಡಾರವನ್ನು ಹೆಚ್ಚಿಸಲು ಕ್ರಮಕೈಗೊಳ್ಳಬೇಕಾಗಿದೆ.

೨. ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಧನಸಹಾಯ. ಬಡಮಕ್ಕಳಿಗಾಗಿ ವಿದ್ಯಾರ್ಥಿ ನಿಲಯ ಗಳನ್ನು ನಡೆಸುವ ಸ್ವಯಂಸೇವಾ ಸಂಸ್ಥೆಗಳಿಗೆ, ಉತ್ತೇಜನ ನೀಡಲು ಖಾಸಗಿ ವಿದ್ಯಾರ್ಥಿನಿಲಯ ಗಳಿಗೂ ಧನ ಸಹಾಯ ನೀಡಲಾಗುತ್ತಿದೆ. ಈ ಖಾಸಗಿ ಸಂಸ್ಥೆಗಳು ಸರ್ಕಾರದಿಂದ ಮಾನ್ಯತೆ ಪಡೆದು ನಡೆಸುವ ವಿದ್ಯಾರ್ಥಿನಿ ನಿಲಯಗಳಾಗಿರಬೇಕು. ಈ ವಿದ್ಯಾರ್ಥಿನಿ ನಿಲಯಗಳಲ್ಲಿ ೫ ರಿಂದ ೧೦ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರಿಗೆ ಊಟ ಮತ್ತು ವಸತಿ ಕಲ್ಪಿಸುವುದು. ಈ ಯೋಜನೆಯಡಿ ಕರ್ನಾಟಕ ರಾಜ್ಯದಲ್ಲಿ ವಿದ್ಯಾರ್ಥಿನಿಯರಿಗಾಗಿ ೧೬ ಅನುದಾನಿತ ವಿದ್ಯಾರ್ಥಿನಿ ನಿಲಯಗಳಿದ್ದು ಅವುಗಳಲ್ಲಿ ೮೯೦ ವಿದ್ಯಾರ್ಥಿನಿಯರು ಅಭ್ಯಾಸ ಮಾಡುತ್ತಿರುತ್ತಾರೆ. ಈ ವಿದ್ಯಾರ್ಥಿನಿ ನಿಲಯಗಳಲ್ಲಿ ಪ್ರತಿ ವಿದ್ಯಾರ್ಥಿನಿಯರಿಗೆ ಮಾಸಿಕ ರೂ. ೩೫೦.೦೦ಗಳನ್ನು ಆಹಾರಕ್ಕಾಗಿ ಖರ್ಚು ಮಾಡಲಾಗುತ್ತಿದೆ.

೪. ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು ಈ ಕಾರ್ಯಕ್ರಮದ ಹಿನ್ನೆಲೆ ಹಾಗೂ ಉದ್ದೇಶ ಪ್ರತಿಭಾವಂತ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣವನ್ನು ನೀಡುವುದು ಮತ್ತು ಓದಲು ಉತ್ತಮವಾದ ವಾತಾವರಣವನ್ನು ನಿರ್ಮಿಸುವುದು. ಆ ಕಾರಣದಿಂದ ಈ ಯೋಜನೆಯನ್ನು ಪ್ರಾರಂಭಿಸಿ ಇದರಲ್ಲಿ ೬ ರಿಂದ ೧೦ನೇ ತರಗತಿಯ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲಾಗುತ್ತಿದೆ. ಇಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರ ಪ್ರವೇಶದ ಅನುಪಾತ ೫೦:೫೦ ಆಗಿರುತ್ತದೆ. ಈ ಯೋಜನೆಯನ್ನು ಸರ್ಕಾರವು ೧೯೯೬-೭ನೇ ಸಾಲಿನಲ್ಲಿ ಪ್ರಾರಂಭಿಸಿ ಉತ್ತಮವಾದ ಶಿಕ್ಷಣವನ್ನು ನೀಡಲು ಅವಕಾಶ ಮಾಡಿದೆ. ಈ ವಸತಿ ಶಾಲೆಯ ನಿರ್ವಹಣೆಗಾಗಿ ಒಂದು ಬೋರ್ಡ್ ಆಫ್ ಗವರ್ನರ್ ಸಮಿತಿಯನ್ನು ರಚಿಸಲಾಗಿದೆ. ಅದರ ವಿವರ ಹೀಗಿದೆ.

೧. ಜಿಲ್ಲಾಧಿಕಾರಿಗಳು ಅಧ್ಯಕ್ಷರು

೨. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾಪಂಚಾಯತ್ ಸದಸ್ಯರು

೩. ಸಂಬಂಧಪಟ್ಟ ಉಪವಿಭಾಗ ಅಧಿಕಾರಿಗಲು ಸದಸ್ಯರು

೪. ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆ ಸದಸ್ಯರು

೫. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಗಳು

ಈ ವಸತಿ ಶಾಲೆಯಲ್ಲಿ ಇರುವ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣದ ಜೊತೆಗೆ ಉಚಿತ ಸೌಲಭ್ಯಗಳನ್ನು ನೀಡಲಾಗುತ್ತದೆ. ಪ್ರತಿಯೊಬ್ಬ ವಿದ್ಯಾರ್ಥಿಯ ಆಹಾರಕ್ಕಾಗಿ ಮಾಸಿಕ ರೂ. ೫೦೦.೦೦ಗಳನ್ನು ವೆಚ್ಚ ಮಾಡಲಾಗುತ್ತದೆ. ಉಚಿತ ಪಠ್ಯಪುಸ್ತಕದ ಜೊತೆಗೆ ರೂ. ೫೦೦.೦೦ರಲ್ಲಿ ಎರಡು ಜೊತೆ ಟೆರಿಕಾಟ್ ಸಮವಸ್ತ್ರಗಳನ್ನು ನೀಡಲಾಗುತ್ತದೆ. ಈ ವಸತಿ ಶಾಲೆಯಲ್ಲಿ ಶೇ. ೭೫ರಷ್ಟು ಪರಿಶಿಷ್ಟ ಜಾತಿ, ಶೇ. ೨೫ರಷ್ಟು ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದವರ್ಗದ ವಿದ್ಯಾರ್ಥಿಗಳಿಗೆ ಪ್ರವೇಶದಲ್ಲಿ ಮೀಸಲಾತಿಯನ್ನು ಕಾಯ್ದಿರಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಸುಮಾರು ೫೩ ಶಾಲೆಗಳು ನಡೆಯುತ್ತಿದ್ದು ಇದರಲ್ಲಿ ೮೧೦೦ ವಿದ್ಯಾರ್ಥಿಗಳು ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲೂ ಎರಡು ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು ಈ ಕೆಳಕಂಡ ಸ್ಥಳಗಳಲ್ಲಿ ಕಾರ್ಯನಿರ್ವಹಿಸುತ್ತಿವೆ.

೧. ಕಾರವಾರ ತಾಲೂಕು

೨. ಶಿರಸಿ ತಾಲೂಕು

**ಸಲಹೆ**

ಇಂತಹ ಉತ್ತಮ ಮಾದರಿ ವಸತಿ ಶಾಲೆಗಳಲ್ಲಿ ಪೂರ್ಣ ಪ್ರಮಾಣದ ಬೋಧಕರು ನೇಮಕಾತಿ ಯಾಗದೆ ಇರುವುದು ದುರಾದೃಷ್ಟಕರ. ಈ ದಿಸೆಯಲ್ಲಿ ಸರ್ಕಾರ ಪೂರ್ಣ ಪ್ರಮಾಣದ ಬೋಧಕವರ್ಗ ಹಾಗೂ ಸಿಬ್ಬಂದಿಯವರನ್ನು ನೇಮಕ ಮಾಡಿದರೆ ಈ ಸಂಸ್ಥೆ ಮಾದರಿ ಸಂಸ್ಥೆಯಾಗುತ್ತದೆ. ಕಾಲೇಜು ವಿದ್ಯಾರ್ಥಿನಿಯರಿಗಾಗಿ ಸರ್ಕಾರಿ ವಿದ್ಯಾರ್ಥಿನಿಲಯಗಳು ಪ್ರಾರಂಭ. ಗ್ರಾಮಾಂತರ ಪ್ರದೇಶಗಳಿಂದ ವಿವಿಧ ಕಾಲೇಜುಗಳಿಗೆ ವ್ಯಾಸಂಗ ಮಾಡಲು ಬರುವ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಯರಿಗೆ ಅವರ ಶಿಕ್ಷಣವನ್ನು ಮುಂದುವರೆಸಲು ಅನುಕೂಲ ವಾಗುವಂತೆ ಕಾಲೇಜು ವಿದ್ಯಾರ್ಥಿನಿ ನಿಲಯಗಳನ್ನು ಪ್ರಾರಂಭಿಸಿ ಉಚಿತ ಊಟ ಮತ್ತು ವಸತಿಯನ್ನು ಒದಗಿಸಲಾಗುತ್ತದೆ. ಇದರ ಉದ್ದೇಶ ಬಡತನ ಉನ್ನತ ಶಿಕ್ಷಣಕ್ಕೆ ಅಡ್ಡಬಾರದಂತೆ ಮಾಡುವ ಸಲುವಾಗಿ ಈ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಇಂತಹ ವಿದ್ಯಾರ್ಥಿನಿ ನಿಲಯಗಳಲ್ಲಿ ಪಿ.ಯು.ಸಿ. ಯಿಂದ ಡಿಪ್ಲೋಮಾ ಪದವಿ ತರಗತಿಗಲ್ಲಿನ ಪ್ರವೇಶ ಪಡೆದ ವಿದ್ಯಾರ್ಥಿನಿಗಳಿಗೆ ಅವಕಾಶ ನೀಡಲಾಗುತ್ತದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಈ ಕೆಳಕಂಡ ಸ್ಥಳಗಳಲ್ಲಿ ಹಿಂದುಳಿದ ವರ್ಗದವರಿಗೆ ಪ್ರತ್ಯೇಕ ವಿದ್ಯಾರ್ಥಿನಿ ನಿಲಯಗಳನ್ನು ತೆರೆಯಲಾಗಿದೆ.

೧. ಬಾಲಕಿಯರ ಕಾಲೇಜು ವಿದ್ಯಾರ್ಥಿನಿ ನಿಲಯ, ಕಾರವಾರ

೨. ಬಾಲಕಿಯರ ಕಾಲೇಜು ವಿದ್ಯಾರ್ಥಿನಿ ನಿಲಯ, ಹಳಿಯಾಳ

ಈ ಎರಡು ವಿದ್ಯಾರ್ಥಿನಿ ನಿಲಯಗಳಲ್ಲಿ ೨೦ ವಿದ್ಯಾರ್ಥಿನಿಯರು ಸೌಲಭ್ಯವನ್ನು ಪಡೆದು ಕೊಳ್ಳುತ್ತಿದ್ದಾರೆ. ಹಿಂದುಳಿದ ವರ್ಗಗಳ ವಿದ್ಯಾರ್ಥಿನಿ ನಿಲಯಗಳಲ್ಲೂ ಶೇ. ೨೫ರಷ್ಟು ಸೀಟುಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಕಾಯ್ದಿರಿಸಲಾಗಿದೆ.

**ಸಲಹೆ**

**ಅ.** ಉತ್ತರ ಕನ್ನಡ ಜಿಲ್ಲೆಯಲ್ಲಿ ಎರಡು ಹಿಂದುಳಿದ ಕಾಲೇಜು ವಿದ್ಯಾರ್ಥಿನಿ ನಿಲಯಗಳಿದ್ದು ಸರಿಯಾದ ಮೂಲಭೂತ ಒದಗಿಸಲು ಸಾಧ್ಯವಾಗದೆ ವಿದ್ಯಾರ್ಥಿನಿಯರ ಬೌದ್ಧಿಕ ಹಾಗೂ ಜ್ಞಾನಾರ್ಜನೆಯ ಮಟ್ಟ ಕುಂಠಿತವಾಗಿದೆ. ಮೂಲಭೂತ ಸೌಕರ್ಯಗಳನ್ನು ಒದಗಿಸಿದಲ್ಲಿ ನಿರೀಕ್ಷಿತ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ.

**ಆ.** ಶಿಕ್ಷಣಕ್ಕೆ ಪ್ರೋತ್ಸಾಹವಾಗಿ ೧ನೇ ತರಗತಿಯಿಂದ ಪದವಿಯ ವರೆಗೂ ವಿವಿಧ ರೀತಿಯ ವಿದ್ಯಾರ್ಥಿ ವೇತನ ವಿವರಣೆ.

**೧. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ**

ಈ ಯೋಜನೆಯಲ್ಲಿ ಮೆಟ್ರಿಕ್ ಪೂರ್ವ ೧ ರಿಂದ ೧೦ನೇ ತರಗತಿಯಲ್ಲಿ ಓದುತ್ತಿರುವ ಹಾಗೂ ಸರ್ಕಾರಿ ಅಥವಾ ಅನುದಾನಿತ ನಿಲಯಗಳಲ್ಲಿ ಸೌಲಭ್ಯ ಪಡೆಯದ ಹಿಂದುಳಿದ ವರ್ಗದ ವಿದ್ಯಾರ್ಥಿನಿಯರಿಗೆ ಈ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತದೆ. ಹಿಂದುಳಿದ ವರ್ಗದವರು ಅಂದರೆ ಇಲ್ಲಿ ಗೌಳಿಗರು ಮಧ್ಯದಲ್ಲೇ ಶಾಲೆ ಬಿಡುವುದನ್ನು ತಪ್ಪಿಸಲು ಹಾಗೂ ಪೋಷಕರು ಅವರ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಪ್ರೋತ್ಸಾಹಿಸುವ ಉದ್ದೇಶದಿಂದ ಈ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ. ವಾರ್ಷಿಕ ೧ ರಿಂದ ೭ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರಿಗೆ ರೂ. ೧೦೦.೦೦ ಹಾಗೂ ೮ ರಿಂದ ೧೦ನೇ ತರಗತಿಯ ವಿದ್ಯಾರ್ಥಿನಿಯರಿಗೆ ವಾರ್ಷಿಕ ರೂ. ೧೫೦.೦೦. ಮೊದಲ ಸಲ ಪಾಸಾದ ಹಿಂದುಳಿದ ವರ್ಗದ ವಿದ್ಯಾರ್ಥಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

**೨. ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ನಗದು ಬಹುಮಾನ**

ಹಿಂದುಳಿದ ವರ್ಗದ ವಿದ್ಯಾರ್ಥಿನಿಯರಿಗೆ ಸ್ಪರ್ಧಾತ್ಮಕ ಮನೋಭಾವವನ್ನು ಬೆಳೆಸಿಕೊಳ್ಳುವ ದೃಷ್ಟಿಯಿಂದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಶೇ. ೬೦ಕ್ಕಿಂತ ಹೆಚ್ಚು ಅಂಕಗಳನ್ನು ಪಡೆದು ಪ್ರಥಮ ಬಾರಿಗೆ, ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದುವ ಎಲ್ಲಾ ವಿದ್ಯಾರ್ಥಿನಿಯರಿಗೆ ಈ

ಯೋಜನೆಯಲ್ಲಿ ಬಹುಮಾನದ ಹಣವನ್ನು ನೀಡಲಾಗುತ್ತದೆ. ರೂ. ೫೦೦.೦೦ಗಳನ್ನು ಸಮಾಜ ಕಲ್ಯಾಣಾಧಿಕಾರಿಗಳು ಮಂಜೂರು ಮಾಡಿ ಇದನ್ನು ವಿತರಿಸುತ್ತಾರೆ. ಇದರ ಜೊತೆಗೆ ಅತಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಬಹುಮಾನ ಅಥವಾ ಪ್ರತಿಭಾ ವಿದ್ಯಾರ್ಥಿ ವೇತನ ನೀಡಿಕೆ. ೫ ರಿಂದ ೧೦ನೇ ತರಗತಿಯವರೆಗೆ ಅಭ್ಯಾಸ ಮಾಡುತ್ತಿರುವ ಹಾಗೂ ಶೇ. ೬೦ಕ್ಕಿಂತ ಹೆಚ್ಚು ಅಂಕ ಪಡೆದ ಹಿಂದುಳಿದ ವಿದ್ಯಾರ್ಥಿಗಳಿಗೆ ನೀಡುವ ಯೋಜನೆಯಾಗಿದೆ.

**೩. ಮೆಟ್ರಿಕ್ ಪೂರ್ವ ಪ್ರೋತ್ಸಾಹ ವಿದ್ಯಾರ್ಥಿ ವೇತನ**

ವಿದ್ಯಾರ್ಥಿನಿಯರಲ್ಲಿ ಶಾಲೆ ಬಿಡುವ ಪ್ರವೃತ್ತಿ ತಪ್ಪಿಸಿ ಅವರಲ್ಲಿಯ ಸಾಕ್ಷರತೆಯನ್ನು ಹೆಚ್ಚಿಸುವ ಸಲುವಾಗಿ ಪ್ರಾಥಮಿಕ ಹಾಗೂ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಹಿಂದುಳಿದ ವರ್ಗದ ವಿದ್ಯಾರ್ಥಿನಿಯರಿಗೆ ಈಗಾಗಲೇ ಸಾಮಾನ್ಯ ಕಾರ್ಯಕ್ರಮದಡಿಯಲ್ಲಿ ನೀಡುವ ರೂ. ೧೦೦.೦೦ಗಳ ಜೊತೆಗೆ ರೂ. ೫೦೦.೦೦ಗಳನ್ನು ಹೆಚ್ಚುವರಿಯಾಗಿ ನೀಡಲಾಗುವುದು. ೨೦೦೨-೦೩ನೇಸಾಲಿನಿಂದ ೬ ಮತ್ತು ೭ನೇ ತರಗತಿಗೆ ಬರುವ ವಿದ್ಯಾರ್ಥಿನಿಯರಿಗೆ ಇದೇ ಮಾದರಿಯಲ್ಲಿ ವಾರ್ಷಿಕ ರೂ. ೨೫೦.೦೦ಗಳ ಪ್ರೋತ್ಸಾಹ ಧನ ನೀಡಲಾಗುತ್ತದೆ.

**೪. ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿ ನಿಲಯಗಳಲ್ಲಿರುವ ವಿದ್ಯಾರ್ಥಿಗಳಿಗೆ ವಿಶೇಷ ಬೋಧನೆ**

ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿ ನಿಲಯಗಳಲ್ಲಿರುವ ಪ್ರೌಢ ಶಾಲೆಗಲಲ್ಲಿ ಓದುವ ವಿದ್ಯಾರ್ಥಿಗಳಿಗೆ ವಿಶೇಷ ಬೋಧನೆಯನ್ನು ನೀಡಲಾಗುವುದು. ವಿಜ್ಞಾನ, ಗಣಿತ, ಇಂಗ್ಲಿಷ್ ಮತ್ತು ಸಾಮಾನ್ಯ ವಿಷಯಗಳಲ್ಲಿ ಬೋಧನೆಯನ್ನು ನೀಡಲಾಗುವುದು.

ಭಾರತ ಸರ್ಕಾರದ ಮೆಟ್ರಿಕ್ ಪ್ರಮಾಣದ ಕೇಂದ್ರ ಪುರಸ್ಕೃತ ಯೋಜನೆಯಾಗಿದೆ. ಹಿಂದುಳಿದ ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಲ್ಲಿ ಅವರ ವ್ಯಾಸಂಗಕ್ಕೆ ಅನುಕೂಲ ಕಲ್ಪಿಸುವ ಹಿನ್ನೆಲೆಯಲ್ಲಿ ಹೊಂದಿದೆ. ವ್ಯಾಸಂಗವನ್ನು ಮಧ್ಯದಲ್ಲಿ ಹಲವಾರು ಕಾರಣಗಳಿಂದ ಬಿಡುವುದನ್ನು ತಡೆಗಟ್ಟುವ ಉದ್ದೇಶದಿಂದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತದೆ.

**೫. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ**

ಭಾರತ ಸರ್ಕಾರದ ವಿದ್ಯಾರ್ಥಿ ವೇತನಕ್ಕೆ ಅನರ್ಹರಾದ ಹಿಂದುಳಿದ ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿನಿಯರು ವಿದ್ಯಾಭ್ಯಾಸವನ್ನು ಮುಂದುವರೆಸಲು ಅನುಕೂಲವಾಗುವಂತೆ ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನವನ್ನು ಮಂಜೂರು ಮಾಡಲಾಗುತ್ತದೆ. ಇದು ರಾಜ್ಯ ಸರ್ಕಾರದ ಕಾರ್ಯಕ್ರಮವಾಗಿದ್ದು ಅನುದಾನವು ಪೂರ್ಣ ರಾಜ್ಯದ್ದಾಗಿರುತ್ತದೆ.

**೬. ಪಿ.ಯು.ಸಿ. ದ್ವಿತೀಯ ಪರೀಕ್ಷೆಯಲ್ಲಿ ಜಿಲ್ಲಾಮಟ್ಟದಲ್ಲಿ ಅತಿಹೆಚ್ಚು ಅಂಕಗಳಿಸಿದ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ತಲಾ ರೂ. ೧೦,೦೦೦.೦೦ಗಳನ್ನು ಬಹುಮಾನ.**

ಹಿಂದುಳಿದ ವಿದ್ಯಾರ್ಥಿಗಳು ವಿದ್ಯಾಭ್ಯಾಸದ ಕಡೆಗೆ ಹೆಚ್ಚಿನ ಗಮನಹರಿಸಲು ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾಗವಹಿಸಲು ಅನುಕೂಲವಾಗುವಂತೆ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿ ಮೂಡಿಸಲು ಈ ಯೋಜನೆಯನ್ನು ಇತ್ತೀಚೆಗೆ ಜಾರಿಗೆ ತರಲಾಗಿದೆ.

**೭. ಪೋಸ್ಟ್ ಮೆಟ್ರಿಕ್ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟ ಮತ್ತು ವಸತಿ ಭತ್ಯೆ ಮಂಜೂರಾತಿ**

ಈ ಯೋಜನೆಯ ಉದ್ದಶ ಹಾಗೂ ಹಿನ್ನೆಲೆ ಎಸ್.ಎಸ್.ಎಲ್.ಸಿ. ನಂತರ ತನ್ನ ವಿದ್ಯಾಭ್ಯಾಸವನ್ನು ಮುಂದುವರೆಸಲು ಸಾಧ್ಯವಾಗದ ಹಿಂದುಳಿದ ವಿದ್ಯಾರ್ಥಿಗಳಿಗೆ ಅಂಗೀಕೃತ ಮತ್ತು ಸರ್ಕಾರಿ ಕಾಲೇಜು ವಿದ್ಯಾರ್ಥಿಗಳ ವಿದ್ಯಾರ್ಥಿ ನಿಲಯದಲ್ಲಿ ವಾಸ ಮಾಡುತ್ತಿರುವ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸುವ ಉದ್ದೇಶದಿಂದ ಈ ಕಾರ್ಯಕ್ರಮ ರೂಪಿಸಲಾಗಿದೆ.

ರಾಜ್ಯ ಸರ್ಕಾರದಲ್ಲಿರುವ ಅಂಗೀಕೃತ ಕಾಲೇಜು ವಿದ್ಯಾರ್ಥಿನಿ ನಿಲಯದಲ್ಲಿರುವಂತಹ ಹಿಂದುಳಿದ ವಿದ್ಯಾರ್ಥಿಗಳು ಭಾರತ ಸರ್ಕಾರದ ವಿದ್ಯಾರ್ಥಿವೇತನಕ್ಕೆ ಅರ್ಹರಾಗಿದ್ದು, ಭಾರತ ಸರ್ಕಾರ ನಿಗದಿಪಡಿಸಿರುವ ವಿದ್ಯಾರ್ಥಿ ವೇತನದ ದರಕ್ಕಿಂತಲೂ ಆಯಾ ನಿಲಯದ ವಿದ್ಯಾರ್ಥಿಗಳಿಗೆ ಹೆಚ್ಚಿನ ಖರ್ಚು ಬಂದಲ್ಲಿ ಹೆಚ್ಚುವರಿ ಊಟ ಮತ್ತು ವಸತಿ ವೆಚ್ಚವನ್ನು ನೀಡಲಾಗುತ್ತದೆ.

ಭಾರತ ಸರ್ಕಾರದ ಆದೇಶ ಸಂಖ್ಯೆ: ೧೧೦೧೭:೧:೯೬೨ ದಿನಾಂಕ ೧೧.೧೨.೧೯೯೪ರ ಪತ್ರದಲ್ಲಿ ಕಾಲೇಜು ವಿದ್ಯಾರ್ಥಿಗಳ ವಿದ್ಯಾರ್ಥಿ ವೇತನ ದರವನ್ನು ಪರಿಷ್ಕರಿಸಿ ದಿನಾಂಕ ೦೧.೧೦.೧೯೯೫ ರಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ. ಕೋರ್ಸ್ ಗ್ರೂಪ್ 'ಎ' ದಿಂದ 'ಇ' ವರ್ಗದ ಕೋರ್ಸ್‌ಗಳಿಗೆ ಸೇರಿರುವ ಹಿಂದುಳಿದ ವರ್ಗದ ವಿದ್ಯಾರ್ಥಿಗಲಿಗೆ ಸಮವಾಗಿ ವ್ಯತ್ಯಾಸದ ಹಣವನ್ನು ಮಂಜೂರು ಮಾಡಲಾಗುತ್ತದೆ.

**೮. ಸ್ವಯಂ ಉದ್ಯೋಗ ತರಬೇತಿ ಕೇಂದ್ರಗಳು**

ಹಿಂದುಳಿದ ಗೌಳಿಗ ನಿರುದ್ಯೋಗಿ ಯುವಕ-ಯುವತಿಯರಿಗೆ ವಿವಿಧ ವೃತ್ತಿಗಳಲ್ಲಿ ತರಬೇತಿ ನೀಡಿ ಸ್ವತಂತ್ರ ಉದ್ಯೋಗವನ್ನು ಆಯ್ಕೆ ಮಾಡಿಕೊಳ್ಳುವುದು ಈ ಕಾರ್ಯಕ್ರಮದ ಉದ್ದೇಶವಾಗಿರುತ್ತದೆ. ಈ ಯೋಜನೆಯಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ ರೂ. ೩೦೦.೦೦ ಶಿಷ್ಯವೇತನವನ್ನು ಅಟೋ ಡ್ರೈವಿಂಗ್, ವಾಹನ ಚಾಲನೆ, ಕಂಪ್ಯೂಟರ್ ತರಬೇತಿ, ಊದುಬತತಿ ತಯಾರಿಕೆ ಹಾಗೂ ವಿವಿಧ ವೃತ್ತಿಗಳ ತರಬೇತಿಯನ್ನು ನೀಡಲಾಗುತ್ತದೆ.

**೯. ಹೆಣ್ಣುಮಕ್ಕಳ ಸಾಕ್ಷರತಾ ಮಟ್ಟವನ್ನು ಸುಧಾರಿಸಲು ವಿಶೇಷ ರೀತಿಯ ವಿದ್ಯಾರ್ಥಿ ವೇತನವನ್ನು ನೀಡುವುದರ ಜೊತೆಗೆ ಕೇಂದ್ರ ಸರ್ಕಾರದ ನೆರವಿನೊಂದಿಗೆ ಶೈಕ್ಷಣಿಕ ಸಂಕೀರ್ಣ(ಎಜುಕೇಷನಲ್ ಕಾಂಪ್ಲೆಕ್ಸ್)ವನ್ನು ಪ್ರಾರಂಭಿಸುವ ಯೋಜನೆ.**

ಈ ಯೋಜನೆ ಅಡಿಯಲ್ಲಿ ಹಿಂದುಳಿದ ವರ್ಗದ ಹೆಣ್ಣುಮಕ್ಕಳ ಸಾಕ್ಷರತಾ ಮಟ್ಟವನ್ನು ಸುಧಾರಿಸಲು ಕೇಂದ್ರ ಸರ್ಕಾರವು ಎಜುಕೇಶನಲ್ ಕಾಂಪ್ಲೆಕ್ಸ್‌ನ್ನು ಪ್ರಾರಂಭಿಸುವ ಯೋಜನೆಯನ್ನು ಜಾರಿಗೆ ತಂದಿರುತ್ತದೆ. ಈ ಯೋಜನೆಯಡಿಯಲ್ಲಿ ದೇಶಾದ್ಯಂತ ೧ಲಕ್ಷ ಎಜುಕೇಷನ್ ಕಾಂಪ್ಲೆಕ್ಸ್‌ಗಳನ್ನು ಸ್ಥಾಪಿಸಲಾಗಿದೆ. ಇದರಲ್ಲಿ ಪ್ರತಿವರ್ಷ ೨೦,೦೦೦ ವಿದ್ಯಾರ್ಥಿನಿಯರು ದಾಖಲಾಗುತ್ತಿದ್ದಾರೆ. ಇಂತಹ ಶಿಕ್ಷಣ ಕೇಂದ್ರದಲ್ಲಿ ಹಿಂದುಳಿದ ವರ್ಗದವರ ವಿದ್ಯಾರ್ಥಿಗಳಿಗೆ ವಸತಿ ಸಹಿತ ಶಿಕ್ಷಣದ ವ್ಯವಸ್ಥೆಯನ್ನು ಮಾಡಲಾಗುವುದು. ಜೊತೆಗೆ ಅವರ ವ್ಯಕ್ತಿತ್ವ ವಿಕಾಸನಕ್ಕೆ ಪೂರಕವಾಗುವಂತಹ ಪಠ್ಯೇತರ ಚಟುವಟಿಕೆ

ಗಳನ್ನು ಹಮ್ಮಿಕೊಳ್ಳುವುದು. ಇದರಿಂದ ಹಿಂದುಳಿದ ವರ್ಗದ ಸಮೂಹವನ್ನು ಸಮಾಜದ ಮುಖ್ಯ ವಾಹಿನಿಯೊಂದಿಗೆ ಬೆರೆಯುವಂತೆ ಪ್ರೋತ್ಸಾಹ ನೀಡುವುದು. ಈ ಶಾಲೆಗಳಲ್ಲಿ ಪ್ರಾರಂಭಕ್ಕೆ ೧ ರಿಂದ ೫ರವರೆಗೆ ತರಗತಿಗಲು ಇದ್ದು ನಂತರ ಮೇಲ್ದರ್ಜೆಗೇರಿಸಿ ೧೨ನೇ ತರಗತಿಯವರೆಗೆ ಶಿಕ್ಷಣ ನೀಡಲು ಅವಕಾಶವಿರುತ್ತದೆ. ಪ್ರತಿ ತರಗತಿಯಲ್ಲಿ ೩೦ ಹೆಣ್ಣು ಮಕ್ಕಳಿಗೆ ಅವಕಾಶವಿರುತ್ತದೆ. ಪ್ರತಿ ವಿದ್ಯಾರ್ಥಿಗೆ ಸುಮಾರು ರೂ. ೯೦೦೦.೦೦ಗಳವರೆಗೆ ಆವರ್ತ ವೆಚ್ಚವನ್ನು ಭರಿಸಲು ಅನುದಾನವನ್ನು ನೀಡಲಾಗುವುದು.

**೧೦. ನವಚೇತನ ಕಾರ್ಯಕ್ರಮಗಳು**

೧೯೯೫-೯೬ನೇ ಸಾಲಿನಲ್ಲಿ ಹಮ್ಮಿಕೊಂಡ ನೂತನ ಯೋಜನೆ 'ನವಚೇತನ' ಇದರಲ್ಲಿ ಮುಖ್ಯವಾಗಿ ಹಿಂದುಳಿದವರ್ಗದ ವಿದ್ಯಾವಂತ ನಿರುದ್ಯೋಗಿ ಯುವಜನತೆಗೆ ಸೂಕ್ತ ಉದ್ಯೋಗ ದೊರಕಿಸುವ ಸಲುವಾಗಿ ಅವರಲ್ಲಿ ವೃತ್ತಿಪರ ಕೌಶಲ್ಯ ಬೆಳೆಸಲು ಉದ್ದೇಶಿಸಲಾಗಿದೆ. ಇಂಥವರು ಸ್ವಯಂ ಉದ್ಯೋಗ ಕೈಗೊಳ್ಳಲು ಸಹಕಾರಿಯಾಗುವಂತೆ ಸಾರ್ವಜನಿಕ, ಖಾಸಗಿ ಸಂಸ್ಥೆಗಳಿಗೆ ತರಬೇತಿ ನೀಡಲಾಗುತ್ತದೆ.

**ಅರ್ಹತೆ**

೧. ಈ ತರಬೇತಿಗೆ ಸೇರಬಯಸುವ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ., ಪಿ.ಯು.ಸಿ., ಐ.ಟಿ.ಐ., ಡಿಗ್ರಿ ಪದವಿ ಪಡೆದವರಾಗಿರಬೇಕು.

೨. ೧೮ ವರ್ಷಕ್ಕೆ ಮೇಲ್ಪಟ್ಟ ೩೦ ವರ್ಷದೊಳಗಿನ ವಯೋಮಿತಿಯವರು ಅರ್ಜಿ ಸಲ್ಲಿಸಬಹುದು.

೩. ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು.

೪. ತರಬೇತಿ ಅವಧಿ ೧ ರಿಂದ ೨ ವರ್ಷದ್ದಾಗಿರುತ್ತದೆ.

**೧೧. ಸಾಮಾಜಿಕ ಭದ್ರತೆ ಯೋಜನೆ**

ಈ ಯೋಜನೆಯ ಅಡಿಯಲ್ಲಿ ೧೯೯೨-೯೩ ರಿಂದ ೧೮ ರಿಂದ ೬೦ವರ್ಷದ ಎಲ್ಲಾ ಹಿಂದುಳಿದ ವರ್ಗಕ್ಕೆ ಸೇರಿದ ಅರಣ್ಯ ಕೂಲಿಗಾರರಿಗೆ ಜೀವಾವಿಮಾ ಸೌಲಭ್ಯವನ್ನು ಒದಗಿಸಲಾಗುತ್ತದೆ. ಇವುಗಳ ಜೊತೆಗೆ ರಾಷ್ಟ್ರೀಯ ಸಬಲೀಕರಣ ನೀತಿ ೨೦೦೧. ಇದಲ್ಲದೇ ಮಹಿಳಾ ಸಮೈಕ್ಯಾ ಯೋಜನೆ, ರಾಜೀವಗಾಂಧಿ ಭರವಸೆಯ ಯೋಜನೆ, ಶಿಕ್ಷಕರ ತರಬೇತಿಗಳು, ಸ್ತ್ರೀ-ಶಕ್ತಿ ಯೋಜನೆ, ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ.

ಭಾತದ ಸಂಸತ್ತು ೨೦೦೨ರ ಡಿಸೆಂಬರ್‌ನಲ್ಲಿ ಸಂವಿಧಾನದ ೮೬ನೇ ತಿದ್ದುಪಡಿಯನ್ನು ಅಂಗೀಕರಿಸುವುದರ ಮೂಲಕ ೬ ರಿಂದ ೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಉಚಿತ ಹಾಗೂ ಕಡ್ಡಾಯ ನೀತಿಯನ್ನು ಒಂದು ಮೂಲಭೂತ ಹಕ್ಕಾಗಿ ಮಾಡಿತು. ತತ್ ಪರಿಣಾಮವಾಗಿ ಸರ್ಕಾರವು ೧೧ ಲಕ್ಷ ಜನವಸತಿ ಪ್ರದೇಶಗಳಲ್ಲಿರುವ ೧೯೨ ಮಿಲಿಯ ಮಕ್ಕಳ ಅವಶ್ಯಕತೆಗಳನ್ನು ಗಮನದಲ್ಲಿರಿಸಿ

ಸರ್ವಶಿಕ್ಷಣ ಅಭಿಯಾನ ಎಂಬ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಈ ಯೋಜನೆಯಡಿ ಹೆಣ್ಣುಮಕ್ಕಳ ಶಾಲಾ ಹಾಜರಾತಿಯನ್ನು ಹೆಚ್ಚಿಸಲು ಉಚಿತ ಪಠ್ಯಪುಸ್ತಕ, ಶೌಚಾಲಯ ಮತ್ತು ನವೀನ ಸಲಕರಣೆಗಾಗಿ ಪ್ರತಿ ಜಿಲ್ಲೆಗೆ ೫೦ ಲಕ್ಷ ಮತ್ತು ಪ್ರತಿ ಯೋಜನೆಗೆ ೧೫ ಲಕ್ಷ ಮಂಜೂರು ಮಾಡಲಾಗುತ್ತದೆ. ಕರ್ನಾಟಕದಲ್ಲಿ ಅಂಗನವಾಡಿ ಕೇಂದ್ರಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ಮಕ್ಕಳ ಶಿಕ್ಷಣ ಹಾಗೂ ಗರ್ಭಿಣಿ ಮತ್ತು ಬಾಣಂತಿಯರ ಆರೋಗ್ಯಕ್ಕೆ ಮಹತ್ವ ಕೊಡುವುದು ಎಲ್ಲಾ ೩೦ ಜಿಲ್ಲೆಗಳಲ್ಲಿ ೩೦೦ಕಕಿಂತ ಹೆಚ್ಚು ಜನಸಂಖ್ಯೆ ಇರುವ ಗ್ರಾಮ ವಾರ್ಡ್‌ಗಳಲ್ಲಿ ೫೧,೬೧೪ ಅಂಗನವಾಡಿಗಳನ್ನು ತೆರೆದು ೨೩,೨೭೯೭೭ ಮಕ್ಕಳಿಗೆ ಶಿಕ್ಷಣ, ಪೌಷ್ಠಿಕ ಆಹಾರ, ಆರೋಗ್ಯ ತಪಾಸಣೆಯ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಉತ್ತರ ಕನ್ನಡದಲ್ಲಿ ೧೫೦೦ ಅಂಗನವಾಡಿ ಕೇಂದ್ರಗಳವೆ. ಶಿಶುಪಾಲನಾ ಕೇಂದ್ರಗಲು ೮೫ ಕಾರ್ಯನಿರ್ವಹಿಸುತ್ತಿವೆ. ಗ್ರಾಮಾಂತರ ಪ್ರದೇಶದ ಹೆಣ್ಣುಮಕ್ಕಳು ಓದಲು ಅನುವು ಮಾಡಿಕೊಡುವುದಕ್ಕಾಗಿ ರಾಜ್ಯದಲ್ಲಿ ೨೪ ವಸತಿ ನಿಲಯಗಳನ್ನು ಸ್ಥಾಪಿಸಿ ನಿರ್ವಹಿಸಲಾಗುತ್ತಿದೆ. ಭಾಗ್ಯಲಕ್ಷ್ಮಿಯೋಜನೆಯನ್ನು ತರಲಾಗಿದ್ದು ೧೦,೦೦೦ ಠೇವಣಿ ಬಡ್ಡಿ ಸಮೇತ ೧೮ ವರ್ಷದವರೆಗೆ ನೀಡಲಾಗುತ್ತಿದೆ. ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಿಗೆ ೨ ಕಿ.ಮೀ. ದೂರವಿರುವ ಪ್ರೌಢಶಾಲಾ ವಿದ್ಯಾರ್ಥಿನಿಯರಿಗೆ ಉಚಿತ ಸೈಕಲ್ ವಿತರಿಸಿ ಅವರಿಗೆ ಕಲಿಯಲು ಪ್ರೋತ್ಸಾಹ ನೀಡಲಾಗಿದೆ. ಸರ್ಕಾರ ಕೊಡುತ್ತಿರುವ ಹಿಂದುಳಿದ ವರ್ಗದ ಜನರ ಸರ್ವತೋಮುಖ ಅಭಿವೃದ್ಧಿ ಕಾರ್ಯಕ್ರಮಗಳನ್ನು ಗೌಳಿಗರು ಸ್ವಲ್ಪಮಟ್ಟಿನ ಫಲಾನುಭವಾಗಿಳಾಗಿ ಪಡೆಯುತ್ತಿದ್ದಾರೆ.

**೪.೪ ಆಶ್ರಮ ಶಾಲೆಯ ಶಿಕ್ಷಣ**

ಆಶ್ರಮ ಶಾಲೆಗಳ ಕಲ್ಪನೆಯು ಗುರುಕುಲ ವಿದ್ಯಾಭ್ಯಾಸ ಕ್ರಮದಿಂದ ಸ್ಫೂರ್ತಿ ಪಡೆಯಿತೆನ್ನ ಲಾಗುತ್ತದೆ. ಕಾಡುಗಳಲ್ಲಿನ ಪರ್ಣಕುಟೀರಗಳಲ್ಲಿ ಗುರುಗಳ ಪದತಲದಲ್ಲಿ ಶಿಷ್ಯರು ಕಲಿಯುತ್ತಿದ್ದರು. ವೈಯಕ್ತಿಕ ಗಮನ ಅಲ್ಲಿತ್ತು. ಇಂದು ಅವಕಾಶ ವಂಚಿತರ ಮಕ್ಕಳ ಹಾಗೂ ಗುಡ್ಡಗಾಡು ಹಾಗೂ ಗಿರಿಜನರ ಮಕ್ಕಳ ಶಿಕ್ಷಣ ವಿಷಯದಲ್ಲಿ ಈ ಬಗೆಯ ವ್ಯಕ್ತಿಗತ ಗಮನ ಅತ್ಯವಶ್ಯಕ. ಗಾಂಧೀಜಿ ಮತ್ತು ಠಕ್ಕರ್‌ಬಾಷಾ ಅವರ ಒಂದು ಕಲ್ಪನೆಯಾಗಿ ಅಶ್ರಮ ಶಾಲೆ ಪ್ರಾರಂಭವಾಗಿದೆ. ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಅಶ್ರಮ ಶಾಲೆ ರೂಪಗೊಂಡಿದ್ದರು. ೩ನೇ ಪಂಚವಾರ್ಷಿಕ ಯೋಜನೆಯಲ್ಲಿ ಅಶ್ರಮ ಶಾಲೆ ಪ್ರಾರಂಭವಾಯಿತು. ಕರ್ನಾಟಕದಲ್ಲಿ ಅಶ್ರಮ ಶಾಲೆ ೧೯೬೧-೬೨ರಲ್ಲಿ ಪ್ರಾರಂಭವಾಯಿತು. ಅಶ್ರಮ ಶಾಲೆಗಳ ಪರಿಕಲ್ಪನೆ ಕೇಂದ್ರ ಸರ್ಕಾರದ್ದಾಗಿದ್ದು ೧೯೯೦-೯೧ನೇ ಸಾಲಿನಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯಗಳಿಗೆ ಶೇ. ೫೦ರಷ್ಟು ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಶೇ. ೧೦೦ರಷ್ಟು ಅನುದಾವನ್ನು ಬಿಡುಗಡೆ ಮಾಡಿದೆ. ಗಿರಿಜನರ ಮಕ್ಕಳ ಶೈಕ್ಷಿಕ ಅನುಕೂಲಕ್ಕಾಗಿ ಹಾಗೂ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮಹತ್ವ ಕೊಡುವ ಉದ್ದೇಶದಿಂದ ಸರ್ಕಾರ ಈ ಅಶ್ರಮ ಶಾಲೆಗಳನ್ನು ತೆರೆದಿದೆ. ೧೯೬೦-೬೧ರಲ್ಲಿ ದೇಶಾದ್ಯಂತ ೧೮೬ ಅಶ್ರಮ ಶಾಲೆಗಳಿದದು ೧೦,೮೯೦ ಮಕ್ಕಳು ಕಲಿಯುತ್ತಿದ್ದರು. ೧೯೮೦-೮೧ರಲ್ಲಿ ೧,೩೦೯

ಅಶ್ರಮಶಾಲೆಗಳದ್ದು ೮೩,೦೪೯ ಮಕ್ಕಳು ಕಲಿಯುತ್ತಿದ್ದರು. ಈಗ ಕರ್ನಾಟಕದಲ್ಲಿ ೧೨೨ ಅಶ್ರಮ ಶಾಲೆಗಳದ್ದು ೯,೧೨೫ ಮಕ್ಕಳು ಇದರ ಲಾಭವನ್ನು ಪಡೆದುಕೊಳ್ಳುತ್ತಿದ್ದಾರೆ. ಕೆಲವು ಸಮಿತಿಗಳಾದ ರೇಣುಕಾರಾಯ್ ಸಮಿತಿ ೧೯೫೯ ಎಲ್ವಿನ್ ಸಮಿತಿ ೧೯೬೦ ಮತ್ತು ದೇಬರ್ ಸಮಿತಿ ೧೯೬೨ ಈ ಕಮಿಟಿಗಳು ಶೈಕ್ಷಣಿಕ ಗುಣಮಟ್ಟಗಳಿಗೆ ಮತ್ತು ಶೈಕ್ಷಣಿಕ ನಮೂನೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಯನ್ನು ನೀಡಿರುವುದು ಕಂಡುಬರುತ್ತದೆ. ಅನಂತರದಲ್ಲಿ ೧೯೮೬ರಲ್ಲಿ ಜಾರಿಗೆ ಬಂದ ರಾಷ್ಟ್ರೀಯ ಶಿಕ್ಷಣ ನೀತಿಯು ಶೈಕ್ಷಣಿಕ ಹೆಚ್ಚಿನ ಅವಕಾಶ ನೀಡಿದ್ದರಿಂದ ಕರ್ನಾಟಕದಲ್ಲಿ ಅಶ್ರಮ ಶಾಲೆಗಳು ಪ್ರಾರಂಭವಾದವು.

**ಉದ್ದೇಶಗಳು**

೧. ಅಹಿತಕರ ವಾತಾವರಣದಿಂದ ಮಕ್ಕಳನ್ನು ಮುಕ್ತಗೊಳಿಸುವುದು.

೨. ಸಾಮಾನ್ಯ ಶಿಕ್ಷಣವನ್ನು ಒದಗಿಸುವುದು.

೩. ವೃತ್ತಿ ಕೌಶಲ್ಯ ತರಬೇತಿಯನ್ನು ಒದಗಿಸುವುದು.

೪. ಗಿರಿಜನರ ಪರಂಪರೆಗಳನ್ನು ಬಳಸಿಕೊಳ್ಳಲು ಉತ್ತೇಜಿಸುವುದು.

೫. ವಿದ್ಯಾರ್ಥಿಗಳು ಶಿಕ್ಷಕರೊಂದಿಗೆ ನಿಕಟಸಂಬಂಧ ಹೊಂದಲು ಅವಕಾಶ ಕಲ್ಪಿಸುವುದು.

೬. ಅಪವ್ಯಯದ ಪ್ರಮಾಣವನ್ನು ಕಡಿಮೆ ಮಾಡಿ ಮಕ್ಕಳನ್ನು ಹಿಡಿದಿಟ್ಟುಕೊಳ್ಳುವ ಶಕ್ತಿಯನ್ನು ಹೆಚ್ಚಿಸುವುದು.

ಈ ತರಹದ ಉದ್ದೇಶಗಳನ್ನು ಹೊಂದಿರುವ ಅಶ್ರಮ ಶಾಲೆಯು ಜಿಲ್ಲಾವಾರು ಅಶ್ರಮ ಶಾಲೆ ಸಂಖ್ಯಾವಾರು ಹೇಗಿದೆ ಎಂದು ಮುಂದಿನ ಕೋಷ್ಟಕವನ್ನು ನೋಡೋಣಾ.

**ಕೋಷ್ಟಕ ೪.೧೬ ಕರ್ನಾಟಕದಲ್ಲಿ ಜಿಲ್ಲಾವಾರು ಆಶ್ರಮ ಶಾಲೆಗಳು ೨೦೦೬-೦೭**

| ಸಂ. | ಜಿಲ್ಲೆಗಳು | ಶಾಲೆಗಳ ಸಂಖ್ಯೆ | ಮಕ್ಕಳ ಸಂಖ್ಯೆ ೨೦೦೭ | ಬಾಲಕರು ಸಂಖ್ಯೆ | ಬಾಲಕಿಯರು ಸಂಖ್ಯೆ | ಶಿಕ್ಷಕರ ಸಂಖ್ಯೆ | ಖಾಯಂ ಶಿಕ್ಷಕರ ಸಂಖ್ಯೆ |
|---|---|---|---|---|---|---|---|
| ೧. | ಮೈಸೂರು | ೨೦ | ೭೩೨ | ೪೭೫ | ೨೬೭ | ೬೧ | ೧೬ |
| ೨. | ಕೊಡಗು | ೧೨ | ೪೫೨ | ೨೫೪ | ೧೯೮ | ೪೫ | ೧೧ |
| ೩. | ಚಿಕ್ಕಮಗಳೂರು | ೧೧ | ೪೧೧ | ೩೨೮ | ೧೮೩ | ೪೭ | ೯ |
| ೪. | ದ.ಕನ್ನಡ | ೧೧ | ೩೯೮ | ೩೦೨ | ೯೬ | ೪೧ | ೧ |
| ೫. | ಉಡುಪಿ | ೭ | ೩೨೮ | ೨೧೬ | ೧೧೨ | ೨೩ | ೫ |
| ೬. | ಚಿತ್ರದುರ್ಗ | ೨ | ೯೩ | ೫೪ | ೩೯ | ೬ | ೧ |

| | | | | | | | |
|---|---|---|---|---|---|---|---|
| ೭. | ಬೆಳಗಾವಿ | ೪ | ೧೮೭ | ೧೦೯ | ೭೮ | ೫ | ೧ |
| ೮. | ರಾಯಚೂರು | ೨ | ೪೬ | ೨೯ | ೧೭ | - | - |
| ೯. | ಚಾಮರಾಜನಗರ | ೧೯ | ೬೬೨ | ೪೮೫ | ೧೭೭ | ೫೮ | ೧೬ |
| ೧೦. | ಬಳ್ಳಾರಿ | ೩ | ೧೨೧ | ೬೯ | ೫೨ | ೯ | ೨ |
| ೧೧. | ದಾವಣಗೆರೆ | ೨ | ೭೨ | ೫೫ | ೧೭ | ೫ | ೧ |
| ೧೨. | ಬೆಂಗಳೂರು | ೬ | ೨೯೬ | ೧೧೯ | ೭೬ | ೧೩ | ೪ |
| ೧೩. | ಬೀದರ | ೧ | ೫೬ | ೨೯ | ೨೭ | ೩ | - |
| ೧೪. | ಬಿಜಾಪುರ | ೧ | ೫೧ | ೩೨ | ೧೯ | ೫ | - |
| ೧೫. | ಧಾರವಾಡ | ೧ | ೫೮ | ೩೧ | ೨೭ | ೩ | - |
| ೧೬. | ಗದಗ | ೧ | ೬೩ | ೨೯ | ೩೨ | ೩ | - |
| ೧೭. | ಗುಲಬರ್ಗಾ | ೧ | ೮೯ | ೪೧ | ೩೮ | ೩ | - |
| ೧೮. | ಹಾಸನ | ೧ | ೩೮ | ೨೧ | ೧೭ | ೨ | - |
| ೧೯. | ಹಾವೇರಿ | ೨ | ೮೮ | ೫೩ | ೩೫ | ೮ | ೨ |
| ೨೦. | ಕೋಲಾರ | ೩ | ೧೧೮ | ೮೭ | ೩೧ | ೫ | ೧ |
| ೨೧. | ಕೊಪ್ಪಳ | ೨ | ೧೨೫ | ೭೮ | ೦ | ೬ | ೧ |
| ೨೨. | ಮಂಡ್ಯ | ೧ | ೫೩ | ೧೩ | ೦ | ೪ | ೧ |
| ೨೩. | ಶಿವಮೊಗ್ಗ | ೩ | ೨೧೪ | ೧೧೨ | ೦ | ೭ | ೧ |
| ೨೪. | ತುಮಕೂರು | ೩ | ೧೧೩ | ೬೫ | ೦ | ೯ | ೧ |
| ೨೫. | ಉತ್ತರ ಕನ್ನಡ | ೧ | ೨೮ | ೧೭ | ೦ | ೫ | ೧ |

Source: Field survey of Ashram Schools closing July 2006 to jan 2008. Page:

ಆಶ್ರಮ ಶಾಲೆಯ ಜಿಲ್ಲಾವಾರು ಕೋಷ್ಟಕವನ್ನು ನೋಡಿದರೆ ಇಲ್ಲ ಖಾಯಂ ಶಿಕ್ಷಕರ ಕೊರತೆ ಕಾಣುತ್ತದೆ. ಇನ್ನೂ ಎಲ್ಲಾ ಅಶ್ರಮ ಶಾಲೆಗಳಿಗೂ ಮೂಲಭೂತ ಅವಶ್ಯಕತೆಗಳನ್ನು ಪೂರೈಸಲಾಗಿಲ್ಲ. ಅಶ್ರಮಶಾಲೆಗಳಲ್ಲ ಬಾಲಕಿಯರ ಸಂಖ್ಯೆ ಕಡಿಮೆ ಇರುವುದು ಕಂಡುಬರುತ್ತದೆ. ಉತ್ತರ ಕನ್ನಡದಲ್ಲಿ ಬಾಲಕಿಯರಿಗೆ ಅವಕಾಶವೇ ಇಲ್ಲ. ಅದಕ್ಕೆ ಗೌಳಿಗರ ಬಾಲಕಿಯರು ಶೇ. ೨.೬೭ರಷ್ಟು ಇದೆ. ಅವರದ್ದೆ ಆಶ್ರಮ ಶಾಲೆಗಳನ್ನು ತೆರೆದರೂ ಅವರ ಸಂಖ್ಯಾ ಪ್ರಮಾಣ ಕಡಿಮೆ ಇದೆ. ಏಕೆಂದರೆ ಅದೇ ಸಮಸ್ಯೆ ಬಾಲಕರು ಪಶುಪಾಲನೆ ಮತ್ತು ಬಾಲಕಿಯರು ಗೃಹಕೃತ್ಯ ಮತ್ತು ಮಕ್ಕಳನ್ನು ನೋಡಿಕೊಳ್ಳುವುದು. ಉತ್ತರ ಕನ್ನಡದ ಮುಂಡಗೋಡನಲ್ಲಿರುವ ಅಶ್ರಮಶಾಲೆಯಲ್ಲಿ ೨೮ ಬಾಲಕರಲ್ಲಿ ೧೭ಮಂದಿ ಇರುತ್ತಾರೆ. ೨ ಮಂದಿ ಶಾಲೆಯಿಂದ ಹೊರಗಿರುವರು. ಇನ್ನು ೯ ಮಂದಿ ದಾಖಲಾತಿ ಅದರೂ ಅಶ್ರಮ ಶಾಲೆಯಲ್ಲಿ ಅವರ ಹಾಜರಾತಿ ಇರುವುದಿಲ್ಲ. ಈ ತರಹ ಏಕೆ ಎಂಬ ಸಮಸ್ಯೆಗಳು? ಎನ್ನುವ ಪ್ರಶ್ನೆಗಳಿಗೆ ಗಿರಿಜನರಿಗೆ ಬೋಧಿಸುವಲ್ಲಿ ತೊಡಕುಗಳನ್ನು ಕಾಣುತ್ತೇವೆ. ಅವು ಯಾವುದೆಂದರೆ,

೧. ಭಾಷಾ ಸಮಸ್ಯೆ
೨. ಸಂಸ್ಕೃತಿಯ ಭಿನ್ನತೆ
೩. ಕೀಳರಿಮೆ ಸಂಕೋಚ
೪. ಅಕ್ಷರ ಸಂಸ್ಕೃತಿಗೆ ಒಗ್ಗದಿರುವಿಕೆ
೫. ಬುಡಕಟ್ಟು ವಿದ್ಯಾರ್ಥಿಗಳಿಗೆ ಸೂಕ್ತವಲ್ಲದ ಪಠ್ಯ
೬. ಶಿಕ್ಷಕರ ಮಿತಿ
೭. ಬೋಧನಾ ತಂತ್ರ ಹಾಗೂ ಉಪಕರಣಮಿತಿ

ಈ ಸಮಸ್ಯೆಗಳಿಗೆ ಪರಿಹಾರವೇನು? ಅಥವಾ ಗಮನಿಸಿಬೇಕಾದ ಅಂಶಗಳೇನು? ಅವುಗಳು ಯಾವುದೆಂದರೆ,

೧. ಗಿರಿಜನ ಮಕ್ಕಳನ್ನು ಶಾಲೆಯ ಕಡೆ ಆಕರ್ಷಿಸಿ ಅವರು ಒಂದು ಹಂತ ತಲುಪವವರೆಗೆ ಶಾಲಾವ್ಯವಸ್ಥೆಯಲ್ಲಿರುವಂತೆ ನೋಡಿಕೊಳ್ಳಲು ಸ್ಥಳೀಯ ಪರಿಸರದೊಂದಿಗೆ ಹೊಂದುವ ಹಾಗೆ ಶಾಲೆಯ ವೇಳ ಹಾಗೂ ಕಾರ್ಯ ಚಟುವಟಿಕೆಗಲನ್ನು ಹೊಂದಿಸಬೇಕು.

೨. ಅವರ ಕೆಲಸಗಳಿಗೆ ಹಾಗೂ ಅರಣ್ಯದ ಕಾರ್ಯ ಚಟುವಟಿಕೆಗಳಿಗೆ ಹೊಂದುವಂತೆ ಶಾಲೆಗೆ ರಜಾದಿನ ಬೇಕು.

೩. ಮಕ್ಕಳು ಮನೆಯಲ್ಲಿ ಕೆಲಸ ಮಾಡುವ ವೇಳೆಯನ್ನು ಗಮನಿಸಿ ಶಾಲೆಯನ್ನು ನಿಗದಿಪಡಿಸಬೇಕು.

೪. ಗಿರಿಜನರ ಆಟೋಟಗಳು, ಸಂಗೀತ, ನೃತ್ಯ, ಕಲೆ, ಮೊದಲಾದವುಗಳನ್ನು ಸಹಪಠ ಚಟುವಟಿಕೆಯಾಗಿ ಪರಿಭಾವಿಸಬೇಕು.

೫. ಕಲಾ ಶಿಕ್ಷಣ ಹಾಗೂ ಕೈಕಸುಬಿಗೆ ಪ್ರಾಶಸ್ತ್ಯ ನೀಡಬೇಕು.

೬. ಶಾಲೆಗೆ ಬರುವ ಹಲವು ಗಿರಿಜನರ ಮಕ್ಕಳು ಕಲಿಕೆಯ ಸಮಸ್ಯೆಯನ್ನು ಎದುರಿಸುತ್ತವೆ. ಅದಕ್ಕಾಗಿ ಶಾಲೆಯಲ್ಲಿ ಪರಿಹಾರ ಬೋಧನೆ, ವಿಶೇಷ ಪಾಠ ಹಾಗೂ ವೈಯಕ್ತಿಕ ಮಾರ್ಗದರ್ಶನಕ್ಕೆ ಅವಕಾಶವಿರಬೇಕು.

**ಸಾಧಕಗಳು**

೧. ಶಾಲೆಯ ಸಂಘಟನೆ ಏಕರೂಪವಾಗಿಲ್ಲ. ಅಂದರೆ ಕೆಲವು ಕಡೆ ೧-೪, ೧-೫ ಹಾಗೂ ೧-೭, ೧-೯ ಈ ರೀತಿಯಾಗಿ ಕಂಡುಬರುತ್ತವೆ.

೨. ವೃತ್ತಿಪರ ಶಿಕ್ಷಣ ಹಾಗೂ ಕುಲ ಕಸುಬುಗಳಿಗೆ ಉತ್ತೇಜನವನ್ನು ಸಂಪೂರ್ಣ ಕಡೆಗಣಿಸಲಾಗಿದೆ.

೩. ಅಶ್ರಮಶಾಲೆಗಳು ತಮ್ಮ ಉದ್ದೇಶಕ್ಕೆ ವಿರುದ್ಧವಾಗಿ ಸಾಮಾನ್ಯ ಶಾಲೆಗಳಾಗಿವೆ.

೪. ಕೇಂದ್ರ ಸರ್ಕಾರದಿಂದ ಸಕಾಲಕ್ಕೆ ಅನುದಾನ ಸಿಗುತ್ತಿಲ್ಲ.

೫. ನವೋದಯ ಶಾಲೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ. ಅಶ್ರಮಶಾಲೆಗಳನ್ನು ಕಡೆಗಣಿಸಲಾಗುತ್ತಿವೆ.

೬. ಅಶ್ರಮಶಾಲೆಗಳಲ್ಲಿ ಅವರ ಉಪಭಾಷೆಯಲ್ಲಿ ಪಾಠ ಬೋಧನೆ ನಡೆದರೆ ಪರಸ್ಪರ ವಿನಿಮಯಕ್ಕೆ,

ಜ್ಞಾನಾರ್ಜನೆಗೆ ಅನುಕೂಲವಾಗುತ್ತದೆ. ಗ್ರಹಿಕೆ, ಮಾತು, ಓದು, ಬರಹ ಈ ನಾಲ್ಕು ಭಾಷಾ ಕೌಶಲ್ಯಗಳಲ್ಲಿ ಗಿರಿಜನ ಮಕ್ಕಳನ್ನು ತರಬೇತಿಗೊಳಿಸಬೇಕು ಆಗ ಪ್ರಗತಿ ಸಾಧ್ಯ.

ಬುಡಕಟ್ಟು ಸಮುದಾಯದ ಅಭಿವೃದ್ಧಿಗಾಗಿ ಸರ್ಕಾರ ಸಾಕಷ್ಟು ಯೋಜನೆಗಳನ್ನು ರೂಪಿಸಿದ್ದರೂ ಪ್ರಗತಿ ನಿರೀಕ್ಷಿಸಿದಷ್ಟು ಇಲ್ಲ. ಅದಕ್ಕೆ ಕಾರಣ ಸಾಕ್ಷರತೆಯ ಪ್ರತಿಶತ ಶೇ. ೪೦ರಷ್ಟು ತಲುಪಿಲ್ಲ. ಸಾಕ್ಷರತೆಯ ಪ್ರಮಾಣ ಹೆಚ್ಚದಿದ್ದರೆ ಅರಿವು ಮೂಡದು. ತಮಗೊದಗಿಸಿದ ಸವಲತ್ತುಗಳನ್ನು ಪಡೆದ ಜಾಗೃತಿ ಉಂಟಾಗಿದ್ದರೆ ಅಭಿವೃದ್ಧಿಯೂ ವಿಫಲವಾಗುತ್ತದೆ. ಬುಡಕಟ್ಟು ಎನ್ನುವ ಪಟ್ಟಿಗೆ ಸೇರುವ ಎಲ್ಲ ಅರ್ಹತೆಗಳನ್ನು ಹೊಂದಿರುವ ಗೌಳಿ ಸಮುದಾಯಕ್ಕೆ ಇನ್ನೂ ಹೆಚ್ಚಿನ ಶೈಕ್ಷಣಿಕ ಅವಕಾಶಕ್ಕೆ ಅಶ್ರಮಶಾಲೆಯ ಅವರು ಇದ್ದ ಪ್ರದೇಶಗಳಲ್ಲಿ ಪ್ರಾರಂಭವಾಗುವುದರ ಮೂಲಕ ಅವರಿಗೆ ಉತ್ತೇಜನ. ಗಿರಿಜನರ ಮಕ್ಕಳ ಶಿಕ್ಷಣಕ್ಕೆ ಅವಕಾಶ ನೀಡಬೇಕು. ಈ ಸಮುದಾಯದ ಅಭಿವೃದ್ಧಿ, ಅರಿವು ಅಕ್ಷರದಾನ ಮಾಡುವ ಶಿಕ್ಷಕರಿಂದ ಮಾತ್ರ ಸರ್ವಾಂಗೀಣ ಏಳ್ಗೆ ಸಾಧ್ಯ. ಘನವಾದ ಉದ್ದೇಶದಿಂದ ಹೊರಹೊಮ್ಮಿದ ಅಶ್ರಮ ಶಾಲೆಗಳ ಪ್ರಯೋಗ ಯಶಸ್ವಿಯಾಗಬೇಕು.

**೪.೫ ಶಿಕ್ಷಣ ಪ್ರಗತಿ**

೧೯೯೩-೯೪ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಂಪೂರ್ಣ ಸಾಕ್ಷರತಾ ಅಂದೋಲನವನ್ನು ಎಲ್ಲಾ ತಾಲೂಕುಗಳಲ್ಲಿ ಹಮ್ಮಿಕೊಳ್ಳಲಾಗಿತ್ತು. ಅದರ ಯಶಸ್ವಿಯಾಗಿ ಸಾಮಾನ್ಯ ಸಮಿತಿ, ಕಾರ್ಯಕಾರಿ ಸಮಿತಿ, ಪರಿಸರ ನಿರ್ಮಾಣ ಸಮಿತಿ, ಬೋಧನಾ ಸಮಿತಿಗಳ ರಚನೆ ಮಾಡಲಾಗಿತ್ತು. ಜಿಲ್ಲಾದ್ಯಂತ ಸಮೀಕ್ಷೆಯನ್ನು ನಡೆಸಿ ಅನಕ್ಷರಸ್ಥರನ್ನು ಗುರುತಿಸಲಾಯಿತು. ಸಂಪೂರ್ಣ ಸಾಕ್ಷರತಾ ಅಂದೋಲನದಲ್ಲಿ ಭಾಗವಹಿಸಿದ್ದ ಪ್ರಮುಖ ಸಂಸ್ಥೆಗಳೆಂದರೆ ಶ್ರಮಿಕ ವಿದ್ಯಾಪೀಠ, ಬಾಲ ಪ್ರಗತಿ ಕೇಂದ್ರ, ಬಾಪೂಜಿ ಎಜುಕೇಶನ್ ಸೊಸೈಟಿ, ರೋಹಿತ್ ವಿಕಾಸ ಸಂಸ್ಥೆ, ಜನಿಯಾರ್ಸ್ ಗೌಳಿ ಸಂಘ, ಯೂತ್ ಫೆಡರೇಷನ್, ಇತ್ಯಾದಿ ಪ್ರಗತಿಪರ ಸಂಘಟನೆಗಳ ಕಲಿಕಾ ಕೇಂದ್ರವನ್ನು ಆರಂಭಿಸಲಾಯಿತು.

ಉತ್ತರ ಕನ್ನಡ ಜಿಲ್ಲಾ ಸಾಕ್ಷರತಾ ಸಮಿತಿಗೆ ಬೇರೆ ಬೇರೆ ಹೆಸರಿಡಲಾಯಿತು. ಈ ಜಿಲ್ಲೆಯ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಕ್ರಮವಾಗಿ ಅನುದಾನ ನೀಡಿದವು. ಈ ಅನುದಾನ ವಿವರ ಈ ರೀತಿ ಇದೆ.

| **ಸರ್ಕಾರದ ಅನುದಾನ** | **ವಿವರ** |
|---|---|
| ಕೇಂದ್ರ | ೭೯,೭೭೦೦.೦೦ |
| ರಾಜ್ಯ | ೩೮,೭೫೦೦.೦೦ |
| **ಒಟ್ಟು** | **೧,೦೮೫೧,೦೦೦.೦೦** |

ಈ ಅನುದಾನದಿಂದ ಸಾಕ್ಷಕರನ್ನಾಗಿ ಮಾಡುವ ಗುರಿಯಿಟ್ಟು ಕೊಂಡಿದ್ದು ೧೫ ರಿಂದ ೩೫ ವಯಸ್ಸಿನ ವಯೋಮಾನದ ಅನಕ್ಷರಸ್ಥರ ಸಂಖ್ಯೆ ೧ ಲಕ್ಷ ೫೫ ಸಾವಿರದ ೧೭೪.೭ ಸಾವಿರಕ್ಕೂ ಹೆಚ್ಚು ಸ್ವಯಂ ಸೇವಕರು ಕಲಿಸುವ ಪ್ರಕ್ರಿಯೆಯಲ್ಲಿ ತೊಡಗಿದ್ದು ೧೩ ಸಾವಿರದ ೪೭ ಕಲಿಕಾ

ಕೇಂದ್ರಗಳನ್ನು ಚಾಲನೆ ನೀಡಲಾಯಿತು. ಉತ್ತರ ಕನ್ನಡ ಮೂಲ ಸಾಕ್ಷರತಾ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡ ನವಸಾಕ್ಷರರ ವಿವರ ಈ ರೀತಿ ಇದೆ.

**ಸಾಕ್ಷರೋತ್ತರ ಕಾರ್ಯಕ್ರಮದಲ್ಲಿ ಭಾಗವಹಿಸಿದ ನವಸಾಕ್ಷರರ ಸಂಖ್ಯೆ**

| ಕ್ರ.ಸಂ. | ವಿವರ | ಸಂಖ್ಯೆ |
|---|---|---|
| ೧. | ಪುರುಷರು | ೪೪,೪೭೩ |
| ೨. | ಮಹಿಳೆಯರು | ೮೪,೯೭೦ |
| ೩. | ಎಸ್.ಸಿ. | ೧೩,೧೧೧ |
| ೪. | ಎಸ್.ಟಿ. | ೩,೦೭೯ |
| | **ಒಟ್ಟು** | **೧,೪೫,೬೧೩** |

ಸಾಕ್ಷರೋತತರ ಕಾರ್ಯಕ್ರಮದಲ್ಲಿನ ನವ ಓದುಗರಿಗೆ ಹಲವಾರು ವೃತ್ತಿ ಕೌಶಲ್ಯ ನೀಡುವ ತರಬೇತಿಗಳನ್ನು ನೀಡಿದ್ದು ಈ ಬಗೆಗಿನ ವಿವರ ಈ ರೀತಿ ಇದೆ.

| ಕ್ರ.ಸಂ. | ತರಬೇತಿ ವಿಷಯ | ಶಿಬಿರಾರ್ಥಿಗಳು |
|---|---|---|
| ೧. | ಚಾಪೆ ನೇಯ್ಗೆ | ನವಸಾಕ್ಷರರು |
| ೨. | ಎಲೆ ತಯಾರಿ | ನವಸಾಕ್ಷರರು |
| ೩. | ಅಣಬೆ ಬೆಳೆಯುವಿಕೆ | ನವಸಾಕ್ಷರರು |
| ೪. | ಕಸಿ ಕಟ್ಟುವುದು | ನವಸಾಕ್ಷರರು |

ವೃತ್ತಿ ಕೌಶಲದ ತರಬೇತಿಯು ನವ ಓದುಗರಿಗೆ ತಾವು ಕಲಿತಿದ್ದನ್ನು ಮುಂದುವರೆಸಲು ತಮ್ಮ ಅರಿವಿನ ಅಂಶವನ್ನು ಹೆಚ್ಚಿಸಿಕೊಳ್ಳಲು ಅವ್ಯವಾದ ಚಟುವಟಿಕೆಗಳಂತೂ ಸಾಕಷ್ಟು ಪ್ರಮಾಣದಲ್ಲಿ ನಡೆದಿರುವುದು ಕಾಣುತ್ತೇವೆ. ಸಾಕ್ಷರೋತ್ತರ ಕಲಿಕೆ ಕೇಂದ್ರಗಳು ಓದು, ಬರಹ, ಅಕ್ಷರ, ಜೊತೆಗೆ ಮಾಹಿತಿ ಕೇಂದ್ರವಾಗಿ ಸರ್ಕಾರದ ವಿವಿಧ ಯೋಜನೆಗಳನ್ನು ಅನುಷ್ಠಾನಿಸುವ ಕೇಂದ್ರವಾಗಿ ಮಾರ್ಪಟ್ಟವು. ೩೦ ವಿವಿಧ ಯೋಜನೆಗಳು ಪರಿಣಾಮ ಕೇಂದ್ರಗಳಲ್ಲಿ ಹಾಜರಾತಿ ಹೆಚ್ಚಳ, ಕೇಂದ್ರಗಳ ಪುನಃಶ್ಚೇತನ ಕಲಿಕಾ ಜಾಗೃತಿ ವಿವಿಧ ವೃತ್ತಿಗಳಲ್ಲಿ ತರಬೇತಿ, ಕೃಷಿ ತೋಟಗಾರಿಕೆ ಕಂದಾಯ ಮೀನುಗಾರಿಕೆ, ಪೋಲಿಸ್ ಇಲಾಖೆ, ಕೈಗಾರಿಕಾ ಇಲಾಖೆ, ಲೋಕೋಪಯಾಗಿ ಇಲಾಖೆ ಮಾಹಿತಿಗಳು, ಸರ್ಕಾರದ ವಿವಿಧ ಯೋಜನೆಗಳ ಮಾಹಿತಿ, ನವಸಾಕ್ಷರರ ಒಗ್ಗಟ್ಟು, ಸಂಘಟನಾಶಕ್ತಿ, ಕಲಿಕೆಯಲ್ಲಿ ಸ್ಪರ್ಧೆ, ಹೊಸ ಉದ್ಯೋಗದಲ್ಲಿ ಅಸಕ್ತಿ, ಉಳಿತಾಯ ಶ್ರದ್ಧೆ, ಬಗ್ಗೆ ಮಾರ್ಗದರ್ಶನ ಲಭ್ಯವಾದ್ದರಿದಂ ನವಸಾಕ್ಷರರಲ್ಲಿ ಜಾಗೃತಿ ಉಂಟಾಯಿತು. ಮತ್ತೆ ಸಾಕ್ಷರತಾ ಅಂದೋಲನಕ್ಕೆ ಅನಕ್ಷರಸ್ಥರನ್ನು ಗುರುತಿಸಿ ಸಾಕ್ಷರರನ್ನಾಗಿ ಮಾಡುವ ಕನಾಸನಾವನ್ನು ಜಿಲ್ಲಾದ್ಯಂತ ಕೈಗೊಳ್ಳಲಾಯಿತು.

**ಕೋಷ್ಟಕ ೪.೧೭ ಕನ್ನಡನಾಡು ಸಾಕ್ಷರನಾಡು ಕಾರ್ಯಕ್ರಮದಲ್ಲಿ ಭಾಗವಹಿಸಿದವರ ವಿವರ (ಕಲಿಕಾರ್ಥಿಗಳು)**

| ಕ್ರ.ಸಂ. | ವಿವರ | ದಾಖಲಾತಿ | ಕಲಿಕೆ ಪೂರ್ಣಗೊಳಿಸಿದವರು |
|---|---|---|---|
| ೧. | ಪುರುಷರು | ೧೧೦೭೬ | ೭೭೯೨ |
| ೨. | ಮಹಿಳೆಯರು | ೨೩೩೯೪ | ೧೮.೬೭೦ |
| ೩. | ಎಸ್.ಸಿ. | ೧೧೧೫ | ೧೦೦೭ |
| ೪. | ಎಸ್.ಟಿ. | ೪೩೮೧ | ೪೧೫೭ |
| ೫. | ಅಲ್ಪಸಂಖ್ಯಾತರು | ೩೪೭೦ | — |
| ೬. | ಇತರೆ | — | — |
| | ಒಟ್ಟು | ೩೨೨೬೯ | ೨೭೫೬೭ |

ಸಾಕ್ಷರತಾ ಅಂದೋಲನದ ನಿಜವಾದ ಕೊಡಗೆ ಎಂದರೆ ಮೂಲಭೂತವಾಗಿ ಜನರು ತಮ್ಮ ಬದುಕಿನ ಸಮಸ್ಯೆಗಳನ್ನು ಸಾರ್ವಜನಿಕ ಕ್ಷೇತ್ರದ ಗಮನವನ್ನು ಸೆಳೆಯಲು ಸಾಧ್ಯವಾಯಿತು. ಇವತ್ತು ಜಾರಿಯಲ್ಲಿರುವ ನವಸಾಕ್ಷರ ಯೋಜನೆ ಮತ್ತು ವಯಸ್ಕರ ಶಿಕ್ಷಣ, ಅಕ್ಷರ ಕೃಷಿ ಕಾರ್ಯಕ್ರಮಗಲು, ಅಕ್ಷರ ವೃಕ್ಷ, ಮಹಿಳಾ ಜಾಗೃತಿಗಾಗಿ ಅಕ್ಷರ ಮಹಿಳಾ ಕಾರ್ಯಕ್ರಮಗಳು ಸ್ಥಳೀಯ ಮಟ್ಟದಲ್ಲಿ ಜನರ ಮನ ಬದಲಾವಣೆಗೆ ಸಹಾಯಕವಾಗಿದೆ. ಎಲ್ಲರೊಡನೆ ಸಮಾನಾಗಿ ಬೆರೆಯಲು ಅವಕಾಶವಾಗಿ ವಿಚಾರಗಳ ಪ್ರಚೋದನೆಗೆ ನಾಂದಿಯಾಗಿದೆ.

**ಗೌಳಗರ ಸಾಕ್ಷರತಾ ಪ್ರಮಾಣ :** ೧೯೬೧ ರಿಂದ ೨೦೦೧ರವರೆಗಿನ ಜನಗಣತಿಯನ್ನು ಅವಲೋಕಿಸಿದರೆ ಗೌಳಗರಲ್ಲಿ ಎಷ್ಟು ಜನ ಸಾಕ್ಷರರಿದ್ದಾರೆ. ಎಷ್ಟು ಜನ ಶಾಲೆಗೆ ಹೋಗದೆ ಸಹಿ ಮಾತ್ರ ಮಾಡಲು ಮತ್ತು ಓದಲು ಬರುವವರಿದ್ದಾರೆ. ಎಷ್ಟು ಶಾಲೆಗೆ ಹೋಗಿ ಶಿಕ್ಷಣವನ್ನು ಪಡೆದಿದ್ದಾರೆ ಮತ್ತು ಅನಕ್ಷರಸ್ಥರು ಎಷ್ಟು ಎಂಬುದು ತಿಳಿದುಬರುತ್ತದೆ.

೧೯೬೧ ರಿಂದ ೨೦೦೧ರವರೆಗಿನ ಸಾಕ್ಷರರ ಗೌಳಗರ ವರದಿಯನ್ನು ಒಟ್ಟು ಜನಸಂಖ್ಯೆಗೆ ಹೋಲಿಕೆ ಮಾಡಿ ನೋಡಿದರೆ ಸಾಕ್ಷರರ ಪ್ರಮಾಣವು ಹೆಚ್ಚುತ್ತಾ ಹೋಗಿರುವುದನ್ನು ಕಾಣಬಹುದಾಗಿದೆ. ೧೯೭೧ರವರೆಗೆ ಮೆಟ್ರಿಕ್ಯೂಲೆಷನ್ ನಂತರದ ಶಿಕ್ಷಣವನ್ನು ಪೂರೈಸಿದ ಒಬ್ಬ ವ್ಯಕ್ತಿಯಾಗಿ ಕಂಡು ಬರುವುದಿಲ್ಲ. ಆದರೆ ೧೯೮೧ರ ನಂತರ ಮೆಟ್ರಿಕ್ಯೂಲೇಷನ್ ನಂತರದ ಶಿಕ್ಷಣ ಪಡೆಯುವರಲ್ಲಿಯೂ ಪ್ರಮಾಣ ನಿಧಾನಕ್ಕೆ ಹೆಚ್ಚಳಗೊಂಡಿರುವುದನ್ನು ಕಾಣಬಹುದಾಗಿದೆ.

**ಕೋಷ್ಟಕ ೪.೧೮ ಸಮೀಕ್ಷೆಗೊಳಪಟ್ಟ ಗೌಳಿಗರ ಸಮುದಾಯದ ಸಾಕ್ಷರತಾ ಪ್ರಮಾಣ**

| ವಿವರ | ಪುರುಷ | ಮಹಿಳೆ | ಒಟ್ಟು |
|---|---|---|---|
| **ಒಟ್ಟು ಜನಸಂಖ್ಯೆ** | **೬೦೪** | **೫೧೧** | **೧೧೧೫** |
| ಸಾಕ್ಷರರು | ೨೩೩ | ೧೩೫ | ೩೬೮ |
| **ಮೆಟ್ರಿಕ್ ಪೂರ್ವ ಸಾಕ್ಷರತೆ** | **೧೮೧** | **೧೧೯** | **೩೦೦** |
| ಪ್ರಾಥಮಿಕ ಶಿಕ್ಷಣ | ೬೩ | ೪೯ | ೧೧೨ |
| ಮಾಧ್ಯಮಿಕ | ೭೫ | ೩೬ | ೧೧೧ |
| ಪ್ರೌಢ | ೪೩ | ೩೪ | ೭೭ |
| **ಮೆಟ್ರಿಕ್‌ನಂತರದ ಸಾಕ್ಷರತೆ** | **೫೨** | **೧೬** | **೬೮** |
| ಪದವಿಪೂರ್ವ | ೩೪ | ೧೨ | ೪೬ |
| ಡಿಪ್ಲೊಮಾ | ೧ | ೦ | ೧ |
| ಪದವಿ | ೧೫ | ೩ | ೧೮ |
| ಸ್ನಾತಕೋತ್ತರ | ೧ | ೧ | ೨ |
| ಇತರೆ | ೩ | ೧ | ೪ |
| **ಅನಕ್ಷರರು** | **೩೭೪** | **೩೪೪** | **೬೬೮** |
| ರಾಜ್ಯದ ಸರಾಸರಿ ಸಾಮಾನ್ಯ ಸಾಕ್ಷರತಾ ಪ್ರಮಾಣ (೨೦೦೧) | **೭೬.೨೯** | **೫೭.೪೫** | **೬೫.೦೮** |
| ಗೌಳಿಗರ ಸಮುದಾಯದ ಸರಾಸರಿ ಸಾಕ್ಷರತಾ ಪ್ರಮಾಣ (ಸಮೀಕ್ಷೆಯ ಪ್ರಕಾರ) | **೨೩.೧೭** | **೧೬.೮೧** | **೧೯.೩** |
| ಈ ಸಮುದಾಯ ಮತ್ತು ರಾಜ್ಯದ ಸರಾಸರಿ ಸಾಕ್ಷರತೆ ಪ್ರಮಾಣದ ನಡುವಿನ ಅಂತರ | **೫೩.೧೭** | **೪೦.೬೪** | **೪೫.೭೪** |

ಸಾಕ್ಷರತೆಗೆ ಅರ್ಹರಾದ ಪ್ರಮಾಣ ಒಟ್ಟು ೯೨.೨೭ರಷ್ಟಿದೆ. ಅದರೆ ಅವರಲ್ಲಿ ನಿಜವಾಗಿಯೂ ಸಾಕ್ಷರರರಾದವರ ಪ್ರಮಾಣ ಒಟ್ಟು ಶೇ. ೧೦.೩ರಷ್ಟಿದೆ. ಇವರಲ್ಲಿ ಶೇ. ೨೩.೧೭ ಪುರುಷರು ಮತ್ತು ಶೇ. ೧೬.೮ರಷ್ಟು ಮಹಿಳೆಯರ ಪ್ರಮಾಣವಿದೆ. ಅಂದರೆ ಸಾಕ್ಷರತೆ ಹೊಂದಿದವರಲ್ಲಿ ಮಹಿಳೆಯರಿಗಿಂತ

ಪುರುಷರ ಹೆಚ್ಚಿನ ಸಂಖ್ಯೆಯಲ್ಲಿರುವುದು ಕಂಡುಬರುವುದು. ಇವರಲ್ಲಿ **ಮೆಟ್ರಿಕ್** ಪೂರ್ವ ಸಾಕ್ಷರತೆ ಪಡೆದವರ ಒಟ್ಟು ಪ್ರಮಾಣ ಶೇ. ೮೮.೧೪ರಷ್ಟಿದೆ. ಇದರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೩೬.೩೫ರಷ್ಟಿದೆ. ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣವು ಶೇ. ೩೭.೯೯ರಷ್ಟಿದೆ. ಇದರಲ್ಲಿ ಪುರುಷರು ಶೇ. ೪೧.೪೫, ಮಹಿಳೆಯರು ಶೇ. ೩೦.೨೫ರಷ್ಟು ಕಂಡುಬರುತ್ತಾರೆ. ಪದವಿ ಪಡೆದವರ ಒಟ್ಟು ಪ್ರಮಾಣ ಶೇ. ೨೫.೯೯ ಇದ್ದು ಇದರಲ್ಲಿ ಪುರುಷರು ಶೇ. ೨೮.೮೫ ಹಾಗೂ ಮಹಿಳೆಯರು ಶೇ. ೧೮.೬೫ರಷ್ಟಿದ್ದಾರೆ. ಸ್ನಾತಕೋತ್ತರ ಪದವಿಯನ್ನು ಪಡೆದವರಲ್ಲಿ ಒಬ್ಬ ಪುರುಷ ಹಾಗೂ ಒಬ್ಬ ಮಹಿಳೆ ಮಾತ್ರ ಕಂಡುಬರುತ್ತಾರೆ. ಇವರಲ್ಲಿ ಪ್ರಮಾಣವು ಒಟ್ಟು ಶೇ. ೮೧.೬ರಷ್ಟಿದೆ. ಇದರಲ್ಲಿ ಪುರುಷರು ಶೇ. ೫೮.೧೭ ಹಾಗೂ ಮಹಿಳೆಯರು ಶೇ. ೬೯.೮೮ರ ಪ್ರಮಾಣದಲ್ಲಿ ಅನಕ್ಷರಸ್ಥರಾಗಿದ್ದಾರೆ. ಈ ಸಮುದಾಯದಲ್ಲಿ ಅನಕ್ಷರಸ್ಥರ ಪ್ರಮಾಣವು ಅತ್ಯಧಿಕವಾಗಿದೆ. ಕರ್ನಾಟಕದ ಸಾಕ್ಷರರ ಪ್ರಮಾಣ ೬೭.೨೯ ೨೦೦೧ರ ಜನಗಣತಿ ಪ್ರಕಾರ ರಷ್ಟಿದ್ದರೆ ಗೌಳಗರ ಸಾಕ್ಷರರ ಪ್ರಮಾಣ ಕೇವಲ ಶೇ. ೧೯.೩ರಷ್ಟು ಮಾತ್ರ ಕಂಡುಬರುತ್ತಾರೆ.

ಈ ಸಮುದಾಯವು ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಸಾಕ್ಷರರಲ್ಲಿ ಪ್ರಾಥಮಿಕ ಶಾಲೆಗೆ ಹೋಗುವ ಮಕ್ಕಳ ಪ್ರಮಾಣವು ಶೇ. ೮೦.೨ ಅದರಲ್ಲಿ ಗಂಡು ಶೇ. ೪೧.೭ ರಷ್ಟಿದ್ದರೆ, ಮಹಿಳೆಯರು ಶೇ. ೩೮.೮ ರಷ್ಟು ಪ್ರಾಥಮಿಕ ಶಾಲೆಗೆ ಹೋಗುತ್ತಿದ್ದಾರೆ. ಸ್ವಲ್ಪ ಔಪಚಾರಿಕ ಶಿಕ್ಷಣದ ಕಡೆ ಒಲವು ತೋರಿಸುವುದರ ಮೂಲಕ ಸ್ವಾತಂತ್ರ್ಯ ಪೂರ್ವದಲ್ಲಿ ವಿದ್ಯಾವಂತರು ಗೌಳಗ ಸಮುದಾಯದಲ್ಲಿ ಅಪರೂಪವಾಗಿತ್ತು. ಆದರೆ ಒಂದು ಸಮುದಾಯ ಚಲನಶೀಲವಾದಾಗ ಏನೆಲ್ಲಾ ಘಟಿಸುತ್ತದೆ ಎನ್ನುವುದನ್ನು ಕಾಣಬಹುದು. ಪುರುಷರಲ್ಲಿ ಸ್ವಲ್ಪ ಬೆಳವಣಿಗೆಯನ್ನು ಕಾಣಬಹುದು. ಆದರೆ ಸ್ತ್ರೀಯರದ್ದು ಹಿನ್ನೆಡೆ ಇದೆ. ಹುಡುಗಿಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ಸಿಗುತ್ತಿಲ್ಲ ಎನ್ನಬಹುದು. ಹೆಣ್ಣು ಮಕ್ಕಳಿಗೆ ಸಾಕಷ್ಟು ಪ್ರಮಾಣದ ಸ್ವಾತಂತ್ರ್ಯವಿದೆ. ಇಷ್ಟಾಗಿಯೂ ಶಿಕ್ಷಣ ಕ್ಷೇತ್ರದಲ್ಲಿ ಮಹಿಳೆಯರು ಕಡಿಮೆಯಾಗಲು ಕಾರಣ ಗೌಳಿ ಹೆಣ್ಣುಮಕ್ಕಳು ಚಿಕ್ಕವಯಸ್ಸಿನಲ್ಲಿ ಮದುವೆ ಮಾಡುವುದರಿಂದ ವಿದ್ಯೆ ಏಕೆ ಎನ್ನುವ ಪ್ರಶ್ನೆ ಇರಬಹುದು. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಮುದಾಯವು ಒಲವು ತೋರಿಸುವುದರ ಮೂಲಕ ಗೌಳಿಗ ಹೆಣ್ಣುಮಕ್ಕಳು ಶಿಕ್ಷಣ ಕಲಿತು ಉದ್ಯೋಗಿಗಳಾಗಿರುತ್ತಿರುವುದನ್ನು ಕಾಣಬಹುದು. ಆಧುನೀಕತೆಯ ಸುಳಿಗೆ ಸಿಗದಂತೆ ಎಚ್ಚರವಾಗಿ ಮುನ್ನಡೆಸಲು ಮುಖಂಡರ ಮಾರ್ಗದರ್ಶನ ಅವಶ್ಯಕತೆ ಇದೆ. ಉತ್ತಮ ಮತ್ತು ಗುಣಾತ್ಮಕ ಶಿಕ್ಷಣದ ಅವಕಾಶಗಳು ಬೇಕಾಗಿದೆ.

**ಆಧಾರಗಳು**


1. Upadaya H.C., (Ed.) Status of Schduled Tribes in India, 1990, Anmul Publication Pvt. Ltd., New Delhi, Pp. 40-41
2. Tripathy S.N., Tribes in India - The changing scenario, 1998, Discovery Publication house, New Delhi, Pp. 2-4
3. Padhy K.C., the Challenges of Tribal Development, 2000, Sarcp and Sarup, New Delhi.

೪. ಚಂದ್ರಶೇಖರಯ್ಯ ಪಿ., ಶಿಕ್ಷಣ ದರ್ಶನ, ೨೦೦೭, ಸುಮುಖ ಪ್ರಕಾಶನ, ಬೆಂಗಳೂರು.

೫. ವೀಣಾ ಎಂ.ಪಿ., ಮಹಿಳೆ ಸಮಾಜ ಸಂಸ್ಕೃತಿ, ೨೦೦೦, ನೆಲಮನೆ ಪ್ರಕಾಶನ, ಮಂಡ್ಯ.

೬. ಜೋತ್ಸ್ನಾ ಕಾಮತ್, ಮಹಿಳೆ ಅಂದು-ಇಂದು, ಶ್ರೀ ಪ್ರೇಮಾಸಾಯಿ ಪ್ರಕಾಶನ,

7. Sarlcar R.M., Printive Tribal Grouping India , 2008, Serials Pub. New Delhi, Pp. 75-85

೮. ಹನುಮಂತರೆಡ್ಡಿ ಜೆ., ಶೈಕ್ಷಣಿಕ ತತ್ವಗಳು, ೨೦೦೭, ಚೇತನಾ ಬುಕ್‌ಹೌಸ್, ಮೈಸೂರು.

೯. ಚಂದ್ರಶೇಖರ ಟಿ.ಆರ್., ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ, ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಮೇತ್ರಿ ಕೆ.ಎಂ., ಚೆಲುವರಾಜು (ಸಂ), ಬುಡಕಟ್ಟು ಅಧ್ಯಯನ, ಸಂ-೨, ಸಂಚಿಕೆ-೨, ಜುಲೈ-ಡಿಸೆಂಬರ್ ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೭೨-೭೩

11. Midatadarami, Problems of Tribal Education in India, 2009, Kanishika Pub. New Delhi, Pp. 15-16

12. Devendra Thakar D.N. Thakar, Tribal Education, 1994, Deep and Deep Pub. New Delhi.

13. Devendra Thakar D.N. Thakar, Tribal Women, 1994, Deep and Deep Pub. New Delhi.

14. Seemasharma, Kantasharna, Women Education, 2006, Anmol Pub. Pvt., Ltd., New Delhi.

೧೫. ನೀಲಮ್ಮ ರತ್ನಳ್ಳಿ, ಮಹಿಳೆ ಹಲವು ಮುಖಗಳು, ೧೯೯೭, ರೇಣುಕಾ ಪ್ರಕಾಶನ

೧೬. ಸಂಧ್ಯಾರೆಡ್ಡಿ ಕೆ.ಆರ್., ಜನಪದ ಸಾಹಿತ್ಯದಲ್ಲಿ ಮಹಿಳೆ, ೧೯೯೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೭. ಶೈಲಜಾ ಹಿರೇಮಠ (ಸಂ), ಮಹಿಳಾ ಅಧ್ಯಯನ ಸಂ-೮ ಸಂಚಿಕೆ-೧, ಜನವರಿ-ಜೂನ್ ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೮-೧೦

೧೮. ವಿಠ್ಠಲರಾವ್ ಟಿ. ಗಾಯಕ್ವಾಡ್, (ಅನು) ಭಾರತೀಯ ಸ್ತ್ರೀ ಜೀವನ, ೨೦೦೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೧೭-೧೪೩

೧೯. ಪ್ರಶಾಂತ ಎಚ್.ಡಿ., ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಶಿವಾನಂದ ಎಸ್. ವಿರಕ್ತಮಠ, ಮಹಿಳಾ ಅಧ್ಯಯನ, ಸಂ-೬, ಸಂಯುಕ್ತ ಸಂಚಿಕೆ ೧-೨ ಜನವರಿ ಡಿಸೆಂಬರ್ ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೩೬-೧೭೪

೨೧. ಸುಳಕವಾಡಿ ಸ.ರಾ., ಸಮುದಾಯ ಮತ್ತು ಸಾಕ್ಷರತೆ, ೨೦೦೬, ಅಖಿಲಾ ಏಜನ್ಸಿಸ್, ಮೈಸೂರು ಪು. ೫೭-೬೦

೨೨. ವೆಂಕಟಯ್ಯ ಎನ್., ಮತ್ತು ನಾಗಪ್ಪ ಜೆ.ಆರ್., ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ, ೧೯೯೬, ಚೇತನಾ ಬುಕ್‌ಹೌಸ್, ಮೈಸೂರು, ಪು. ೧೧-೨೪

೨೩. ಮಹಾಬಲೇಶ್ವರ ರಾವ್, ಪ್ರಾಥಮಿಕ ಶಿಕ್ಷಣ ಸಮಸ್ಯೆಗಳು ಸವಾಲುಗಳು, ೧೯೯೯, ನವಕರ್ನಾಟಕ ಪ್ರಕಾಶನ, ಪು. ೧೯೬-೧೯೯

೨೪. ಅದೇ ಪು.೨೦೦-೨೧೩

೨೫. ಎಚ್ಚೆಸ್ಕೆ, ಶಿಕ್ಷಣ ಮತ್ತು ಸಂಸ್ಕೃತಿ, ೨೦೦೧, ಕಮಲ ಪ್ರಕಾಶನ, ಮೈಸೂರು, ಪು. ೬೫-೭೩

೨೬. ನಾಗರಾಜು ಡಿ., ಭಾರತದಲ್ಲಿ ಶಿಕ್ಷಣ ಮತ್ತು ಸಮಾಜ, ೨೦೦೫, ಚೇತನಾ ಬುಕ್‌ಹೌಸ್, ಮೈಸೂರು, ಪು. ೩೩೭-೩೬೦

೨೭. ಶಿವರಾಮು ಹಾಗೂ ಕೃಷ್ಣಕುಮಾರ ಸಿ.ಪಿ., ಸುವರ್ಣ ಶಿಕ್ಷಣ, ೨೦೦೧, ವಿದ್ಯಾವರ್ಧಕ ಸಂಘ, ಮೈಸೂರು, ಪು. ೧೦೫-೧೧೪

# ಅಧ್ಯಾಯ ೫

## ಮಹಿಳೆ ಮತ್ತು ಆರೋಗ್ಯ

ಅಧ್ಯಾಯ-ಐದು

# ಮಹಿಳೆ ಮತ್ತು ಆರೋಗ್ಯ

ಆರೋಗ್ಯ ಅಭ್ಯುದಯದ ಅಡಿಗಲ್ಲು ಪ್ರಪಂಚದ ಯಾವುದೇ ದೇಶದ ಯಾವುದೇ ಸಮುದಾಯದ ಜನರ ಆರೋಗ್ಯ ಆ ದೇಶದ ಆಯಾ ಸಮುದಾಯಗಳ ಅಭಿವೃದ್ಧಿಗೆ ಹಿಡಿದ ಕೈಗನ್ನಡಿಯಾಗಿದೆ. ನಮ್ಮ ದೇಶದ ಜನಸಂಖ್ಯೆಯಲ್ಲಿ ಸುಮಾರು ಅರ್ಧದಷ್ಟು ಇರುವ ಮಹಿಳೆಯರ ಆರೋಗ್ಯ ಉತ್ತಮಗೊಳ್ಳದೇ ಪ್ರಸ್ತುತ ಜನಸಮುದಾಯದ ಆರೋಗ್ಯವಾಗಲಿ, ಮುಂದಿನ ತಲೆಮಾರಿನ ಆರೋಗ್ಯವಾಗಲೀ ಉತ್ತಮಗೊಳ್ಳಲು ಖಂಡಿತಾ ಸಾಧ್ಯವಿಲ್ಲ. ಏಕೆಂದರೆ ಅರ್ಧ ಜನಸಂಖ್ಯೆಯ ಆರೋಗ್ಯವನ್ನು ಕಡೆಗಣಿಸಿ ಇಡೀ ಸಮುದಾಯದ ಆರೋಗ್ಯವನ್ನು ಅಭಿವೃದ್ಧಿ ಪಡಿಸಲು ಸಾಧ್ಯವಿಲ್ಲ. ಮುಂದಿನ ತಲೆಮಾರನ್ನು ಹೊತ್ತು ಹೆತ್ತು ಪಾಲಿಸಬೇಕಾಗುವ ಮಹಿಳೆಯರು ಅಪೋಷಣೆ, ಅನಾರೋಗ್ಯ ಮತ್ತು ಅಲಕ್ಷಗಳಿಗೆ ಒಳಗಾಗಿ ಬಳಲುತ್ತಿದ್ದಲ್ಲಿ ಆ ಸಮುದಾಯದ ಆರೋಗ್ಯಕ್ಕೆ ಹಾಗೂ ಅಭಿವೃದ್ಧಿಯ ಹಾದಿಯಲ್ಲಿ ನಡೆಯಬಲ್ಲ ಜನತೆಯ ಕಾರ್ಯಕ್ಷಮತೆಗೆ ಹಿನ್ನಡೆಯುಂಟಾಗುವುದರಲ್ಲಿ ಅಚ್ಚರಿಯಿಲ್ಲ.

**ಆರೋಗ್ಯ:** ವಾಸ್ತವವಾಗಿ ಆರೋಗ್ಯ ಎನ್ನುವುದು ಚಿರಪರಿಚಿತವಾದ ಪದ. ಇದರ ಬಗ್ಗೆ ನಮಗೇಷ್ಟೇ ಸಂದೇಹ ರಹಿತ ದೃಢವಿಶ್ವಾಸವಿದ್ದರೂ ಆರೋಗ್ಯದ ನಿರ್ವಚನವನ್ನು ಸೂಕ್ತವಾಗಿ, ಸಮಗ್ರವಾಗಿ ದೃಷ್ಟಿಕೋನದಿಂದ ವಿವರಿಸುವುದು ಕಷ್ಟಸಾಧ್ಯ. ಅದರೂ ಕೆಲವು ತಜ್ಞರು ಮತ್ತು ಆರೋಗ್ಯ ಸಂಸ್ಥೆಗಳು, ಆರೋಗ್ಯ ಕುರಿತು ತಮ್ಮದೇ ಆದ ರೀತಿಯಲ್ಲಿ ಕೆಲವು ವ್ಯಾಖ್ಯಾನಗಳನ್ನು ನೀಡಿರುವುದನ್ನು ನಾವು ಗಮನಿಸಬಹುದು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಹಿಳೆಯರನ್ನು ಸಂದರ್ಶಿಸಿದಾಗ ಆರೋಗ್ಯ ಎಂದರೇನು ಎಂಬ ಪ್ರಶ್ನೆಯನ್ನು ಕೇಳಿದರೆ ಅವರು ತಟ್ಟನೆ ಉತ್ತರಿಸಿದ್ದು, ಹೀಗೆ

ರೋಗಗಳು ಬಾರದೆ ಇರುವುದು ಆರೋಗ್ಯ ಎಂದು; ಇನ್ನೂ ಕೆಲವರು ದೇಹಗಟ್ಟಿಯಾಗಿರುವುವನ್ನು ಮಾತ್ರ ಆರೋಗ್ಯ ಎನ್ನುತ್ತಾರೆ. ಅದರಲ್ಲೂ ಕೆಲವೇ ಕೆಲವು ಮಹಿಳೆಯರು ಮಾತ್ರ ದೈಹಿಕವಾಗಿ, ಮಾನಸಿಕವಾಗಿ ಸದೃಢವಾಗಿರುವುದಕ್ಕೆ ಆರೋಗ್ಯ ಎನ್ನುತ್ತಾರೆ.

ಆರೋಗ್ಯ ಕುರಿತು ಕೆಲವು ತಜ್ಞರ ಮತ್ತು ವಿದ್ವಾಂಸರ ಅಭಿಪ್ರಾಯ ಈ ರೀತಿ ಇದೆ. ಮಹಾತ್ಮ ಗಾಂಧೀಜಿಯವರ ಪ್ರಕಾರ "ಆರೋಗ್ಯವೆಂದರೆ ದೇಹಕ್ಕೆ ಸೌಖ್ಯದಿಂದಿರುವುದು ಎಂದರ್ಥ. ಅಂದರೆ ಅನಾಯಸವಾಗಿ ದಿನವೆಲ್ಲಾ ತನ್ನ ಸಹಜ ಕೆಲಸ ಕಾರ್ಯಗಳಲ್ಲಿ ತೊಡಗಿಸಬಲ್ಲವವನ್ನು ಆರೋಗ್ಯವಂತ" ಎನ್ನಬಹುದು ಎಂದಿದ್ದಾರೆ.

ಟಿ.ಎಸ್. ಸತ್ಯನಾರಾಯಣರಾವ್ ಅವರು "ಆರೋಗ್ಯವಂತ ಎನ್ನಲು ಕಾಯಿಲೆ ಇಲ್ಲದಿದ್ದರೆ ಸಾಲದು ವ್ಯಕ್ತಿಯು ಎಲ್ಲಾ ದೃಷ್ಟಿಯಿಂದಲೂ ಸಮರ್ಪಕನಾಗಿರುವುದು ಅವಶ್ಯವಾಗುತ್ತದೆ".

**ಅಯುರ್ವೇದ :** "ಕೇವಲ ಶಾರೀರಕ ಆರೋಗ್ಯ ಮಾತ್ರಲ್ಲ, ಇಂದ್ರಿಯ ಮನಸ್ಸು ಮತ್ತು ಆತ್ಮ ಇವುಗಳ ಸಂಪೂರ್ಣ ಸ್ಥಿತಿಯನ್ನು ಆರೋಗ್ಯ ಅಥವಾ ಸ್ವಾಸ್ತ್ಯ" ಎಂದು ಹೇಳುವುದು.

**Webster :** "The condition of being sound in body, Mind or Spirit, especially freedom from physical desire or pain"

ಇವೆಲ್ಲವುಗಳಗಿಂತ ಮುಖ್ಯವಾಗಿ ಗಮನಿಸಬೇಕಾದ ಒಂದು ವ್ಯಾಖ್ಯಾನವೆಂದರೆ ವಿಶ್ವ ಆರೋಗ್ಯ ಸಂಸ್ಥೆ ೧೯೪೮ರಲ್ಲಿ ಶಾಸನ ಪೀಠಿಕೆಯಲ್ಲಿ "ಆರೋಗ್ಯ ಎನ್ನುವುದು ಕೇವಲ ರೋಗರಹಿತ ಸ್ಥಿತಿಯಾಗಲಿ, ದೇಹದಾರ್ಢ್ಯತೆ ಇರುವುದಾಗಲೀ ಅಲ್ಲ. ಸಂಪೂರ್ಣ ಭೌತಿಕ, ಮಾನಸಿಕ ಹಾಗೂ ಸಾಮಾಜಿಕ ಸುಸ್ಥಿತಿಯೇ ಆರೋಗ್ಯ" ಎಂದು ವ್ಯಾಖ್ಯಾನಿಸಿದೆ. (ಮಹಾಬಲರಾಜು ಡಿ.ಕೆ., ೨೦೦೫, ಪು.೧೪)

ಈವರೆಗೂ ಗಮನಿಸಿದ ಎಲ್ಲ ಆರೋಗ್ಯ ವ್ಯಾಖ್ಯಾನದಲ್ಲಿ ಸಾಮಾನ್ಯವಾಗಿ ಮಾನಸಿಕ ಮತ್ತು ದೈಹಿಕ ಹಾಗೂ ಸಾಮಾಜಿಕ ಸುಸ್ಥಿತಿಯೇ ಆರೋಗ್ಯವೆಂದು ಪರಿಗಣಿಸಬಹುದು. ಹಾಗಾಗಿ ಈ ಮೇಲಿನ ಕೆಲವು ವ್ಯಾಖ್ಯಾನಗಳು ಲಿಂಗ ನಿರಪೇಕ್ಷ ನೆಲೆಯಲ್ಲಿ ಮಹಿಳೆ ಮತ್ತು ಪುರುಷ ಇಬ್ಬರ ಆರೋಗ್ಯವನ್ನು ಅನುಲಕ್ಷಿಸಿ ಹೇಳದಂತೆ ಕಂಡುಬರುತ್ತದೆ. ಆದರೂ ಪುರುಷ ಮತ್ತು ಮಹಿಳೆಯರ ದೈಹಿಕ ರಚನೆ ಮತ್ತು ಜೈವಿಕತೆಯಲ್ಲಿ ಭಿನ್ನತೆ ಇರುವುದರಿಂದ ಅವರಿಗೆ ಬರುವ ಕೆಲವು ಕಾಯಿಲೆಗಳ ಸ್ವರೂಪದಲ್ಲಿ ಭಿನ್ನತೆಗಳಿರುತ್ತವೆ ಎಂಬು ಅಂಶವನ್ನು ನಿರ್ಲಕ್ಷಿಸುವಂತಿಲ್ಲ.

**ಮಹಿಳೆ ಮತ್ತು ಆರೋಗ್ಯ :** ಪ್ರಾಚೀನ ಕಾಲದಲ್ಲಿ ಜನತೆಯು ಆರೋಗ್ಯವೆಂದರೆ ದೇವರಿಂದ ಸಿಗುವುದು ಎಂಬ ನಂಬಿಕೆಯನ್ನು ಹೊಂದಿದ್ದರು. ಭೂತ ಪ್ರೇತ, ಪಿಶಾಚಿಗಳ ಚೇಷ್ಟೆಗಳಿಂದ ಅಥವಾ ಕೆಟ್ಟ ದೃಷ್ಟಿಯಿಂದಾ ಅನಾರೋಗ್ಯ ಉಂಟಾಗುತ್ತಿದೆ ಎನ್ನುವುದನ್ನು ನಂಬಿದ್ದರು. ಇದಕ್ಕೆ ಪೂರಕವಾಗಿ ಅನಾದಿಕಾಲದಿಂದಲೂ ಮಾಟ, ಮಂತ್ರ, ಗಿಡಮೂಲಿಕೆ ಔಷಧಿಗಳನ್ನು ಮಾಡಿಕೊಳ್ಳುತ್ತಾ ತಮ್ಮದೇ ಆದ ಆರೋಗ್ಯವನ್ನು ಕಾಪಾಡಿಕೊಂಡು ಬರುತ್ತಿದ್ದರು.

ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ನಡೆದ ಜನಗಣತಿಗಳಲ್ಲಿ ನಮಗೆ ದಕ್ಕಿರುವ ಹಲವು ಜನಸಂಖ್ಯಾತ್ಮಕ ಆರೋಗ್ಯಸೂಚಕಗಳು ಭಾರತೀಯ ಸ್ತ್ರೀಯರ ಆರೋಗ್ಯದ ಹಿಂದಿನ ಮತ್ತು ಇಂದಿನ ವಾಸ್ತವ ಸ್ಥಿತಿಗತಿಗಳ ಸ್ಥೂಲ ಚಿತ್ರವೊಂದನ್ನು ಕಟ್ಟಿಕೊಡುತ್ತವೆ. ಹಾಗೆಯೇ ಆರೋಗ್ಯವನ್ನು ಕುರಿತ ಜನಸಂಖ್ಯಾತ್ಮಕ ಅಂಕಿ ಅಂಶಗಳನ್ನು ಕಳೆದ ಐವತ್ತು ವರ್ಷಗಳಗೂ ಹೆಚ್ಚಿನ ಅವಧಿಯಲ್ಲಿ ಸಾರ್ವಜನಿಕ ಆರೋಗ್ಯವನ್ನು ಅದರಲ್ಲಿಯೂ ಮಹಿಳೆಯರ ಆರೋಗ್ಯವನ್ನು ಅಭಿವೃದ್ಧಿ ಪಡಿಸುವಲ್ಲಿ ನಾವೆಷ್ಟು ಸಾಧಿಸಿದ್ದೇವೆ, ಇನ್ನೂ ಸಾಧಿಸಬೇಕಾಗಿರುವುದು ಎಷ್ಟು ಹಾಗೂ ನಾವು ಬಂದಿರುವ ದಿಕ್ಕು ಸರಿಯಾಗಿದೆಯೋ ಇಲ್ಲವೋ ಎಂಬುದರ ಪಕ್ಷಿನೋಟವನ್ನು ನೀಡುತ್ತದೆ. ಇಂದು ನಮ್ಮ ದೇಶ ಆರ್ಥಿಕವಾಗಿ ಮುನ್ನಡೆಯುತ್ತಾ ವಿಜ್ಞಾನ ಮತ್ತು ತಾಂತ್ರಿಕತೆಗಳಲ್ಲಿ ದಾಪುಗಾಲು ಇಡುತ್ತಾ ನಡೆಯುತ್ತಿವೆ. ಈ ಸಂದರ್ಭದಲ್ಲಿ ಇಡೀ ಭಾರತದ ಆರ್ಥಿಕ, ವೈಜ್ಞಾನಿಕ ಮತ್ತು ಅಭಿವೃದ್ಧಿಯ ಫಲಗಳು ಎಷ್ಟರಮಟ್ಟಿಗೆ ಎಲ್ಲರನ್ನು ತಲುಪಿ ಸಾರ್ವಜನಿಕ ಆರೋಗ್ಯದಲ್ಲಿ ಪ್ರತಿಫಲಿಸುತ್ತಿವೆ ಎನ್ನುವುದನ್ನು ಜನಗಣತಿಯ ಹಾಗೂ ರಾಷ್ಟ್ರ ವ್ಯಾಪಿ ಸರ್ವೇಕ್ಷಣಾ ಅಂಕಿ ಅಂಶಗಳು ಸ್ಥೂಲವಾಗಿ ತೋರಿಸುತ್ತವೆ. ಆದ್ದರಿಂದ ಮುಖ್ಯ ಅಂಕಿ-ಸಂಖ್ಯೆ, ಆರೋಗ್ಯ ಸೂಚಕಗಳಾದ ಸ್ತ್ರೀ-ಪುರುಷರ ನಿರೀಕ್ಷಿತ ಆಯಸ್ಸು, ಮರಣ ಸಂಖ್ಯಾ ಪ್ರಮಾಣ, ತಾಯ್ತನದ ಮರಣ ಸಂಖ್ಯಾ ಪ್ರಮಾಣ ಹಾಗೂ ಲಿಂಗ ಅನುಪಾತಗಳನ್ನು ನೋಡಬಹುದು.

೨೦೦೧ರ ವಿಶ್ವ ಆರೋಗ್ಯ ವರದಿಯ ಪ್ರಕಾರ ಭಾರತೀಯ ಪುರುಷರ ನಿರೀಕ್ಷಿತ ಆಯಸ್ಸು ೫೯.೮ ವರ್ಷಗಳಾಗಿದ್ದು ಮಹಿಳೆಯರ ನಿರೀಕ್ಷಿತ ಆಯಸ್ಸು ೬೨.೭ ವರ್ಷಗಳಿಗೆ ಅಂದರೆ ಭಾರತೀಯ ಮಹಿಳೆಯರು ೨೯ ವರ್ಷಗಳಷ್ಟು ಹೆಚ್ಚು ಕಾಲ ಬದುಕುತ್ತಾರೆ ಎಂಬ ನಿರೀಕ್ಷೆಯಿದೆ. ನಮ್ಮ ಮಹಿಳೆಯರು ಒಂದೆರಡು ವರ್ಷಗಳು ಹೆಚ್ಚು ನಿರೀಕ್ಷಿತ ಅಯಸ್ಸನ್ನು ಹೊಂದಿದ್ದರೂ ಅವರು ಪುರುಷರಿಗಿಂತಾ ಹೆಚ್ಚಿನ ಕಾಯಿಲೆಗಳ ಹೊರೆಯನ್ನು ಹಾಗೂ ಅನಾರೋಗ್ಯದಿಂದ ಉಂಟಾಗುವ ಅಸಾಮರ್ಥ್ಯಗಳ ಹೊರೆ ಹೊತ್ತು ಬಳಲುತ್ತಾ ಬದುಕುತ್ತಾರೆ ಎಂಬುದು ತಜ್ಞರ ಅಭಿಪ್ರಾಯವಾಗಿದೆ.

ಮಹಿಳೆ ಅನಾದಿಕಾಲದಿಂದಲೂ ಎಲ್ಲಾ ಸಮಾಜಗಳಲ್ಲೂ ಬರಿಯ ಸಂತಾನೋತ್ಪತ್ತಿಯ ಕಾರ್ಯವನ್ನಷ್ಟೇ ಅಲ್ಲದೆ, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಆಯಾ ಸಮಾಜದ ಸಂಪತ್ತಿನ ಉದಯಕ್ಕಾಗಿಯೂ ಪುರುಷರಿಗೆ ಹೆಗಲಿಗೆ ಕೆಲವೊಮ್ಮೆ ಪುರುಷರಿಗಿಂತಲೂ ಹೆಚ್ಚಿನ ಕೊಡುಗೆ ನೀಡುತ್ತಾ ಬಂದಿದ್ದಾಳೆ. ಇನ್ನು ಮನೆಯ ಕುಟುಂಬದ ಕೆಲಸಗಳು ಮಕ್ಕಳ ಲಾಲನೆ ಪಾಲನೆ, ವಯಸ್ಸಾದ ಕುಟುಂಬದ ಸದಸ್ಯರು ಮತ್ತು ಅನಾರೋಗ್ಯ ಪೀಡಿತರ ಸೇವೆಯೂ ಮಹಿಳೆಯ ಮಡಿಲಿಗೆ ಬಿದ್ದಿವೆ. ಬಡವರ್ಗಗಳಲ್ಲಿ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಇವೆಲ್ಲಾ ಹೊರೆಗಳ ಜೊತೆಗೆ ಕುಟುಂಬಕ್ಕೆ, ಜಾನುವಾರುಗಳಿಗೆ ಬೇಕಾಗುವ ಮೇವು, ಉರುವಲು, ಇತ್ಯಾದಿಗಳನ್ನು ಕಾಡು ಮೇಡುಗಳಲ್ಲಿ ಅಲೆದು ಸಂಗ್ರಹಿಸುವ ಕಠಿಣ ಕೆಲಸಗಳನ್ನು ಮಾಡಬೇಕಾಗಿದೆ.

ಇಂದು ಪರಿಸರದ ನಾಶದಿಂದ ನಾಡಿನ ಕಾಡುಗಳು ವೇಗವಾಗಿ ನಶಿಸುತ್ತಿದ್ದು ನೀರಸೆಲೆಗಳು ಬತ್ತಿ ಹೋಗುತ್ತಿದ್ದು ಮತ್ತು ಕಲುಷಿತಗೊಳ್ಳುತ್ತಿದ್ದು ಹಿಂದಿಗಿಂತ ಹೆಚ್ಚು ಶ್ರಮವಹಿಸಬೇಕಾಗಿವೆ. ನಮ್ಮ

ದೇಶವೊಂದರಲ್ಲಿಯೇ ಸ್ತ್ರೀಯರ ಒಡೆತನದ ಕುಟುಂಬಗಳು ೩೦೦೦೦ ರಷ್ಟಿದ್ದು. ಇವರೆಲ್ಲರೂ ಬಡತನದ ರೇಖೆಯ ಕೆಳಗೆ ಬದುಕುತ್ತಿದ್ದಾರೆ. ಪಿತೃಪ್ರಧಾನ ನಮ್ಮ ಸಮಾಜದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಶೋಚನೀಯವಾಗಿದ್ದು ತಮ್ಮ ಆಹಾರ, ಆರೋಗ್ಯ, ವಿದ್ಯೆ, ಉದ್ಯೋಗ ಹಾಗೂ ಸಂತಾನೋತ್ಪತ್ತಿ ಇತ್ಯಾದಿಗಳಲ್ಲಿ ಯಾವುದೇ ಆಯ್ಕೆಗಲಿಲ್ಲದೇ, ಸಮಾನ ಅವಕಾಶಗಳಿಲ್ಲದೆ ವಂಚಿತರಾದ ಸ್ತ್ರೀಯರ ಪ್ರಚಲಿತ ಬದುಕಿಗೆ, ನಮ್ಮ ದೇಶದಲ್ಲಿ ಹಲವಾರು ದಶಕಗಳಿಂದ ಒಂದೇ ಸಮನೆ ಕೆಳಗಿಳಿಯುತ್ತಿರುವ ಸ್ತ್ರೀಯರ ಸಂಖ್ಯೆಯೇ ಸಾಕ್ಷಿ. ಜೊತೆಗೆ ಮಹಿಳೆಯರ ಆರೋಗ್ಯ ಎಷ್ಟು ನಿರ್ಲಕ್ಷಿಸಲ್ಪಟ್ಟಿವೆ ಎಂದರೆ ರಾಷ್ಟ್ರೀಯ ಕುಟುಂಬ ಆರೋಗ್ಯ ಸರ್ವೇಕ್ಷಣೇಯ ಪ್ರಕಾರ ೧೯೯೦ರ ದಶಕದ ಮೊದಲ ಅರ್ಧದ ಅವಧಿಯಲ್ಲಿ ಸುಮಾರು ೧,೧೧,೦೦೦ ಮಹಿಳೆಯರು ಪ್ರತಿವರ್ಷ ಗರ್ಭಿಣಿ ಮತ್ತು ಹೆರಿಗೆಗೆ ಸಂಬಂಧಿಸಿದ ಕಾರಣಗಳಿಂದ ಮರಣವನ್ನಪ್ಪುತ್ತಿದ್ದದು ವರದಿಯಾಗಿದೆ. ಇತ್ತೀಚಿನ ಇನ್ನಿತರ ವರದಿಗಳ ಪ್ರಕಾರ ಈ ರೀತಿ ಪ್ರತಿವರ್ಷ ಸಾಯುವ ಮಹಿಳೆಯರ ಸಂಖ್ಯೆ ೧,೨೫,೦೦೦ಕ್ಕೆ ಏರಿದೆ.

ವಿಶ್ವಬ್ಯಾಂಕಿನ ಇನ್ನೊಂದು ವರದಿಯಂತೆ ನಮ್ಮ ದೇಶದ ಬಸುರಿಯಲ್ಲಿ ಸುಮಾರು ಶೇ. ೮೮ರಷ್ಟು ಮಂದಿ ರಕ್ತಹೀನತೆಯಿಂದ ಬಳಲುತ್ತಿದ್ದು ಇದು ನಮ್ಮ ದೇಶದ ಮಹಿಳೆಯರ ಆರೋಗ್ಯ ಹಾಗೂ ಆಹಾರ ಪೋಷಣಾ ಸ್ಥಿತಿಗಳಿಗೆ ಹಿಡಿದ ಕೈಗನ್ನಡಿಯಾಗಿದೆ. ಬಸುರಿನ ಅವಧಿಯಲ್ಲಿ ಹಾಗೂ ಹೆರಿಗೆಯಲ್ಲಿ ಸಾಯುವ ಮಹಿಳೆಯರಲ್ಲಿ ಶೇ. ೨೦ಕ್ಕಿಂತ ಹೆಚ್ಚು ಮಂದಿ ರಕ್ತಹೀನತೆಯಿಂದ ಸಾಯುತ್ತಾರೆ. ಅಷ್ಟೇ ಅಲ್ಲದೇ ಬಸಿರು ಮತ್ತು ಹೆರಿಗೆಯ ನಂತರದ ಅವಧಿಯಲ್ಲಿ ರಕ್ತಸ್ರಾವದಿಂದ ಶೇ. ೨೩ರಷ್ಟು ಮಹಿಳೆಯರು ಸಾವಿಗೆ ತುತ್ತಾಗುತ್ತಾರೆ ಎನ್ನುವುದು ನಮ್ಮ ಮಹಿಳೆಯರ ಆರೋಗ್ಯ ಎಷ್ಟರ ಮಟ್ಟಿಗೆ ನಿರ್ಲಕ್ಷಿಸಲ್ಪಟ್ಟಿದೆ.

ನಮ್ಮ ದೇಶದಲ್ಲಿ ಹುಟ್ಟುವ ಮೂರು ಶಿಶುಗಳಲ್ಲಿ ಒಂದು ಕಡಿಮೆ ಜನನ ತೂಕದೊಂದಿಗೆ ಜನಿಸಿ ಹಲವಾರು ಸೊಂಕುಗಳಿಗೆ, ರೋಗಗಳಿಗೆ ತುತ್ತಾಗುವ ಅಪಾಯವನ್ನು ಹೊತ್ತುಕೊಂಡೇ ಹುಟ್ಟುತ್ತದೆ. ಇಂತಹ ಶಿಶುಗಳು ಸರಿಯಾದ ವೈದ್ಯಕೀಯ ಆರೈಕೆ, ಆರೋಗ್ಯ ರಕ್ಷಣೆಯಿಲ್ಲದಿದ್ದಲ್ಲಿ ಬೇಗನೆ ಸಾವನ್ನಪ್ಪುತ್ತವೆ. ಅನೇಕ ಮಹಿಳೆಯರಿಗೆ ಹೆರಿಗೆಯಲ್ಲಿ ಸಹ ಸರಿಯಾದ ನೆರವು ನಮ್ಮ ದೇಶದಲ್ಲಿ ಸಿಗುತ್ತಿಲ್ಲ. ನೂರು ಮಹಿಳೆಯರ ಹೆರಿಗೆಯಲ್ಲಿ ಸಹ ಸರಿಯಾದ ನೆರವು ನಮ್ಮ ದೇಶದಲ್ಲಿ ಸಿಗುತ್ತಿಲ್ಲ. ನೂರು ಮಹಿಳೆಯರಲ್ಲಿ ಕೇವಲ ಮೂವತ್ನಾಲ್ಕು ಮಹಿಳೆಯರಿಗೆ ಮಾತ್ರ ಹೆರಿಗೆಯಲ್ಲಿ ತರಬೇತಿ ಹೊಂದಿದ ಆರೋಗ್ಯ ಕಾರ್ಯಕರ್ತರ ದಾದಿಯವರ ನೆರವು ಸಿಗುತ್ತಿದೆ. ನೂರರಲ್ಲಿ ಎಪ್ಪತ್ತಾರು ಹೆರಿಗೆಗಳು ಇನ್ನೂ ಮನೆಗಳಲ್ಲಿಯೇ ಆಗುತ್ತಿದ್ದು ಅವರತ್ತಾರರಷ್ಟು ಹೆರಿಗೆಗಳಲ್ಲಿ ಯಾವುದೇ ತರಬೇತಿ ಇಲ್ಲದೇ ಇನ್ನಿತರ ಮಹಿಳೆಯರ ನೆರವು ಪಡೆಯಲಾಗುತ್ತಿವೆ. ಅಂತಹ ರಾಷ್ಟ್ರೀಯ ಜನಸಂಖ್ಯಾ ಅಧ್ಯಯನ ಸಂಸ್ಥೆಯ ವರದಿಯ ಪ್ರಕಾರ ನಮ್ಮ ದೇಶದಲ್ಲಿ ಒಂದು ಲಕ್ಷ ಮಹಿಳೆಯರು ಪ್ರತಿವರ್ಷ ಬಸಿರು ಹಾಗೂ ಹೆರಿಗೆಗೆ ಅತೀ ಹೆಚ್ಚು ಸಾಯುವ ಸ್ತ್ರೀ ಸಂಖ್ಯೆ ಇರುವ ದೇಶಗಳ ಪೈಕಿ ನಮ್ಮ ದೇಶವು ಒಂದು. ಅನೇಕ ಅಭಿವೃದ್ಧಿ ಶೀಲ ಹಾಗೂ ಬಡ ದೇಶಗಳಲ್ಲಿ ಸ್ತ್ರೀಯರ ಅನಾರೋಗ್ಯದ ವಿಷಚಕ್ರ ಅವರು ಹುಟ್ಟುವುದಕ್ಕಿಂತ ಮೊದಲೇ ಆರಂಭವಾಗುತ್ತದೆ. ಅವರ ಹುಟ್ಟು,

ಶೈಶವ, ಬಾಲ್ಯ, ಕಿಶೋರಾವಸ್ಥೆ, ಹರೆಯ, ವಿವಾಹ, ಬಸಿರು, ಬಾಣಂತಿತನ ಸರಣಿಯಲ್ಲಿ ಉರುಳುತ್ತಿದ್ದು ಮಹಿಳೆಯರ ಬಾಳನಲ್ಲಿ ಹಾಸುಹೊಕ್ಕಾಗಿರುವ ಅನಾರೋಗ್ಯ ಒಂದು ತಲೆಮಾರಿನಿಂದ ಇನ್ನೊಂದಕ್ಕೆ ವರ್ಗಾಯಿಸಲ್ಪಡುತ್ತಲೇ ಇರುತ್ತದೆ. ಮೊದಲನೆಯದಾಗಿ ಅನಾರೋಗ್ಯ ಪೀಡಿತ ಹಾಗೂ ಅಪೋಷಿತರಾದ ಮಹಿಳೆಯರು ಕಡಿಮೆ ಜನನ ತೂಕದ ಹಾಗೂ ಅನಾರೋಗ್ಯಕ್ಕೆ ಸುಲಭವಾಗಿ ತುತ್ತಾಗಬಲ್ಲ ಮಕ್ಕಳಿಗೆ ಜನ್ಮವಿಯುತ್ತಾರೆ. ಹೀಗೆ ಹುಟ್ಟುವ ಮಕ್ಕಳಲ್ಲಿ ಮುಖ್ಯವಾಗಿ ಹೆಣ್ಣು ಮಕ್ಕಳ ಆರೋಗ್ಯ ಹಾಗೂ ಆಹಾರ ಪೋಷಣೆಗಳು ನಮ್ಮ ಸಮಾಜದಲ್ಲಿ ಪ್ರತ್ಯೇಕ್ಷವಾಗಿ ಮತ್ತು ಪರೋಕ್ಷವಾಗಿ ನಿರ್ಲಕ್ಷಕ್ಕೆ ಒಳಗಾಗುತ್ತವೆ. ಲಿಂಗತಾರತಮ್ಯವಿರುವ ಪುರುಷ ಪಕ್ಷಪಾತಿಯಾದ ನಮ್ಮ ಸಮಾಜದಲ್ಲಿ ಬಹಳಷ್ಟು ಹೆಣ್ಣು ಮಕ್ಕಳು ಕಡಿಮೆ ಪ್ರಮಾಣದ ಹಾಗೂ ಕಡಿಮೆ ಗುಣಮಟ್ಟದ ಆಹಾರವನ್ನು ಸೇವಿಸುವುದರಿಂದ ಹಾಗೂ ಅವರ ಅನೇಕ ದೈಹಿಕ, ಮಾನಸಿಕ ತೊಂದರೆಗಳು ಮತ್ತು ಕಾಯಿಲೆಗಳು ಕುಟುಂಬದಲ್ಲಿ ನಿರ್ಲಕ್ಷಿಸಲ್ಪಡುವುದರಿಂದ ಹೆಣ್ಣು ಮಕ್ಕಳ ಬೆಳವಣಿಗೆ ಕುಂಠಿತವಾಗುತ್ತದೆ.

ಹೀಗೆ ಬೆಳೆದ ಹೆಣ್ಣು ಮಗು ಇನ್ನೂ ಹರೆಯಕ್ಕೆ ಕಾಲಡುತ್ತಿದ್ದಂತೆಯೇ ಮದುವೆ, ಬಸಿರು, ಬಾಣಂತಿತನಗಳ ಧಾಳಿಗೆ ಒಳಗಾಗಿ ಅವಳಿಗೆ ಹುಟ್ಟುವ ಮಕ್ಕಳು ಅನಾರೋಗ್ಯಕ್ಕೂ, ಅಪೌಷ್ಠಿಕತೆಗೂ ತುತ್ತಾಗುವ ಅಪಾಯಗಳನ್ನು ಹೊತ್ತುಕೊಂಡೇ ಹುಟ್ಟುತ್ತವೆ. ಹೀಗೆ ಸ್ತ್ರೀಯರ ಅನಾರೋಗ್ಯದ ವಿಷವರ್ತುಲ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಮುಂದುವರೆಯುತ್ತಲೆ ಹೋಗುತ್ತವೆ. ನಮ್ಮ ಸಮಾಜದಲ್ಲಿ ಹಾಗೂ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿರುವ ಲಿಂಗ ಅಸಮಾನತೆಯಿಂದಾಗಿ ಮತ್ತು ಸ್ತ್ರೀ ಜೀವ ವಿರೋಧಿಯಾದ ದಮನಕಾರಿ ಮೌಲ್ಯಗಳಿಂದಾಗಿ ಮಹಿಳೆಯರಿಗೆ ತಮ್ಮ ಆರೋಗ್ಯಕ್ಕೆ, ಸಂತಾನೋತ್ಪತ್ತಿಗೆ ತಮ್ಮ ಸ್ವಂತ ದೇಹಕ್ಕೆ ಸಂಬಂಧಿಸಿದ ಅನೇಕ ವಿಷಯಗಳಲ್ಲಿ ನಿರ್ಧಾರ ತೆಗೆದು ಸರಿಯಾದ ಸಂಪೂರ್ಣ ಹಕ್ಕು ಹಾಗೂ ಆಯ್ಕೆಗಳಿಲ್ಲ. ಜೊತೆ ಜೊತೆಗೆ ಸ್ತ್ರೀಯರ ಮೂಲಭೂತ ಅಗತ್ಯಗಳನ್ನು ಪ್ರತ್ಯೇಕ್ಷವಾಗಿ ಹಾಗೂ ಪರೋಕ್ಷವಾಗಿ ನಿರ್ಲಕ್ಷಿಸಲಾಗಿದೆ. ೧೯೯೯ರ ಮಾನವ ವಿಕಾಸದ ಸೂಚ್ಯಂಕದಲ್ಲಿ ಭಾರತ ೧೦೪ನೇ ಸ್ಥಾನದಲ್ಲಿವೆ. ಪ್ರತಿ ದಶಕದಲ್ಲಿ ಒಮ್ಮೆ ನಡೆಯುವ ಜನಗಣತಿಯಲ್ಲಿ ಸಂಗ್ರಹಿಸಲಾಗುವ ನಮ್ಮ ದೇಶದ ಜನಸಂಖ್ಯೆಯ ವಿವರಗಳಲ್ಲಿ ಮಹಿಳೆಯರು ಹಾಗೂ ಹುಡುಗಿಯರ ಆರೋಗ್ಯ ಸೂಚಕಗಳು ಸಿಗುತ್ತವೆ. ಇವುಗಳಲ್ಲಿ ಮುಖ್ಯ ವಾದವುಗಳೆಂದರೆ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀಯರ ಸಂಖ್ಯೆ, ಶಿಶುಮರಣ ಸಂಖ್ಯೆ, ನವಜಾತ ಶಿಶುಮರಣ ಸಂಖ್ಯೆ, ಜನಸಂಖ್ಯೆಯ ನಿರೀಕ್ಷಿತ ಆಯಸ್ಸು ಮತ್ತು ಒಂದು ವರ್ಷದೊಳಗಿನ ಮಕ್ಕಳ ಮರಣ ಸಂಖ್ಯೆಯ ಪ್ರಮಾಣ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿ ಅನ್ವಯಿಸಲ್ಪಟ್ಟ ಹಾಗೂ ಸ್ತ್ರೀ ಪುರುಷರಿಗೆ ಪ್ರತ್ಯೇಕವಾಗಿ ಅನ್ವಯಿಸಲ್ಪಟ್ಟ ಕೆಲವು ವಿವರಗಳು ಮಾತ್ರ ಜನಸಂಖ್ಯಾ ಅಂಕಿ-ಅಂಶಗಳಲ್ಲಿ ಲಭ್ಯವಿದೆ.

ಭಾರತೀಯ ಸಂವಿಧಾನದಲ್ಲಿ ಪ್ರತಿ ಪ್ರಜೆಗೂ ತನ್ನ ಜೀವದ ಮೇಲಿನ ಹಕ್ಕು ಹಾಗೂ ವೈಯಕ್ತಿಕ ಸ್ವಾತಂತ್ರ್ಯದ ಹಕ್ಕನ್ನು ನೀಡಲಾಗಿದೆ. "ಅದು ವ್ಯಕ್ತಿಗಿರಬೇಕಾದ ಘನತೆಯಿಂದ ಜೀವನ ನಡೆಸುವ ಹಕ್ಕು" ಎಂದು ಅರ್ಥೈಸಿದೆ. ಅಂದರೆ ತನ್ನ ಈ ಜೀವನವನ್ನು ಅರ್ಥಪೂರ್ಣವಾಗಿ ಪೂರ್ತಿಯಾಗಿ

ಜೀವಿಸಲು ಎಲ್ಲಾ ವಿಷಯಗಳ ಮೇಲೆ ಒಬ್ಬ ವ್ಯಕ್ತಿಗೆ ಇರಬೇಕಾದ ಹಕ್ಕು ಎಂದು ಸರ್ವೋಚ್ಚ ನ್ಯಾಯಲಯ ವಿವರಿಸಿದೆ. ಆದರೆ ಈ ಹಕ್ಕು ಎಷ್ಟರ ಮಟ್ಟಿಗೆ ನಮ್ಮ ಮಹಿಳೆಯರಿಗೆ ಸಿಕ್ಕಿದೆಯಾ ಎಂಬ ಪ್ರಶ್ನೆಗೆ ಈ ಶತಮಾನದ ಆದಿಯಿಂದ ಇಂದಿನವರೆಗೂ ಇಳಿಯುತ್ತಲೇ ಬಂದಿರುವ ನಮ್ಮ ಸ್ತ್ರೀ ಸಂಖ್ಯೆಯೇ ಉತ್ತರ ನೀಡುವ ಕೈಗನ್ನಡಿಯಂತಿದೆ. ಭಾರತೀಯ ಸ್ತ್ರೀಯರ ಬದುಕಿನಲ್ಲಿ ಆಳವಾಗಿ ಬೇರೂರಿದ್ದು ಅವರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಲಿಂಗ ಅಸಮಾನತೆಯ ಆಧಾರಿತವಾದ ಆರ್ಥಿಕ, ಸಾಮಾಜಿಕ, ಕೌಟುಂಬಿಕ ಹಾಗೂ ಸಾಂಸ್ಕೃತಿಕ ಅಂಶಗಳೇ ಕಾರಣವೆನ್ನಬಹುದು. ಸ್ತ್ರೀ ಪುರುಷರ ಅನುಪಾತದಲ್ಲಿ ಒಂದೇ ಸಮನೆ ಇಳಿಯುತ್ತಿರುವ ಮಹಿಳೆಯರ ಸಂಖ್ಯೆಗೆ ಮೂಲಭೂತವಾದ ಕಾರಣವೆಂದರೆ ಪುರುಷ ಹಿತಾಸಕ್ತಿಗಳ ಸ್ತ್ರೀ ವಿರೋಧಿ ಪ್ರಭಾವಗಳೇ ಕಾರಣವೆನ್ನಬಹುದು.

ವಿಶ್ವದ ಸರಾಸರಿ ಜನಗಣತಿಯಲ್ಲಿ ಇಂದು ಪ್ರತಿ ಸಾವಿರ ಮಂದಿ ಪುರುಷರಿಗೆ ೧೦೫೦ ಮಂದಿ ಮಹಿಳೆಯರಿದ್ದಾರೆ. ಇದು ನಿಸರ್ಗದನಿಯಮ. ಜೈವಿಕವಾಗಿ ಹೆಣ್ಣಿಗೆ ಹೋಲಿಸಿದರೆ ಗಂಡು ಭ್ರೂಣಗಳು ಅಶಕ್ತ, ನೈಸರ್ಗಿಕವಾದ ಸಹಜ ಪರಿಸ್ಥಿತಿಯಲ್ಲಿ ಹೆಚ್ಚು ಗಂಡು ಕೂಸುಗಳು ಸಾಯುತ್ತವೆ. ಜಗತ್ತೀನ ಜನಗಣಿತಿಯಲ್ಲಿ ವಿಶ್ವದ ಎಲ್ಲಾ ದೇಶಗಳಲ್ಲಿ ಪುರುಷರಿಗಿಂತಾ ಮಹಿಳೆಯರ ಸಂಖ್ಯೆಯೇ ಹೆಚ್ಚಾಗಿದೆ. ಈ ನಿಸರ್ಗ ಪ್ರಮಾಣಕ್ಕೆ ಅಪವಾದ ವೆಂದರೆ ನಮ್ಮ ಭಾರತವನ್ನು ಒಳಗೊಂಡಂತೆ ಭಾರತೀಯ ಉಪಖಂಡದ ಕೆಲವು ದೇಶಗಳು ಹಾಗೂ ಚೀನಾ ಮಾತ್ರ. ನಮ್ಮ ದೇಶದಲ್ಲಿ ೧೯೦೧ ರಿಂದ ವ್ಯವಸ್ಥಿತ ರೀತಿಯಲ್ಲಿ ನಡೆದ ಎಲ್ಲಾ ಜನಗಣತಿಗಳಲ್ಲಿ ಸ್ತ್ರೀಯರ ಸಂಖ್ಯೆ, ಲಿಂಗ ಅನುಪಾತದಲ್ಲಿ ಒಂದೇ ಸಮನೆ ಇಳಿಯುತ್ತಿರುವುದನ್ನು ಮುಂದಿನ ಕೋಷ್ಟಕದಿಂದ ಕಾಣಬಹುದು.

**ಕೋಷ್ಠಕ ೫.೧ ಕಳೆದ ನೂರು ವರ್ಷಗಳಲ್ಲಿ ಭಾರತದಲ್ಲಿ ಕಂಡುಬಂದ ಲಿಂಗ ಅನುಪಾತ (೧೯೦೧-೨೦೦೧)**

| ಜನಗಣತಿಯ ವರ್ಷ | ೧೦೦೦ ಪುರುಷರಿಗೆ ಪ್ರತಿಯಾಗಿ ಇದ್ದ ಸ್ತ್ರೀಯರ ಸಂಖ್ಯೆ |
|---|---|
| ೧೯೦೧ | ೯೭೨ |
| ೧೯೧೧ | ೯೬೪ |
| ೧೯೨೧ | ೯೫೫ |
| ೧೯೩೧ | ೯೫೦ |
| ೧೯೪೧ | ೯೪೫ |
| ೧೯೫೧ | ೯೪೬ |
| ೧೯೬೧ | ೯೪೧ |
| ೧೯೭೧ | ೯೩೦ |
| ೧೯೮೧ | ೯೩೪ |
| ೧೯೯೧ | ೯೨೭ |
| ೨೦೦೧ | ೯೩೩ |

ಮೂಲ: ಜನಗಣತಿ ೨೦೦೧

ಈ ಮೇಲಿನ ಕೋಷ್ಟಕವನ್ನು ನೋಡಿದರೆ ಸ್ತ್ರೀಯರ ಸಂಖ್ಯಾ ಪ್ರಮಾಣದಲ್ಲಿ ಇಳಿಕೆಯನ್ನು ಕಾಣುತ್ತೇವೆ. ಸ್ತ್ರೀ ಪುರುಷನಿಗಿಂತ ಹೆಚ್ಚು ಸಮರ್ಥಳು. ಇಂದು ಇಷ್ಟು ಮುಂದುವರೆಯುತ್ತಿದ್ದರು. ಸಹ ಸ್ತ್ರೀ ಸಂಖ್ಯಾ ಪ್ರಮಾಣದಲ್ಲಿ ಕಡಿಮೆಯಾಗಿರುವುದನ್ನು ಕಾಣುತ್ತೇವೆ. ಇನ್ನೂ ಕರ್ನಾಟಕದಲ್ಲಿ ಜಿಲ್ಲಾವಾರು ಸ್ತ್ರೀ-ಪುರುಷರ ಸಂಖ್ಯಾ ಪ್ರಮಾಣ ಹೇಗಿದೆ ಎನ್ನುವುದನ್ನು ಕೋಷ್ಟಕ ೫.೨ರ ಮೂಲಕ ತಿಳಿಯೋಣ.

**ಕೋಷ್ಟಕ ೫.೨ ಜಿಲ್ಲಾವಾರು ಸ್ತ್ರೀ-ಪುರುಷರ ಸಂಖ್ಯಾ ಅನುಪಾತ ೧೯೯೧**

| ಜಿಲ್ಲೆಗಳು | ೧೦೦೦ ಪುರುಷರಿಗೆ / ಸ್ತ್ರೀಯರು |
|---|---|
| ಬೆಂಗಳೂರು ನಗರ ಪ್ರದೇಶ | ೯೦೩ |
| ಬೆಂಗಳೂರು ಗ್ರಾಮೀಣ | ೯೪೫ |
| ಬೆಳಗಾವಿ | ೯೫೪ |
| ಬಳ್ಳಾರಿ | ೯೬೫ |
| ಬೀದರ | ೯೫೨ |
| ಬಿಜಾಪುರ | ೯೬೪ |
| ಚಿಕ್ಕಮಗಳೂರು | ೯೭೭ |
| ಚಿತ್ರದುರ್ಗ | ೯೪೪ |
| ದಕ್ಷಿಣ ಕನ್ನಡ ಜಿಲ್ಲೆ | ೧೦೯೩ |
| ಧಾರವಾಡ | ೯೪೪ |
| ಗುಲಬರ್ಗಾ | ೯೬೨ |
| ಹಾಸನ | ೯೯೯ |
| ಕೊಡಗು | ೯೭೮ |
| ಕೋಲಾರ | ೯೬೫ |
| ಮಂಡ್ಯ | ೯೬೩ |
| ಮೈಸೂರು | ೯೫೩ |
| ರಾಯಚೂರು | ೯೭೯ |
| ಶಿವಮೊಗ್ಗ | ೯೬೦ |
| ತುಮಕೂರು | ೯೫೯ |
| ಉತ್ತರ ಕನ್ನಡ | ೯೬೭ |
| ಕರ್ನಾಟಕ ರಾಜ್ಯ | ೯೬೦ |

ಮೂಲ : ೧೯೯೧ರ ಜನಗಣತಿ

ಮೇಲಿನ ಕೋಷ್ಟಕದ ಮೂಲಕ ಜಿಲ್ಲಾವಾರು ಲಿಂಗಾನುಪಾತವನ್ನು ಪರಿಶೀಲಿಸಿದರೆ ಬೆಂಗಳೂರು ನಗರ ಪ್ರದೇಶದಲ್ಲೇ ಅತ್ಯಂತ ಕಡಿಮೆ ಸ್ತ್ರೀ ಸಂಖ್ಯೆಯಿದೆ. ಇತ್ತೀಚೆಗೆ ನಡೆಸಿದ ಸಮೀಕ್ಷೆಯ ಫಲಿತಾಂಶಗಳ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಹೆಣ್ಣುಮಕ್ಕಳ ಸಂಖ್ಯೆ ೧೦೦೦ ಗಂಡು ಮಕ್ಕಳೊಂದಿಗೆ ೯೨೨ರಷ್ಟಿದೆ. ಇಡೀ ಆಗ್ನೇಯ ಏಷ್ಯಾದಲ್ಲಿ ಅತಿಹೆಚ್ಚು ತಾಯ್ತನದ ಮರಣ ಉಂಟಾಗುವ ದೇಶಗಳ ಪಟ್ಟಿಯಲ್ಲಿ ಭಾರತ ಮೂರನೆಯ ಸ್ಥಾನದಲ್ಲಿದೆ. ನಮ್ಮ ದೇಶದ ತಾಯಿಯರ ಮರಣ ಸಂಖ್ಯಾ ಪ್ರಮಾಣ ಶೇ. ೪೦೭ರಷ್ಟಿದೆ. ಮುಂದಿನ ಕೋಷ್ಟಕ ೫.೩ರ ಮೂಲಕ ರಾಜ್ಯವಾರು ತಾಯ್ತನ ಹೇಗಿದೆ ಎನ್ನುವುದನ್ನು ತಿಳಿಯೋಣ.

**ಕೋಷ್ಟಕ ೫.೩ : ಭಾರತದಲ್ಲಿ ತಾಯ್ತನದ ಮರಣಗಳ ಸಂಖ್ಯಾ ಪ್ರಮಾಣ ೧೯೯೮**

| ರಾಜ್ಯಗಳು | ಮರಣ ಸಂಖ್ಯಾ ಪ್ರಮಾಣ |
|---|---|
| ಉತ್ತರ ಪ್ರದೇಶ | ೭೦೭ |
| ರಾಜಸ್ಥಾನ | ೬೭೦ |
| ಮಧ್ಯ ಪ್ರದೇಶ | ೪೯೮ |
| ಬಿಹಾರ | ೪೫೨ |
| ಅಸ್ಸಾಂ | ೪೦೯ |
| ಓರಿಸ್ಸಾ | ೩೬೭ |
| ಪಶ್ಚಿಮ ಬಂಗಾಳ | ೨೬೬ |
| ಪಂಜಾಬ | ೧೯೯ |
| ಕೇರಳ | ೧೯೮ |
| ಕರ್ನಾಟಕ | ೧೯೫ |
| ಆಂಧ್ರ ಪ್ರದೇಶ | ೧೫೯ |
| ಮಹಾರಾಷ್ಟ್ರ | ೧೩೫ |
| ಹರಿಯಾಣ | ೧೦೩ |
| ತಮಿಳುನಾಡು | ೭೯ |
| ಗುಜರಾತ | ೨೮ |
| ಭಾರತ | ೪೦೭ |

ಮೂಲ : Sarple Registrarion system office of Registar general, India.

ಮೇಲಿನ ಕೋಷ್ಟಕವನ್ನು ನೋಡಿದರೆ ಇದು ಒಂದು ವರ್ಷದಲ್ಲಿ ಹುಟ್ಟುವ ೧೦೦.೦೦೦ ಶಿಶುಗಳಿಗೆ ಪ್ರತಿಯಾಗಿ ಬಸಿರು ಮತ್ತು ಹೆರಿಗೆಗೆ ಸಂಬಂಧಿಸಿದ ಕಾರಣಗಳಿಂದ ಮರಣ ಹೊಂದುವ ಮಹಿಳೆಯರ ಸಂಖ್ಯೆಯನ್ನು ತೋರಿಸುತ್ತವೆ. ಮಹಿಳಾ ಆರೋಗ್ಯ ಕಾರ್ಯಕ್ರಮಗಳು ಸರಿಯಾಗಿ ನಡೆಯದೇ ತಾಯ್ತನ ಮರಣ ಸಂಖ್ಯಾ ಪ್ರಮಾಣ ಹೆಚ್ಚಾಗಿದೆ.

ನಮ್ಮ ದೇಶದಲ್ಲಿಹೆಚ್ಚಾಗಿರುವ ತಾಯಿಯರ ಮರಣ ಸಂಖ್ಯಾ ಪ್ರಮಾಣಕ್ಕೆ ಮೊಟ್ಟಮೊದಲ ಕಾರಣಗಳೆಂದರೆ ಕ್ರಮವಾಗಿ ಬಸಿರು, ಹೆರಿಗೆಯ ನಂತರದ ರಕ್ತಸ್ರಾವ, ರಕ್ತಹೀನತೆ, ರಕ್ತನಂಜೆರುವಿಕೆ, ಹೆರಿಗೆಯ ನಂತರದ ಸೊಂಕುಗಳು, ಗರ್ಭಪಾತ, ಈ ರೀತಿಯಾಗಿ ಅಪ್ರತ್ಯಕ್ಷವಾಗಿ ಕಾರಣವಾಗಿವೆ. ಹಾಗಾಗಿಯೇ ನಮ್ಮ ದೇಶದ ಗರ್ಭಿಣಿಯರಲ್ಲಿ ಶೇ. ೪೦ ರಿಂದ ೮೫ ಮಂದಿ ರಕ್ತಹಿನತೆಯಿಂದ ನರಳುತ್ತಿದ್ದಾರೆ. ಗರ್ಭಿಣಿ ಹಾಗೂ ಹೆರಿಗೆಯಲ್ಲಿ ವಿವಿಧ ಕಾರಣಗಳಿಂದ ಸತ್ತ ಗ್ರಾಮೀಣ ತಾಯಿಯರ ಶೇಕಡವಾರು ಸಂಖ್ಯೆ ಹೇಗಿದೆ ಎನ್ನುವುದನ್ನು ಕೋಷ್ಟಕ ೫.೮ರಲ್ಲಿ ನೋಡೋಣ.

**ಕೋಷ್ಠಕ ೫.೪ : ಗರ್ಭಿಣಿ ಹಾಗೂ ಹೆರಿಗೆಯಲ್ಲಿ ವಿವಿಧ ಕಾರಣಗಳಿಂದ ಸತ್ತ ಗ್ರಾಮೀಣ ತಾಯಿಯರ ಶೇಕಡವಾರು ಪ್ರಮಾಣ (೧೯೮೯-೧೯೯೮)**

| ಸಂ. | ಕಾರಣಗಳು | ೧೯೯೩ | ೧೯೯೪ | ೧೯೯೫ | ೧೯೯೬ | ೧೯೯೭ | ೧೯೯೮ |
|---|---|---|---|---|---|---|---|
| ೧. | ರಕ್ತಸ್ರಾವ | ೨೨.೬ | ೨೭.೭ | ೨೮.೯ | ೨೭.೪ | ೨೪.೭ | ೨೩.೨ |
| ೨. | ರಕ್ತಹೀನತೆ | ೨೦.೨ | ೧೯.೨ | ೧೭.೦ | ೧೫.೮ | ೧೫.೭ | ೨೩.೩ |
| ೩. | ಬಸುರಿ ನಂಜೇರುವಿಕೆ | ೧೨.೮ | ೧೩.೧ | ೭.೯ | ೧೧.೫ | ೧೦.೫ | ೯.೯ |
| ೪. | ಹೆರಿಗೆ ನಂತರದ ಸೊಂಕುಗಳು | ೧೨.೫ | ೧೦.೯ | ೮.೫ | ೧೪.೦ | ೧೦.೨ | ೯.೫ |
| ೫. | ಗರ್ಭಪಾತ | ೧೧.೭ | ೧೨.೬ | ೧೭.೬ | ೯.೦ | ೮.೭ | ೧೨.೪ |
| ೬. | ಶಿಶುವು ತಲೆಕೆಳಗಾಗಿ ಇಲ್ಲದಿರುವುದು | ೫.೫ | ೬.೪ | ೪.೦ | ೯.೬ | ೧೧.೭ | ೭.೪ |
| ೭. | ವರ್ಗೀಕರಿಸಲಾಗದ ಇತರೆ ಕಾರಣಗಳು | ೧೪.೬ | ೧೪.೨ | ೧೪.೧ | ೧೩.೭ | ೧೮.೪ | ೧೩.೮ |
| | **ಒಟ್ಟು ಮೊತ್ತ** | ೧೦೦ | ೧೦೦ | ೧೦೦ | ೧೦೦ | ೧೦೦ | ೧೦೦ |

ಮೂಲ : Survey of causes of Death afficeat Registrarion general India Original table

ಇನ್ನು ತಾಯಿಯರ ಮರಣಗಳಿಗೆ ಕಾರಣವಾದ ರಕ್ತನಂಜೇರಿಕೆಯು, ಗರ್ಭಿಣಿ ಅವಧಿಯಲ್ಲಿ ಉಂಟಾಗುತ್ತವೆ. ಇದು ಗರ್ಭಿಣಿಯ ರಕ್ತದೊತ್ತಡ ಏರಿಕೆ, ಮೈ ಕೈ-ಕಾಲುಗಳ ಊತ ಹಾಗೂ ಜ್ವರದ ಮೂಲಕ ವ್ಯಕ್ತವಾಗುತ್ತವೆ. ನಮ್ಮ ದೇಶದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಶೇ. ೮ ರಿಂದ ಶೇ. ೯ರಷ್ಟು ತಾಯ್ತನದ ಮರಣಗಳು ಸುರಕ್ಷಿತವಲ್ಲದ ಗರ್ಭಪಾತದಿಂದಲೇ ಉಂಟಾಗುತ್ತಿರುವುದು ವರದಿಯಾಗಿದೆ. ಇನ್ನು ಗ್ರಾಮೀಣ ಪ್ರದೇಶಗಳಲ್ಲಿ ಶೇ. ೧೨ಕ್ಕಿಂತ ಹೆಚ್ಚು ತಾಯ್ತನದ ಮರಣಗಳಿಗೆ ಗರ್ಭಪಾತವೇ ಕಾರಣವಾಗಿರುವುದು ಇನ್ನೊಂದು ಅಂಶವೆಂದರೆ

ಬಡಮಕ್ಕಳಲ್ಲಿ ಅವರಲ್ಲಿಯೂ ದುರ್ಬಲ ವರ್ಗಗಳಿಗೆ ಸೇರಿದ ಮಕ್ಕಳಲ್ಲಿ ನ್ಯೂ ಪೋಷಣೆ, ಶಿಶುಮರಣ ಸಂಖ್ಯೆ ಹಾಗೂ ಮಕ್ಕಳ ಮರಣಸಂಖ್ಯಾ ಪ್ರಮಾಣಗಳು ಇತರ ಸಾಮಾನ್ಯ ವರ್ಗದ ಮಕ್ಕಳಿಗೆ ಹೋಲಿಸಿದಲ್ಲಿ ಅತಿ ಹೆಚ್ಚಾಗಿ ವಿಭಿನ್ನ ಸಾಮಾಜಿಕ ಗುಂಪುಗಳಲ್ಲಿ ಹೇಗಿದೆ ಅನ್ನುವುದನ್ನು ೫.೫ ಕೋಷ್ಟಕದ ಮೂಲಕ ಗಮನಿಸಬಹುದು.

**ಕೋಷ್ಟಕ ೫.೫ : ವಿಭಿನ್ನ ಸಾಮಾಜಿಕ ಆರ್ಥಿಕ ಗುಂಪುಗಳ ಆರೋಗ್ಯ ಸೂಚಕಗಳಲ್ಲಿ ಕಂಡುಬಂದಿರುವ ಸಾಮಾಜಿಕ ಅಸಮಾನತೆ ಅನ್ಯಾಯ ಆರೋಗ್ಯ ಸೂಚಕಗಳು**

| | **ಶಿಶುಮರಣ ಸಂಖ್ಯೆ ೧೦೦೦ಕ್ಕೆ** | **೫ ವರ್ಷದೊಳಗಿನ ಮಕ್ಕಳ ಮರಣ ಸಂಖ್ಯೆ ೧೦೦೦ಕ್ಕೆ** | **ಕಡಿಮೆ ದೇಹತೂಕದ ಮಕ್ಕಳ ಶೇಕಡವಾರು** |
|---|---|---|---|
| ಭಾರತ | ೭೦ | ೯೪.೯ | ೪೭ |
| ಪರಿಶಿಷ್ಟ ಜಾತಿ | ೮೩ | ೧೧೯.೩ | ೫೩.೫ |
| ಪರಿಶಿಷ್ಟ ಬುಡಕಟ್ಟು | ೮೪.೨ | ೧೨೬.೩ | ೫೫.೬ |
| ಇತರ ದುರ್ಬಲರು | ೭೬ | ೧೦೩.೧ | ೪೭.೩ |
| ಇತರರು | ೬೧.೮೦ | ೮೨.೩ | ೪೧.೧ |

ಮೂಲ : Draft National Health Policy-2001

ಈ ಕೋಷ್ಟಕವನ್ನು ನೋಡಿದರೆ ಸಾಮಾನ್ಯ ವರ್ಗದ ಮಕ್ಕಳಲ್ಲಿ ಶೇ. ೬.೨ರಷ್ಟಿದ್ದರೆ ಪರಿಶಿಷ್ಟ ಬುಡಕಟ್ಟುಗಳಲ್ಲಿ ಶೇ. ೧೦೩ ಸಂಖ್ಯೆಯನ್ನು ದಾಟಿದೆ. ಇದಕ್ಕೆ ದುರ್ಬಲವರ್ಗದವರು ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳಿಗೆ ಗುರಿಯಾಗಿರುವುದೇ ಆಗಿದೆ. ಯಾವುದೇ ಒಂದು ಸಮುದಾಯದಲ್ಲಿ ಒಂದು ವರ್ಷದ ಅವಧಿಯಲ್ಲಿ ಹುಟ್ಟುವ ಪ್ರತಿ ಸಾವಿರ ಶಿಶುಗಳಲ್ಲಿ ಒಂದು ವರ್ಷ ವಯಸ್ಸಾಗುವುದ ರೊಳಗೆ ಸಾಯುವ ಮಕ್ಕಳ ಸಂಖ್ಯೆಯೇ ಶಿಶುಮರಣ ಸಂಖ್ಯಾ ಪ್ರಮಾಣ ಅದು ಭಾರತದಲ್ಲಿ

**ಕೋಷ್ಟಕ ೫.೬ : ಭಾರತದಲ್ಲಿ ಶಿಶುಮರಣ ಸಂಖ್ಯಾ ಪ್ರಮಾಣ ೧೯೯೦-೨೦೦೧**

| ವರ್ಷ | ಹೆಣ್ಣು ಶಿಶುಗಳು | ಗಂಡು ಶಿಶುಗಳು | ಅಂತರ | ಒಟ್ಟು |
|---|---|---|---|---|
| ೧೯೯೦ | ೮೧ | ೭೮ | ೩ | ೮೦ |
| ೧೯೯೧ | ೮೦ | ೮೧ | ೧ | ೮೦ |
| ೧೯೯೨ | ೭೫ | ೭೯ | ೧ | ೭೯ |
| ೧೯೯೩ | ೭೩ | ೭೩ | ೨ | ೭೪ |

| | | | | |
|---|---|---|---|---|
| ೧೯೯೪ | ೭೬ | ೭೫ | ೨ | ೭೪ |
| ೧೯೯೫ | ೭೬ | ೭೩ | ೩ | ೭೪ |
| ೧೯೯೬ | ೭೩ | ೭೧ | ೨ | ೭೨ |
| ೧೯೯೭ | ೭೩ | ೭೦ | ೩ | ೭೧ |
| ೧೯೯೮ | ೭೩ | ೭೦ | ೩ | ೭೨ |
| ೧೯೯೯ | ೭೧ | ೭೦ | ೧ | ೭೦ |
| ೨೦೦೦ | ೬೯ | ೬೭ | ೨ | ೬೮ |
| ೨೦೦೧ | ೬೮ | ೬೪ | ೪ | ೬೬ |

ಮೂಲ : Survey of census Registrarion system office

ಈ ಕೋಷ್ಠಕವನ್ನು ನೋಡಿದಾಗ ಶಿಶುಮರಣ ಸಂಖ್ಯಾ ಪ್ರಮಾಣವನ್ನು ಪರಿಶೀಲಿಸಿದಾಗ ೧೯೯೧ ಹಾಗೂ ೧೯೯೪ರನ್ನು ಹೊರತುಪಡಿಸಿ, ಇನ್ನಿತರ ವರ್ಷಗಳಲ್ಲಿ ಸತತವಾಗಿ ಗಂಡು ಮಕ್ಕಳ ಸಂಖ್ಯೆಗಿಂತ ಹೆಣ್ಣುಮಕ್ಕಳ ಸಂಖ್ಯೆಯೇ ಹೆಚ್ಚಾಗಿರುವುದು ಕಂಡುಬರುತ್ತದೆ. ಈ ಅಂಕಿಅಂಶಗಳು ನಮ್ಮ ಸಮಾಜದಲ್ಲಿ ಬೇರೂರಿರುವ ಲಿಂಗ ಪಕ್ಷಪಾತಿ ಧೋರಣೆಗೆ ಧ್ಯೋತಕವಾಗಿದೆ.

ಭಾರತದಲ್ಲಿ ಕಾನೂನುಬಾಹಿರ ಗರ್ಭಪಾತಗಳ ಸಂಖ್ಯೆ ನಾಲ್ಕರಿಂದ ಆರು ದಶಲಕ್ಷದವರೆಗೆ ಇದೆ. ಆದರೆ ಇದರಲ್ಲಿ ಆ ತರಹದ ಬದಲಾವಣೆ ಕಂಡುಬಂದಿಲ್ಲ. ಇಂದು ಹೆಣ್ಣು ಭ್ರೂಣಹತ್ಯೆಗಾಗಿಯೇ ನಡೆಸುತ್ತಿರುವ ಗರ್ಭಪಾತಗಳ ಸಂಖ್ಯೆ ವಿಪರೀತವಾಗಿ ಹೆಚ್ಚುತ್ತಿದ್ದು ಇದರ ನೇರ ಪರಿಣಾಮ ನಮ್ಮ ದೇಶದಲ್ಲಿ ಒಂದೇ ಸಮನೆ ಇಳಿಯುತ್ತಿರುವ ಸ್ತ್ರೀ ಸಂಖ್ಯೆಯಲ್ಲಿ ಪ್ರತಿಫಲಿತವಾಗುತ್ತಿವೆ. ಅಲ್ಲದೆ ತಾಯಿಯ ಆರೋಗ್ಯಕ್ಕೂ ಹಾಗೂ ಜೀವಕ್ಕೆ ಅಪಾಯಕಾರಿಯಾಗಬಲ್ಲ ಸಂಭವವಿದ್ದರೂ ಸಹ ಹೆಣ್ಣು ಭ್ರೂಣ ಹತ್ಯೆಗಾಗಿ ಮಾಡಿಸಲಾಗುತ್ತಿರುವ ಗರ್ಭಪಾತಗಳ ಸಂಖ್ಯೆಯೂ ಜಾಸ್ತಿಯಾಗಿವೆ. ಹೆಣ್ಣು ಭ್ರೂಣ ಹತ್ಯೆ ಮಾಡುವ ಹಳ್ಳಿಗಳನ್ನು ತಲುಪಿ ಅಲ್ಲಿಯ ಗರ್ಭಿಣಿಯರಿಗೆ ಇಷ್ಟವಿರಲಿ, ಇಲ್ಲದಿರಲಿ, ಕುಟುಂಬಕ್ಕೆ ಬೇಡವಾಗಿರುವ ಹೆಣ್ಣು ಭ್ರೂಣಗಳನ್ನು ತೆಗೆಸಿ ಹಾಕುವ ಗರ್ಭಪಾತಗಳು ಹೆಚ್ಚಾಗುತ್ತಿವೆ. ಇವು ತಾಯ್ತನದ ಮರಣಗಳಿಗೆ ಪ್ರತ್ಯೇಕ್ಷ ಕಾರಣಗಳಾಗಿವೆ.

ನಮ್ಮ ದೇಶದ ಮಹಿಳೆಯರು ಬಾಲ್ಯದಿಂದಲೇ ಅನುಭವಿಸುವ ಲಿಂಗಾಧಾರಿತ ಪಕ್ಷಪಾತದಿಂದ ಉಂಟಾಗುವ ಅಪಪೋಷಣೆ ಆರೋಗ್ಯ ಪಾಲನೆಯ ಅಲಕ್ಷ್ಯ, ಬಾಲ್ಯವಿವಾಹ, ಕಿಶೋರಾವಸ್ಥೆಯಲ್ಲಿಯೆ ಮೇಲಿಂದ ಮೇಲೆ ಬಸಿರುಗಳನ್ನು ಹೊರಲೇಬೇಕಾದ ಅಸಹಾಯಕತೆ, ಕುಟುಂಬ ಯೋಜನೆಯ ಬಗ್ಗೆ ಮತ್ತು ತಮ್ಮದೇ ಆರೋಗ್ಯದ ಬಗ್ಗೆ ನಿರ್ಣಯ ತೆಗೆದುಕೊಳ್ಳುವ, ಸ್ವತಂತ್ರವಾಗಿ ಹೋಗಿ ಚಿಕಿತ್ಸೆ, ಸಲಹೆ ಇತ್ಯಾದಿ ಆರೋಗ್ಯ ಸೌಲಭ್ಯಗಳನ್ನು ಪಡೆಯಲು ಇರುವ ಅಡ್ಡಿಗಳು ನಮ್ಮ ದೇಶದಲ್ಲಿ ತಾಯ್ತನದ ಮರಣಗಳು ಹೆಚ್ಚಾಗಿರಲು ಅಪ್ರತ್ಯಕ್ಷವಾದ ಮುಖ್ಯಕಾರಣಗಳಾಗಿವೆ.

ಈಗಾಗಲೇ ಹೆಣ್ಣು ಭ್ರೂಣಹತ್ಯೆಯಿಂದ ಆಗುತ್ತಿರುವ ಅಸಹಜ ಲಿಂಗಾನುಪಾತ ಉಂಟು ಮಾಡುವ ಗಂಭೀರ ಅಪಾಯಗಳ ಬಗ್ಗೆ ಜಾಗೃತಿ ಮೂಡಿದ್ದು ಅದನ್ನು ನಿಷೇಧಿಸುವ, ಕಾನೂನುಗಳೂ, ಅದಕ್ಕೆ ತಿದ್ದುಪಡಿಗಳೂ ಜಾರಿಗೆ ಬಂದಿವೆ. ಹಲವಾರು ರಾಜ್ಯಗಳಲ್ಲಿ ಹೆಣ್ಣುಭ್ರೂಣ ಪತ್ಯೆಯನ್ನು ವಿರೋಧಿಸುವ ಅಂದೋಲನಗಳು ನಡೆಯುತ್ತಿವೆ. ಕೃಷಿ ಮತ್ತು ಕೈಗಾರಿಕೋದ್ಯಮಗಳಲ್ಲಿ ಪ್ರಗತಿ ಸಾಧಿಸಿರುವ ಪಂಜಾಬ್, ಹರಿಯಾಣ, ಗುಜರಾತ್, ಮಹಾರಾಷ್ಟ್ರ, ಆಂಧ್ರ, ಕರ್ನಾಟಕ ಇತ್ಯಾದಿ ರಾಜ್ಯಗಳಲ್ಲಿ ಸ್ತ್ರೀ ಭ್ರೂಣ ಹತ್ಯೆಯ ಪ್ರಮಾಣ ಅಧಿಕವಾಗಿದೆ. ಮಹಿಳೆಯರ ಶಿಕ್ಷಣ ಅರ್ಥಿಕ ಸ್ವಾವಲಂಬನೆಗಳು ಹೆಚ್ಚಿದಂತೆ ವರದಕ್ಷಿಣೆಯ ಪ್ರಮಾಣ ಹೆಚ್ಚಾದಂತೆ ಸ್ತ್ರೀ ಭ್ರೂಣಹತ್ಯೆಯ ಪ್ರಮಾಣವೂ ಆಧಿಕವಾಗಿದೆ.

ಇನ್ನೂ ೦-೬ ವರ್ಷದ ವಯೋಮಾನದಲ್ಲಿರುವ ಹುಡುಗಿಯರ ಸಂಖ್ಯೆಯು ಗಣನೀಯವಾಗಿ ಕಡಿಮೆಯಾಗಿದೆ. ನಮ್ಮ ದೇಶದಲ್ಲಿ ರಾಜ್ಯವಾರು ಹೇಗಿದೆ ಎನ್ನುವುದನ್ನು ಕೋಷ್ಟಕದ ಮೂಲಕ ವಿವರಿಸಬಹುದು.

**ಕೋಷ್ಟಕ ೫.೭ ಆರು ವರ್ಷದೊಳಗಿನ ಸಾವಿರ ಗಂಡು ಮಕ್ಕಳಿಗೆ ೧೯೯೧ ಮತ್ತು ೨೦೦೧ (ಇವು ಹೆಣ್ಣು ಮಕ್ಕಳ ಸಂಖ್ಯೆ)**

| ರಾಜ್ಯಗಳು | ಮಕ್ಕಳು ಲಿಂಗಾನುಪಾತ | | ಅಂತರ |
|---|---|---|---|
| | ೨೦೦೧ | ೧೯೯೧ | |
| ಪಂಜಾಬ | ೭೯೩ | ೮೭೫ | ೮೨ |
| ಹರಿಯಾಣ | ೮೭೯ | ೮೨೦ | ೫೯ |
| ಗುಜರಾತ್ | ೯೨೮ | ೮೭೯ | ೪೯ |
| ಹಿಮಾಚಲ ಪ್ರದೇಶ | ೯೫೧ | ೮೯೨ | ೫೪ |
| ರಾಜಸ್ಥಾನ | ೯೦೯ | ೯೧೬ | ೭ |
| ಉತ್ತರ ಪ್ರದೇಶ | ೯೧೫ | ೯೨೮ | ೧೩ |
| ಮಹಾರಾಷ್ಟ್ರ | ೯೧೭ | ೯೪೬ | ೨೯ |
| ಮಧ್ಯಪ್ರದೇಶ | ೯೩೩ | ೯೫೨ | ೧೯ |
| ಗೋವಾ | ೯೩೩ | ೯೬೪ | ೩೧ |
| ಬಿಹಾರ್ | ೯೩೮ | ೯೫೯ | ೨೧ |
| ತಮಿಳುನಾಡು | ೯೩೯ | ೯೪೮ | ೯ |
| ಕರ್ನಾಟಕ | ೯೪೯ | ೯೬೦ | ೧೧ |
| ಓರಿಸ್ಸಾ | ೯೫೦ | ೯೬೭ | ೧೭ |
| ಮಣಿಪುರ | ೯೬೧ | ೯೭೪ | ೧೩ |

| | | | |
|---|---|---|---|
| ಅರುಣಾಚಲ ಪ್ರದೇಶ | ೯೩೧ | ೯೮೨ | ೨೧ |
| ಪಶ್ಚಿಮ ಬಂಗಾಳ | ೯೩೩ | ೯೩೨ | ೪ |
| ಕೇರಳ | ೯೩೩ | ೯೫೮ | ೫ |
| ಆಂಧ್ರಪ್ರದೇಶ | ೯೩೩ | ೯೭೫ | ೧೧ |
| ಅಸ್ಸಾಂ | ೯೩೪ | ೯೭೫ | ೧೧ |
| ಮಿಜೋರಾಂ | ೯೭೧ | ೯೩೯ | ೨ |
| ತ್ರಿಪುರಂ | ೯೭೧ | ೯೩೭ | ೮ |
| ನಾಗಲ್ಯಾಂಡ್ | ೯೭೫ | ೯೯೩ | ೧೮ |
| ಸಿಕ್ಕಿಂ | ೯೮೩ | ೯೩೫ | ೨೧ |
| ಭಾರತ | ೯೨೭ | ೯೪೫ | ೧೮ |

ಮೂಲ : Calculated from census of India-2001

ಮೇಲಿನ ಕೋಷ್ಟಕವನ್ನು ನೋಡಿದರೆ ಸ್ತ್ರೀ ಸಂಖ್ಯೆ ಹಾಗೂ ಬಾಣತಿಯರ ಸಂಖ್ಯೆಗೆ ನಮ್ಮ ದೇಶದಲ್ಲಿ ಹಾಸುಹೊಕ್ಕಾಗಿರುವ ಪುರುಷ ಹಿತಾಸಕ್ತಿಗಳ ಸ್ತ್ರೀ ಜೀವ ವಿರೋಧಿ ಪ್ರಭಾವಗಳೇ ಮೂಲ ಕಾರಣ. ನಮ್ಮ ದೇಶಗಳಲ್ಲಿ ಹಲವೆಡೆಗಳಲ್ಲಿ ಪರಂಪರಾಗನುತನವಾಗಿ ನಡೆದುಬಂದಿರುವ ಸ್ತ್ರೀ ಶಿಶುಹತ್ಯೆ ಹೆಣ್ಣುಮಗುವನ್ನು ಕುರಿತ ತೀವ್ರ ಅಲಕ್ಷ್ಯ ಹಾಗೂ ೧೯೮೦ ರಿಂದ ಈಚೆಗೆ ಇವೆಲ್ಲಕ್ಕೂ ಪೂರಕವಾಗಿ ಬಂದಿರುವ ಸೋನಾಗ್ರಾಫಿಂಗ್ ಇವು ಹೆಣ್ಣು ಭ್ರೂಣಹತ್ಯೆಗೆ ಕಾರಣವಾಗಿದೆ.

ಇನ್ನೂ ಮಹಿಳೆಯರ ಆರೋಗ್ಯದ ಬಹುಮುಖ್ಯ ಸೂಚಕಗಳಲ್ಲಿ ವಿವಾಹದ ವಯಸ್ಸು ಪ್ರಮುಖವಾಗಿದ್ದಾಗಿದೆ. ಮಹಿಳೆಯರಲ್ಲಿನ ಶೀಘ್ರ ವಿವಾಹವು ಬಹುಬೇಗನೆ ಗರ್ಭಧಾರಣೆ ಹಾಗೂ ಅಧಿಕ ಸಂತಾನೋತ್ಪತ್ತಿ ಮಹಿಳೆಯರ ಕೆಳಮಟ್ಟದ ಆರೋಗ್ಯ ಹಾಗೂ ಕೆಳಮಟ್ಟದ ಜೀವನದ ಬಹುಮುಖ್ಯ ಸೂಚಕಗಳಾಗಿವೆ. ಹೀಗೆ ಬಾಲ್ಯವಿವಾಹವಾಗಿರುವಲ್ಲಿ ಶೇ.೩೧ರಷ್ಟು ಹೆಣ್ಣುಮಕ್ಕಳು ೧೯ನೇ ವರ್ಷದೊಳಗೆ ಮಕ್ಕಳನ್ನು ಪಡೆಯುತ್ತಾರೆ. ಇಂತಹ ಹದಿಹರೆಯದ ತಾಯ್ತನದಲ್ಲಿಯೇ ಶಿಶುಮರಣ ಮತ್ತು ಹಾಗೂ ತಾಯಿಯರ ಮರಣ ಸಂಖ್ಯಾ ಪ್ರಮಾಣಗಳೆರಡೂ ಅತಿಹೆಚ್ಚಾಗಿರುತ್ತದೆ.

**ಕುಟುಂಬ ಯೋಜನೆ**

ಮಹಿಳೆಯರ ಆರೋಗ್ಯದ ಸ್ಥಿತಿ ವಿಶೇಷವಾಗಿ ಸಂತಾನೋತ್ಪತ್ತಿ ಆರೋಗ್ಯ ಕುಟುಂಬ ಯೋಜನಾ ಪದ್ಧತಿಗಳು ಮತ್ತು ಅದರ ಸ್ವೀಕಾರದ ಮೇಲೆ ಅವಲಂಬಿತವಾಗಿದೆ. ಕರ್ನಾಟಕದಲ್ಲಿಯೂ ಗರ್ಭನಿರೋಧಕ ಪದ್ಧತಿ ಇದೆ. ಕರ್ನಾಟಕದಲ್ಲಿ ಪ್ರತಿಶತ ೫೮ ವಿವಾಹಿತ ಮಹಿಳೆಯರು ಗರ್ಭ ನಿರೋಧಕವನ್ನು ಅಳವಡಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಸ್ತ್ರೀಯರು ಪುರುಷರಿಗಿಂತ ಹೆಚ್ಚು ಸಂತಾನಹರಣ ಶಸ್ತ್ರಚಿಕಿತ್ಸೆಯನ್ನು ಹೊಂದಿದ್ದಾರೆ. ಇದು ಮಹಿಳೆಯರ ಆರೋಗ್ಯದ ಮೇಲೆ ಪರಿಣಾಮ ಉಂಟಾಗುತ್ತಿದೆ. ಭಾರತದಲ್ಲಿ ಶೇ. ೨೦ರಷ್ಟು ಗಂಡು ಮಕ್ಕಳು ರಕ್ತಹೀನತೆಗೊಳಗಾಗಿದ್ದಾರೆ. ಶೇ. ೪೫ರಷ್ಟು

ಹುಡುಗಿಯರು ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ಈ ಅಗಾಧ ವ್ಯತ್ಯಾಸಕ್ಕೆ ಸಾಮಾನ್ಯವಾಗಿ ಹೆಣ್ಣು ಮಕ್ಕಳ ಆಹಾರ ಪೋಷಣೆ ಹಾಗೂ ಆರೋಗ್ಯದ ಅಗತ್ಯಗಳು ಅಲಕ್ಷಿಸಲ್ಪಡುವುದೇ ಮುಖ್ಯ ಕಾರಣವಾಗಿದೆ. ಇನ್ನೂ ಮುಖ್ಯವಾಗಿ ಕುಟುಂಬದಲ್ಲಿ ಸ್ತ್ರೀಯರಿಗೆ ತಮಗೆ ಸಂಬಂಧಿಸಿದ ವಿಷಯಗಳಲ್ಲಿ ನಿರ್ಣಯ ತೆಗೆದುಕೊಳ್ಳುವಲ್ಲಿರುವ ಬಹುಸೀಮಿತವಾದ ಅಧಿಕಾರ. ಇದರಿಂದಾಗಿ ಅವರಿಗೆ ತಮ್ಮ ಆರೋಗ್ಯವನ್ನೇ ಕುರಿತಂತೆ ಸಹ ಸರಿಯಾದ ನಿರ್ಣಯಗಳನ್ನು ತೆಗೆದುಕೊಳ್ಳುವಲ್ಲಿ ಈ ಪರಾಧೀನತೆ ಅಡ್ಡಿ ಯಾಗುತ್ತಿರುವುದನ್ನು ಭಾರತ ಸರ್ಕಾರದ ೨೦೦೧ರ ಜನಗಣತಿ ಹಾಗೂ ೨ನೇ ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸರ್ವೇಕ್ಷಣಾ ವರದಿಗಳು ಸಾಬೀತು ಪಡಿಸಿವೆ. ಕರ್ನಾಟಕ ರಾಜ್ಯದಲ್ಲಿ ಅವರ ಸಂಖ್ಯೆ ಶೇ. ೫೧.೨ರಷ್ಟು ಇದೆ. ಕರ್ನಾಟಕದಲ್ಲಿನ ಮಹಿಳೆಯರ ಆರೋಗ್ಯ ಸ್ಥಿತಿಗತಿ ಅವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸ್ಥಿತಿಗತಿಗಳೊಂದಿಗೆ ಹಾಸುಹೊಕ್ಕಾಗಿವೆ. ಅನಕ್ಷರತೆ, ಕಡಿಮೆಶಿಕ್ಷಣ, ಶೀಘ್ರ ವಿವಾಹ ಮತ್ತು ಇತರ ಸಾಂಸ್ಕೃತಿಕ ಅಂಶಗಳು ಅಡತಡೆಯನ್ನುಂಟು ಮಾಡುತ್ತಿವೆ. ಇನ್ನೂ ಅರಣ್ಯದಲ್ಲೇ ವಾಸಿಸುವ ಗೌಳಿಗ ಸಮುದಾಯದಲ್ಲಿ ತಮಗೆ ಬರುವ ರೋಗ ರುಜಿನಗಳಿಗೆ ಸ್ವತಃ ತಾವೇ ವೈದ್ಯೋಪಚಾರಗಳನ್ನು ಮಾಡಿಕೊಳ್ಳುತ್ತಾರೆ. ಕಾಡಿನೊಂದಿಗೆ ಅನನ್ಯವಾದ ಸಂಬಂಧವಿದ್ದ ಇವರು ನೈಸರ್ಗಿಕ ಆರೋಗ್ಯವಂತರಾಗಿದ್ದಾರೆ. ಕಾಡಿನ ಜೇನು, ಹಣ್ಣು-ಹಂಪಲು, ಗಡ್ಡೆ-ಗೆಣಸು ಮುಂತಾದ ಕಿರು ಅರಣ್ಯ ಉತ್ಪನ್ನ ಸಂಗ್ರಹ, ಬೇಟೆ ಸಂಪ್ರದಾಯಿಕ ಪದ್ಧತಿಯಲ್ಲಿ ಕೃಷಿ ಹೈನುಗಾರಿಕೆ ಮುಂತಾದ ವೃತ್ತಿಗಳಲ್ಲಿ ಶ್ರಮಜೀವಿಗಳಾಗಿ ಜೀವನ. ಜೀವನ ವಿಧಾನಕ್ಕೂ ಆಹಾರ ಪದ್ಧತಿಗೂ ನೇರ ಸಂಬಂಧವಿರುತ್ತದೆ. ಅರಣ್ಯ ಪ್ರದೇಶದಲ್ಲಿರುವ ಇವರು ಸಸ್ಯಗಳ ಬೇರು, ಗಡ್ಡೆ, ಎಲೆ, ಹಣ್ಣು, ಕಾಯಿ, ಬೀಜ ಮುಂತಾದ ಭಾಗಗಳನ್ನು ಆಹಾರವಾಗಿ ಗುರುತಿಸಿ ಸಾಂಪ್ರದಾಯಿಕ ಆಹಾರಗಳನ್ನು ಗೌಳಿಗರು ಜನ ಹೆಚ್ಚಾಗಿ ಬಳಸುವರು.

ಕಾಡಿನ ಬದುಕು ಇವರ ಆಹಾರ ಪದ್ಧತಿಗಳ ಮೇಲೆ ಮಹತ್ವದ ಪ್ರಭಾವ ಬೀರಿವೆ. ಕಾಡಿನ ಹಣ್ಣು-ಹಂಪಲು, ಸೊಪ್ಪು, ತೊಗಟೆ, ಬೇರು, ಗಡ್ಡೆ-ಗೆಣಸುಗಳೇ ಇವರ ಆಹಾರದ ಭಾಗವಾಗಿದ್ದು ದೇಹಕ್ಕೆ ಅಗತ್ಯ ಪೋಷಕಾಂಶ, ಖನಿಜಾಂಶಗಳನ್ನು ಈ ಕಾಡು ತರಕಾರಿಗಳಿಂದ ಪಡೆಯುತ್ತಿದ್ದಾರೆ. ಕಾಡಿನಲ್ಲಿ ದನಕರು ಮೇಯಿಸುವುದು, ಹಣ್ಣು ಹಂಪಲು, ಗಡ್ಡೆ-ಗೆಣಸು ಸಂಗ್ರಹಿಸುವುದು, ಹುಲ್ಲು, ಸೌದೆ ತರುವುದು, ಕೃಷಿಕೆಲಸ, ಮನೆಗೆಲಸದಲ್ಲಿ ಮಹಿಳೆಯರ ದುಡಿಮೆ ಪ್ರತಿದಿನ ಮುಂಜಾನೆ ಐದರಿಂದ ರಾತ್ರಿ ಒಂಭತ್ತು ಗಂಟೆಯವರೆಗೆ ಬಿಡುವಿಲ್ಲದ ಶ್ರಮ ಇವರದ್ದಾಗಿರುತ್ತದೆ. ಸಹಜವಾಗಿ ಪುರುಷರಿಗಿಂತ ಮಹಿಳೆಯರ ಕೆಲಸದ ಅವಧಿ ಜಾಸ್ತಿ ಇರುತ್ತದೆ. ಇತ್ತೀಚಿನ ದಶಕಗಳಲ್ಲಿ ತಮ್ಮ ಪರಂಪರಾಗತ ವೃತ್ತಿಯ ಜೊತೆ ಇನ್ನಿತರ ಕೂಲಿ ಕೆಲಸಗಳಲ್ಲಿಯೂ ಇವರು ದುಡಿಯುತ್ತಿದ್ದಾರೆ. ನಮ್ಮ ದೇಶದ ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳಲ್ಲಿ ಪ್ರತಿಶತ ಶೇ. ೪೦.೦೭ರಷ್ಟು ೧೫-೧೯ನೇ ವಯಸ್ಸಿನಲ್ಲಿ ಮದುವೆಯಾಗಿರುತ್ತಾರೆ. ಭಾರತೀಯ ಕಾನೂನು ಹೆಣ್ಣು ಮದುವೆಯಾಗಲು ಕನಿಷ್ಠ ೧೮ ವರ್ಷ ಆಗಬೇಕು ಎನ್ನುತ್ತವೆ. ಮೊದಲ ಮಗುವನ್ನು ೨೨ನೇ ವರ್ಷದಲ್ಲಿ ಹೆರುವುದು ಸೂಕ್ತವೆಂದು ಸುರಕ್ಷಿತ ತಾಯ್ತನ ಎಂದು ವೈದ್ಯರು ಸಲಹೆ ನೀಡುತ್ತಾರೆ. ಕಾಡು, ಗುಡ್ಡಗಳಲ್ಲಿ ವಾಸಿಸುವ

ಇವರಿಗೆ ಮದುವೆ ವಿಚಾರದಲ್ಲಿ ತಮ್ಮದೇ ಕಾನೂನಿಗೆ ಮಹತ್ತ್ವ ನೀಡಿ ಸಂಪ್ರದಾಯ ಪಾಲನೆ ಮಾಡುತ್ತಾರೆ. ಇನ್ನೂ ಮಕ್ಕಳನ್ನು ಪಡೆಯುವ ವಿಚಾರದಲ್ಲಿ ಹೆಣ್ಣಾಗಲಿ, ಗಂಡಾಗಲಿ ಒಂದೇ ಮಕ್ಕಳು ಸಾಕು ಎನ್ನುವ ಲೆಕ್ಕಾಚಾರ ಇಲ್ಲ. ಮದುವೆಯಾದವರು ಮಕ್ಕಳನ್ನು ಹೆರುವುದರಲ್ಲಿ ತಪ್ಪೇನಿದೆ ನಾವು ಮಕ್ಕಳನ್ನು ಹೆರಲಿ ಎಂದೇ ಮದುವೆ ಮಾಡಿದ್ದಲವೆ ಎಂದು ಪ್ರಶ್ನಿಸುತ್ತಾರೆ. ಹೆಣ್ಣು ರಸಜ್ವಾಲೆ ಆಗುವುದರೊಳಗೆ ಮದುವೆ ಮಾಡುವುದು ಇವರ ಪ್ರಕಾರ ಪವಿತ್ರ ಮದುವೆ. ೬-೧೪ ವರ್ಷದೊಲಗೆ ಹಿರಿಯರ ಅಂತಿಮ ತೀರ್ಮಾನದೊಂದಿಗೆಗೆ ಮದುವೆ ಮಾಡಿ ತಮ್ಮ ಜವಾಬ್ದಾರಿಯನ್ನು ಪೂರೈಸಿ ಕೊಳ್ಳುತ್ತಾರೆ.

ಈಗಲೂ ೬ ರಿಂದ ೮ ಮಕ್ಕಳನ್ನು ಹೆರುವ ಹೆಂಗಸರು ಗೌಳಿಕೇರಿಗಳಲ್ಲಿ ಸಾಮಾನ್ಯ. ಸದಾಬೆನ್ನು ನೋವು, ಹೊಟ್ಟೆನೋವು, ಎದೆ ಉರಿ, ನಿಶಕ್ತಿ ಮುಂತಾದ ತೊಂದರೆಗಳಿಂದ ಬಳಲುತ್ತಾರೆ. ೩೦-೩೫ ವರ್ಷವಾಗುತ್ತಲೇ ದೇಹ ತೆಳ್ಳಗಾಗಿ ಕೆನ್ನೆಗಳು ನೆರಿಗೆ ಬಿದ್ದು ತುಂಬ ವಯಸ್ಸಾದವರಂತೆ ಕಾಣುತ್ತಾರೆ. ಬಿಳಿಸ್ರಾವ ಸಮಸ್ಯೆ, ಎಳೆ ವಯಸ್ಸಿನಲ್ಲಿ ಮದುವೆಯಾಗುವುದರಿಂದ ಗರ್ಭಕೋಶ ಸರಿಯಾಗಿ ಬೆಲೆಯುವ ಮೊದಲೇ ಗರ್ಭಧಾರಣೆ, ಸಹಜ ಗರ್ಭಪಾತಗಳಾಗುತ್ತವೆ. ಸ್ವಚ್ಛತೆ, ಆರೋಗ್ಯದ ಕಡೆಗೆ ಲಕ್ಷ್ಯವಿಲ್ಲ. ಗರ್ಭಪಾತದ ನಂತರ ತಜ್ಞ ವೈದ್ಯರಿಂದ ಪರೀಕ್ಷೆ ಮಾಡಿಸಿ ಕೊಳ್ಳುವುದಿಲ್ಲ. ಆರೋಗ್ಯ ಸರಿಯಿಲ್ಲದ ದಿನ ಅಸ್ಪತ್ರೆಗೆ ಬರುವ ಬದಲು ಸಂತೆಯ ದಿನ ಪೇಟೆಗಳ ಆಸ್ಪತ್ರೆಗಳ ಬಾಗಿಲಲ್ಲಿ ಸಾಲು ಹಚ್ಚುತ್ತಾರೆ. ಇನ್ನೂ ಹೆರಿಗೆ ಸಂದರ್ಭದಲ್ಲಿ ಆಸ್ಪತ್ರೆ ದಾಖಲಾಗುವುದು ತೀರಾ ಕಡಿಮೆ. ಪ್ರತಿಶತ ೮೦ರಷ್ಟು ಮಹಿಳೆಯರು ಹಳ್ಳಿಯ ಸೂಲಗಿತ್ತಿ ನೆರವಿನಿಂದ ಹೆರಿಗೆ ಮಾಡಿಸುತ್ತಾರೆ. ಇಲ್ಲಿ ಮಗು ಸತ್ತು ಜನಿಸುವುದು, ಜನಿಸಿದ ತಿಂಗಳು ಅಥವಾ ವರ್ಷದೊಳಗೆ ಮಕ್ಕಳು ಸಾಯುವುದು, ಪ್ರತಿ ನೂರು ಹೆರಿಗೆಗಳಲ್ಲಿ ಕನಿಷ್ಟ ೨-೩ ತಾಯಂದಿರು ಸಾವನ್ನಪ್ಪುವುದು ಇಲ್ಲಿ ಸಾಮಾನ್ಯ. ಪೌಷ್ಠಿಕ ಆಹಾರ ಕೊರತೆ, ರಕ್ತಹೀನತೆ ಸಮಸ್ಯೆಗಳಿಂದ ಇವರು ಬಳಲುತ್ತಾರೆ. ಸಾಮಾನ್ಯವಾಗಿ ಭಾರತೀಯ ಮಹಿಳೆಯರಲ್ಲಿ ರಕ್ತದಲ್ಲಿ ೧೧-೧೨ ಮಿ.ಗ್ರಾಂ ಹಿಮೋಗ್ಲೋಬಿನ್ ಅಂಶವಿರುತ್ತದೆ. ಇನ್ನು ಗರ್ಭಿಣಿ, ಬಾಣಂತಿಯರಂತೂ ತೀವ್ರ ರಕ್ತಹೀನತೆಯಲ್ಲಿ ಬಳಲುವರು. ಪೌಷ್ಠಿಕ ಆಹಾರ ಕೊರತೆಯಿಂದ ರಕ್ತದಲ್ಲಿ ೭-೮ ಮಿಲಿಗ್ರಾಮ್ ಹಿಮೋಗ್ಲೋಬಿನ್ ಅಂಶ ಕೆಲವರಲ್ಲಂತೂ ಇದು ೫ ಮಿ.ಗ್ರಾಂಗೆ ಕುಸಿದ ನಿದರ್ಶನಗಳಿವೆ.

ಸಂತಾನ ನಿಯಂತ್ರಣ ಶಾಶ್ವತ ವಿಧಾನಗಳು ಎಲ್ಲ ಜನಾಂಗಗಳಂತೆ ಇವರಲ್ಲಿಯೂ ಕೇವಲ ಮಹಿಳೆಯರಿಗೆ ಮೀಸಲು ಅನಂತರದಲ್ಲಿ ಪೌಷ್ಠಿಕಾಂಶಗಳ ಕೊರತೆಯಿಂದ ಬೆನ್ನು ನೋವೂ, ಸೊಂಟನೋವು, ಎದೆ ಉರಿ, ಮೈ-ಕೈ ನೋವು, ನಿಶ್ಯಕ್ತಿಯಂತಹ ದೈಹಿಕ ತೊಂದರೆಗಳು ಕಾಣಿಸಿ ಕೊಳ್ಳುತ್ತವೆ. ವೈದ್ಯರು ಪೌಷ್ಠಿಕ ಆಹಾರ ಸೇವನೆ ಮಾಡಲು ಸೂಚಿನೆ ನೀಡಿದರೆ ಇವರು ಸಾದಾ ಆಹಾರವನ್ನು ತಿನ್ನುತ್ತಾರೆ. ಎಳೆ ಶಿಶುವಿಗೆ, ತಾಯಿಗೆ, ಚಿಕ್ಕಮಕ್ಕಳಿಗೂ ಎಲ್ಲರಿಗೂ ಪೌಷ್ಠಿಕ ಆಹಾರ ಅತ್ಯಗತ್ಯ. ಗರ್ಭಿಣಿ, ಬಾಣಂತಿಯರಿಗೆ ೨೬೦೦ ಕ್ಯಾಲೋರಿ, ಮಕ್ಕಳಿಗೆ ೧೧೦೦ ಕ್ಯಾಲೋರಿ ಶಕ್ತಿ ನೀಡಬಲ್ಲ ಪೌಷ್ಠಿಕ ಆಹಾರ ಬೇಕು.

## ಕೋಷ್ಟಕ ೫.೮  ಸಂತಾನಹರಣ ಶಸ್ತ್ರಚಿಕಿತ್ಸೆ ಪಡೆದ ಗೌಳ ಮಹಿಳೆಯರ ಆರೋಗ್ಯಸ್ಥಿತಿ

| ಕ್ರ. ಸಂ. | ಮಹಿಳೆಯ ಹೆಸರು, ವಯಸ್ಸು | ಹಳ್ಳಿ | ಮಕ್ಕಳ ಸಂಖ್ಯೆ | ಚಿಕಿತ್ಸೆಯ ವರ್ಷ | ಆರೋಗ್ಯಸ್ಥಿತಿ | ಪರಿಹಾರ ಪ್ರಯತ್ನ |
|---|---|---|---|---|---|---|
| ೧ | ೨ | ೩ | ೪ | ೫ | ೬ | ೭ |
| ೧. | ಜನ್ನಿಗಂಗೂ ಕೊಕರೆ (೩೫) | ತೆಂಗಿನಕೇರಿ | ೬ | ೧೯೯೭ | ಬಗ್ಗಿ ಕೆಲಸ ಮಾಡಲು ಆಗದು ಬೆನ್ನುನೋವು, ಸೊಂಟ ನೋವು. | ಖಾಸಗಿ ವೈದ್ಯರಿಂದ ಉಪಚಾರ |
| ೨. | ಕೊಂಡಿ ಬಜ್ಜುಪಟಗಾರೆ(೨೮) | " | ೫ | ೧೯೯೪ | ದೇಹ ತೆಳ್ಳಗಾಗಿದೆ, ಮೈಕೈ ನೋವು ಜಾಸ್ತಿ ಕೆಲಸ ಮೊದಲಿನಂತೆ ಮಾಡಲಾಗುತ್ತಿಲ್ಲ. | ಎರಡು ಸಾರಿ ಹುಬ್ಬಳ್ಳಿ ಆಸ್ಪತೆಗೆ ಭೇಟಿ |
| ೩. | ನಾಗಿ ದೊಂಡುಪಾಟಿ(೩೦) | " | ೪ | ೧೯೯೩ | ನಿಶ್ಯಕ್ತಿ, ಹೊಟ್ಟೆಯಲ್ಲಿ ಉರಿ | " |
| ೪. | ಸಗ್ಗೂಬಾಯಿ ಶ್ಯಾಮಾ ಪಟಗಾರೆ(೪೦) | " | ೩ | ೧೯೯೮ | ಆಪರೇಶನ್ ಆಗಿ ೧ವರ್ಷಕ್ಕೆ ಮುಟ್ಟುನಿಂತಿತು. ಕೈಕಾಲು ನೋವು, ಹೊಟ್ಟೆಯಲ್ಲಿ ಉರಿ | " |
| ೫. | ನಕಲಿ ಬಾಬುಜಂಗ್ಲೆ (೩೮) | ಬೊಮ್ಮಡಿಕೊಪ್ಪ | ೪ | ೧೯೯೪ | ಎದೆ ಹುರಿ, ಸೊಂಟನೋವು | " |
| ೬. | ನಕಲಿ ದಾಕ್ಲುಪಟಗಾರೆ (೩೦) | " | ೫ | ೧೯೯೮ | ಆಪರೇಶನ್ ಆಗಿ ೫ ದಿವಸವಾಯಿತು. ಸದ್ಯ ಯಾವ ತೊಂದರೆ ಇಲ್ಲ. | " |
| ೭. | ಬೆಮ್ಮಿಬಾಬು ಪೊಂಡಿ (೨೫) | ಹೊಸಳ್ಳಿ ಕಿರುವತ್ತಿ | ೨ | ೧೯೯೬ | ಹೊಟ್ಟೆಯಲ್ಲಿ ತುಂಬಾ ಉರಿ ಕೆಲಸ ಮಾಡಿದರೆ ಮೈ-ಕೈ ನೋವು | ಖಾಸಗಿ ವೈದ್ಯರಿಂದ ವರ್ಷದಿಂದ ಔಷಧಿ |
| ೮. | ಬಾಗಿಬಾಯಿ ಠಕ್ಕಿಮಲಗುಂಡೆ (೩೫) | " | ೬ | ೧೮೯೯೭ | ಬಿಳಿ ಹೋಗುತ್ತದೆ. | ಯಲ್ಲಾಪುರ, ಶಿರಸಿ, ಹುಬ್ಬಳ್ಳಿ ಆಸ್ಪತ್ರೆ |
| ೯. | ಬಾಗೂಬಾಯಿ ಚಿಕ್ಕುಲಾಂಬೊರೆ(೩೩) | ಕಾರಿಕೊಪ್ಪ | ೪ | ೧೯೯೪ | ತೊಂದರೆ ಇಲ್ಲ | " |
| ೧೦. | ಸಾವೂಬಾಯಿ ಶಾಮೂಜೋರೆ(೩೫) | " | ೫ | ೧೯೯೭ | ಹೊಟ್ಟೆ ಎದೆ ಉರಿಗಳಿಗೆ ಓಡಾಟ | " |

| ೧ | ೨ | ೩ | ೪ | ೫ | ೬ | ೭ |
|---|---|---|---|---|---|---|
| ೧೧. | ಬಯ್ಯಾಬಾಯಿ ದೊಂಡುಬಾಜಾರೆ (೩೦) | " | ೪ | ೧೯೯೭ | ಯಾವಾಗಲೂ ಹೊಟ್ಟೆನೋವು | " |
| ೧೨. | ನಾಗೂಬಾಯಿ ಗಂಗೂಕೊಕರೆ(೩೦) | ಬಡ್ಡಿಗೇರಿ | ೫ | ೧೯೯೪ | ಹೊಟ್ಟೆನೋವು, ತಲೆನೋವು, ಕೈ-ಕಾಲು ಸೆಳೆತ | ಖಾಸಗಿ ವೈದರಿಂದ ಚಿಕಿತ್ಸೆಗಾಗಿ ೩೪ ಸಾವಿರ ರೂ. ಖರ್ಚಾಗಿದೆ. |
| ೧೩. | ಗಂಗೂಬಾಯಿ ಜಾನೂ ಕೊಕರೆ(೨೫) | " | ೫ | ೧೯೯೭ | ಸದಾ ಅನಾರೋಗ್ಯ, ಮೈ-ಕೈ ನೋವು | ಚಿಕಿತ್ಸೆ ಪಡೆದಿಲ್ಲ. |
| ೧೪. | ದೊಂಡುಬಾಯಿ ಜಗ್ಗುಕೊಕರೆ(೩೫) | " | ೬ | ೧೯೯೩ | ಎದೆಉರಿ, ಹೊಟ್ಟೆಉರಿ | ಚಿಕಿತ್ಸೆ ಪಡೆದಿಲ್ಲ. |
| ೧೫. | ಗಂಗೂಬಾಯಿ ಬಾಬು ಬಾಳೆಹಳ್ಳಿ ಕ್ಯಾಥರೇಟ್(೩೦) | ಬಡ್ಡಿಗೇರಿ | ೫ | ೧೯೯೬ | ಎದೆಉರಿ, ಹೊಟ್ಟೆ ಉರಿಯಿಂದ ೧೯೯೭ರಲ್ಲಿ ಸಾವು. | ಚಿಕಿತ್ಸೆ ಪಡೆಯುತ್ತಿಲ್ಲ. |
| ೧೬. | ಬಾಗೂಬಾಯಿ ಜಾಗೂ ಕೊಕರೆ(೩೦) | ಬಡ್ಡಿಗೇರಿ | ೫ | ೧೯೯೨ | ಕೈ-ಕಾಲು ಸೆಳೆತ, ಹೊಟ್ಟೆಯಲ್ಲಿ ಬೆಂಕಿ ಬಿದ್ದ ಹಾಗುಗುತ್ತದೆ. | ಮುಂಡಗೋಡ, ಯಲ್ಲಾಪುರ, ಹುಬ್ಬಳ್ಳಿ ವೈದ್ಯರಲ್ಲಿಗೆ ಹೋಗಿ ೭೮ಸಾವಿರ ರೂ. ಖರ್ಚು |
| ೧೭. | ಗಂಗೂಬಾಯಿ ಗಂಗೂಕೊಕರೆ(೩೦) | " | ೩ | ೧೯೯೩ | ಹೊಟ್ಟೆನೋವು | ಚಿಕಿತ್ಸೆ ಪಡೆದಿಲ್ಲ |
| ೧೮. | ನಾಗೂಬಾಯಿ ಇಟ್ಟು ತಟ್ಟಹಳ್ಳ ಪಾಂಡರಮಿಶೆ(೩೨) | ಹಳಿಯಾಳ | ೩ | ೧೯೯೨ | ಮುಟ್ಟು ಆಗುವುದಿಲ್ಲ, ಕೈ-ಕಾಲು ನೋವು | ಚಿಕಿತ್ಸೆ ಪಡೆದಿಲ್ಲ |
| ೧೯. | ಜನ್ನಾಬಾಯಿ ಸಾವು ಪಾಣೇ(೩೫) | " | ೩ | ೧೯೯೧ | ಹೊಟ್ಟೆಯಲ್ಲಿ ಬೆಂಕಿ ಬಿದ್ದಹಾಗೆ ಆಗುತ್ತದೆ | ಚಿಕಿತ್ಸೆ ಪಡೆದಿಲ್ಲ |

ಆಧಾರ: ಮಹಿಳೆಯರ ಆರೋಗ್ಯ ಸ್ಥಿತಿಗತಿ ವರದಿ ೧೯೯೮೯ ಶಿವಾನಂದ ಕಳವೆ

**ಸಂತಾಹರಣ ಚಿಕಿತ್ಸೆ ಪಡೆದ ಗೌಳ ಮಹಿಳೆಯರ ಆರೋಗ್ಯ ಸ್ಥಿತಿ**

ಇಲ್ಲಿ ಇವರಿಗೆ ಚಿಕಿತ್ಸೆ ಆದನಂತರ ಬರುವ ದೈಹಿಕ ತೊಂದರೆಗಳಿಗೆ ವೈದ್ಯರು ಹೇಳುವುದು ಏನೆಂದರೆ ಇವರು ಒಂದು ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಬಂದಿರುತ್ತಾರೆ. ದೇವರಿಗೆ ವಿರೋಧವಾಗಿ ವರ್ತಿಸಿದ ಪಾಪಪ್ರಜ್ಞೆ ಕಾಡುತ್ತದೆ. ತನಗೆ ಮಾಡುವ ಚಿಕಿತ್ಸಾ ವಿಧಾನ ಯಾವುದು ಅದರ ಸ್ವರೂಪ ಅದರ ಪರಿಣಾಮಗಳೇನು ಎಂಬ ಕನಿಷ್ಟ ಮಾಹಿತಿ ಇಲ್ಲದೇ ಇರುವುದರಿಂದ ಮುಂದೆ ಬರುವ ಎಲ್ಲಾ ದೈಹಿಕ ತೊಂದರೆಗಳನ್ನು ಶಸ್ತ್ರಚಿಕಿತ್ಸೆ ಮೇಲೆ ಹೊಲಿಸುವುದು ಇವರ ರೂಢಿ. ಆದರೆ ಅದರ ಪೌಷ್ಠಿಕ ಆಹಾರದ ಕೊರತೆಯಿಂದ ಈ ರೀತಿ ತೊಂದರೆಗಳನ್ನು ಕಾಣಬಹುದು.

ಆದರೆ ಸಾಂಪ್ರದಾಯಿಕ ಆಹಾರ ಪದ್ಧತಿಗಳು ಅರಣ್ಯನಾಶ ಹಾಗೂ ವೃತ್ತಿ ಬದುಕಿನ ಬದಲಾವಣೆಗಳಿಂದ ಕಣ್ಮರೆಯಾಗುತ್ತಿವೆ. ಇವರು ಬಳಸುತ್ತಿದ್ದ ಕಾಡಿನ ಗಡ್ಡೆ-ಗೆಣಸು, ಸೊಪ್ಪು, ಹಣ್ಣು-ಹಂಪಲುಗಳು ದೇಹಕ್ಕೆ ಅಗತ್ಯ ಪೋಷಕಾಂಶಗಳನ್ನು ಒದಗಿಸುತ್ತಿದ್ದವು. ೭೫ರ ಮೇಲ್ಪಟ್ಟವರನ್ನು ಮಾತನಾಡಿದರೆ ಅವರು ಹೇಳಿರುವುದು ಏನೆಂದರೆ ಗರ್ಭಿಣಿ, ಬಾಣಂತಿಯರಿಗೆ ತಾವು ನೀಡುತ್ತಿದ್ದ ಆಹಾರ ಪದ್ಧತಿಗಳು ದಶಕಗಳ ಇತ್ತೀಚೆಗೆ ಬದಲಾಗುತ್ತಿದೆ ಎನ್ನುತ್ತಾರೆ. ಇದರ ಜೊತೆ ಕಾಡಲ್ಲಿ ಎಮ್ಮೆ ಮೇಯಿಸಲು ಹೋದಾಗ ಇನ್ನೂ ಬೇರೆ ಗಿಡಗಳ ಸೊಪ್ಪು ಸಂಗ್ರಹಿಸಿ ಅಡುಗೆಗೆ ಬಳಸುತ್ತಿದ್ದೆವು. ಈಗ ಎಮ್ಮೆಗಲೆಲ್ಲ ಮೇವಿನ ಸಮಸ್ಯೆ ಹಾಗೂ ರೋಗದಿಂದ ಸಾವನ್ನಪ್ಪಿದ್ದವು. ಹೈನುಗಾರಿಕೆ ವೃತ್ತಿಯೇ ಕೈಬಿಡುತ್ತಿರುವುದರಿಂದ ಹಾಲು ತುಪ್ಪಗಳ ಬಳಕೆಯೂ ಇಲ್ಲ ಎನ್ನುತ್ತಾರೆ.

ಬದಲಾದ ಆಹಾರದ ಕೊರತೆ ಅನಾರೋಗ್ಯದ ಹೆಚ್ಚಾಳಕ್ಕೆ ಕಾರಣವಾಗಿದೆ. ಬೃಹತ್ ಯೋಜನೆ ಗಳಿಂದ ಬದುಕಿನ ನೆಲೆ ತಪ್ಪುತ್ತಿವೆ. ಗಿಡಮೂಲಿಕಾ ಔಷಧಿ ಕಣ್ಮರೆಯಾಗುತ್ತಿದೆ. ಭಾರತೀಯ ಮಹಿಲೆಯ ಅಯರ್ಮಾನ ೧೯೯೧ರಲ್ಲಿ ಶೇ. ೫೭.೮ರಷ್ಟಿತ್ತು. ವನವಾಸಿ ಮಹಿಳೆಯ ಅಯುರ್ಮಾನದಲ್ಲಿ ಅಂತಹ ವ್ಯತ್ಯಾಸಗಳಿಲ್ಲ. ಅದರೆ ಮಹಿಳೆ ತನ್ನ ಜೀವಿತದ ೨೦-೨೫ ವರ್ಷಗಳನ್ನು ತೀವ್ರ ವೃದ್ಧಾಪದ ನೋವುಗಳಲ್ಲಿ ಬಳಲಬೇಕಾಗಿದೆ. ಸರ್ಕಾರ ಆರೋಗ್ಯ ಸಂಬಂಧಿಸಿದಂತೆ ಪ್ರಗತಿ ಕಾರ್ಯಕ್ರಮಗಳನ್ನು ಇವರಿಗೆ ರೂಪಿಸಿದ್ದರೂ ಪರಿಣಾಮಕಾರಿ ಅನುಷ್ಠಾನ ಕಷ್ಟವಾಗಿದೆ. ಗೌಳಿಗರು ಬಳಸುವ ಗಿಡಮೂಲಿಕೆ, ಚಿಕಿತ್ಸಾ ಪದ್ಧತಿಗಳಿಂದಲೇ ಶೇ. ೮೦ರಷ್ಟು ರೋಗಗಳನ್ನು ಗುಣಪಡಿಸುವ ಸಾಮರ್ಥ್ಯವಿದೆ. ಇಷ್ಟೆಲ್ಲಾ ಸಮಸ್ಯೆಗಳ ಮಧ್ಯೆ ಅವರ ಪಾರಂಪರಿಕ ವೈದ್ಯ ಪದ್ಧತಿ ಎನ್ನುವುದು ಇದೆಯಾ ಅದರೂ ಅದನ್ನು ತಮ್ಮ ಸಮುದಾಯದಲ್ಲಿ ಅದನ್ನು ಬಳಸುತ್ತಿದ್ದಾರಾ, ಹೇಗೆ ಎನ್ನುವುದನ್ನು ನಾನು ಕ್ಷೇತ್ರಕಾರ್ಯ ಮಾಡಿದ ಸ್ಥಳಗಳಲ್ಲಿ ಇನ್ನೂ ವೈದ್ಯಪದ್ಧತಿಯನ್ನು ಕಾಣಬಹುದು.

## ೫.೧ ಪಾರಂಪರಿಕ ವೈದ್ಯಪದ್ಧತಿ

ಗೌಳಿಗರು ಅರಣ್ಯದಲ್ಲಿ ನೆಲೆಸಿರುವವರು. ರೋಗ-ರುಜಿನಗಳಿಗೆ ಅಡವಿಯಲ್ಲಿ ದೊರಕುವ ಸಸ್ಯೋತ್ಪನ್ನಗಳಿಂದ ತಯಾರಿಸಿದ ಔಷಧ ಪದ್ಧತಿ ಇವರದ್ದಾಗಿದೆ. ಎಮ್ಮೆ, ಕುರಿ, ಕೋಣ, ಆಕಳು, ಎತ್ತುಗಳೊಂದಿಗೆ ಬದುಕುತ್ತಿರುವ ಗೌಳಿಗರು ಸಹಜವಾಗಿಯೇ ಪಶುವೈದ್ಯದಲ್ಲಿ ಪರಿಣಿತಿ ಪಡೆದಿದ್ದಾರೆ. ಗೌಳಿಗರು ರೂಢಿಸಿಕೊಂಡಿರುವ ವೈದ್ಯೋಪಚಾರಗಳಲ್ಲಿ ಮಾನವ ಹಾಗೂ ಪಶುವೈದ್ಯ ಎಂದು ಎರಡು ಭಾಗ ಮಾಡಬಹುದು. ಸಾಮಾನ್ಯವಾದ ರೋಗಗಳಿಗೆ ಮನೆಮದ್ದು ಕೊಡುವುದು. ಕೊಡುವ ಔಷಧೋಪಚಾರಗಳು ಬಹು ಸರಳವಾದವು. ಅವುಗಳು ಯಾವುದೆಂದರೆ,

**ವಾಂತಿ ಮತ್ತು ಜ್ವರ** ಬಂದಾಗ ಉಳ್ಳಾಗಡ್ಡಿ ಜಜ್ಜಿ ಮೊಸರಿನಲ್ಲಿ ಬೆರೆಸಿ ಕುಡಿಯುವುದಲ್ಲದೆ ಅದನ್ನೇ ಮೈಗೆ ಉಜ್ಜಿಕೊಂಡು ತಲೆಗೆ ವಸ್ತ್ರವೊಂದರಲ್ಲಿ ಕಟ್ಟಿಕೊಳ್ಳುವರು. ಮಕ್ಕಳಿಗಾದರೆ 'ತಳ್ಳಿ ತಪ್ಪಲ'ವನ್ನು ಮೊಸರಿನಲ್ಲಿ ಸೇರಿಸಿ ಮಗುವಿನ ಮೈ ಮತ್ತು ತಲೆಗೆ ತಿಕ್ಕುತ್ತಾರೆ. ಜ್ವರ ಬಿಡುವ ತನಕ ತಿಕ್ಕುವುದು ಪರಿಪಾಠ. ಮೈಕೈ ನೋವು ತೀಕ್ಷ್ಣಗೊಂಡಾಗ ಬಿಳಿ ಉಳ್ಳಾಗಡ್ಡಿ ಮತ್ತು ಮೊಸರಿಗೆ ಬೇಯಿಸಿದ ರಾಗಿ ಬೆರೆಸಿ ಮೈಗೆ ಲೇಪಿಸಿ ತಲೆಗೆ ವಸ್ತ್ರವೊಂದರಲ್ಲಿ ಕಟ್ಟಿ ಮಲಗಿಸುವುದು ಕ್ರಮ. ಬೆಳಗಿನ ಜಾವದ ಹೊತ್ತಿಗೆ ಅದನ್ನು ಬಿಚ್ಚಿ ತೊಳೆದರೆ ನೋವು ಶಮನವಾಗುವುದು. ನೋವು ಮತ್ತಷ್ಟು ತೀವ್ರವಾದಗ ಮೈಕೈಗೆ ಸೀಮೆ ಎಣ್ಣೆಯನ್ನು ತಿಕ್ಕಿ ತೀಡಿ ಆನಂತರ ಬಿಸಿನೀರಿನ ಸ್ನಾನ ಮಾಡಿಸುವುದು ಪದ್ಧತಿ. ತೀವ್ರ ತಲೆನೋವಿಗೆ ಗುರಿಯಾದಾಗ ಇವರು ಈರುಳ್ಳಿಯನ್ನು ಮೊಸರಿನಲ್ಲಿ ಜಜ್ಜಿ ರಸ ತೆಗೆದು ತಲೆಯ ಮೇಲೆ ಕಟ್ಟಿಕೊಂಡು ನಿದ್ದೆ ಹೋಗುತ್ತಾರೆ. ಆ ಮದ್ದಿನಿಂದಲೂ ನೋವು ಶಮನಗೊಳ್ಳದಿದ್ದರೆ ಸೂಜಿಯೊಂದನ್ನು ಚೆನ್ನಾಗಿ ಕಾಯಿಸಿ ಗೇರುಬೀಜಕ್ಕೆ ಚುಚ್ಚಿ, ನಂತರ ಹಣೆ ಮೇಲೆ ಬರೆಯೊಂದನ್ನು ಎಳೆದುಕೊಳ್ಳುತ್ತಾರೆ. ಕೊನೆಗೂ ತಲೆನೋವು ಕಡಿಮೆಯಾಗುವುದು ನಿಶ್ಚಿತ ಎಂದು ಹೇಳುತ್ತಾರೆ. ಇಷ್ಟಾದರೂ ಸಮಾಧಾನವಾಗದಿದ್ದರೆ ಅಡವಿಯಲ್ಲಿ ದೊರಕುವ ಸಾಪ್‌ಸಿಂದಿ ಬೇರನ್ನು ಬಾಯೊಳಗಿರಿಸಿಕೊಡು ಜಗಿ ಜಗಿದು ನೀರು ಕುಡಿಯುತ್ತಾರೆ. ಬಿಡದೆ ವಾರಗಟ್ಟಲೆ ತಲೆನೋವು ಕಾಣಿಸಿಕೊಂಡರೆ ದುಂಬ್ರಹಣ್ಣು ಎಂಬ ಒಂದು ಜಾತಿಯ ಹಣ್ಣನ್ನು ಕಿತ್ತು ಅದರ ಹಯಿಣವನ್ನು ತಲೆಗೆ ಸವರಿಕೊಳ್ಳುವುದು ರೂಢಿ. ಜೊತೆಗೆ ಶುಂಠಿ, ಹವಿಜಾ, ಸಕ್ಕರೆ, ಅರಿಶನಪುಡಿ, ಬಿಬಿವಾ ಇವುಗಳನ್ನು ಸೇರಿಸಿ ಅರೆದು ಕಷಾಯ ಮಾಡಿ ಕುಡಿದರೆ ಕಡಿಮೆಯಾಗುವುದು ಎಂದು ಹೇಳುತ್ತಾರೆ.

**ಗಂಟಲು ನೋವು** ನಿವಾರಿಸಕೊಳ್ಳುವ ಬಗೆಯಂತೂ ತೀರಾ ಸಾಮಾನ್ಯವಾದುದು. ಸಾಸಿವೆಯನ್ನು ಹುಡಿ ಮಾಡಿ ಅದಕ್ಕೆ ಜೇನುತುಪ್ಪ ಸೇರಿಸಿ ಗಂಟಲಿಗೆ ಲೇಪಿಸುವುದು ಒಂದು ಬಗೆಯಾದರೆ ಅದಕ್ಕೆ ಸುಣ್ಣ ಬೆಲ್ಲ ಸೇರಿಸಿ ಲೇಪಿಸುವ ಜನಪ್ರಿಯ ವಿಧಾನವೂ ಇವರಿಗೆ ತಿಳಿದಿದೆ.

**ಹೊಟ್ಟೆನೋವು** ಗೌಳಿಗರಲ್ಲಿ ಪದೇ ಪದೇ ಕಾಣಿಸಿಕೊಳ್ಳುವ ರೋಗವೆಂದರೆ ಹೊಟ್ಟೆನೋವು. ಇದವರಲ್ಲಿ ಹೊಟ್ಟೆನೊವಿನಿಂದ ನರಳುವವರಿಗೆ ಕಾಳು ಜೀರಿಗೆ ತಿನ್ನಿಸುವುದು ಕ್ರಮ. ಹೊಟ್ಟೆ ಉಬ್ಬರಕ್ಕೂ ಅದೇ ಮದ್ದನ್ನು ಕೊಡುವುದು ರೂಢಿ. ಮಕ್ಕಳಲ್ಲಿ ಈ ರೋಗ ಕಾಣಿಸಿಕೊಂಡಾಗ 'ತರಳಮುಳ'

ಎಂಬ ಬೇರನ್ನು ತಂದು ಅದರ ರಸವನ್ನು ಕುಡಿಸುವುದು ಸಾಮಾನ್ಯ. ನಿಸಿರಿ ಬೇರನ್ನು ಕೂಡ ರಸ ತೆಗೆದು ಕುಡಿಸುವುದುಂಟು. ಹೊಟ್ಟೆಯ ಕೆಳಭಾಗದಲ್ಲಿ ನೋವಿದ್ದರೆ 'ಭಟ್ಟಿ ಇಳಿದಿದೆ' ಎಂದು ತಿಳಿಯುತ್ತಾರೆ. ನೋವಿದ್ದ ಜಾಗಕ್ಕೆ ಚೆನ್ನಾಗಿ ಎಣ್ಣೆ ಸವರಿ ಅದನ್ನು ತೀಕ್ಕಿ ತೀಡಿ ದೀಪವೊಂದನ್ನು ಹೊತ್ತಿಸಿಟ್ಟು ಚೊಂಬನ್ನು ಬೋರಲು ಹಾಕುತ್ತಾರೆ. ಅದು ಬಿಗಿಯಾಗಿ ಕಚ್ಚಿಕೊಂಡರೆ ಭಟ್ಟಿ ಸರಿಹೋಗಿದೆ ಎಂದು ವ್ಯಾಖ್ಯಾನಿಸುತ್ತಾರೆ.

**ಎದೆನೋವು** ಬಂದಾಗ ಉಸಲ್‌ಮುಳ್ಳು ಲವಳಸರ, ಅದರ ಕಾಯಿಯನ್ನು ಜಜ್ಜಿ ರಸ ತೆಗೆದು ನೋವಿದ್ದಲ್ಲಿಗೆ ಲೇಪಿಸುತ್ತಾರೆ. ಇಷ್ಟಾದರೂ ನೋವು ಕಡಿಮೆಯಾಗದಿದ್ದರೆ ಇನ್ನೊಂದು ಮದ್ದನ್ನು ಮಾಡುತ್ತಾರೆ. ಎರಡು ಮೂರು ವರ್ಷಗಳಷ್ಟು ಹಳೆಯದಾದ ಸೆಂಡ ಕುಂಬಳಕಾಯಿಯ ನೀರನ್ನು ತೆಗೆದಿಟ್ಟಿರುತ್ತಾರೆ. ಆ ನೀರಿನಲ್ಲಿ ಬೆಳೆದ ಅಣಬೆಯನ್ನು ತಿಂದರೆ ನೋವು ಶಮನವಾಗುವುದು ನಿಶ್ಚಯ ಎಂದು ಹೇಳುತ್ತಾರೆ.

ಇತರ ಜಾತಿ ಸಮುದಾಯಗಳಲ್ಲಿ ಪ್ರಚಲಿತವಿರುವ ಚಿಕಿತ್ಸಾವಿಧಾನಗಳು ಇವರಲ್ಲೂ ಕಂಡು ಬರುತ್ತದೆ. ಕೀಲುನೋವಿಗೆ ನೀಡುವ ಚಿಕಿತ್ಸೆ ಅದಕ್ಕೆ ಒಂದು ನಿದರ್ಶನ. ಒಲವಾಗಿಡ, ಜಾಯೀಕಾಯಿ, ಜೀರಿಗೆ, ದಾಲ್ ಚಿನ್ನಿ, ಸಾಂಬಾರ್ ಪದಾರ್ಥಗಳನ್ನು ಕುಟ್ಟಿ ದೊಡ್ಡ ಪಾತ್ರೆಯಲ್ಲಿಟ್ಟು ಕುದಿಸಿ ಅದರ ಆವಿ ಹೊರಗೆ ಹೋಗುವಂತೆ ಮಾಡುತ್ತಾರೆ. ರೋಗಿಗೆ ಮುಸುಕು ಹಾಕಿ ಕೂರಿಸಿ ಪಾತ್ರೆಯ ಬಾಯಿ ತೆರೆದು ಅದರ ಹವಾವನ್ನು ಅವನು ಕುಡಿಯುವಂತೆ ಮಾಡುತ್ತಾರೆ. ನರದೋಷದಿಂದ ಆಗಿದ್ದರೆ ಈ ಚಿಕಿತ್ಸೆಯಿಂದ ನೋವು ಶಮನವಾಗುವುದು.

**ಶಸ್ತ್ರ ಚಿಕಿತ್ಸಾಕ್ರಮ**

ಗೌಳಿಗರಿಗೆ ಶಸ್ತ್ರ ಚಿಕಿತ್ಸಾ ಪರಿಜ್ಞಾನವೂ ಉಂಟು. ಆದರೆ ಈ ಶಸ್ತ್ರ ಚಿಕಿತ್ಸಾಕ್ರಮ ಅವರಿಗೆ ವಿಶಿಷ್ಟವಾದುದುಗಾಗಿದೆ. ಕೈಕಾಲು ಮುರಿದುಕೊಡಾಗ ನಡೆಸುವ ಚಿಕಿತ್ಸೆ ಅದಕ್ಕೆ ಉತ್ತಮ ನಿದರ್ಶನ. ಕೈಕಾಲು ಮುರಿದುಕೊಂಡಾಗ 'ಪಡಗೂಸ್' ಗಿಡದ ತೊಗಟೆ ತೆಗೆದು ಕಟ್ಟುವುದು ಸಾಮಾನ್ಯ. ಆ ತೊಗಟೆಯನ್ನು ಕುಟ್ಟಿ ಹುಡಿ ಮಾಡಿ ಅದಕ್ಕೆ ಮೊಟ್ಟೆ ಸೇರಿಸಿ ಕೈ ಕಾಲನ್ನು ಮಟ್ಟವಾಗಿಟ್ಟು ಅದನ್ನು ಲೇಪಿಸುತ್ತಾರೆ. ದನ ಕರುಗಳಿಗಿಗಾದರೆ ಬಿದಿರಿನ ದಬ್ಬೆ ಕಟ್ಟುವುದು ಕ್ರಮ. ರೋಗಿಗೆ ಜೋಳ ಅಥವಾ ರಾಗಿಯ ಪದಾರ್ಥಗಳನ್ನು ಸೇವಿಸಲು ಉತ್ತೇಜಿಸುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ಕೆಲವು ದೊಡ್ಡಿಗಳಲ್ಲಿ ಪಡಗೊಸ್ ಗಿಡಕ್ಕೆ ಬದಲಾಗಿ 'ಗುಳಂಬ ಮರ'ದ ಚೆಕ್ಕೆಯನ್ನು ಕುಟ್ಟಿ ಪುಡಿ ಮಾಡಿ ಬೇಯಿಸಿ ಕಾಲಿಗೆ ಲೇಪಿಸಿ ಅದಕ್ಕೆ ದಬ್ಬೆಯಿಟ್ಟು ನಾರಿನಿಂದ ಬಿಗಿಯಾಗಿ ಕಟ್ಟಿ ಶುಶ್ರೂಷೆ ಮಾಡುತ್ತಾರೆ. ಮೂರು ಅಥವಾ ನಾಲ್ಕು ತಿಂಗಳವರೆಗೆ ಈ ಕಟ್ಟನ್ನು ಬಿಚ್ಚುವುದಿಲ್ಲ.

**ಹುಚ್ಚುನಾಯಿ** ಕಡಿತಕ್ಕೂ ಇವರಲ್ಲಿ ಮದ್ದುಂಟು. ಹುರುಬಿ ಗಿಡದ ಬಳ್ಳಿಯನ್ನು ಅದರ ಹೂವಿನ ಮುಂದಿನ ಎಸಳನ್ನು ತೆಗೆದುಕೊಂಡು ಅದರ ಕಾಂಡವನ್ನು ತೆಗೆದು ಪುಡಿಮಾಡಿ ಬೆಲ್ಲ ಸೇರಿಸಿ ಗುಳಿಗೆ ಮಾಡಿ ತಿನ್ನಿಸುತ್ತಾರೆ. ಅವಳ ಗಿಡಿದ ಕಾಂಡವನ್ನು ತೆಯ್ದು ಮಾಡಿ ಅದನ್ನು ಗಾಯಕ್ಕೆ

ಹಚ್ಚುವರು. ಗಾಯವು ಶೀಘ್ರವಾಗಿ ಗುಣ ಹೊಂದುವುದು. ಕೆಲವು ಕಡೆಗಳಲ್ಲಿ ಇಪ್ಪತ್ತೊಂದು ದಿನಗಳವರೆಗೆ ಮಜ್ಜಿಗೆಯಲ್ಲಿ ಮದ್ದು ತಿನನಿಸುವ ರೂಢಿಯುಂಟು. ರೋಗಿಗೆ ಇಪ್ಪತ್ತೊಂದು ದಿನ ಕಳೆಯುವವರೆಗೆ ಊಟವನ್ನೇ ಕೊಡದೆ ಪಥ್ಯ ನಡೆಸುವುದು ಕ್ರಮ.

**ನರರೋಗ** ಅರೆದಲೆ ನೋವಿನ ಶಮನಕ್ಕೆ ಇವರು ನೀಡುವ ಚಿಕಿತ್ಸೆ ನರರೋಗದಲ್ಲೂ ಇವರಿಗೆ ಪರಿಜ್ಞಾನವಿರುವುದನ್ನು ದೃಢೀಕರಿಸುತ್ತದೆ. ಅರೆದಲೆ ನೋವಿನಿಂದ ನರಳುವ ವ್ಯಕ್ತಿಯ ಕೊರಳಿಗೆ ಒಂದು ವಸ್ತ್ರದ ಕಟ್ಟು ಹಾಕುವರು. ಆಗ ಹಣೆಯಲ್ಲಿ ಒಂದು ನರ ಉಬ್ಬಿದಂತೆ ಕಾಣುವುದು. ಆ ನರವನ್ನು ಕತ್ತರಿಸಿ ರಕ್ತ ತೆಗೆದಾಗ ಅರೆದಲೆ ನೋವು ಶಮನವಾಗುವುದು.

ಗೌಳಿಗರ ಮನೆ ಮದ್ದಿನಲ್ಲಿ ಕಿವಿ, ಮೂಗು, ಬಾಯಿ ರೋಗಗಳಿಗೂ ಮದ್ದುಂಟು. ಹಲ್ಲುನೋವು ಬಂದಾಗ ಪಪ್ಪಾಯಿ ಹಣ್ಣು ಕಾಯಿಯ ಅಂಟು ದ್ರವವನ್ನು ಶೇಖರಿಸಿ ನೋವಿನ ಭಾಗಕ್ಕೆ ಲೇಪಿಸುತ್ತಾರೆ. ಕಿವಿ ನೋವು ಬಂದಾಗ 'ಸೀತೆ ದಂಡೆ' ಎಲೆಯನ್ನು ಕಾಯಿಸಿ ಅದರ ನೀರನ್ನು ಹಿಂಡಿ ಕಿವಿಗೆ ಬಿಟ್ಟುಕೊಳ್ಳುತ್ತಾರೆ. ಕಣ್ಣು ನೋವು ಬಂದಾಗ ಸಾಮಾನ್ಯವಾಗಿ ಮೊಲೆ ಹಾಲು ಅಥವಾ ಬೆಣ್ಣೆ ಹಾಕಿ ತಿಕ್ಕುತ್ತಾರೆ. ಕಣ್ಣಿಗೆ ಪೆಟ್ಟಾದಾಗ ಗಂಧದ ಚಕ್ಕೆ ತೀಡಿ ಅದರ ರಸವನ್ನು ಕಣ್ಣಿಗೆ ಬಿಡುತ್ತಾರೆ. ನೆಗಡಿಯಾದಾಗ ಉಳ್ಳಾಗಡ್ಡೆ, ಬೆಳ್ಳುಳ್ಳಿ, ಮೆಣಸಿನಕಾಳು, ಅರಿಶಿನ ಹಾಕಿ ಕಷಾಯ ಮಾಡಿ ಕುಡಿಯುತ್ತಾರೆ. ಮೂಗು ನೋವಾದಾಗ ಕಟುವಾಸನೆ ಇರುವ ಯಾವುದೇ ಹೂವಿನ ಸುವಾಸನೆಯನ್ನು ಆಘ್ರಾಣಿಸಿದರೆ ಶಮನವಾಗುತ್ತದೆ ಎಂದು ಹೇಳುತ್ತಾರೆ.

ಭೇದಿಯಾದಾಗ ನೆಲ್ಲಿಕಾಯಿ ಒಣಗಿಸಿ ಪುಡಿ ಮಾಡಿ ಮೊಸರಿನಲ್ಲಿ ಬೆರೆಸಿ ಕುಡಿಸುತ್ತಾರೆ. ರಕ್ತ ಭೇದಿಯಾದ ಸಂದರ್ಭದಲ್ಲಿ ರಕ್ತ ಹೊನ್ನೆಮರದ ಚಕ್ಕೆ ತೆಗೆದು ಆಕಳ ಹಾಲಿನಲ್ಲಿ ಜಜ್ಜಿ ಕುಡಿಸುತ್ತಾರೆ. ಅಡವಿಯಲ್ಲಿ ಸಂಚಾರಿಸುವ ಇವರಿಗೆ ಅಡವಿಯಲ್ಲಿ ಸುತ್ತಾಡುವ ಎಲ್ಲ ಪ್ರಾಣಿಗಳ ಪರಿಚಯವಿದೆ.ಈ ಕಾಡು ಪ್ರಾಣಿಗಳ ದೇಹದ ಬೇರೆ ಬೇರೆ ಅಂಗಗಳನ್ನು ಬೇರೆ ಬೇರೆ ರೋಗಗಳಿಗೆ ಮದ್ದಾಗಿ ಬಳಸಿಕೊಳ್ಳುವ ಪರಿಜ್ಞಾನವುಂಟು. ಕರಡಿ ತುಪ್ಪವನ್ನು ಕೂದಲು ಇಲ್ಲದಿರುವ ಕಡೆ ಸವರಿದರೆ ಕೂದಲು ಬರುತ್ತೆ. ನರಿ ನಾಲಗೆಯನ್ನು ಕೆಮ್ಮು ಬಂದಾಗ ಕಷಾಯಮಾಡಿ ಕುಡಿಸಿದರೆ ಕೆಮ್ಮು ಶಮನವಾಗುತ್ತದೆ ಎಂಬ ತಿಳುವಳಿಕೆಯಿದೆ. ಮುಂಗುಸಿಯ ಮಾಂಸಕ್ಕೆ ಔಷಧಿಯ ಗುಣವುಂಟು. ಕೈಕಾಲು, ಸೊಂಟ ಭಾಗಗಳಿಗೆ ಪೆಟ್ಟು ಮಾಡಿಕೊಂಡವರು ಮುಂಗಸಿಯ ಮಾಂಸವನ್ನು ಬೇಯಿಸಿ ತಿಂದರೆ ಬಹುಬೇಗ ನೋವು ಶಮನವಾಗುವುದು. ಹಂದಿಮಾಂಸವನ್ನು ಹೊಟ್ಟೆನೋವಿನಿಂದ ನರಳುವ ರೋಗಿಗಳಿಗೆ ಉಣಿಸುತ್ತಾರೆ. ಹೀಗೆ ಲೆಕ್ಕವಿಲ್ಲದಷ್ಟು ಅಮೂಲ್ಯವಾದ ಮಾನವ ವೈದ್ಯಪದ್ಧತಿ ಗೌಳಿಗರಲ್ಲಿದೆ. ಈಗ ಗೌಳಿಗರು ಇತರರಂತೆ ಕಾಯಿಲೆ ಬಿದ್ದಾಗ ಹತ್ತಿರದ ಆಸ್ಪತ್ರೆಗಳಿಗೆ ಹೋಗುತ್ತಿದ್ದಾರೆ.

**ಪಶುವೈದ್ಯ**

ಕಚ್ಚೆಗೌಳಿಗರು ಪಶುವೈದ್ಯದಲ್ಲೂ ತುಂಬ ಪರಿಣತರು. ಈಗಲೂ ಸುತ್ತಲು ಹಳ್ಳಿಯ ಜನರು ತಮ್ಮ ದನಕರುಗಳಿಗೆ ರೋಗ ಅಂಟಿಕೊಂಡರೆ ಅವರು ಸಾಮಾನ್ಯವಾಗಿ ಮೊದಲು ಸಂಪರ್ಕಿಸುವುದು ಗೌಳಿಗರನ್ನೇ.

ಗೌಳಿಗರು ಹೆಚ್ಚಾಗಿ ಕಾಡಿನಲ್ಲಿಯೇ ತಮ್ಮ ದನಕರುಗಳನ್ನು ಮೇಯಿಸುವುದರಿಂದ ಆ ಪರಿಸರಕ್ಕೆ ತಕ್ಕ ಔಷಧ ಬಳಸುವುದನ್ನು ರೂಢಿಸಿಕೊಂಡಿದ್ದಾರೆ. ಮೂಲತಃ ಗೋಪಾಲಕರಾದ ಗೌಳಿಗರು, ತಮಗಿಂತ ಹೆಚ್ಚಾಗಿ ತಮ್ಮ ಗೋವುಗಳಿಗೆ ರೋಗರುಜಿನಗಳು ಬಂದಾಗ ಆತಂಕಪಡುವುದು ಸಾಮಾನ್ಯ. ಇವರ ಎಮ್ಮೆ ದನಕರುಗಳಿಗೆ ಸಾಮಾನ್ಯವಾಗಿ ಬರುವ ರೋಗಗಳೆಂದರೆ, ಕಾಲುಬೇನೆ, ಗಂಟಲುರೋಗ, ಸಪ್ಪೆರೋಗ, ಹೊಟ್ಟೆ ಉಬ್ಬುರೋಗ, ಇತ್ಯಾದಿ ರೋಗವನ್ನು ಪತ್ತೆ ಹಚ್ಚುವ ರೀತಿ, ಅದಕ್ಕೆ ನೀಡುವ ಮದ್ದು, ಚಿಕಿತ್ಸೆ ನೀಡುವ ರೀತಿ ಒಂದೊಂದೂ ಗೌಳಿಗರಿಗೇ ವಿಶಿಷ್ಟವಾಗಿವೆ.

ಗೌಳಿಗರ ಪ್ರಕಾರ ಎಮ್ಮೆ ಮತ್ತು ಆಕಳುಗಳಿಗೆ ಕಾಲುಬೇನೆ ರೋಗ ಬರುವುದನ್ನು ಮುಂದಾಗಿಯೇ ಗುರುತಿಸಬಹುದು. ನಾಲಿಗೆ ಚರ್ಮ ಕಿತ್ತು ಹೋಗಿ ಬಾಯಲ್ಲಿ ನೀರು ಸುರಿದರೆ, ಕಾಲು ಸಂದಿ ಕೊಳೆತಿದ್ದರೆ ಅದನ್ನು 'ಕಾಲುಬೇನೆ ರೋಗ' ಎಂದು ಅರಿತುಕೊಳ್ಳಬೇಕು. ಬೀಜದ ಹೋರಿಗೆ ಈ ರೋಗಬಂದರೆ ಒಂಬತ್ತು ಅಥವಾ ಹತ್ತು ದಿನಗಳು ಅದನ್ನು ಕೈಯಿಂದ ಸ್ಪರ್ಶಿಸಬಾರದು. ಒಳ್ಳೆಣ್ಣೆಗೆ ಡಾಂಬ್ರುಗುಳಿಗೆ ಹಾಕಿ ಕುದಿಸಿ ಕೋಲಿಗೆ ಬಟ್ಟೆ ಸುತ್ತಿ ಕುಂಚ ಮಾಡಿಕೊಂಡು ಕಾಲಿಗೆ ಲೇಪಿಸಬೇಕು. ಈ ಔಷಧದ ವಾಸನೆಗೆ ನೊಣ ಕೂರುವುದಿಲ್ಲ. ಹತ್ತು ಹನ್ನೆರಡು ದಿನಗಳಾದರೂ ಗುಣ ಕಾಣದಿದ್ದಾಗ ಜಾನುವಾರನ್ನು ಕಟ್ಟಿ ಕೆಡವಿ ಕಾಲಿನ ಗೊರಸುಗಳಿಂದ ಹುಳು ತೆಗೆದು ಮದ್ದನ್ನು ಲೇಪಿಸಬೇಕು. ಬೇಲಿ ಕಳ್ಳಿಗೆ ತಂಬಾಕಿನ ಹುಡಿ ಸೇರಿಸಿ ಅದಕ್ಕೆ ಸುಣ್ಣ ಮಿಶ್ರಮಾಡಿ ಮದ್ದು ಮಾಡಿರಬೇಕು. ಈ ಮದ್ದನ್ನು ಪ್ರತಿ ಮೂರು ದಿನಗಳಿಗೊಮ್ಮೆ ಕಾಲಿಗೆ ಹಾಕಿ ಕಟ್ಟಬೇಕು. ಹುಳುಗಳು ಸತ್ತು ಗಾಯ ಗುಣವಾಗುವುದು. ಹೆಚ್ಚು ಹುಳುಗಳಿದ್ದರೆ ಕಾಲಿಗೆ ಬೇವಿನೆಣ್ಣೆ ಸವರಬೇಕು. ಗಾಯ ಮಾಯುವುದು.

ಗೌಳಿಗರ ಜಾನುವಾರುಗಳಲ್ಲಿ ಆಗಾಗ ಕಾಣಿಸಿಕೊಳ್ಳುವ ಮತ್ತೊಂದು ರೋಗವೆಂದರೆ ಸಪ್ಪೆರೋಗ. ವರ್ಷಕ್ಕೊಂದು ಕರು ಹಾಕುವ ಆಕಳು ಎಮ್ಮೆ ಈ ರೋಗಕ್ಕೆ ಗುರಿಯಾಗುವುದು ಹೆಚ್ಚು. ಈ ರೋಗ ಬಂದಾಗ ಜಾನುವಾರುಗಳು ಕಾಲುಗಳನ್ನು ಅಲ್ಲಾಡಿಸದೆ ನೆಟ್ಟಗೆ ನಡೆಯಲು ಪ್ರಯತ್ನಿಸುವುದು ಕಂಡುಬರುತ್ತದೆ. ಈ ಲಕ್ಷಣ ಕಾಣಿಸಿಕೊಂಡ ಒಂಬತ್ತು ದಿನಗಳ ಕಾಲ ರೋಗಕಕೆ ತುತ್ತಾದ ಜಾನುವಾರನ್ನು ಯಾರೂ ಮುಟ್ಟುವುದಿಲ್ಲ. ಈ ಕಾಯಿಲೆಯನ್ನು ಗುಣ ಮಾಡಲು ಬರೆ ಹಾಕುವುದು ಕ್ರಮ. ಈ ಬರೆಯನ್ನು ಕಾಲಿನ ಸಂದಿಗೆ ಹಾಕುವುದು ವಾಡಿಕೆ. ಕಬ್ಬಿಣದ ಸಲಾಕೆಯನ್ನು ಕೆಂಪಗೆ ಕಾಯಿಸಿ ಕುಂಟುವ ಕಾಲಿನ ಮುಂದಿನ ಭಾಕ್ಕೆ ಚಪ್ಪೆ ಎಲೆಬರೆ ಹಾಕುತಾರೆ. ಬರೆ ಹಾಕಿದಾಗ ಬೇನೆ ಕಡಿಮೆಯಾಗುವ ಸಂಭವವಿರುತ್ತದೆ. ಒಮ್ಮೆ ಬೇನೆ ಹಿಡಿದುಕೊಂಡರೆ ಜಾನುವಾರು ಬದುಕುವುದು ಕಷ್ಟ.

ಗೌಳಿಗರ ಎಮ್ಮೆ ಅಥವಾ ಆಕಳುಗಳಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ಇನ್ನೊಂದು ರೋಗವೆಂದರೆ ಹೊಟ್ಟೆ ಉಬ್ಬುರೋಗ. ಹೊಟ್ಟೆ ಉಬ್ಬಿಕೊಳ್ಳುವುದು, ಮೇವು ತಿನ್ನದಿರುವುದು ಪುಗ್ಗ ಊದಿದಂತೆ ದನಕರುಗಳ ಹೊಟ್ಟೆ ಊದಿಕೊಳ್ಳುವುದು ರೋಗದ ಲಕ್ಷಣವಾಗಿರುತ್ತದೆ. ಅಡವಿಯಲ್ಲಿ

ಹುಲ್ಲು ಮೇಯುವಾಗ ಹುಲ್ಲಿನ ಜೊತೆಯಲ್ಲಿ ಹಾವನ್ನು ತಿಂದಿದ್ದಾಗಲೂ ಹೊಟ್ಟೆ ಉಬ್ಬುವ ಸಂಭವವಿರುತ್ತದೆ ಎಂಬುದಾಗಿ ತಿಳಿಸುತ್ತಾರೆ. ಉಬ್ಬಿದ ಹೊಟ್ಟೆಯನ್ನು ಇಳಿಸಲು ಗಿಡಮೂಲಿಕೆ ಔಷಧವನ್ನು ಮಾಡುವುದುಂಟು. ಪ್ರಥಮ ಚಿಕಿತ್ಸೆಯಾಗಿ ಸಾಪ್ ಸಂದಿ, ಗನ್ನಸ್ ಖಾಂಡ್, ತುಟ್ಟಿ, ಹುಲ್ಲಿನ ಜೊತೆ ಸೇರಿಸಿಕೊಡಲಾಗುತ್ತದೆ. ಬಜೆ, ಶುಂಠಿ, ಮೆಣಸು, ಬೆಳ್ಳುಳ್ಳಿ ಕುಟ್ಟಿ ಚೆನ್ನಾಗಿ ಪುಡಿ ಮಾಡಿ ರಸ ತೆಗೆದು ಮಜ್ಜಿಗೆ ಅಥವಾ ಮೊಸರಿನಲ್ಲಿ ಕುಡಿಸಲಾಗುತ್ತದೆ.

ಎಮ್ಮೆ ಅಥವಾ ಆಕಳಿಗೆ ಬರುವ ಮತ್ತೊಂದು ರೋಗವೆಂದರೆ ಕುಂದುರೋಗ. ಎದೆಗಟ್ಟಿ ಆಗುವುದು ಈ ರೋಗದ ಲಕ್ಷಣ. ನೈಸರ್ಗಿಕ ವಿಧಾನ ಮತ್ತು ಮಾಂತ್ರಿಕ ವಿಧಾನ ಎರಡೂ ಬಗೆಯಲ್ಲಿ ಇದಕ್ಕೆ ಮದ್ದುಂಟು. ಮೂಡಿ ಗಿಡದ ತೊಗಟೆ ತೆಗೆದು ಕುಟ್ಟಿ ಪುಡಿಮಾಡಿ ಎರಡು ಬಾಟಲಿ ಔಷಧ ತಯಾರಿಸಿ ಕುಡಿಸಬೇಕು. ಒಂದೆರಡು ದಿನದಲ್ಲಿ ಸೆಗಣಿ ಗಟ್ಟಿಯಾಗುತ್ತದೆ. ಗುಣಮುಖ ವಾಗದಿದ್ದರೆ. ಮನುಷ್ಯರ ತಲೆಗೂದಲು, ಕೋಳಿಪುಕ್ಕ, ಕೋಳಿ ಮೊಟ್ಟೆ, ಓಡು, ಬಿಳಿ ಹುಲ್ಲು, ಕಾಳುಮೆಣಸು ಇತ್ಯಾದಿಗಳನ್ನು ಒಟ್ಟು ಸೇರಿಸಿ ಒಂದು ಮಡಿಕೆಯಲ್ಲಿ ಇರಿಸಿ ಬೆಂಕಿ ಹಾಕಿ ಹೊಗೆ ಮಾಡಿ ಎಮ್ಮೆ ಅಥವಾ ಆಕಳ ಹೊಟ್ಟೆಯೊಳಗೆ ಹೋಗುವಂತೆ ಮಾಡಬೇಕು. ಕುಂದುರೋಗ ದೂರಾಗುವುದು.

ಎಮ್ಮೆ ಅಥವಾ ಆಕಳ ಬಾಲ ಹರಿದಾಗ ಗೌಳಿಗರು ಬಹಳ ನಿಗಾವಹಿಸುತ್ತಾರೆ. ಚರಿಗೆಯೊಂದರಲ್ಲಿ ಒಳ್ಳೆಣ್ಣೆ ಮತ್ತು ಉಳ್ಳಾಗಡ್ಡಿಯನ್ನು ಚೆನ್ನಾಗಿ ಕುದಿಸಿ ಬಾಲವನ್ನು ಆ ಕುದಿಯುವ ಪಾತ್ರೆಗೆ ಹಾಕಿದರೆ ಬಾಲ ಚಲೋ ಆಗುವುದು ಎಂದು ಹೇಳುತ್ತಾರೆ.

ಎಮ್ಮೆ/ಆಕಳಿಗೆ ಹುಳು ಆದಾಗ ರವಿವಾರ ಅಥವಾ ಗುರುವಾರ ಸಂಜೆ ಹೊತ್ತಿನಲ್ಲಿ ಕಾಡಿಗೆ ಹೋಗಿ ಕವಲುಗಿಡವೊಂದಕ್ಕೆ ಪೂಜೆ ಮಾಡಿ ಕಾಯಿ ಒಡೆದು ಅದರ ಬೇರು ತರುತ್ತಾರೆ. ಆ ಬೇರನ್ನು ತರುವಾಗ ತರುವವನ ಮೇಲೆ ಇತರರ ನೆರಳು ಬೀಳಬಾರದು ಎಂಬುದು ನಿಷೇಧ. ಹಾಗೆ ತಂದ ಬೇರನ್ನು ಅರೆದು ಹೊಟ್ಟೆಗೆ ಕೊಟ್ಟರೆ ಮೂರು ದಿನಗಳ ಆನಂತರ ಹುಳು ಬಿದ್ದು ಹೋಗುತ್ತದೆ. ನೋವು ಶಮನವಾಗುತ್ತದೆ.

ಎಮ್ಮೆ/ಆಕಳಿಗೆ ಹಾವು ಕಡಿದಾಗ ಸಾಮಾನ್ಯವಾಇಗ ಪಾಂಗಳ ಬಾರಂದಿ ಗಿಡ ಎಂಬ ಒಂದು ಜಾತಿಯ ಸಸ್ಯದ ರಸವನ್ನು ಕುಡಿಸುತ್ತಾರೆ. ಅದು ಸರಿಯಾದ ಪರಿಣಾಮ ಬೀರದಿದ್ದಲ್ಲಿ ಉಡದ ಎಣ್ಣೆಗೆ ಮಿರ್ಗಿಕಾಯನ್ನು ಒಡೆದು ಹಾಕಿ ಅರ್ಧ ಕಾಯನ್ನು ಎಣಣೆಯಲ್ಲಿ ಅದ್ದಿ ಹೊಟ್ಟೆಗೆ ತಿನ್ನಲು ಕೊಡುತ್ತಾರೆ. ಉಳಿದದ್ದನ್ನು ಮೂಗಿಗೆ ಹಿಡಿದು ಕಣ್ಣು ಮತ್ತು ನೆತ್ತಿಗೆ ಲೇಪಿಸುತ್ತಾರೆ.

ಎಮ್ಮೆ/ಆಕಳ ಎದೆಯೊಳಗೆ ಬಾವು ಅಥವಾ ಕುರ ಎದಿದ್ದರೆ ಆ ಯಾತನೆಯನ್ನು ಸಹಿಸಲಾಗದೆ ಎಮ್ಮೆ ಆಕಳು ಹೊರಳಾಡುತ್ತಿರುತ್ತದೆಂದು ಹೇಳುತ್ತಾರೆ. ಬಾವು ಅಥವಾ ಕುರವನ್ನು ಒಡೆದರೆ ಪ್ರಾಣಿಗೆ ನೋವು ಕಡಿಮೆಯಾಗಿ ಕ್ರಮೇಣ ಚೇತರಿಸಿಕೊಳ್ಳುತ್ತದೆ. ಅದಕ್ಕಾಗಿ ಇವರು ಬಹು ಸರಳ ರೀತಿಯಲ್ಲಿ ಚಿಕಿತ್ಸೆ ನೀಡುವ ಪ್ರಯತ್ನ ಮಾಡುತ್ತಾರೆ. ಕೈ ಉಗುರು ತೆಗೆದು ಚೆನ್ನಾಗಿ ಸಾಬೂನು

ತಿಕ್ಕಿಕೊಂಡು ಬಿಳಿಯ ಅರ್ಧ ಈರುಳ್ಳಿಯನ್ನು ಕೈಯಲ್ಲಿ ಹಿಡಿದು ಎಮ್ಮೆ ಆಕಳಿನ ಗುದದ ಮೂಲಕ ಕೈಯನ್ನು ತೂರಿಸಿ ಈರುಳ್ಳಿಯನ್ನು ಸಾಧನವಾಗಿ ಬಳಸಿ ಬಾವು ಒಡೆಯುವರು. ರಕತಸ್ರಾವವಾದರೆ ಬಾವು ಒಡೆದಿದೆ ಎಂದು ತಿಳಿದು ತಮ್ಮ ಎಡಗಾಲಿನ ಚಪ್ಪಲಿ ಕಳೆದು ಎಮ್ಮೆ ಆಕಳಿನ ಬೆನ್ನು ಭಾಗವನ್ನು ಚೆನ್ನಾಗಿ ಉಜ್ಜುತ್ತಾರೆ. ಸಮುದ್ರ ನಾಲಿಗೆಯನ್ನು ತೇದು ಲೇಪಿಸಿದರೂ ಬಾವು ಗುಣವಾಗುವುದು ಎಂದು ತಿಳಿದಿದ್ದಾರೆ.

ಎಮ್ಮೆ/ಆಕಳಿಗೆ ಕಾಲು ಮುರಿದುಕೊಂಡಾಗ ಏಳೆಲೆ ಮರದ ತೊಗಟೆ ತಂದು ಜಜ್ಜಿ ಉದ್ದಿನಕಾಳು ಮೊಟ್ಟೆ ಹಾಕಿ ಅರೆದು ಚೆನ್ನಾಗಿ ಬೆರೆಸಿ ಒಟ್ಟು ಸೇರಿಸಿ ಕಟ್ಟಿ ಇಪ್ಪತ್ತೊಂದು ದಿನಗಳ ಕಾಲ ಬಿಡುತ್ತಾರೆ. ಹೊಟ್ಟೆಗೆ ಮೇವಿನ ಜೊತೆಯಲ್ಲಿ ಆ ತೊಗಟೆಯನ್ನು ತಿನ್ನಿಸುತ್ತಾರೆ.

ಎಮ್ಮೆ/ಆಕಳಿಗೆ ಮಳು ಜಾರಿದರೆ ನಡೆಸುವ ಚಿಕಿತ್ಸೆ ಆಧುನಿಕ ಶಸ್ತ್ರ ಚಿಕಿತ್ಸಾ ವಿಧಾನಗಳನ್ನು ಹೋಲುತ್ತದೆ. ಹನ್ನೆರಡು ಎಂಟು ಅಂಗುಲ ಉದ್ದದ ತೆಂಗಿನ ಗರಿಯನ್ನು ತೆಗೆದುಕೊಂಡು ಅದಕ್ಕೆ ಅರಿಶಿನಪುಡಿ, ಬೆಣ್ಣೆ ತಿಕ್ಕುವರು. ಸಾಮಾನ್ಯವಾಗಿ ಮಳುವಾದ ಎಮ್ಮೆಯನ್ನು ಕೆಳಕ್ಕೆ ಕೆಡವಿಕೊಂಡು ಮೇಲ್ಬಾಯಿಗೆ ಕಡ್ಡಿ ಹಾಕುತ್ತಾರೆ. ಎಡಗಾಲಿನ ಮಳು ಜಾರಿದ್ದರೆ ಬಲಭಾಗದ ಕಡ್ಡಿ ಒಳಗೆ ಹೋಗುತ್ತದೆ. ಆ ಕಡ್ಡಿಯನ್ನು ಸ್ವಲ್ಪ ಸ್ವಲ್ಪವೇ ರೋಗದ ಎಮ್ಮೆ ಕಚ್ಚಿ ತಿಂದರೆ ರೋಗ ಶಮನವಾಗುವುದು.

ಎಳೆಗರುಗಳಿಗೆ ಹೊಟ್ಟೆಯಲ್ಲಿ ಹುಳುಗಳಾದರೆ ಹತ್ತು ಹದಿನೈದು ದಿನಗಳ ಕಲಾ ಅವು ಆಹಾರವನ್ನೇ ತೊರೆಯುತ್ತವೆ. ಅಷ್ಟೇ ಅಲ್ಲ, ಅವುಗಳ ಬಾಯಿಯಿಂದ ದುರ್ವಾಸನೆ ಹೊರಹೊಮ್ಮುತ್ತಿರುತ್ತದೆ. ಕರುವಿನ ಹೊಟ್ಟೆಯಲ್ಲಿ ಹುಳುಗಳಾಗಿರುವುದರ ಸೂಚನೆ ಅದು. ನಸುಗುನಿಕಾಯಿ ಅರೆದು ಚಂಗು ಉದುರಿಸಿ ಮಜ್ಜಿಗೆಯಲ್ಲಿ ಕಲಸಿ ಕುಡಿಸಿದರೆ ಹೊಟ್ಟೆ ಹುಳ್ಳು ಮಾಯಾವಾಗುವುದು.

ಎಮ್ಮೆ/ದನಕರುಗಳಿಗೆ ಬಾಯಿಯಿಂದ ನೊರೆ ಬರುತ್ತಿದ್ದಾರೆ. ನಾಲಗೆಯ ಮೇಲೆ ಗಾಯ ಇದೆಯೆಂದು ತಿಳಿಯುತ್ತಾರೆ. ತಾರಿಮರದ ತೊಗಟೆ ತೆಗೆದು ನಾಲಗೆ ಹೊರದೆಗೆದು ಬೆಣ್ಣೆ ಅರಿಶಿನ ಲೇಪಿಸಿ ನಾಲಗೆಯನ್ನು ತೊಗಟೆಯಿಂದ ಉಜ್ಜುತ್ತಾರೆ. ಆಗ ನಾಲಗೆಯ ಮೇಲೆ ರಕ್ತ ಹರಿದರೆ ರೋಗ ಗುಣ ಹೊಂದುವುದುರ ಸೂಚನೆ ಎಂದು ತಿಳುಯುತತಾರೆ. ಕಾಲು ಬೇನೆ ಮತ್ತು ಬಾಯಿ ಬೇನೆಗಳ ಕಾರಣದಿಂದಲೂ ನೊರೆ ಬರುವ ಸಂದರ್ಭಗಳಿರುತ್ತವೆ. ಮೂಡೀಚೆ ಎಂಬ ಸಸ್ಯವನ್ನು ತಂದು ಅದರ ತೊಗಟೆಯನ್ನು ತೆಗೆದು ಗಿಳೆ ಎಂಬ ಕಾಯನ್ನು ಸೇರಿಸಿ ಜಜ್ಜಿ ಪುಡಿಮಾಡಿ ಕುಡಿಸುತ್ತಾರೆ.

ಹೀಗೆ ಗೌಳಿಗರು ನೈಸರ್ಗಿಕ ಬೆಳೆಯುವ ಮತ್ತು ದೊರೆಯುವ ಸಸ್ಯ ಹಾಗೂ ಸಸ್ಯೋತ್ಪನ್ನಗಳು ಪ್ರಧಾನವಾಗಿ ಔಷಧಿಯ ವಸ್ತುಗಳಾಗಿ ಉಪಯೋಗಿಸುತ್ತಾರೆ. ಔಷಧಿಯ ಅಂಶಗಳನ್ನೊಳಗೊಂಡ ನೈಸರ್ಗಿಕ ಉತ್ಪನ್ನಗಳನ್ನು ನಿರ್ದಿಷ್ಟ ಹಾಗೂ ವಿಶಿಷ್ಟ ಕಾಲದಲ್ಲಿ ಸಂಗ್ರಹಿಸುವುದು, ಉಪಯೋಗಿಸುವುದು ಇವರ ವೈದ್ಯಪದ್ಧತಿಯಲ್ಲಿ ಕಾಣುವಂತಹ ವಿಶೇಷವಾಗಿದೆ. ಹೀಗೆ ಅನೇಕ ಔಷದೋಪಚಾರಗಳು ಗೌಳಿಗರಲ್ಲಿದೆ. ಆದರೆ ಅರಣ್ಯನಾಶದಿಂದ ಬೃಹತ್ ಯೋಜನೆಗಳಿಂದ, ಸ್ಥಳಾಂತರಗಳಿಂದ ವಲಸೆ,

ಪರಂಪರಾಗತ ಬದುಕಿನಿಂದ ಹೊಸ ಮಾರ್ಗಕ್ಕೆ ನೂಕಲ್ಪಟ್ಟ ವನವಾಸಿ ಸಂಸ್ಕೃತಿ, ಸರ್ಕಾರದ ಕಾರ್ಯಕ್ರಮಗಳು ಮತ್ತು ಗಿಡಮೂಲಿಕಾ ಔಷಧಿಗಳು ಕಣ್ಮರೆಯಾಗುತ್ತಿವೆ. ಇವುಗಳಿಂದ ಗೌಳಿಗರು ತಮ್ಮ ಪಾರಂಪರಿಕ ವೈದ್ಯವೃತ್ತಿಯನ್ನು ಬಿಡಬೇಕಾದ ಅನಿವಾರ್ಯತೆ ಮತ್ತು ಆಧುನಿಕ ವೈದ್ಯಪದ್ಧತಿಯೆಡೆ ಬರಬೇಕಾದ ಅವಶ್ಯಕತೆ ಅವರಲ್ಲಿ ಇಂದು ಉಂಟಾಗಿದೆ.

**೫.೨ ಆರೋಗ್ಯ ಸಂಬಂಧಿ ನಂಬಿಕೆ ಮತ್ತು ಆಚರಣೆಗಳು**

ಗೌಳಿಗರಲ್ಲಿ ತಮಗೆ ಮತ್ತು ಪ್ರಾಣಿಗಳಿಗೆ ರೋಗರುಜಿನಗಳು ಬಂದರೆ ತಮ್ಮ ಗ್ರಹಗತಿ ಚೆನ್ನಾಗಿಲ್ಲ ಯಾರೋ ಮಾಟ ಮಾಡಿರಬೇಕು ಎಂದು ಅಥವಾ ರಾವು ಬಡಿದಿದೆ, ಗಾಳಿ ಸೊಂಕಾಗಿದೆ ಎಂದು ನಂಬುವ ಗೌಳಿಗರು ಯಾವುದಾದರೂ ಪುರೋಹಿತನನ್ನು ಕಂಡು ನಿವಾರಣೆಗಾಗಿ ಮಂತ್ರ ಮಾಡಿಸಿಕೊಳ್ಳುತ್ತಾರೆ. ಮನೆಯವರಿಗೆ ತೊಂದರೆ ಆದರೆ ನಿಮಿತ್ತ ಕೇಳುತ್ತಾರೆ. ಜೋಡಿ ಕಾಳುಗಳ ಶಕುನ ಕೇಳುತ್ತಾರೆ. ಮನೆ ಬೆಂಟಿಗೆ ಮಂತ್ರಿಸಿದ ಕಾಯಿ ಕಟ್ಟಿಸುತ್ತಾರೆ. ಮಕ್ಕಳಿಗೆ ತಾಮ್ರದ ತಾಯತವನ್ನು ಕಟ್ಟುತತಾರೆ. ಯಾರಿಗಾದರೂ ದೆವ್ವ, ಭೂತ, ಪಿಶಾಚಿಯ ಕಾಟ ಬಂದರೆ ಕಡಲೆ, ಹೆಸರು,ಅವರೆ, ಹುರುಳಿ, ತೊಗರಿ, ಗೋಧಿ, ಜೋಳದ ಏಳು ಬಗೆಯ ಧಾನ್ಯಗಳನ್ನು ಬೆರೆಸಿ ಹಿಟ್ಟು ಮಾಡಿ ಅವರಿಂದ ರೊಟ್ಟಿ ಮಾಡಿಸಿ ಲಿಂಬೆಹಣ್ಣು, ಕುಂಕುಮ, ಅರಿಶಿಣ, ಮೆಣಸಿನಕಾಯಿ ಸೇರಿಸಿ ಮಣ್ಣಿನ ಮಡಿಕೆಯಲ್ಲಿ ಹಾಕಿ ಎಡಗೈಯಲ್ಲಿ ಹಿಡಿದುಕೊಂಡು ದೆವ್ವ, ಭೂತ, ಪಿಶಾಚಿ, ಹಿಡಿದ ವ್ಯಕ್ತಿಯ ಮನೆಯ ಬಾಗಿಲ ಮುಂದೆ ಏಳು ಬಾರಿ ನಿವಾಳಿಸಿ ಕೊಟಲ, ಕುಡುಗೋಲು ಹಿಡಿದುಕೊಂಡು ಬೆರೆಯವರೊಡನೆ ಮಾತನಾಡದೇ ಊರಿನ ಸಮೀಪದ ಮೂರುದಾರಿ ಕೂಡುವಲ್ಲಿ ಇಟ್ಟು ಕೊಡಲಿ ಯಿಂದ ಏಳು ಸಲ ಭೂಮಿಯನ್ನು ಕಡಿದು ನಿವಾಳಿಸಿ ಗಡಿಗೆಯನ್ನು ಹಾಕಿ ಹಿಂತಿರುಗಿ ನೋಡದಂತೆ ಒಟ್ಟಿಗೆ ಬರುತ್ತಾರೆ. ಇದರ ಜೊತೆಗೆ ನಂಬಿಕೆಗಳು-

೧. ಅಲದ ಮರ, ಹುಣಸೆಮರಗಳು ದೆವ್ವದ ಅವಾಸಸ್ಥಾನಗಳು ಎಂದು ನಂಬಿರುವ ಗೌಳಿಗರು ಅಮವಾಸ್ಯೆ ಹಾಗೂ ಹುಣ್ಣಿಮೆಯ ಗಾಳಿ ಮೈಗೆ ಹಿಡಿದುಕೊಳ್ಳುತ್ತದೆ ಎಂಬುದು.

೨. ದೆವ್ವ ಭೂತಗಳಿಗೆ ಹೆದರುವ ಇವರು ಕಲ್ಲುಗಳಿಗೆ ಪೂಜೆ ಸಲ್ಲಿಸಿ ಕುರಿ/ಕೋಳಿಗಳನ್ನು ಬಲಿ ನೀಡಲಾಗುತ್ತದೆ.

೩. ಕೂದಲು ಇಲ್ಲದಿರುವಕಡೆ ಕರಡಿ ತುಪ್ಪಳವನ್ನು ಸವರಿಸಿದರೆ ಕೂದಲು ಬರುತ್ತದೆ ಎಂಬುದು.

೪. ಹುಲಿಯ ಉಗುರನ್ನು ಮಕ್ಕಳ ಮತ್ತು ದೊಡ್ಡವರ ಕೊರಳಿಗೆ ಧರಿಸಿದರೆ ಕೆಟ್ಟ ಕಣ್ಣು ನಿವಾರಣೆಯಾಗುತ್ತದೆ.

೫. ಬೆಳ್ಳುಳ್ಳಿ ರೋಗಗಳಿಗೆ ಗೊತ್ತಿರುವ ಚಿಕಿತ್ಸೆ. ಮಗುವಿನ ನೆತ್ತಿ ಸೀಳುವುದು, ಅದು ಹೇಗೆ ಎಂದರೆ ಬೆಣಚು ಕಲ್ಲುಗಳಿಂದ ಅಥವಾ ಗಾಜಿನ ಬಳೆಯ ಚೂರುಗಳಿಂದ ಅಥವಾ ಇನ್ನೊಂದು ಚಿಕಿತ್ಸೆ ಪ್ರಕಾರ ಅರಿಶಿನ ಕೊಂಬನ್ನು ಬೆಂಕಿಗೆ ಹಿಡಿದು ಅವದರ ಕಾವಿನ ನೆರವಿನಿಂದ ನೆತ್ತಿಯ ಭಾಗ ಸುಡುವುದು.

ಹೀಗೆ ಅನೇಕ ಬಗೆಯ ಇತರ ನಂಬಿಕೆಗಳನ್ನು ಇವರಲ್ಲಿ ಕಾಣಬಹುದು. ಪ್ರಾಣಿಗಳ ಮೇಲೆ ಆರೋಗ್ಯ ಸಂಬಂಧಿ ನಂಬಿಕೆಗಳು-

೧. ಮನೆಯ ದನಕರುಗಳು ರಕ್ತವಾಂತಿಯಿಂದ ಸತ್ತರೆ ಅದು ಮಾಟದ ಪ್ರಭಾವವಿರಬೇಕೆಂದು ನಂಬಿ ಪ್ರತಿ ಮಾಟ ಮಾಡಿಸುತ್ತಾರೆ.

೨. ಎಮ್ಮೆ/ಆಕಳು ರಕ್ತಕರಿದರೆ ಸಾಮಾನ್ಯವಾಗಿ ಎರಡು ತಲೆಯ ಹಾವು ಹಾಲು ಕುಡಿದಿದೆ ಎಂದು ನಂಬುತ್ತಾರೆ.

೩. ಕೆಟ್ಟ ಕಣ್ಣಿನಿಂದಲೂ ಕೆಲವೊಮ್ಮೆ ಜಾನುವಾರುಗಳು ರಕ್ತ ಕರೆಯುತ್ತವೆ. ಮಂತ್ರ ಹಾಕಿಸುವುದು ಹಾಗೂ ಒಂದೇ ಜಾತಿಯ ಭತ್ತವನ್ನು ದೇವರ ಹೆಸರಿನಲ್ಲಿ ಶಕುನ ನೋಡಿ ದೇವರಿಗೆ ಪೂಜೆ ಸಲ್ಲಿಸುವುದು.

೪. ಎಮ್ಮೆ/ಆಕಳ ಮೊಲೆಗೆ ಧೂಪ ಹಾಕಿ ದೂಪದ ಮೇಲೆ ಹಾಲು ಕರೆದರೆ ಕೆಟ್ಟಕಣ್ಣು ನಿವಾರಣೆಯಾಗಿ ರಕ್ತ ಕರೆಯುವುದು ನಿಲ್ಲುತ್ತದೆ. ಹಾಗೂ ದೃಷ್ಟಿದೋಷದಿಂದ ರಕ್ತ ಕರೆದಿರುವುದು ದೃಢಪಟ್ಟಾಗ ಅವರ ನಿವಾರಣೆಗೆ ಮೂರು ಮೆಣಸಿನಕಾಯಿ ಉಪ್ಪು ನಿವಾಳಿಸಿ ಬೆಂಕಿಯಲ್ಲಿ ಹಾಕುತ್ತಾರೆ.

೫. ಮಾಂತ್ರಿಕ ವಿಧಾನದಲ್ಲೂ ಎಮ್ಮೆ/ಆಕಳಿಗೆ ಹುಳು ಆಗುವುದನ್ನು ತಡೆಗಟ್ಟುವ ವಿಧಾನಗಳಿವೆ. ಬೆಳಗ್ಗೆ ಎದ್ದು ಬಾಯಿಗೆ ನೀರು ಹಾಕಿ ಚೆನ್ನಾಗಿ ಮುಕುಳಿಸಿ ಒಂದೆರಡು ಸಲ ಆ ಗಾಯದ ಮೇಲೆ ಉಗುಳಿದರೆ ಆ ಜಾಗದಲ್ಲಿರುವ ಹುಳುಗಳು ಬಿದ್ದು ಹೋಗುತ್ತವೆ ಎಂದು ನಂಬಿಕೆ ಇವರಲ್ಲಿದೆ.

ಈ ರೀತಿಯಾಗಿ ತಮಗೂ ತಮ್ಮ ಸಾಕು ಪ್ರಾಣಿಗಳಲ್ಲೂ ಆರೋಗ್ಯ ಸಂಬಂಧಪಟ್ಟ ನಂಬಿಕೆಯನ್ನು ಗೌಳಿಗರಲ್ಲಿ ಕಾಣಬಹುದು.

**೫.೩ ಆರೋಗ್ಯ ಕೇಂದ್ರಗಳು**

ಭಾರತದಲ್ಲಿ ಆರೋಗ್ಯ ಕೇಂದ್ರವು ಮಹತ್ವದ ಪಾತ್ರವನ್ನು ವಹಿಸುತ್ತದೆ. ಏಕೆಂದರೆ ಗ್ರಾಮೀಣ ಪ್ರದೇಶಗಳಿಂದ ಕೂಡಿದ ಭಾರತವು ಶ್ರೀಮಂತ ರಾಷ್ಟ್ರವಾದರೂ ಬಡಜನರಿಂದ ಕೂಡಿದ ದೇಶ, ಅನಕ್ಷರತೆ, ಅಜ್ಞಾನ, ಸಂಪ್ರದಾಯಗಳಿಂದ ಸರ್ಕಾರದಿಂದ ಬರುವ ಸೌಲಭ್ಯಗಳಿಗೆ ವಂಚಿತರಾಗುವುದು ಬಹಳ. ಇಂತಹ ಸಮಯದಲ್ಲಿ ಹಳ್ಳಿಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರವಿದ್ದರೆ ಸ್ವಲ್ಪಮಟ್ಟಿಗಾದರೂ ಅದರ ಉಪಯುಕ್ತತೆ ಪಡೆಯುತ್ತಾರೆ. ಆರೋಗ್ಯ ಸಮೀಕ್ಷೆ ಮತ್ತು ಅಭಿವೃದ್ಧಿ ಸಮಿತಿಯವರು (ಬೋರೆಸಮಿತಿ) ೧೯೪೬ರಲ್ಲಿ ನೀಡಿದ ನಿರ್ದೇಶನ ಮತ್ತು ಮಾರ್ಗದರ್ಶನದ ಆಧಾರದ ಮೇಲೆ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಆರೋಗ್ಯ ಸೇವೆಗಳನ್ನು ಅಭಿವೃದ್ಧಿ ಪಡಿಸಲಾಯಿತು. ಗ್ರಾಮೀಣ ಕ್ಷೇತ್ರಗಳ ಸರ್ವತೋಮುಖ ಅಭಿವೃದ್ಧಿಗಾಗಿ ಅಕ್ಟೋಬರ್ ೨, ೧೯೫೨ರಂದು ಪ್ರಾರಂಭಿಸಿದ ಸಮುದಾಯ

ಅಭಿವೃದ್ಧಿ ಘಟಕದಲ್ಲಿ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಸ್ಥಾಪಿಸಬೇಕೆಂದು ಪ್ರಸ್ತಾಪಿಸಲಾಯಿತು. ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಪ್ರಧಾನ ಘಟಕವಾಗಿ ಕೂಡಿಸಿ ಅವುಗಳ ಉಪ ಕೇಂದ್ರಗಳ ಮೂಲಕ ಹಳ್ಳಿಯಲ್ಲಿ ಪ್ರಾಥಮಿಕ ಆರೋಗ್ಯ ಸೇವೆಗಳನ್ನು ಪ್ರಚಾರಪಡಿಸುವುದು ಆ ಕಾರ್ಯಕ್ರಮದಲ್ಲಿ ಯೋಜಿಸಲಾಯಿತು.

**ಕೋಷ್ಟಕ ೫.೯ ಕರ್ನಾಟಕ ಪ್ರದೇಶಗಳು ಮತ್ತು ಆಯ್ದ ಅನುಪಾತಗಳು**

| ಸೂಚ್ಯಂಕಗಳು | ರಾಜ್ಯ ಪ್ರದೇಶ | ಜನಸಂಖ್ಯೆ ಪ್ರಮಾಣ |
|---|---|---|
| ಉಪಕೇಂದ್ರ ಗ್ರಾಮೀಣ ಜನಸಂಖ್ಯೆ | ಕರ್ನಾಟಕ | ೪೨೮೫ |
| | ಬಾಂಬೆ ಕರ್ನಾಟಕ | ೪೮೭೫ |
| | ಹೈದರಾಬಾದ್ ಕರ್ನಾಟಕ | ೫೦೬೧ |
| | ದಕ್ಷಿಣ ಕರ್ನಾಟಕ | ೩೮೩೩ |
| ಪ್ರಾಥಮಿಕ ಆರೋಗ್ಯ ಕೇಂದ್ರದ ವ್ಯಾಪ್ತಿಯಲ್ಲಿ ಗ್ರಾಮೀಣ ಜನಸಂಖ್ಯೆ | ಕರ್ನಾಟಕ | ೨೦,೭೮೦ |
| | ಬಾಂಬೆ ಕರ್ನಾಟಕ | ೨೨೨೭೫ |
| | ಹೈದರಾಬಾದ್ ಕರ್ನಾಟಕ | ೨೨೨೭೫ |
| | ದಕ್ಷಿಣ ಕರ್ನಾಟಕ | ೧೯೧೩೩ |
| ಒಂದು ಹಾಸಿಗೆ ಇರುವ ಜನಸಂಖ್ಯೆ | ಕರ್ನಾಟಕ | ೧೨೨೧ |
| | ಬಾಂಬೆ ಕರ್ನಾಟಕ | ೧೪೯೯ |
| | ಹೈದರಾಬಾದ್ ಕರ್ನಾಟಕ | ೧೪೧೩ |
| | ದಕ್ಷಿಣ ಕರ್ನಾಟಕ | ೧೦೮೯ |
| ವೈದ್ಯ-ಜನಸಂಖ್ಯಾ ಅನುಪಾತ (ರಾಜ್ಯ) | | ೧ : ೩೨೪೦ |
| ವೈದ್ಯ-ರೋಗಿ ಅನುಪಾತ (ರಾಜ್ಯ) | | ೧ : ೨೧೬೭ |
| ಎ.ಎನ್.ಎಮ್. ಜನಸಂಖ್ಯಾ ಅನುಪಾತ (ರಾಜ್ಯ) | | ೧ : ೩೬೧೧ |
| ಶುಶ್ರೂಷಕಿ ಹಾಸಿಗೆ ಅನುಪಾತ (ರಾಜ್ಯ) | | ೧ : ೯ |

ಮೂಲ: ಆರೋಗ್ಯ ಮತ್ತು ಕಲ್ಯಾಣ ಸೇವೆಗಳ ಇಲಾಖೆ, ೨೦೦೫

ಈ ಕೋಷ್ಟಕವನ್ನು ನೋಡಿದರೆ ಕರ್ನಾಟಕದ ಪ್ರಾದೇಶಿಕವಾಗಿ ಜನಸಂಖ್ಯೆ, ವೈದ್ಯರ ಅನುಪಾತವನ್ನು ಮತ್ತು ಸೌಲಭ್ಯಗಳನ್ನು ನೋಡಬಹುದು.

ಎಲ್ಲಾ ಪ್ರಜೆಗಳಿಗೂ ಸಾರ್ವತ್ರಿಕವಾಗಿ ಸುಲಭವಾಗಿ ಲಭ್ಯವಾಗುವುದೇ ಪ್ರಾಥಮಿಕ ಆರೋಗ್ಯ ಕೇಂದ್ರ ಎನ್ನಬಹುದು. ಜನಸಮುದಾಯದ ಪ್ರಮುಖ ಆರೋಗ್ಯ ಸಮಸ್ಯೆಗಳನ್ನು, ನಿರೋಧಕ, ನಿವಾರಕ, ಪುಷ್ಟಿಕಾರಕ ಹಾಗೂ ಪುನರ್ ವ್ಯವಸ್ಥಾಪಕ ವೈದ್ಯಕೀಯ ಮತ್ತು ಆರೋಗ್ಯ ಸೇವೆಗಳ

ಮೂಲಕ ಬಗೆಹರಿಸುವುದೇ ಅವರ ಉದ್ದೇಶ. ಗ್ರಾಮೀಣ ಆರೋಗ್ಯ ವ್ಯವಸ್ಥೆಯ ಅಡಿಗಲ್ಲಾಗಿದೆ. ಗ್ರಾಮಾಂತರ ಪ್ರದೇಶಗಳಿಗಾಗಿ ಭಾರತ ಸರ್ಕಾರ ನಿಗದಿಪಡಿಸಿರುವ ಸರ್ಕಾರಿ ಆರೋಗ್ಯ ಸೇವಾ ಸೌಲಭ್ಯಗಳ ಪ್ರಕಾರ ಪ್ರತಿ ಒಂದು ಲಕ್ಷ ಜನರ ಸಮುದಾಯಕ್ಕೆ ಒಂದು ಸಮುದಾಯ ಆರೋಗ್ಯ ಕೇಂದ್ರವಿರಬೇಕು. ನಂತರ ಪ್ರತಿ ಮೂವತ್ತು ಸಾವಿರ ಗ್ರಾಮಾಂತರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಗುಡ್ಡಗಾಡು/ಬುಡಕಟ್ಟು ಸಮುದಾಯದವರು ವಾಸಿಸುವ ಪ್ರದೇಶಗಳಲ್ಲಿ ಪ್ರತಿ ಇಪ್ಪತ್ತು ಸಾವಿರ ಜನಸಂಖ್ಯೆಗೆ ಒಂದರಂತೆ ಪ್ರಾಥಮಿಕ ಆರೋಗ್ಯ ಕೇಂದ್ರವಿರಬೇಕು. ಪ್ರತಿ ಐದು ಸಾವಿರ ಜನಸಂಖ್ಯೆ ಗ್ರಾಮಾಂತರ ಪ್ರದೇಶಗಳಿಗೆ ಒಂದು ಉಪಕೇಂದ್ರವಿರಬೇಕು. ಗುಡ್ಡಗಾಡು ಹಾಗೂ ಬುಡಕಟ್ಟು ಪ್ರದೇಶಗಲ್ಲಿ ಪ್ರತಿ ಮೂರು ಸಾವಿರ ಜನಸಂಖ್ಯೆಗೆ ಒಂದರಂತೆ ಉಪಕೇಂದ್ರ ವಿರಬೇಕು.

ಪ್ರತಿ ಪ್ರಾಥಮಿಕ ಕೇಂದ್ರದಲ್ಲಿ ಇಬ್ಬರು ಅಥವಾ ಮೂವರು ವೈದ್ಯಾಧಿಕಾರಿಗಳು ಹಾಗೂ ಅವರಿಗೆ ಸುಮಾರು ಇಪ್ಪತ್ತು ಮಂದಿ ಸಹಾಯಕ ವೈದ್ಯಕೀಯ ಸಿಬ್ಬಂದಿ ಇರಬೇಕು. ಉಪಕೇಂದ್ರಗಳಲ್ಲಿ ಇಬ್ಬರು ಅಥವಾ ಮೂವರು ಅನುಪೂರಕ ಸಹಾಯಕ ವೈದ್ಯಕೀಯ ಸಿಬ್ಬಂದಿಯಿದ್ದು ರೋಗನಿವಾರಕ ಸೇವೆಗಳನ್ನು ಈ ಉಪಕೇಂದ್ರಗಳಿಗೆ ವೈದ್ಯರು ನಿಯಮಿತವಾಗಿ ಕಾರ್ಯನಿರ್ವಹಿಸಬೇಕು. ಕರ್ನಾಟಕದಲ್ಲಿ ಒಂದು ಲಕ್ಷ ಜನಸಂಖ್ಯೆಯ ಗ್ರಾಮಾಂತರ ಪ್ರದೇಶಕ್ಕೆ ಶೇ. ೪.೭೪ ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ. ಒಂದು ಲಕ್ಷ ಗ್ರಾಮೀಣ ಜನಸಂಖ್ಯೆಗೆ ೨೫ ಉಪಕೇಂದ್ರಗಳಿವೆ. ಪ್ರತಿ ಉಪಕೇಂದ್ರಗಳಲ್ಲಿ ಒಬ್ಬಳು ಮಹಿಳಾ ಆರೋಗ್ಯ ಕಾರ್ಯಕರ್ತೆ ಹಾಗೂ ಒಬ್ಬ ಪುರುಷ ವಿವಿಧೋದ್ದೇಶಗಳ ಆರೋಗ್ಯ ಕಾರ್ಯಕರ್ತರು ಕೆಲಸ ಮಾಡುತ್ತಿದ್ದಾರೆ. ಅವರು ಮುಖ್ಯವಾಗಿ ಗರ್ಭಿಣಿಯರು, ತಾಯಂದಿರು ಮತ್ತು ಮಕ್ಕಳ ಆರೋಗ್ಯ ಕಾರ್ಯಕ್ರಮಗಳು ಹಾಗೂ ಕುಟುಂಬ ಯೋಜನೆಯ ಪ್ರಚಾರಕ್ಕಾಗಿ ದುಡಿಯುತ್ತಿದ್ದಾರೆ. ಸಣ್ಣಪುಟ್ಟ ಕಾಯಿಲೆಗೆ ತಕ್ಷಣ ಔಷಧಿಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ನೀಡುತ್ತಿದ್ದಾರೆ. ಇವರ ಕಾರ್ಯ ವ್ಯಾಪ್ತಿಯಲ್ಲಿ ಬರುವ ಕೆಲಸವೆಂದರೆ ಗರ್ಭಿಣಿಯರಿಗೆ ಮತ್ತು ಮಕ್ಕಳಿಗೆ ರೋಗನಿರೋಧಕ ಲಸಿಕೆ ಹಾಕುವುದು. ಗರ್ಭಿಣಿಯರಿಗೆ ಕಬ್ಬಿಣ ಮತ್ತು ಜೀವಸತ್ವ ಪೋಲಿಕ್ ಅಮ್ಲದ ಗುಳಿಗೆಗಳನ್ನು ಹಂಚುವುದು. ಆರೋಗ್ಯ ಮತ್ತು ಆಹಾರ ಪೋಷಣೆಯ ಬಗ್ಗೆ ಶಿಕ್ಷಣ ನೀಡುವುದು. ಚಿಕಿತ್ಸೆಗಾಗಿ ಸರಿಯಾದ ಪರಿಣಿತರು ಇರುವ ಆಸ್ಪತ್ರೆಗೆ ಹೋಗುವ ಹಾಗೆ ನಿರ್ದೇಶನ ನೀಡುವುದು ಹಾಗೂ ಕುಟುಂಬ ಯೋಜನೆಯ ವಿಧಾನಗಳನ್ನು ಪ್ರಚಾರ ಮಾಡುವುದು. ಗಿರಿಜನರ ಮಹಿಳೆಯರಿಗೆ ಮತ್ತು ಕ್ಕಳಿಗೆ ಆರೋಗ್ಯ ಕೇಂದ್ರಗಳು ಬುಡಕಟ್ಟು ಹಾಡಿಗಳಲ್ಲಿ ಅಂಗನವಾಡಿ ಕೇಂದ್ರಗಳನ್ನು ತೆರೆಯಲಾಗಿದೆ. ಈ ಕೇಂದ್ರಗಳ ಮೂಲಕ ಗರ್ಭಿಣಿ, ಬಾಣಂತಿಯರಿಗೆ ಪೌಷ್ಠಿಕ ಆಹಾರ ಸೌಲಭ್ಯ ಒದಗಿಸಲಾಗುತ್ತಿದೆ. ಅಲ್ಲದೆ ಐ.ಪಿ.ಪಿ. ಯೋಜನೆಯಡಿ ಆರೋಗ್ಯ ಇಲಾಖೆ ಮತ್ತು ಸರ್ಕಾರೇತರ ಸಂಸ್ಥೆಗಳು ಬುಡಕಟ್ಟಿನ ಹೆಣ್ಣು ಮಕ್ಕಳಿಗೆ ಎ.ಎನ್.ಎಂ.ಗಳ ತರಬೇತಿ ನೀಡಿ ಅವರನ್ನು ಬುಡಕಟ್ಟಿನ ಪ್ರದೇಶಗಳಲ್ಲಿನ ಆರೋಗ್ಯ ಉಪಕೇಂದ್ರಗಳಿಗೆ ನೇಮಿಸಲಾಗಿದೆ.

**೫.೪ ಆರೋಗ್ಯ ಕೇಂದ್ರದ ಬಳಕೆ**

ಸರ್ವರಿಗೂ ಆರೋಗ್ಯ ಕ್ರಿ.ಶ. ೨೦೦೦ ವರ್ಷದ ವೇಳೆಗೆ ಎಂಬ ಘೋಷಣೆಗೆ ಪೂರಕವಾಗಿ ಪ್ರಾಥಮಿಕ ಆರೋಗ್ಯಸೇವೆ ಎಂಬ ಸೂತ್ರವನ್ನು ಸಾರಿದ ಪ್ರಪಂಚದ ಅನೇಕ ರಾಷ್ಟ್ರಗಳಲ್ಲಿ ಭಾರತವೂ ಕೂಡ ಸೇರಿದೆ. ಭಾರತ ಆರೋಗ್ಯಕ್ಕಾಗಿ ಮಾಡುತ್ತಿರುವ ಸಾರ್ವಜನಿಕ ವೆಚ್ಚ ಶೇ. ೧೭.೩ರಷ್ಟು ಖರ್ಚು ಮಾಡುತ್ತಿದೆ. ಗ್ರಾಮೀಣ ಜನರಿಗೆ ಉತ್ತಮ ಆರೋಗ್ಯ ಸೌಲಭ್ಯವನ್ನು ಒದಗಿಸಲು ಮಾಡಿದ ಪ್ರತಿಜ್ಞೆಯನ್ನು ಪಾಲಿಸಲು ಗ್ರಾಮೀಣ ಆರೋಗ್ಯ ಯೋಜನೆಯನ್ನು ಅಕ್ಟೋಬರ್ ೨, ೧೯೭೭ರಲ್ಲಿ ಪ್ರಾರಂಭಿಸಲಾಯಿತು. ಜನರ ಆರೋಗ್ಯ ಕೈಯಲ್ಲಿ ಎನ್ನುವ ಮೂಲಧೋರಣೆಯ ಸುತ್ತಲೂ ರೂಪಿಸಸಲಾದ ಈ ಯೋಜನೆಯು ಪ್ರತಿ ಹಳ್ಳಿಗೆ ಅಥವಾ ೧೦೦೦ ಜನಸಂಖ್ಯೆಯುಳ್ಳ ಸಮುದಾಯಕ್ಕೆ ಒಬ್ಬರು ಸಮುದಾಯ ಆರೋಗ್ಯ ಕಾರ್ಯಕರ್ತರನ್ನಾಗಿ ಒದಗಿಸುವು ಅವಕಾಶವನ್ನು ಮನಗಂಡಿತು.

ಸರ್ವರಿಗೂ ಆರೋಗ್ಯ ಸೌಲಭ್ಯಗಳು ಸಿಗುವಂತೆ ಮಾಡಲು ಜಿಲ್ಲಾ ಕೇಂದ್ರಗಳಲ್ಲಿ, ಆರೋಗ್ಯ ಕೇಂದ್ರಗಳು, ಬ್ಲಾಕ್ ಹಂತದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಹಾಗೂ ಇವುಗಳ ಅಡಿಯಲ್ಲಿ ಉಪಕೇಂದ್ರಗಳು ಮೂರು ಹಂತಗಳ ಸಾಂಸ್ಥಿಕ ಪರಿಕಲ್ಪನೆಯ ರೂಪದೊಂದಿಗೆ ಆರೋಗ್ಯ ಸೌಲಭ್ಯಗಳನ್ನು ಸಾರ್ವಜನಿಕರಿಗೆ ತಲುಪಿಸಲಾಗುತ್ತಿವೆ.

ನಮ್ಮ ದೇಶದ ಬಹುಸಂಖ್ಯೆಯ ಸ್ತ್ರೀಯರು ಮತ್ತು ಮಕ್ಕಳು ಸೇವಿಸುವ ಆಹಾರದ ಪ್ರಮಾಣ ಮತ್ತು ಗುಣಮಟ್ಟ ಎರಡೂ ಕಡಿಮೆಯಿರುವುದು ಹಲವಾರು ಸರ್ವೇಕ್ಷಣೆಗಳಿಂದ ಹಾಗೂ ಅಧ್ಯಯನಗಳಿಂದ ಮತ್ತು ಸ್ವಯಂ ಸೇವಾಸಂಸ್ಥೆಗಳು ಹಾಗೂ ಆರೋಗ್ಯ ಕೇಂದ್ರಗಳ ಮೂಲಕ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಡೆಸಿದೆ ಹಾಗೂ ನಡೆಸುತ್ತಿದೆ. ಅವುಯಾವುವೆಂದರೆ,

**ಕೋಷ್ಟಕ ೫.೧೦ ಆಸ್ಪತ್ರೆಗೆ ಹೋಗುವ ಮಹಿಳೆಯರು ಚಿಕಿತ್ಸೆ ಪಡೆಯುವ ಆರೋಗ್ಯ ಸಂಸ್ಥೆಗಳು**

| ಹಾಡಿ | ಪ್ರಾಥಮಿಕ ಆರೋಗ್ಯ ಕೇಂದ್ರ | ಖಾಸಗಿ ಅಸ್ಪತ್ರೆ | ಗಿಡಮೂಲಿಕೆ | ಹೋಗದೆ ಇರುವವರು ಶೇ. |
|---|---|---|---|---|
| ಕಿರುವತ್ತಿ | ೪೨.೫ | ೪೦ | ೧೦ | ೭.೫ |
| ಹೊಸಳ್ಳಿ | ೩೨.೫ | ೩೭.೫ | ೧೨.೫ | ೧೨.೫ |
| ವಿಟ್ನಾಳ | ೪೦ | ೪೨.೪ | ೫ | ೨.೫ |
| ಅಂಬಾವಾಡೆ | ೪೨.೫ | ೪೧.೫ | ೭.೫ | ೭.೫ |
| ಮೈನಳ್ಳಿ | ೫೭.೫ | ೩೫ | ೪ | ೭.೫ |
| **ಒಟ್ಟು** | **೪೪** | **೪೧.೫** | **೮** | **೬.೫** |

ಈ ಕೋಷ್ಠಕವನ್ನು ನೋಡಿದರೆ ಪ್ರಾಥವಿಕ ಆರೋಗ್ಯಕೇಂದ್ರದಲ್ಲಿ ಮಹಿಳೆಯರು ಹೆಚ್ಚಿನ ಚಿಕಿತ್ಸೆಯನ್ನು ಪಡೆಯುವುದು ಕಂಡುಬರುವುದು.

ಇದರ ಜೊತೆಗೆ ಪ್ರಮುಖ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳನ್ನು ಈ ರೀತಿಯಾಗಿವೆ.

೧. ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ ೧೯೫೭ರಲ್ಲಿ ಪ್ರಾರಂಭವಾಯಿತು.

೨. ರಾಷ್ಟ್ರೀಯ ಪೈಲೇರಿಯಾ ನಿಯಂತ್ರಣ ಕಾರ್ಯಕ್ರಮ

೩. ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ೧೯೬೨ರಲ್ಲಿ

೪. ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ ೧೯೫೫ರಲ್ಲಿ

೫. ರಾಷ್ಟ್ರೀಯ ಲೈಂಗಿಕ ರೋಗಗಳ ನಿಯಂತ್ರಣ ೧೯೪೯

೬. ರಾಷ್ಟ್ರೀಯ ದೃಷ್ಟಿದೋಷ ಮತ್ತು ಕುರುಡು ನಿಯಂತ್ರಣ ಕಾರ್ಯಕ್ರಮ ೧೯೭೬ರಲ್ಲಿ

೭. ರಾಷ್ಟ್ರೀಯ ಅತಿಸಾರ ನಿಯಂತ್ರಣ ಕಾರ್ಯಕ್ರಮ

೮. ಸಾರ್ವಜನಿಕ ಲಸಿಕೆ ಕಾರ್ಯಕ್ರಮ ೧೯೭೮ರಲ್ಲಿ ಇದರ ಜೊತೆ ೧೯೯೫ರಲ್ಲಿ ಬಂದ ಪಲ್ಸ್ ಪೋಲಿಯೋ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ.

೯. ರಾಷ್ಟ್ರೀಯ ಪೂರೈಕೆ ಮತ್ತು ಸ್ವಚ್ಛತಾ ಕಾರ್ಯಕ್ರಮ ೧೯೫೪ರಲ್ಲಿ ಬಂದಿದೆ. ಇಂದಿಗೂ ಶೇ. ೪೬ರಷ್ಟು ಹಳ್ಳಿಗಳಲ್ಲಿ ಸುರಕ್ಷಿತ ಕುಡಿಯುವ ನೀರಿನ ವ್ಯವಸ್ಥೆ ಇಲ್ಲ. ಈ ಎಲ್ಲಾ ಕಾರ್ಯಕ್ರಮಗಳು ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸಿದರೆ ಗ್ರಾಮೀಣ ಆರೋಗ್ಯದಲ್ಲಿ ಸುಧಾರಣೆ ತರಬಹುದು.

ಅದರೆ ಇಂದಿನವರೆಗಿನ ಸ್ತ್ರೀಯರನ್ನು ಕುರಿತ ಆರೋಗ್ಯ ಕಾರ್ಯನೀತಿಗಳಲ್ಲಿ ಹಾಗೂ ಕಾರ್ಯಕ್ರಮಗಳಲ್ಲಿ ಸ್ತ್ರೀಯರ ಫಲವತತ್ತೆ ಅವರ ನಿಯಂತ್ರಣ ಬಸಿರು ಹಾಗೂ ಬಾಣಂತನಗಳ ಅವಧಿಯ ಆರೋಗ್ಯದ ಬಗ್ಗೆಯೇ ಹೆಚ್ಚು ಒತ್ತು ಇರುವುದನ್ನು ಕಾಣಬಹುದು.

ಇಂದು ಜಾಗತೀಕರಣವು ನಮ್ಮ ಬದುಕಿನ ಅನೇಕ ಆಯಾಮಗಳನ್ನು ನೇರವಾಗಿ ಹಾಗೂ ಆಗೋಚರವಾಗಿ ತಟ್ಟುತ್ತಿವೆ. ಜಾಗತೀಕರಣದ ಪ್ರಕ್ರಿಯೆಯಿಂದಾಗಿ ಉಂಟಾಗಿರುವ ತೀವ್ರ ಸ್ಪರ್ಧೆಯ ಲಾಭವೇ ಪರಮಗುರಿಯಾಗಿರುವ ಮೌಲ್ಯರಹಿತವಾದ ಜಗತ್ತಿನಲ್ಲಿ ದುರ್ಬಲರು, ಬಡವರು, ಮಹಿಳೆಯರು, ಹಾನಿಗೀಡಾಗುತ್ತಿದ್ದು ಇದರಿಂದ ಸ್ತ್ರೀ ಆರೋಗ್ಯದ ಮೇಲೆ ದುಷ್ಟಪರಿಣಾಮಗಳು ಆಗುತ್ತಿವೆ. ಹೇಗೆ ಮತ್ತು ಏಕೆ ಎಂಬ ಪರಿಶೀಲನೆ ಮಾಡಿದರೆ ವೈದ್ಯಕೀಯ ಸೇವೆಗಳನ್ನು ಖಾಸಗೀಕರಣಕ್ಕೆ ಒಳಪಡಿಸಿರುವುದರಿಂದ ವೈಧ್ಯಕೀಯ ಸೇವಾ ಸೌಲಭ್ಯಗಳ ಲಭ್ಯತೆ ದಿನೇ ದಿನೇ ತುಟ್ಟಿಯಾಗುತ್ತಾ ಹೋಗುತ್ತಿದ್ದು ಬಡಜನರ ಕೈಗೆಟಕದಂತೆ ಆಗುತ್ತಿದೆ. ಸಾರ್ವಜನಿಕರ ಆರೋಗ್ಯದ ಬಗ್ಗೆ ಯಾವುದೇ ಗಂಭೀರ ಗಮನವಿಲ್ಲ. ಅಂತಹ ಸಾರ್ವಜನಿಕ ಆರೋಗ್ಯ ಅಗತ್ಯಗಳನ್ನು ಪೂರೈಸುವ ಪ್ರಯತ್ನಗಳನ್ನು ಸಹ ಮಾಡುತ್ತಿಲ್ಲ. ಅಂತಹ ಸೌಲಭ್ಯ ಸೇವೆಗಳನ್ನು ಒದಗಿಸುವುದು ಸರ್ಕಾರದ ಹೊಣೆ ಎನ್ನುವ ಧೋರಣೆಯಾಗಿದೆ. ಅದರೆ ಇದಕ್ಕೆ ಪೂರಕವಾಗಿ ನಮ್ಮ ಸರ್ಕಾರವು ಸಾರ್ವಜನಿಕ ವಲಯದಲ್ಲಿ ಅಂದರೆ ಸಾರ್ವಜನಿಕ ಸೌಲಭ್ಯಗಳಗಾಗಿ ಮಾಡುತ್ತಿದ್ದ ವೆಚ್ಚವನ್ನು ತೀವ್ರವಾಗಿ ಕಡಿತ

ಗೊಳಿಸುತ್ತಾ ಹೋಗುತ್ತಿದೆ. ಇದರಲ್ಲಿ ಆರೋಗ್ಯ ಸೇವಾ ಸೌಲಭ್ಯವು ಒಂದು. ಬಡವರಿಗಾಗಿ ಸಬ್ಸಿಡಿಯ ದರದಲ್ಲಿ ಒದಗಿಸುತ್ತಿದ್ದ ಅನೇಕ ಆರೋಗ್ಯ ಸೇವೆಗಳಲ್ಲಿ ಕಡಿತ ಹಾಗೂ ಇರುವ ಸೇವಾ ಸೌಲಭ್ಯಗಳನ್ನು ಕ್ರಮೇಣ ಹಿಂತೆಗೆದುಕೊಳ್ಳಲಾಗುತ್ತಿದೆ. ಆರೋಗ್ಯ ಸೇವಾ ಸಿಬ್ಬಂದಿಯ ಸಂಖ್ಯೆಯನ್ನು ನೇಮಕಾತಿಯ ಸಂದರ್ಭದಲ್ಲಿಯೇ ಕಡಿತಗೊಳಿಸಲಾಗುತ್ತಿದೆ.

ಸಾರ್ವಜನಿಕ ಆರೋಗ್ಯ ಸೇವೆಗಳಿಗಾಗಿ ಅವರಲ್ಲಿಯೂ ಪ್ರಾಥಮಿಕ ಆರೋಗ್ಯ ಸೇವಾ ಸೌಲಭ್ಯಗಳಿಗಾಗಿ ರಿಯಾಯಿತಿ ದರಗಳಲ್ಲಿ ಒದಗಿಸಬೇಕಾಗುವ ಔಷಧಿ, ಅಸ್ಪತ್ರೆಯಲ್ಲಿ ಪಡೆಯಬೇಕಾದ ಚಿಕಿತ್ಸೆಗಳ ದರಗಳಲ್ಲಿ ರಿಯಾಯಿತಿ ಹಾಗೂ ಆರೋಗ್ಯ ಸೇವಾ ಸಿಬ್ಬಂದಿಗಾಗಿ ಮಾಡಬೇಕಾಗಿರುವ ಖರ್ಚು, ನೇಮಕಾತಿ, ಇವೆಲ್ಲವೂ ಸುಸಂಬದ್ಧವಾಗಿ ರೂಪಗೊಂಡು ಕಾರ್ಯಗತವಾಗಬೇಕಾದ್ದಲ್ಲಿ ಕಾರ್ಯಕ್ರಮಗಳ ವಿಧಾನ, ಗುರಿಗಳು, ಹಾಗೂ ನಿರ್ವಹಣೆಗಳು ಒಂದು ಕಾರ್ಯ ನೀತಿಯ ಮೇಲೆ ಆಧಾರಿತವಾಗಿರುತ್ತದೆ. ಆರೋಗ್ಯ ಕೇಂದ್ರದಲ್ಲಿ ಸುಧಾರಣೆಯಾಗಿ ಸರಿಯಾಗಿ ಕಾರ್ಯ ನಿರ್ವಹಿಸಿದರೆ ಪ್ರತಿಯೊಬ್ಬ ಸಾರ್ವಜನಿಕರ ಆರೋಗ್ಯಕೇಂದ್ರ ಬಳಕೆಯಾಗುತ್ತದೆ.

**೫.೫ ಸಂಚಾರಿ ಆರೋಗ್ಯ ಕೇಂದ್ರಗಳು**

ಗೌಳಿಗ ಮಹಿಳೆಯರ ಬದುಕಿನ ಸ್ಥಿತಿಗತಿ, ಆರೋಗ್ಯ ಸಮಸ್ಯೆ, ಪರಿಹಾರ ಆರೋಗ್ಯ ಸುಧಾರಣೆಗೆ ಹಾಗೂ ರಕ್ತಹೀನತೆಯಿಂದ ಬಳಲುವ ಗರ್ಭಿಣಿ, ಬಾಣಂತಿಯರಿಗೆ ಕಬ್ಬಿಣಾಂಶದ ಮಾತ್ರೆ ನೀಡುವುದು ಈ ರೀತಿಯಾಗಿ ತಾತ್ಕಾಲಿಕ ಸೌಲಭ್ಯ ಒದಗಿಸುವುದಕ್ಕಾಗಿ ಸಂಚಾರಿ ಆರೋಗ್ಯ ಸೇವೆ ಎನ್ನವುದನ್ನು ಪ್ರಾರಂಭಿಸಲಾಗಿದೆ. ಸಂಚಾರಿ ಆರೋಗ್ಯ ಸೇವೆ ಎನ್ನುವುದು ಒಂದು ಅಂಬುಲೆನ್ಸ್ ವಾಹನ, ಔಷಧಿ ಮತ್ತು ಸಲಕರಣೆಗಳೊಡನೆ ಕೊಡಲಾಗಿದ್ದು ಬುಡಕಟ್ಟು ಉಪಗ್ರಾಮ ಕಾಲೋನಿಗಳಿಗೆ ಸಂದರ್ಶನ ಕೊಟ್ಟು ರೋಗಿಗಳಿಗೆ ಚಿಕಿತ್ಸೆ ಮಾಡಲಾಗುತ್ತದೆ. ಹೆಚ್ಚಿನ ಆರೋಗ್ಯ ಚಿಕಿತ್ಸೆಗಾಗಿ ಸಲಹೆಗಳನ್ನು ಕೂಡ ಕೊಡಲಾಗುತ್ತದೆ.

ಗೌಳಿಗರ ಹಾಡಿಗಳಲ್ಲಿ ಮಹಿಳೆಯರು ಯಾವ ಯಾವ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಅಂದರೆ ಮುಂದಿನ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೫.೧೧ ಮಹಿಳೆಯರ ಸಮಸ್ಯೆಗಳು**

| ಹಾಡಿ | ದೈಹಿಕ ಸಮಸ್ಯೆಗಳು ಕೈಕಾಲು ನೋವು | ಮಾನಸಿಕ ಸಮಸ್ಯೆಗಳು | ಮುಟ್ಟಿನ ಸಮಸ್ಯೆಗಳು |
|---|---|---|---|
| ಕಿರುವತ್ತಿ | ೧೫ | ೧೦ | ೩೨.೫ |
| ಹೊಸಳ್ಳಿ | ೨೦ | ೧೨.೫ | ೨೭.೫ |
| ವಿಟ್ನಾಳ | ೧೦ | ೧೦ | ೩೩.೫ |
| ಅಂಬಾವಾಡೆ | ೧೫ | ೧೫ | ೩೫ |
| ಮೈನಳ್ಳಿ | ೧೨.೫ | ೧೭.೫ | ೪೫ |
| **ಸರಾಸರಿ** | **೧೪.೫** | **೧೩** | **೩೫.೫** |

ಗೌಳಿಗರಲ್ಲಿ ಇಷ್ಟೆಲ್ಲಾ ಆರೋಗ್ಯ ಸಮಸ್ಯೆಗಳಿದ್ದರೂ ಔಷಧಿ ತೆಗೆದುಕೊಳ್ಳದೇ ಇರುವುದಕ್ಕೆ ಕಾರಣಗಳನ್ನು ನೋಡಬಹುದು. ಅವು ಯಾವುದೆಂದರೆ,

೧. ಕೆಲಸದ ಒತ್ತಡ

೨. ತಾತ್ಸಾರ ಮನೋಭಾವ

೩. ಬಡತನದಿಂದ ಔಷಧಿ ಖರೀದಿ ಮಾಡದಿರುವುದು.

ಈ ಎಲ್ಲಾ ಕಾರಣಗಳಿಂದ ಅವರಲ್ಲಿ ಆರೋಗ್ಯ ಸಮಸ್ಯೆ ಹೆಚ್ಚಾಗಿವೆ. ಈ ಆರೋಗ್ಯ ಸಮಸ್ಯೆಗಳಿಗೆ ಸಂಚಾರಿ ಆರೋಗ್ಯಕೇಂದ್ರ ಹೆಚ್ಚು ಸಹಕಾರಿಯಾಗಿದೆ. ಇವರೇ ಅವರಿದ್ದಲ್ಲಿಗೆ ಹೋಗಿ ಆರೋಗ್ಯ ಸೇವೆಯನ್ನು ನೀಡಿ ಬರಲು ಅವಕಾಶವಿದೆ. ಇದರಿಂದ ಸ್ವಲ್ಪಮಟ್ಟಿನ ಅನಾರೋಗ್ಯವನ್ನು ಕಡಿಮೆ ಮಾಡಬಹುದಾಗಿದೆ.

**ಸ್ತ್ರೀ ಆರೋಗ್ಯ ಮತ್ತು ಪೋಷಣೆಗಳ ಅಭಿವೃದ್ಧಿಗಾಗಿ ಇರುವ ಸರ್ಕಾರಿ ಯೋಜನೆಗಳು**

ನಮ್ಮ ದೇಶದ ಬಹುಸಂಖ್ಯೆಯ ಸ್ತ್ರೀಯರು ಮತ್ತು ಮಕ್ಕಳು ಸೇವಿಸುವ ಆಹಾರದ ಪ್ರಮಾಣ ಮತ್ತು ಗುಣಮಟ್ಟ ಎರಡೂ ಕಡಿಮೆ ಇರಬಹುದು. ಹಲವಾರು ಸರ್ವೇಕ್ಷಣೆಗಳಿಂದ ಹಾಗೂ ಅಧ್ಯಯನಗಳಿಂದ ಸಿದ್ಧವಾಗಿರುವ ವಿಷಯ ಹೈದರಾಬಾದಿನ ರಾಷ್ಟ್ರೀಯ ಆಹಾರ ಪೋಷಣಾ ಸಂಸ್ಥೆಯು ಹತ್ತಾರು ಹಟ್ಟಿಗಳಲ್ಲಿ ನಡೆಸಿದ ಅಧ್ಯಯನದಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಸುಮಾರು ಅರ್ಧದಷ್ಟು ಶೇ. ೪೯ ಮಹಿಳೆಯರು ನ್ಯೂನ ಪೋಷಣೆಯಿಂದ ಬಳಲುತ್ತಿರುವುದು ಕಂಡುಬಂದಿದೆ. ನ್ಯೂನ ಪೋಷಣೆಯು ಮಹಿಳೆಯರಿಗೆ ಆಪಾಯವನ್ನುಂಟು ಮಾಡಬಲ್ಲದು. ಅಲ್ಲದೆ ಇಂತಹ ತಾಯಿಯರಿಗೆ ಕಡಿಮೆ ಜನರ ತೂಕದ ಮಕ್ಕಳು ಜನಿಸುವ ಅಪಾಯಗಳೂ ಅಪಾರ. ಇದಕ್ಕಿಂತ ಹೆಚ್ಚಾಗಿ ನ್ಯೂನಪೋಷಿತ ಮಹಿಳೆಯು ಆಗಾಗ ಕಾಯಿಲೆಗಳಿಗೆ ತುತ್ತಾಗುವುದರಿಂದ ತನ್ನ ಕುಟುಂಬವನ್ನು ನೋಡಿಕೊಳ್ಳುವ ಮತ್ತು ಹೋರಗೆ ಹೋಗಿ ದುಡಿಯುವ ಶಕ್ತಿಯನ್ನು ಕಳೆದುಕೊಳ್ಳುತ್ತಾಳೆ. ಹೀಗೆ ದುಷ್ಪರಿಣಾಮಗಳು, ಅವಳ ಮೇಲಾಗುತ್ತವೆ. ಈ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಗಳು ಮತ್ತು ಸ್ವಯಂಸೇವಾ ಸಂಸ್ಥೆಗಳು ಹಲವಾರು ಕಾರ್ಯ ಕ್ರಮಗಳನ್ನು ಹಮ್ಮಿಕೊಂಡು ನಡೆಸುತ್ತಿವೆ. ಅವು ಯಾವುವೆಂದರೆ,

**ಅ. ರಾಷ್ಟ್ರ ವ್ಯಾಪಿ ಸರ್ಕಾರಿ ಯೋಜನೆಗಳು**

೧. ರಕ್ತಹೀನತಾ ಪ್ರತಿಬಂಧಕ ರಾಷ್ಟ್ರೀಯ ಕಾರ್ಯಕ್ರಮ

೨. ಸಮಗ್ರ ಬಾಲವಿಕಾಸ ಯೋಜನೆ

೩. ರಾಷ್ಟ್ರೀ ಆಹಾರ ಪೋಷಣಾ ಕಾರ್ಯಕ್ರಮಗಳು

**ಅನ್ವಯಿಕ ಆಹಾರ ಪೋಷಣಾ ಕಾರ್ಯಕ್ರಮ**

ಹಳ್ಳಿಗಳಿಗಾಗಿ ವಿಶೇಷ ಆಹಾರ ಪೋಷಣಾ ಕಾರ್ಯಕ್ರಮ ಮತ್ತು ಬುಡಕಟ್ಟು ಜನಾಂಗಗಳಿಗೆ ಹಾಗೂ ಕೊಳಗೇರಿ ನಿವಾಸಿಗಳಿಗಾಗಿ ಅನುಪೂರಕ ಪೋಷಣಾ ಕಾರ್ಯಕ್ರಮ.

ರಕ್ತಹೀನತಾ ಪ್ರತಿಬಂಧಕ ರಾಷ್ಟ್ರೀಯ ಕಾರ್ಯಕ್ರಮ ಆರು ವರ್ಷದೊಳಗಿನ ಮಕ್ಕಳಲ್ಲಿ ಮತ್ತು ಮಹಿಳೆಯರಲ್ಲಿ ರಕ್ತಹೀನತೆಯನ್ನು ನಿವಾರಿಸಲೆಂದೇ ಈ ಕಾರ್ಯಕ್ರಮವನ್ನು ರೂಪಿಸಿ ಜಾರಿಗೆ ತರಲಾಗಿದೆ. ರಕ್ತಹೀನತೆಯು ತಾಯಿಯರ ಮರಣದ ಮುಖ್ಯ ಕಾರಣಗಳಲ್ಲಿ ಒಂದು. ಅದ್ದರಿಂದ ಈ ಕಾರ್ಯಕ್ರಮದಲ್ಲಿ ಕಬ್ಬಿಣ ಖನಿಜವನ್ನು ಫೈರಸಂ ಸಲ್ಫೇಟ್ ರೂಪದ ಗುಳಿಗಳ ಮೂಲಕ ಹಾಗೂ ಜೀವಸತ್ವ ಫೋಲಿಕ್ ಅಮ್ಲವನ್ನು ಗುಳಿಗೆಗಳ ಮೂಲಕ ಕೆಳ ಆರ್ಥಿಕ ವರ್ಗಗಳಿಗೆ ಸೇರಿದ ಗರ್ಭಿಣಿಯರು, ಹಾಲುಣಿಸುವ ತಾಯಿಯರು ಮತ್ತು ಮಕ್ಕಳಿಗೆ ನೀಡಲಾಗುತ್ತವೆ. ೧೯೮೮ರ ವೇಳೆಗೆ ಈ ಕಾರ್ಯಕ್ರಮದಲ್ಲಿ ಶೆ. ೧೭.೩೮ ದಶಲಕ್ಷ ಮಕ್ಕಳು ಹಾಗೂ ಶೇ. ೧೭.೭೫ ದಶಲಕ್ಷ ಮಹಿಳೆಯರಿಗೆ ಈ ಗುಳಿಗೆಯನ್ನು ನೀಡಲಾಗಿತ್ತು. ವಿಶ್ವ ಬ್ಯಾಂಕಿನ ಇತ್ತೀಚಿನ ವರದಿಯ ಪ್ರಕಾರ ಏಷ್ಯಾದ ೧೪ ದೇಶಗಳ ಪೈಕಿ ಭಾರತದಲ್ಲಿಯೇ ಅತಿ ಹೆಚ್ಚಿನ ಸಂಖ್ಯೆಯ ಗರ್ಭಿಣಿಯರು ರಕ್ತಹೀನತೆ ಯಿಂದ ನರಳುತ್ತಿದ್ದಾರೆ. ಯಾಕೆ ಹೀಗೆ ಅನ್ನುವುದಕ್ಕೆ ಕಾರಣಗಳನ್ನು ನೋಡಿದರೆ ಪ್ರಾಥಮಿಕ ಆರೋಗ್ಯ ಕೇಂದ್ರದ ಸಹಾಯಕ ದಾಯಿ ಗರ್ಭಿಣಿಯರಿಗೆ ಕೊಟ್ಟ ಕಬ್ಬಿಣ ಮತ್ತು ಫೋಲಿಕ್ ಅಮ್ಲದ ಗುಳಿಗೆಗಳನ್ನು ವಿವಿಧ ಕಾರಣಗಳಿಂದ ತೆಗೆದುಕೊಳ್ಳದೇ ಇದ್ದುದು ಕಂಡುಬಂದಿದೆ. ಬೇರೆ ಬೇರೆ ನಂಬಿಕೆಗಳಿಂದ ಮಾತ್ರೆ ಸೇವನೆಯನ್ನು ನಿಲ್ಲಿಸುತ್ತಾರೆ. ಜೊತೆಗೆ ಗರ್ಭಿಣಿಯರಿಗೆ ಹಾಗೂ ಅವರಲ್ಲಿ ಭಯವನ್ನು ಮೂಢನಂಬಿಕೆಗಳನ್ನು ಹರಡುವ ಹಿರಿಯ ಹೆಂಗಸರಾದ ತಾಯಿ, ಅತ್ತೆ, ಅತ್ತಿಗೆ, ಇತ್ಯಾದಿ ಮಹಿಳೆಯರಿಗೂ ಉದಾಹರಣೆಗಳ ಸಹಿತವಾದ ಆರೋಗ್ಯ ಶಿಕ್ಷಣದ ಅಗತ್ಯವಿದೆ.

**೫.೩ ಪಾರಂಪರಿಕ ಮತ್ತು ಆಧುನಿಕ ಚಿಕಿತ್ಸಾ ಪದ್ಧತಿಗಳ ಮುಖಾಮುಖಿ**

ಪಾಶ್ಚಿಮಾತ್ಯದ ಆಧುನಿಕತೆ ಭಾರತದಂತಹ ಹಳ್ಳಿಗಳ ವಿಷಯದಲ್ಲಿ ದಾಪುಗಾಲು ಇಡುತ್ತಿವೆ. ಅಲ್ಲಲ್ಲಿ ವಿರೋಧವಿಲ್ಲದೆ ಇಲ್ಲ. ಇದಕ್ಕೆ ಅನೇಕ ಕಾರಣಗಳು ಇವೆ. ಅವುಗಳೆಂದರೆ ಸಂಸ್ಕೃತಿಯ ಜಡತ್ವ ಜೊತೆಗೆ ತನ್ನ ಮೌಲ್ಯವನ್ನು ಕಳೆದುಕೊಳ್ಳುವ ಭಯವೂ ಇರಬಹುದಾಗಿದೆ. ಹೊಸತನದ ಪರಿಣಾಮವಾಗಿ ಜನಪದರು ತಮ್ಮನ್ನು ತಾವು ಹೇಗೆ ರಕ್ಷಿಸಿಕೊಳ್ಳುವುದೆಂದು ಪರಿತಪಿಸುತ್ತಿದ್ದಾರೆ. ಪ್ರಸ್ತುತ ನಮ್ಮ ಜೊತೆಗೆ ಬಂದಿರುವ ವೈದ್ಯಪದ್ಧತಿಗಳು ನಿನ್ನೆ ಮೊನ್ನೆಯವುಗಳಾಗಿರುವುದಿಲ್ಲ. ಅವುಗಳ ಶತಮಾನಗಳಿಂದ ಕಾಲಪ್ರವಾಹದಲ್ಲಿ ಭಿನ್ನರೂಪಗಳನ್ನು ಪಡೆದುಬಂದುವುಗಳಾಗಿರುವ ಪಳೆಯುಳಿಕೆಗಳು. ಆದುದರಿಂದ ಈ ಆಧುನಿಕತೆ, ಜಾಗತೀಕರಣ, ಖಾಸಗೀಕರಣ, ಬಂಡವಾಳಶಾಹಿ, ಉದಾರೀಕರಣ, ಹೀಗೆ ಹೊಸತನ ಬಂದರೂ ಬದಲಾಯಿಸಿದರೂ ನಮ್ಮ ಜೊತೆಗೆ ಅವಿಭಾಜ್ಯ ಅಂಗವಾಗಿ ಬಂದಂತಹ ಪದ್ಧತಿ, ರೂಢಿ, ಆಚರಣೆ, ಸಾಂಪ್ರದಾಯ, ಹಬ್ಬ ಹರಿದಿನಗಳು, ಊಟೋಪಚಾರ, ಗೀತೆ, ಕಲೆ, ಹಾಡು, ವೈದ್ಯ ಪದ್ಧತಿಗಳು ಇನ್ನೂ ಅನೇಕ ಮೂಲಾಂಶಗಳು ಸಂರಕ್ಷಿಸಿಕೊಂಡು ಬಂದಿರುತ್ತದೆ. ವಿದ್ವಾಂಸರೂ, ಇತಿಹಾಸತಜ್ಞಾರಾದ ಅರ್ನಾಲ್ಟ್‌ಬಯ್ಯಕಬಿ ಹೊಸ ಸಂಸ್ಕೃತಿಯಯೊಂದನ್ನು ಜನಾಂಗ

ಹೊಂದಿದಾಗ ಹಳೆಯದು ಪೂರ್ಣ ಮಾಯವಾಗುವುದಿಲ್ಲ. ಹಳೆಯದನ್ನು ಉಳಿಸಿಕೊಂಡು ಹೊಸದು ಬರುತ್ತದೆ. ಹೀಗೆ ಹೊಸತನವನ್ನು ಇರಿಸಿಕೊಂಡು ಹಳೆತನ ಹೇಗೆ ನಮ್ಮ ಜೊತೆಗೆ ಬೆಸೆದುಕೊಂಡು ಬರುತ್ತದೆ ಎಂಬುದಕ್ಕೆ ನಮ್ಮ ಜನಪದರೂ ಶತಶತಮಾನಗಳಿಂದಲೂ ರೂಢಿಸಿಕೊಂಡು ಬಂದಿರುವ ಜನಪದ ವೈದ್ಯವೇ ಕಾರಣ ಹೇಳಬಹುದು. ಆದುನಿಕತೆ ಒಂದು ರೀತಿ ಎಲ್ಲವನ್ನು ಆಕರ್ಷಿಸುತ್ತದೆ. ಹೊಸತನ ಎಷ್ಟು ಬೇಕೋ ಅಷ್ಟು ಸ್ವೀಕರಿಸುತ್ತಾ ಹಳೆಯದನ್ನು ಬದಲಾವಣೆ ಮಾಡಿಕೊಂಡು ನಾಗರೀಕತೆಗೆ ಒಗ್ಗಿಕೊಳ್ಳುತ್ತಾ ತನ್ನ ಬದುಕನ್ನು ಮುಂದುವರೆಸುತ್ತಿರುತ್ತಾನೆ.

ಸಂಸ್ಕೃತಿಯ ರೂಪಾಂತರಗಳಲ್ಲಿ ಆಧುನಿಕರಣದ ಮಂತ್ರಗಳು ಸಮಾಜದ ತೆಕ್ಕೆಯಲ್ಲಿ ಬರುವ ಸಮುದಾಯಗಳು ತಮಗೆ ಗೊತ್ತಾಗದಂತೆ ತಮ್ಮ ಮೂಲ ಕಸುಬಗಳನ್ನು ರೂಢಿಸಿಕೊಂಡು ಮುನ್ನುಗ್ಗುತ್ತಿರುತ್ತವೆ. ಜೊತೆಗೆ ಆದುನಿಕತೆಯು ಅಷ್ಟೇ ಭೀಕರವಾದ ಪ್ರತಿರೋಧಕ ಶಕ್ತಿಯನ್ನು ಸಂಸ್ಕೃತಿಯ ಪ್ರತಿಯೊಂದು ಮಜಲುಗಳ ಮೇಲೆ ಹೇರುತ್ತಾ ತನ್ನ ಶಕ್ತಿಯನ್ನು ಮೆರೆಯುತ್ತಿರುತ್ತವೆ. ಈ ಆಧುನಿಕತೆಯ ಒಳಸುಳಿಗಳ ಸೂಕ್ಷ್ಮತೆಯನ್ನು ಸಮಾಜದಲ್ಲಿ ನೆಲೆಗೊಂಡಿರುವ ಜನಪದರು, ಬುಡಕಟ್ಟುಗಳು, ಅಲೆಮಾರಿಗಳು, ಹಿಂದುಳಿದವರು, ಅಲ್ಪಾಸಂಖ್ಯಾತರು ಅಥವಾ ಇತರ ಜನಾಂಗದವರು ಬಹಳ ಅಳವಾಗಿ ಎಚ್ಚರದಿಂದ ಅವಲೋಕಿಸಿ ತಮ್ಮ ಬದುಕಿನಲ್ಲಿ ಏರು ಪೇರುಗಳು ಜಗ್ಗಾಟಗಳು ಬಾರದಂತೆ ಜಾಣ್ಮೆಯಿಂದ ತೂಗಿಸಬೇಕಾಗುತ್ತದೆ. ಈ ಆಧುನಿಕತೆ ಇರಲಿ, ಜಾಗತೀಕರಣಗಳಿರಲಿ, ಉದಾರೀಕರಣಗಳಿರಲಿ, ಕೈಗಾರಿಕರಣವಿರಲಿ, ಈ ಎಲ್ಲವೂ ಮನುಷ್ಯನ ಪ್ರತಿಹಂತದಲ್ಲೂ ಒಲ್ಲವಿರಲಿ, ಇಲ್ಲದಿರಲ್ಲಿ ನುಸುಳುತ್ತಾ ಊಳುತ್ತಾ ಮುಂದುವರೆಯುತ್ತಿರುತ್ತದೆ. ದೈನಂದಿನ ಚಲನವಲನಗಳಲ್ಲಿ ಆಧುನಿಕತೆ ಗೊತ್ತಿಲ್ಲದ ರೀತಿಯಲ್ಲಿ ನುಸುಳುತ್ತಿರುತ್ತದೆ.

ಜನಪದ ವೈದ್ಯಪದ್ಧತಿ ಆಧುನಿಕ ವೈದ್ಯಪದ್ಧತಿ ಅಸ್ತಿತ್ವಕ್ಕೆ ಬರುವ ಮುಂಚಿತವಾಗಿಯೇ ಸಮಾಜದಲ್ಲಿ ಇದೆ. ಇಂದು ಆಧುನಿಕತೆ ದಿಲ್ಲಿಯಿಂದ ಹಳ್ಳಿಯವರೆಗೆ ಹಬ್ಬಿದೆ ಎಂದು ಅಂದುಕೊಂಡರು ಈಗಲೂ ಹಳ್ಳಿಗಳಲ್ಲಿ ಅನೇಕ ಕಾಯಿಲೆಗಳಿಗೆ ಅಸ್ಪತ್ರೆಗೆ ಹೋಗುವ ಪರಿಪಾಠವಿರುವುದಿಲ್ಲ. ಅನೇಕ ಕಾಯಿಲೆಗಳನ್ನು ತಡೆಗಟ್ಟುವ ಔಷಧಿಯನ್ನು ಅವರ ಮನೆಗಳಲ್ಲಿ, ಹಳ್ಳಿಯ ವೈದ್ಯರಿಂದ ಚಿಕಿತ್ಸೆ ಪಡೆಯುವುದು ರೂಢಿಯಲ್ಲಿದೆ. ಅವರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯಲ್ಲಿ ಜನಪದವೈದ್ಯ ಬಹುಮಹತ್ವ ಪಡೆದಿರುತ್ತದೆ. ಈ ಆಧುನಿಕತೆಯ ಭರಾಟೆಯಲ್ಲಿ ಜನಪದರು ಪಟ್ಟಣಗಳಲ್ಲಿ ವೈದರಿಗೆ ದುಬಾರಿ ಹಣವನ್ನು ಕೊಡಬೇಕಾಗುತ್ತದೆ. ಆಧುನಿಕತೆಯ ಯಂತ್ರೋಪಕರಣಗಳನ್ನು ಚಿಕಿತ್ಸೆ ಪಡೆಯುವ ಮಟ್ಟದಲ್ಲಿ ಗೌಳಿಗರು ಇರುವುದಿಲ್ಲ. ಅಲ್ಲದೆ ಕಡಿಮೆ ಖರ್ಚಿನ್ಲಿ ಮನೆಮದ್ದು, ನಾಟಿವೈದ್ಯ, ತಮ್ಮ ಅಸುಪಾಸಿನಲ್ಲಿಯೇ ಸಿಗುವುದರಿಂದ ಈ ಆಧುನಿಕತೆಯ ಹೊತ್ತಿನಲ್ಲಿಯೂ ಜನಪದ ವೈದ್ಯ ಪದ್ಧತಿ ಅರಣ್ಯದಲ್ಲಿ ನೆಲೆಸಿರುವ ಗೌಳಿಗರಲ್ಲಿ ಇನ್ನೂ ಜೀವಂತವಾಗಿದೆ. ಹಳ್ಳಿ, ನಾಟಿ ವೈದ್ಯರಲ್ಲಿ ಔಷಧಿಗೆ ನಿರ್ದಿಷ್ಟ ಅಳತೆ, ತೂಕ ಇರುವುದಿಲ್ಲ. ಎಲ್ಲ ಗುರುತು ಹಾಗೂ ರೋಗಿಯ ವಯಸ್ಸನ್ನು ಅವಲಂಬಿಸಿರುತ್ತದೆ. ಅಲ್ಲದೆ ಇಂದಿಗೂ ಮನುಷ್ಯ ಪ್ರಾದೇಶಿಕವಾಗಿ ಸಿಗುವಂತಹ ಔಷಧಿಗೆ ಒಗ್ಗಿ ಹೋಗಿದ್ದಾನೆ. ಏಕೆಂದರೆ ಮನುಷ್ಯನಿಗೆ ಅಥವಾ ಪ್ರಾಣಿಗಳಿಗಿರಬಹುದು ಅವುಗಳು ಪ್ರಾದೇಶಿಕವಾಗಿ ಕೆಲವು ರೋಗಗಳು ಭಿನ್ನತೆಯಿಂದ

ಕೂಡಿರುತ್ತದೆ. ಇದಕ್ಕೆ ಆಯಾಯ ಪ್ರದೇಶದಲ್ಲಿ ಸೇವಿಸುವ ಆಹಾರ, ಗಾಳಿ, ಮಣ್ಣಿನ ಅಂದರೆ ಒಂದು ರೀತಿಯಲ್ಲಿ ಪರಿಸರ ಪ್ರಜ್ಞೆ ಕಾರಣವಾಗಿರುತ್ತದೆ. ಈ ಆಧುನಿಕತೆಯ ಸಂದರ್ಭದಲ್ಲಿಯೂ ಕೂಡ ಹಳ್ಳಿ ಜನಪದರು ಸಾಕಷ್ಟು ಜನಪದ ವೈದ್ಯಪದ್ಧತಿಗೆ ಮೊರೆ ಹೋಗುವರು.

ಆಧುನಿಕತೆಯ ಈ ಸಂದರ್ಭದಲ್ಲಿ ಗೌಳಿಗರು ಏಕೆ ನಾಟಿ ವೈದ್ಯಕ್ಕೆ ಹೆಚ್ಚು ಒತ್ತು ಕೊಡುತ್ತಾರೆ ಎನ್ನುವುದನ್ನು ಚರ್ಚಿಸಿದರೆ ಹಾಡಿಗಳಲ್ಲಿ ನೆಲೆನಿಂತಿರುವ ವೈದ್ಯರು ವೃತತಿಪರವಾಗಿರುವುದಿಲ್ಲ. ಒಂದು ರೀತಿಯಲ್ಲಿ ಪ್ರವೃತ್ತಿ ವೈದ್ಯರಾಗಿರುತ್ತಾರೆ. ಕೆಲವರು ವಾರದಲ್ಲಿ ಒಂದೆರಡು ದಿನಗಳನ್ನು ಔಷದೋಪಚಾರಕ್ಕಾಗಿಯೇ ತಮ್ಮನ್ನು ತೊಡಗಿಸಿಕೊಂಡು ಇತರೆ ಕೆಲಸಕ್ಕೆ ಆ ದಿನಗಳಲ್ಲಿ ಹೋಗುವುದಿಲ್ಲ. ವೈದ್ಯಪದ್ಧತಿಗೆ ಯಾವುದೇ ಸಂಭಾವನೆ ರೂಪದಲ್ಲಿ ಪ್ರತಿಫಲವನ್ನು ಬಯಸುವುದಿಲ್ಲ.

ಇನ್ನೊಂದು ಮಹತ್ವದ ಸಂಗತಿ ಎಂದರೆ ಹೆಚ್ಚು ಪ್ರಚಲಿತದಲ್ಲಿರುವ ವೈದ್ಯರನ್ನು ಅನೇಕ ಮೈಲಿಗಳಿಂದ ರೋಗಿಗಳು ಬಂದು ಸಂದರ್ಶಿಸುವರು. ಅಲ್ಲದೇ ಅಂತವರನ್ನು ಹುಡುಕಿಕೊಂಡು ಹೋಗಿ ಔಷಧಿಯನ್ನು ಪಡೆಯುವುದು ಈ ಆಧುನಿಕತೆಯಲ್ಲಿಯ ಹಳ್ಳಿಗಳಲ್ಲಿ ಇದೇ ಅಂಶವನ್ನು ಮರೆಯುವಂತಿಲ್ಲ. ಅಲ್ಲದೆ ರೋಗ ಬಂದ ವ್ಯಕ್ತಿ ಇನ್ನೂ ಉಲ್ಬಣಗೊಂಡಿದ್ದಾನೆ ಎಂದು ತಿಳಿದರೆ ವಾರಗಳವರೆಗೆ ಅವನ ಮನೆಯಲ್ಲಿಯೆ ವೈದ್ಯೋಪಚಾರವನ್ನು ನೀಡುತ್ತಾನೆ. ಆದರೆ ಈ ಆಧುನಿಕತೆ ಯಲ್ಲಿ ಅಸ್ಪತ್ರೆಯ ವೈದ್ಯ ಪುಕ್ಕಟೆಯಾಗಿ ಔಷಧಿ ನೀಡುವುದಿಲ್ಲ. ಅಲ್ಲದೇ ಅವರು ಹಣವಿದ್ದವರ ಕಡೆ ಹೆಚ್ಚು ಗಮನ ಕೊಡುವರು.

ಜನಪದ ವೈದ್ಯ ಪದ್ಧತಿಯಲ್ಲಿ ಆಧುನಿಕತೆಯ ಮಾದರಿಯ ಒಲವುಗಳನ್ನು ಹೊಂದಿದ್ದಾರೆ. ಆಧುನಿಕತೆಯ ಜನಪದ ವೈದ್ಯ ಪದ್ಧತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಯಿದ್ದರೂ ತಲಾತಲಾಂತರದಿಂದ ಬಂದ ಅಂದರೆ ಮೂಲ ಜನಪದ ವೈದ್ಯಪದ್ಧತಿ ಆಚರಣೆ ಪದ್ಧತಿಗಳನ್ನು ಅಲ್ಲಿ ಇಲ್ಲಿ ಉಳಿಸಿಕೊಂಡಿರ ಬಹುದಾಗಿದೆ. ಅಲ್ಲದೇ ಶಿಷ್ಟ ವೈದ್ಯಪದ್ಧತಿಯನ್ನು ತಿರಸ್ಕರಿಸದೇ ನಾಟಿ ವೈದ್ಯಪದ್ಧತಿಯನ್ನು ಪ್ರೋತ್ಸಾಹ ಮಾಡದೇ ಎರಡು ಸಂಸ್ಕೃತಿಗಳ ಸಂಪ್ರದಾಯಗಳಿಗೂ ಒಗ್ಗುವ ಮೌಲ್ಯಗಳನ್ನು ನಾವಿಂದು ಪತ್ತೆ ಮಾಡುವಲ್ಲಿ ಪ್ರಧಾನ ಚಿಂತನೆಯನ್ನು ಮಾಡಬೇಕಾಗಿದೆ. ಅಲ್ಲದೇ ಎರಡು ಪ್ರಧಾನ ಸಂಸ್ಕೃತಿಗಳ ಮಗ್ಗಲುಗಳ್ನು ಇತಿಮಿತಿ, ಪರವಿರೋಧಗಳನ್ನು ಮನವರಿಕೆ ಮಾಡಿಕೊಂಡು ವೈದ್ಯ ಪದ್ಧತಿಯನ್ನು ಬಳಸುವುದು ಒಳ್ಳೆಯದು.

ಜನಪದ ವೈದ್ಯಪದ್ಧತಿಗೆ ಜನಸಾಮಾನ್ಯರಿಗೆ ಪ್ರಧಾನವಾಗಿರುತ್ತದೆ. ಅಲ್ಲದೇ ಹೆಚ್ಚು ಶ್ರೀಮಂತ ರಾಗಿರುವುದಿಲ್ಲ. ಆದರೆ ಶಿಷ್ಟ ವೈದ್ಯ ಪದ್ಧತಿಯು ಶ್ರೀಮಂತವಾಗಿರುತ್ತದೆ. ಜನಪದ ವೈದ್ಯ ಹಳ್ಳಿಗಳಲ್ಲಿ ಎಲ್ಲೆಂದರಲ್ಲಿ ದೊರೆಯುತ್ತದೆ. ಕಡಿಮೆ ವೆಚ್ಚದ್ದಾಗಿರುತ್ತದೆ. ಈಗ ಆಧುನಿಕ ಜಗತ್ತಿನಲ್ಲಿರುವ ಶಿಷ್ಟ ವೈದ್ಯ ಪದ್ಧತಿಗೆ ಭವ್ಯವಾದ ಕಟ್ಟಡಗಳೊಂದಿಗೆ ನಿರ್ಮಿತಗೊಂಡು ಬಹಳ ಅಚ್ಚುಕಟ್ಟಿನ ವ್ಯವಸ್ಥೆ ಇರುತ್ತದೆ. ಒಟ್ಟಿನಲ್ಲಿ ಆಧುನಿಕತೆಯ ಆಹ್ವಾನದೊಂದಿಗೆ ಜನಪದರು ಹಲವಾರು ಸಮಸ್ಯೆಗಳಿಗೆ ಗುರಿಯಾಗುತ್ತಿದ್ದಾರೆ. ಏಕೆಂದರೆ ವೈಜ್ಞಾನಿಕ ಅಭಿವೃದ್ಧಿಯೇ ಜನಪದ ಹಿನ್ನೆಡೆಗೆ ಕಾರಣವಾಗಿದೆ.

ಈ ಸಂದರ್ಭದಲ್ಲಿ ಮಾಹಿತಿ ತಂತ್ರಜ್ಞಾನ ವಿಕಾಸತೆಯಿಂದಾಗಿ ಜನಪದರ ಅನೇಕ ವೃತ್ತಿಗಳು ದಿನದಿಂದ ದಿನಕ್ಕೆ ಗೌಣವಾಗುತ್ತಿರುವುದಂತು ನಿಜ. ಅಲ್ಲದೇ ಶ್ರೀಮಂತ ವರ್ಗದವರು ಆಧುನಿಕತೆಯ ವೈದ್ಯಕ್ಕೆ ಹೆಚ್ಚು ಮಹತ್ವ ಕೊಡುತ್ತಿರುವುದರಿಂದ ಜನಪದ ವೈದ್ಯಪದ್ಧತಿಯೂ ಕುಂಠಿತಗೊಳ್ಳುತ್ತಿವೆ. ಜೊತೆಗೆ ಆಧುನಿಕತೆಗೆ ಗ್ರಾಮಜನಪದರು ಹೊಂದಿಕೊಳ್ಳುವುದರತ್ತ ಗಮನಹರಿಸಿದ್ದಾರೆ. ಅಲ್ಲದೇ ತಲಾತಲಾಂತರದಿಂದ ರೂಢಿಸಿಕೊಂಡು ಬಂದಂತಹ ವೈದ್ಯ ಪದ್ಧತಿಯತ್ತಾ ಅವರ ಮಕ್ಕಳು ಅಸಕ್ತಿ ವಹಿಸುತ್ತಿಲ್ಲ. ಅಲ್ಲದೇ ಶಿಕ್ಷಣದ ಕಡೆ ಮನಸ್ಸನ್ನು ವಾಲಿಸುತ್ತಿರುವುದರಿದಂ ಜನಪದ ವೈದ್ಯ ಪದ್ಧತಿಯೂ ಹಾಡಿಗಳಲ್ಲಿ ಅವನತಿಯ ಹಾದಿಯಲ್ಲಿ ಸಾಗುತ್ತಿದೆ. ಗಿಡಮೂಲಿಕೆಗಳ ನಶಿಸುವಿಕೆಯು ಇದಕ್ಕೆ ಒಂದು ಕಾರಣ ಎನ್ನಬಹುದು.

**೫.೭ ಆರೋಗ್ಯ ಕಾರ್ಯಕ್ರಮ ಕುರಿತು ಜಾಗೃತಿ**

ಜನತೆ ಆರೋಗ್ಯವಾಗಿರಲು ಆರೋಗ್ಯವಾದ ವಾತಾವರಣವನ್ನು ನಿರ್ಮಿಸಬೇಕು. ಈ ರೀತಿಯ ಆರೋಗ್ಯಕರ ವಾತಾವರಣ ನಿರ್ಮಿಸಬೇಕಾದರೆ ಅನಾರೋಗ್ಯ ಬಾರದಂತೆ ಮುನ್ನೆಚ್ಚರಿಕೆಯನ್ನು ವಹಿಸಿ ಇಲ್ಲವೆ ರೋಗವನ್ನು ಪತ್ತೆಹಚ್ಚಿ ಚಿಕಿತ್ಸೆ ಕೊಡಬೇಕು. ಒಟ್ಟಿನಲ್ಲಿ ಆರೋಗ್ಯ ವರ್ಧನೆಗೆ ಸಾಕಷ್ಟು ಪ್ರಾಮುಖ್ಯತೆ ನೀಡಲಾಗಿದೆ. ಸಂಪೂರ್ಣ ಶಾರೀರಿಕವಾಗಿ, ಮಾನಸಿಕವಾಗಿ ಮತ್ತು ಸಾಮಾಜಿಕವಾಗಿ ಆರೋಗ್ಯದಿಂದಿರುವುದು ಪರಿಪೂರ್ಣ ಆರೋಗ್ಯವಾಗಿದೆ. ಇಂತಹ ಆರೋಗ್ಯವನ್ನು ವ್ಯಕ್ತಿ, ಕುಟುಂಬ ಮತ್ತು ಸಮಾಜದಲ್ಲಿ ತರಲು ಪ್ರತಿಯೊಬ್ಬರಿಗೂ ಆರೋಗ್ಯದ ಅರಿವಿರಬೇಕಾಗುತ್ತದೆ. ಆರೋಗ್ಯ ಮತ್ತು ಅನಾರೋಗ್ಯದ ಬಗ್ಗೆ ಜನರಲ್ಲಿ ಅದರಲ್ಲೂ ಮಹಿಳೆಯರಲ್ಲಿ ತಮ್ಮದೇ ಆದ ಕೆಲವು ತಪ್ಪುಗ್ರಹಿಕೆಗಳು ಬೇರೂರಿವೆ. ಹಾಗಾಗಿ ಅವರಿಗೆ ಮನವೋಲಿಸುವ ಮೂಲಕ ಅವರ ಮನಃ ಪರಿವರ್ತನೆ ಮಾಡಿ ಆರೋಗ್ಯದ ಕಡೆಗೆ ಅವರ ಭಾವನೆಗಳನ್ನು ಬದಲಿಸುವ ಕೆಲಸ ಮಾಡಬೇಕಾಗಿದೆ. ಅಂದಾಗ ಮಾತ್ರ ಅನಾರೋಗ್ಯದ ಸ್ಥಿತಿಯನ್ನು ತಡೆಗಟ್ಟಲು ಸಾಧ್ಯವಾಗುತ್ತದೆ. ಅದರಲ್ಲೂ ಮಹಿಳೆಯರು ತಮ್ಮ ಆರೋಗ್ಯದ ಜವಾಬ್ದಾರಿಯನ್ನು ತಾವೇ ಅರಿಯುವಂತೆ ಅವರನ್ನು ಪ್ರೋತ್ಸಾಹಿಸುವ ಅಗತ್ಯತೆ ಇದೆ. ಹೀಗೆ ಔಪಚಾರಿಕ ಇಲ್ಲವೇ ಅನೌಪಚಾರಿಕವಾಗಿ ಆರೋಗ್ಯ ಶಿಕ್ಷಣವನ್ನು ಮಹಿಳೆಯರಿಗೆ ಮತ್ತು ಇತರರಿಗೆ ನೀಡುವುದರಿಂದ ಉತ್ತಮ ಆರೋಗ್ಯವಂತ ಸಮಾಜನಿರ್ಮಾಣ ಮಾಡಲು ಸಾಧ್ಯವಿದೆ. ಹೀಗೆ ಮಹಿಳೆಯರಲ್ಲಿ ಆರೋಗ್ಯದ ಜಾಗೃತಿಯನ್ನು ಉಂಟುಮಾಡುವ ಸಾಧನಗಳು ಯಾವುದೆಂದರೆ,

**೧. ಸಮೂಹ ಮಾಧ್ಯಮಗಳು**

ಜನತೆಗೆ ಏಕಕಾಲಕ್ಕೆ ಅನೇಕ ಸಂದೇಶಗಳನ್ನು ತಲುಪಿಸುವ ವಿಧಾನಕ್ಕೆ ಸಮೂಹ ಸಂವಹನ ಎನ್ನಬಹುದು. ಇದರಲ್ಲಿ ಬರುವಂತಹದು ಯಾವುದೆಂದರೆ: i. ಮುದ್ರಿತ ಸಾಹಿತ್ಯ ಸಾಧನಗಳು ii. ಪತ್ರಿಕೆಗಳು, ಭಿತ್ತಿಚಿತ್ರಗಳು, ಗೋಡೆಬರಹ iii. ಕರಪತ್ರಗಳು iv. ಪುಸ್ತಕಗಳು.

**೨. ಕಿವಿಯಿಂದ ಕೇಳಬಹುದಾದ ಸಾಧನಗಳು**

i. ರೇಡಿಯೋ, ii. ಟೇಪರೇಕಾರ್ಡ್

**೩. ಕೇಳುವ ಮತ್ತು ನೋಡುವ ಸಂಪರ್ಕ ಸಾಧನಗಳು**

i. ದೂರದರ್ಶನ ii. ಚಲನಚಿತ್ರ ಮಾಧ್ಯಮ

**೪. ಪ್ರದರ್ಶಿಸಬಹುದಾದ ಸಾಧನಗಳು**

i. ಫಿಲ್ಮ್‌ಸ್ಲೈಡ್ಸ್ ii. ಫಿಲ್ಮ್ ಸ್ಟ್ರೀಪ್ಸ್ iii. ಓವರ್‌ಹೆಡ್ ಪ್ರೋಜಕ್ಟರ್

**೫. ಸಾಂಪ್ರದಾಯಿಕ ಜನಪದ ಮಾಧ್ಯಮಗಳು**

**೬. ವೈದ್ಯರ ಮೂಲಕ**

ಆರೋಗ್ಯ ಶಿಕ್ಷಣ, ಆರೋಗ್ಯ ಸಹಾಯಕಿಯರ ಮೂಲಕ ಅಂಗನವಾಡಿ ಕಾರ್ಯಕರ್ತೆಯರ ಮೂಲಕ, ಗ್ರಾಮೀಣ ಮಹಿಳಾ ಆರೋಗ್ಯ ಸಂಘಗಳು, ಇವೆಲ್ಲವುಗಳ ಮೂಲಕ ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಆರೋಗ್ಯ ಜಾಗೃತಿಯನ್ನು ಮೂಡಿಸಬಹುದು.

**೫.೮ ಆರೋಗ್ಯ ಮತ್ತು ಸ್ವಯಂ ಸೇವಾಸಂಸ್ಥೆಗಳು**

ಖಾಸಗೀ ವಲಯದಲ್ಲಿರುವ ಅಸ್ಪತ್ರೆ, ನರ್ಸಿಂಗಂ ಹೋಂಗಳು, ಪಾಲಿಕ್ಲಿನಿಕ್‌ಗಳು, ಪರಿಣಿತ ವೈದ್ಯರು ಪ್ರಯೋಗಶಾಲೆಗಲು ಒದಗಿಸುತ್ತಿರುವ ಆರೋಗ್ಯ ಸೇವಾ ಸೌಲಭ್ಯಗಳು ಅತ್ಯಂತ ವಾಣಿಜ್ಯೀಕರಣಗೊಂಡಿರುವುದರಿಂದ ಅವು ಜನ ಸಾಮಾನ್ಯರಿಗೆ ಅದರಲ್ಲೂ ಬಡವಿಗೆ ನಿಲುಕದ ಸೇವೆಗಳಾಗಿವೆ. ಕರ್ನಾಟಕದಲ್ಲಿ ೧೯೭೪ರಲ್ಲಿ ಸ್ಥಾಪಿತವಾದ ಸೇವಾಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಅವುಗಳ ಪ್ರಾಮುಖ್ಯತೆ ಬಹಳಷಟಿದೆ. ಸರ್ಕಾರದಿಂದ ಬಂದಿರುವ ಕೆಲವೊಂದು ಯೋಜನೆಗಳಿಗೆ ಸೇವಾಸಂಸ್ಥೆಗಳು ಮಧ್ಯಸ್ಥಗಾರನ ಪಾತ್ರವನ್ನು ನಿರ್ವಹಿಸುತ್ತಿದೆ.

ಸ್ವಯಂ ಸೇವಾ ವಲಯದಲ್ಲಿ ಲಭ್ಯವಿರುವ ಆರೋಗ್ಯ ಸೇವಾ ಸೌಲಭ್ಯಗಳನ್ನು ಸಂಘಟಿಸುತ್ತದೆ. ಜನರಿಗೆ ಆರೋಗ್ಯದ ಬಗ್ಗೆ ಜಾಗೃತಿ ಮೂಡಿಸುವಲ್ಲಿ ಪ್ರಯತ್ನಗಳು ಮಾಡುತ್ತಿವೆ. ತರಬೇತಿ ಕಾರ್ಯಕ್ರಮಗಳನ್ನು ಸಂಘಟಿಸುವುದು ಮತ್ತು ಆರೋಗ್ಯ ಹಾಗೂ ವೈದ್ಯಕೀಯ ಕ್ಷೇತ್ರದಲ್ಲಿ ಆಗಿರುವ ಮತ್ತು ಆಗುತ್ತಿರುವ ಇತ್ತೀಚಿನ ಬದಲಾವಣೆಯ ಬಗ್ಗೆ ಮಾಹಿತಿಯನ್ನು ಪ್ರಸಾರ ಮಾಡುವುದು ಹಾಗೂ ಸಮುದಾಯದ ಆರೋಗ್ಯವನ್ನು ಸುಧಾರಿಸುವುದಾಗಿದೆ.

ಗೌಳಿಗರ ಅಭಿವೃದ್ಧಿಗೆಂದು ಉತ್ತರ ಕನ್ನಡ ಜಿಲ್ಲೆಯಲ್ಲಿ ೧೨ಕ್ಕೂ ಹೆಚ್ಚು ಸ್ವಯಂಸೇವಾ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಸರ್ಕಾರ ಆರೋಗ್ಯ ಹಾಗೂ ಇನ್ನಿತರ ಕಾರ್ಯಕ್ರಮಗಳನ್ನು ಗೌಳಿಗರಿಗೆ ತಲುಪಿಸುವಲ್ಲಿ ಹಾಗೂ ತಮ್ಮದೇ ಆದ ವಿಶೇಷ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರುವಲ್ಲಿ ಪ್ರಯತ್ನಿಸುತ್ತಿದೆ. ಯಲ್ಲಾಪುರ ತಾಲೂಕಿನ ಗೌಳಿ ಅಭಿವೃದ್ಧಿ ಸಂಘ, ಒಂದು ದಶಕದಿಂದ ಶಿಕ್ಷಣ, ಆರ್ಥಿಕ ಪ್ರಗತಿ ಕಾರ್ಯಕ್ರಮಗಳನ್ನು ಮಾಡುತ್ತಿದೆ. ಒಳ ಹಳ್ಳಿಗಳಲ್ಲಿ ಬಾಲವಾಡಿಗಳನ್ನು ತೆರೆದಿವೆ. ಮುಂಡಗೋಡಿನಲ್ಲಿರುವ ಲಯೋಲ ವಿಕಾಸ ಸಂಘ ಆರೋಗ್ಯ ಹಾಗೂ ಗ್ರಾಮೀಣ ಅಭಿವೃದ್ಧಿ

ಸೇವೆಯನ್ನು ನೀಡುತ್ತಿದೆ. ವನವಾಸಿ ಅರಣ್ಯ ಕೇಂದ್ರ ಮನೆಗಳಿಗೆ ವಸತಿಶಾಲೆ, ಶಿಕ್ಷಣ ಸೇವೆ ನೀಡುತ್ತಿದೆ. ೧೯೯೮ರಲ್ಲಿ ಪ್ರಾರಂಭವಾದ ಹಳಿಯಾಳದ ಭಗವತಿ ಮಂಡಳ ಪಂಚಾಯತ್ ವ್ಯಾಪ್ತಿಯಲ್ಲಿನ ೧೨ ವಾರ್ಡ್‌ಗಳ ಗೌಳಿಗರ ಆರೋಗ್ಯ, ಶಿಕ್ಷಣ, ಆರ್ಥಿಕ ಉನ್ನತಿಗಾಗಿ ಕಾರ್ಯಕ್ರಮ ರೂಪಿಸಿದೆ. ಗರ್ಭಿಣಿಯರು ಹಾಗೂ ಶಿಶುಗಳಿಗೆ ರೋಗ ನಿರೋಧಕ ಚುಚ್ಚುಮದ್ದುಗಳನ್ನು ಪಡೆಯುವಂತೆ ಪ್ರಯತ್ನಿಸುತ್ತಿವೆ. ಶಿಕ್ಷಣ, ವಸತಿ, ಕುಡಿಯುವ ನೀರು, ಶೌಚಾಲಯ, ಸೇರಿದಂತೆ ಮೂಲಭೂತ ಅಗತ್ಯಗಳನ್ನು ಗುರುತಿಸುವ, ಪೂರೈಸುವ ನಿಟ್ಟಿನಲ್ಲಿ ಈ ಸಂಸ್ಥೆಗಳು ತಮ್ಮ ಮಿತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಸ್ವಯಂ ಸೇವಾ ಸಂಸ್ಥೆಗಳ ಪ್ರಯತ್ನದಿಂದ ಇವತ್ತು ಮಕ್ಕಳು ಶಾಲೆಗೆ ಬರುತ್ತಿದ್ದಾರೆ. ಆರೋಗ್ಯ ಪರೀಕ್ಷೆಗೆ ಒಳಗಾಗುತ್ತಿದ್ದಾರೆ. ಮಹಿಳೆಯರಲ್ಲೂ ಕ್ರಮೇಣ ಜಾಗೃತಿ ಮೂಡುತ್ತಿದೆ. ಗರ್ಭಿಣಿ, ಬಾಣಂತಿ, ಮಕ್ಕಳ ಪೌಷ್ಠಿಕ ಆಹಾರ ಅಗತ್ಯಗಳನ್ನು ಕ್ರಮೇಣ ಅರಿಯ ತೊಡಗಿದ್ದಾರೆ. ಸ್ವಚ್ಛತೆಯ ಕಲ್ಪನೆ ಮೂಡುತ್ತಿದೆ. ಸ್ವಸಹಾಯ ಗುಂಪುಗಳು ರಚನೆಯಾಗುತ್ತಿವೆ. ಈ ಸ್ವಯಂ ಸೇವಾಸಂಸ್ಥೆಗಳು ತಮ್ಮ ಕಾರ್ಯವಿಧಾನ ವ್ಯವಹಾರಿಕ ಪಾರದರ್ಶಿಕೆಯನ್ನು ತಿಳಿಸಿ ಕಾರ್ಯವನ್ನು ನಿರ್ವಹಿಸಿದರೆ ಅವರ ಆರೋಗ್ಯದಲ್ಲಿ ಸುಧಾರಣೆ ಸಾಧ್ಯ.

**ಆಧಾರಗಳು**


೧. ಅಂಬಳಿಕೆ ಹಿರಿಯಣ್ಣ, ಕಚ್ಚೆಗೌಳಿಗರು, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧೨೦-೧೩೦

೨. ನೇಮಿಚಂದ್ರ (ಸಂ), ಮಹಿಳಾ ಅಧ್ಯಯನ, ೨೦೦೧ ಅಂಕಿತ ಪುಸ್ತಕ ಶ್ಯಾಮಸಿಂಗ್ ಕಾಂಪ್ಲೆಕ್ಸ್.

೩. ಲಕ್ಕಪ್ಪಗೌಡ ಎಚ್.ಜೆ., ಕರ್ನಾಟಕ ಬುಡಕಟ್ಟುಗಳು ಸಂಪುಟ-೧, ೨೦೦೦, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು. ೩೧-೩೯

೪. ಕವಿತಾ ರೈ, ವಿವಾಹ ಮತ್ತು ಕುಟುಂಬ, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು, ೨೦೦೭, ಜ್ಯೋತಿ ಪ್ರಕಾಶನ, ಮೈಸೂರು.

೬. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೭ ಇಂದಿರಾ ಆರ್., ಮಹಿಳೆ ಮತ್ತು ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೮. ಗಾಯತ್ರಿ ಎನ್., ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೯೫

೯. ಚಂದ್ರಶೇಖರ ಸಿ.ಆರ್., ಸಾಮಾಜಿಕ ನಂಬಿಕೆಗಳು ಮತ್ತು ಮಾನಸಿಕ ಆರೋಗ್ಯ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ, ಬೆಂಗಳೂರು, ೧೯೮೩

೧೦. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು, ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೧. ಶ್ರೀಮತಿ ಎಚ್.ಎಸ್., ಸಂ. ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ ಸಂಪುಟ-೧, ಸಂಚಿಕೆ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೨. ಸರೋಜ ಕೆ., ಮಹಿಳೆ ಮತ್ತು ಆರೋಗ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೩. ವಿಜಯಕುಮಾರಿ ಎಸ್., ಕರಿಕಲ್ ಮಹಿಳೆ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೧೪. ಶಿವಾನಂದ ಕಳವೆ, ಒಡಲನೋವಿನ ತೊಟ್ಟಿಲ ಹಾಡು, ೨೦೦೨, ಮಿತ್ರಮಧ್ಯಮ, ಬೆಂಗಳೂರು, ಪು.೧೫-೧೮, ೨೦-೨೨

೧೫. ನಾಯಕ್ ಎನ್.ಆರ್., ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ೧೯೯೩, ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು.

೧೬. ಜಾನಪದ ಕಲಾಮೇಳ, ಜಾನಪದ ಪ್ರಕಾಶನ, ಹೊನ್ನಾವರ, ೧೯೯೭.

14. R.M. Solrear, Primitive Tribal Groups in India, Serialas Publication, New Delhi, 2008, Pp. 256-296

15. Salil Basu, Tribal Health in India, Monal pub. New Delhi, 1994, Pp. 1-13, 70-84, 307-311

16. Bandana bhuyan, Child Development in Tribal Areas, Anmol Publication pvt. Ltd., New Delhi, 1999, Pp. 81-119

೧೭. ಡಾ. ಸಿ.ಎಸ್. ಶಿವಕುಮಾರಸ್ವಾಮಿ, ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾಲಯ, ೨೦೦೪

# ಅಧ್ಯಾಯ-ಆರು

## ಸಮಾರೋಪ

ಶ್ರೇಣಿಕೃತ ಸಮಾಜದಲ್ಲಿ ಅನೇಕ ವರ್ಗಭೇದಗಳಿದ್ದರು ಸಹ ಅಪಾರ ಜ್ಞಾನವನ್ನು ರೂಢಿಸಿ ಕೊಂಡಿರುವ ಅನೇಕಾನೇಕ ಸಮುದಾಯಗಳು ಇನ್ನು ನಮ್ಮ ಮಧ್ಯದಲ್ಲಿ ಅನನ್ಯತೆಯನ್ನು ಕಾಯ್ದು ಕೊಂಡಿವೆ. ಆಧುನಿಕ ಜಗತ್ತಿನ ಅಭಿವೃದ್ಧಿ ಚಕ್ರಕ್ಕೆ ಸಿಲುಕಿದ ಸಮುದಾಯಗಳು ಬದಲಾಗುವುದು ಸಹಜ ಕ್ರಿಯೆಯಾಗಿದೆ. ಬದಲಾವಣೆ ಎನ್ನುವುದು ಆರ್ಥಿಕವೃತ್ತದ ನೀತಿ ಏನೋ ನಿಜ. ಆದರೆ ಸಮುದಾಯಗಳ ಪಾರಂಪರಿಕ ಜ್ಞಾನ, ಪಾಂಡಿತ್ಯ, ಕಲೆ, ಮುಂತಾದ ವಿಷಯಗಳ ಸ್ಥಿತ್ಯಂತರ ಏನಾಯಿತು? ಎಂಬುದನ್ನು ತಿಳಿಯಲು ಸಮುದಾಯಗಳ ಅಧ್ಯಯನದ ಅವಶ್ಯಕತೆ ಇದೆ. ಈ ಶ್ರಮಿಕ ವರ್ಗವನ್ನು ನಿರಂತರವಾಗಿ ದೇಶವನ್ನು ಆಳಿದ ವಿವಿಧ ಪ್ರಭುತ್ವಗಳು ಅತ್ಯಂತ ಕ್ರೂರವಾಗಿ ನಡೆಸಿಕೊಂಡಿವೆ. ಅದರಲ್ಲೂ ಸ್ವಾತಂತ್ರ್ಯ ಪೂರ್ವದಲ್ಲಿ ಇಂಥವರ ದಬ್ಬಾಳಿಕೆಗೆ ನಲುಗಿದ ಸಮುದಾಯ ಗಳು ಇಂದು ಪ್ರಜಾಪ್ರಭುತ್ವದ ನಿರ್ಧಾರದಿಂದಾಗಿ ಈ ಅರವತ್ತು ವರ್ಷದಲ್ಲಾಗದ ಬದಲಾವಣೆಯ ಗಾಳಿಯಿಂದ ಸಮುದಾಯಗಳ ಚಿತ್ರಣಗಳು ಬದಲಾದವು.

ಪ್ರಸ್ತುತ ಗೌಳಿಗರನ್ನು ಮತ್ತು ಆ ಸಮುದಾಯದ ಮಹಿಳೆಯರ ಸ್ಥಿತ್ಯಂತರಗಳನ್ನು ಅದ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಗೌಳಿಗರೆಂದರೆ ಯಾರು? ಪ್ರಸ್ತುತ ಪ್ರಶ್ನೆಗೆ ಈಗಾಗಲೇ ಅನೇಕ ಹಿರಿಯ ವಿದ್ವಾಂಸರು ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಗೌಳಿಗ ಎಂಬ ಹೆಸರನ್ನು ಉತ್ಪತ್ತಿ ಶಾಸ್ತ್ರದ ವಿಧಾನದ ಮೂಲಕ ಅರ್ಥೈಸಲು ಪ್ರಯತ್ನಿಸಿದ್ದಾರೆ ಕೆಲವರು. ಗೌಳಿಗರ ಸೃಷ್ಟಿ ಪುರಾಣಗಳ ಮೂಲಕ ಗೌಳಿ ಸಮುದಾಯದ ಚಾರಿತ್ರಿಕತೆಯನ್ನು ವಿವರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

ಉತ್ತರ ಕನ್ನಡ ಜಿಲ್ಲೆಗೆ ಬಂದ ವಲಸೆಗರಲ್ಲಿ ಗೌಳಿಗರು ಪ್ರಮುಖರು. ಒಂದು ಬುಡಕಟ್ಟು ಸಮುದಾಯವೆಂದು ಪರಿಗಣಿಸಬಹುದಾದಷ್ಟು ದಟ್ಟ ಬುಡಕಟ್ಟು ಲಕ್ಷಣಗಳನ್ನು ಈ ಸಮುದಾಯ ಹೊಂದಿದೆ. ಕಚ್ಚೆ ಪದ್ಧತಿಯಲ್ಲಿ ಸೀರೆಯನ್ನುಟ್ಟು ಕೊರಳಿಗೆ ವಿವಿಧ ಮಣಿಸರಗಳನ್ನು ಹಾಕಿಕೊಂಡು ಕಣ್ಣಿಗೆ ಕಾಣುವ ಹಾಗೇ ಹಚ್ಚೆ ಹಾಕಿಸಿಕೊಂಡಿರುವ ಹೆಂಗಳೆಯರನ್ನು ನೋಡಿದಾಕ್ಷಣ ಇವರು ಗೌಳಿಗ ಮಹಿಳೆಯರು ಎಂಬುದು ಕ್ಷಣ ಮಾತ್ರದಲ್ಲಿ ಗುರುತಿಸಬಹುದು. ಈ ಪದ್ಧತಿಯಲ್ಲಿ ಸೀರೆಯುಟ್ಟು ಬಣ್ಣ ಬಣ್ಣದ ಕಪ್ಪು, ಕೆಂಪು, ಹಸಿರು, ಬಿಳಿ ಮಣಿಸರಗಳನ್ನು ಕೊರಳಲ್ಲಿ ಹಾಕಿಕೊಂಡ ಮಹಿಳೆಯರು ಗೋಚರಿಸುವುದು ಸಹ್ಯಾದ್ರಿಯ ಅರಣ್ಯದಲ್ಲಿ. ಸಹ್ಯಾದ್ರಿಯ ರಮಣೀಯ ಅರಣ್ಯಗಳಲ್ಲಿ ವಾಸಿಸುವ ಗೌಳಿಗರಲ್ಲಿ ಮಲೆನಾಡು ಮಂದಿಯ ಮೃದು ಸ್ವಭಾವ ಸಹಜವಾಗಿ ಮೈದಾಳಿವೆ. ಗೌಳಿಗರು ಕೇವಲ ತಮ್ಮ ಉಡುಗೆ ತೊಡುಗೆ ಆಭರಣ ಧರಿಸುವಿಕೆಯಿಂದ ಮಾತ್ರ ಉಳಿದ ಸಮುದಾಯಗಳಿಗಿಂತ ಭಿನ್ನವಾಗಿಲ್ಲ. ಗೌಳಿಗರ ನಿತ್ಯದ ಬದುಕು ಮತ್ತು ಪ್ರಾಚೀನ ಸಾಂಸ್ಕೃತಿಕ ಕುರುಹುಗಳಿಂದಲೂ ಇತರೇ ಸಮುದಾಯಗಳಿಗಿಂತ ಭಿನ್ನರಾಗಿದ್ದಾರೆ.

ಗೌಳಿಗರು ಕಣಿವೆ, ಅಗಮ್ಯ ಕಾಡುಗಳಲ್ಲಿ ವಾಸಿಸುತ್ತಿದ್ದರು ಸಹ ಮುಖ್ಯವಾಹಿನಿ ಎಂದು ಕರೆಯಲ್ಪಡುವ ಸಮಾಜದಿಂದ ದೂರ ಉಳಿದಿಲ್ಲ. ತಮ್ಮ ಪಾರಂಪರಿಕ ಉಡುಗೆ-ತೊಡುಗೆ ಆಭರಣಗಳೊಂದಿಗೆ ಕಾಣಿಸಿಕೊಂಡರೂ ಸಹ ಗೌಳಿಗರಲ್ಲಿ ಮುಖ್ಯವಾಹಿನಿಯ ಸಾಮಾಜಿಕ ಮೌಲ್ಯಗಳು ಅಂತರ್ಗತವಾಗಿವೆ. ಏಕೆಂದರೆ ಸಾಮಾಜಿಕ ಬಾಹ್ಯ ಶ್ರೇಣೀಕರಣವಾಗಲಿ ಮತ್ತು ಆಂತರಿಕ ಶ್ರೇಣೀಕರಣವಾಗಲಿ ಮುಖ್ಯವಾಹಿನಿ ಸಮಾಜದಲ್ಲಿದ್ದಂತೆ ಗೌಳಿಗರಲ್ಲೂ ಆಚರಣೆಯಲ್ಲಿವೆ. ಜೊತೆಗೆ ಹೊರಜಗತ್ತಿನ ಸಮಾಜಗಳಲ್ಲಿದ್ದಂತೆ ಲಿಂಗತಾರತಮ್ಯತೆ ಮತ್ತು ಮಹಿಳೆಯರ ಮೇಲಿನ ದೌರ್ಜನ್ಯ ಗೌಳಿಗರಲ್ಲೂ ಇದೆ. ಗೌಳಿಗರಲ್ಲಿ ಅಸಮಾನತೆಯ ಸ್ವರೂಪ ಮತ್ತು ತಾರತಮ್ಯ ವ್ಯವಸ್ಥೆಯು ಸೈದ್ಧಾಂತಿಕವಾಗಿ ಮುಖ್ಯವಾಹಿನಿಗಿಂತ ಭಿನ್ನವಾಗೇನು ಇಲ್ಲ. ಈ ಕಾರಣದಿಂದಾಗಿ ಗೌಳಿಗರ ಸಾಮಾಜಿಕ ಸಂರಚನೆಯನ್ನು ಪ್ರತ್ಯೇಕವಾಗಿ ನೋಡುವ ಅಗತ್ಯವಿಲ್ಲ. ಗೌಳಿಗ ಸಮಾಜದಲ್ಲಿ ಮಹಿಳೆಯು ಪುರುಷನಷ್ಟೇ ಅಥವಾ ಅವನಿಗಿಂತ ಹೆಚ್ಚು ದುಡಿಯುತ್ತಾಳೆ. ಕುಟುಂಬದ ಆರ್ಥಿಕ ನಿರ್ವಹಣೆಯಲ್ಲಿ ಮಹಿಳೆ ಪ್ರಧಾನ ಪಾತ್ರವಹಿಸುತ್ತಾಳೆ. ಪುರುಷನಷ್ಟೇ ಬುದ್ಧಿ ಮತ್ತು ಭೌತಿಕ ಬಲವನ್ನು ವಿನಿಯೋಗಿಸಿ ದುಡಿದು ಫಲಿತದ ಮೇಲೆ ಅವಳಿಗೆ ಯಾವ ಹಕ್ಕು ಇಲ್ಲ. ಬೆಳಗ್ಗೆ ನಾಲ್ಕು ಗಂಟೆಯಿಂದ ಪ್ರಾರಂಭವಾಗುವ ಅವಳ ದುಡಿಮೆ, ಆತಂಕ, ಸಂದಿಗ್ಧತೆ, ಅನಿಶ್ಚಿತತೆ ಮತ್ತು ಮುತ್ತಿಕಾಡುವ ಅಸಹಾಯಕತೆ ರಾತ್ರಿ ಮಲಗುವವರೆಗೂ ಸಾಗುತ್ತವೆ. ಬೆಳಗಿನಿಂದಲೇ ಶುರುವಾಗುವ ಮನೆಗೆಲಸ ಮತ್ತು ಹಟ್ಟಿಯ ಕೆಲಸ ಮತ್ತು ಹೊತ್ತು ಹುಟ್ಟುವ ನಂತರ ಪ್ರಾರಂಭವಾಗುವ ಕೂಲಿಕೆಲಸ, ಹೊತ್ತು ಮುಳುಗಿದ ಮೇಲೆ ನಿರ್ವಹಿಸಲೇಬೇಕಾದ ನಿತ್ಯದ ಮನೆಗೆಲಸಗಳ ಮಧ್ಯೆ ಈ ಸಮುದಾಯದ ಮಹಿಳೆ ಮೇಲ್ನೋಟಕ್ಕೆ ಸ್ವತಂತ್ರಳು. ದಿನನಿತ್ಯ ದುಡಿಯುವುದಕ್ಕೆ ದಿನನಿತ್ಯ ತನ್ನ ದೈಹಿಕ ತೊಂದರೆಗಳೊಂದಿಗೆ ಅವುಡುಗಚ್ಚಿ ಕಷ್ಟ ಸಹಿಸಿಕೊಳ್ಳುವುದು ಅವಳ ಕರ್ತವ್ಯವಾಗಿದೆ.

ಈ ಕಾರಣಕ್ಕಾಗಿ ಉತ್ತರ ಕನ್ನಡ ಜಿಲ್ಲೆಯ ಗೌಳಿಗರ ಹಾಡಿಗಳನ್ನು ಆಯ್ದುಕೊಂಡು ಗೌಳಿಗರ ಮಹಿಳೆಯ ಬದಲಾದ ಬದುಕಿನ ಏರಿಳಿತಗಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಿದ್ದೇನೆ. ಬದಲಾವಣೆಯನ್ನು ಸಾಂಸ್ಕೃತಿಕರಣ, ಪಾಶ್ಚಾತೀಕರಣ ಎಂಬ ಪರಿಭಾಷೆಯಲ್ಲಿ ಮಾತ್ರ ವಿವರಿಸಿಕೊಳ್ಳಲಾಗಿದೆ. ಆದರೆ ಸ್ಥಿತ್ಯಂತರವನ್ನು ಅದಕ್ಕೂ ಮೀರಿದ ನಿತ್ಯದ ಬವಣೆಗಳನ್ನು ಪೂರೈಸಿಕೊಳ್ಳುವ ಪ್ರಕ್ರಿಯೆಯೆಂದು ಭಾವಿಸುವ ಅಗತ್ಯವೆಂದು ಭಾವಿಸಲಾಗಿದೆ. ಏಕೆಂದರೆ ನಾನು ಆಯ್ದುಕೊಂಡ ಹಾಡಿಗಳಲ್ಲಿ ನಿತ್ಯ ದುಡಿವ ಮತ್ತು ದುಡಿದುಣ್ಣಲೇಬೇಕಾದ ಸ್ಥಿತಿಯಲ್ಲಿರುವ ಗೌಳಿಗರಂತಹ ಜನಕ್ಕೆ ಬದಲಾವಣೆಯ ಪ್ರಶ್ನೆಯೆನ್ನುವುದು ಕೇವಲ ಒಪ್ಪತ್ತಿನ ಊಟದ ಪ್ರಶ್ನೆಯೇ ಆಗಿದೆ. ಈ ನಿಟ್ಟಿನಲ್ಲಿ ಸದರಿ ಸಂಪ್ರಬಂಧದಲ್ಲಿ ಗೌಳಿಗ ಮಹಿಳೆಯರ ಸ್ಥಿತ್ಯಂತರಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ನಾನು ಅಧ್ಯಯನಕ್ಕೆ ಆಯ್ದುಕೊಂಡ ಹಾಡಿಗಳಿಂದ ಅಂಕಿ ಅಂಶಗಳನ್ನು ಪಡೆದುಕೊಂಡು, ಅಲ್ಲದೆ ಈ ಹಾಡಿಗಳ ಜೊತೆ ನಿರಂತರ ಸಂಪರ್ಕದಲ್ಲಿದ್ದು ಪಡೆದ ಮತ್ತು ನನ್ನ ಸ್ವಂತ ಅನುಭವದ ಮಾಹಿತಿಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಇಲ್ಲಿನ ಅಧ್ಯಾಯಗಳಲ್ಲಿ ನಾನು ಪಡೆದ ಅಂಕಿ ಅಂಶಗಳನ್ನು ಮತ್ತು ಮಾಹಿತಿಗಳನ್ನು ಸದ್ಯ ಸಮಾಜಶಾಸ್ತ್ರ ಪ್ರಮೇಯಗಳ ಮೂಲಕ ವಿವರಿಸಿಕೊಳ್ಳುವ ಪ್ರಯತ್ನ ಮಾಡಿದ್ದೇನೆ.

ಅತ್ಯಂತ ಪುರಾತನ ಹಾಗೂ ಅತ್ಯಂತ ಆಧುನಿಕ ಮೌಲ್ಯಗಳು ಇಂದಿಗೂ ಸಮುದಾಯದೊಳಗಡೆ ಜೀವಂತವಾಗಿವೆ. ದೇಶಿಯ ಜ್ಞಾನವನ್ನು ಬಳಸಿಕೊಳ್ಳುವುದನ್ನು ಸಹ ನಾವು ಕಾಣುತ್ತೇವೆ. ಸಮುದಾಯ ಜನ ಜೀವನದಲ್ಲಿ ಕಂಡುಬರುವ ವೈವಿಧ್ಯತೆ ಮತ್ತು ಭಿನ್ನತೆ ಈ ಸಮುದಾಯದ ವೈಶಿಷ್ಟ್ಯಗಳಲ್ಲೊಂದು. ಅಸಮಾನತೆ ಎಂಬುದು ಸಮಾಜದಲ್ಲಿ ಅಸ್ತಿತ್ವದಲ್ಲಿರುವುದು ಈ ಅಸಮಾನತೆಯನ್ನು ಗುರುತಿಸಲಾಗುತ್ತಿದ್ದು, ಇಂದು ಆರ್ಥಿಕ ಅಂಶಗಳ ಮೂಲಕ ಇದು ಹೆಚ್ಚು ಪ್ರಚಲಿತದಲ್ಲಿ ಇರುವುದನ್ನು ಕಾಣಬಹುದಾಗಿದೆ. ಇಂದು ಆರ್ಥಿಕ ಸ್ಥಿತಿಗತಿ ಸಮುದಾಯದ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುತ್ತವೆ. ಆರ್ಥಿಕ ಅಸಮಾನತೆ ಸಮುದಾಯವೊಂದರ ಮುಂದುವರಿಕೆ ಹಾಗೂ ಹಿಂದುಳಿಯುವಿಕೆ ಮೇಲೆ ಪ್ರಭಾವ ಬೀರುತ್ತವೆ. ಶತಮಾನಗಳಿಂದ ಸಾಮಾಜಿಕ ಮತ್ತು ಆರ್ಥಿಕ ಅಧಿಕಾರಗಳಿಂದ ದೂರ ಉಳಿದ ಸಮುದಾಯಗಳು ಇಂದು ವರ್ತಮಾನದಲ್ಲಿ ಬದುಕುತ್ತಿದ್ದಾರೆ. ಅಂದರೆ ಸಮುದಾಯಗಳು ಇಂದು ಮುಖ್ಯ ಪ್ರವಾಹದ ಜೊತೆಗೆ ಸೇರಲಾಗದೆ ಸ್ಥಗಿತ ನಿಲುವಿನಲ್ಲಿ ಉಳಿದುಬಿಟ್ಟಂತೆ ಭಾಸವಾಗುತ್ತದೆ. ತಮ್ಮ ಸ್ವಾರ್ಥಕ್ಕಾಗಿ ಸಮುದಾಯಗಳನ್ನು ಬಲಿಕೊಡುತ್ತಿವೆ. ಹೀಗೆ ಶೋಷಿತ ಸಮುದಾಯಗಳ ಪ್ರತಿರೋಧಕ ಧ್ವನಿಗಳನ್ನು ಅಭಿವ್ಯಕ್ತಿಗೊಳಿಸುವುದನ್ನು ಅವುಗಳ ಸಾಮುದಾಯಿಕ ಆಗುಹೋಗುಗಳ ಭಾಗವಾಗಿಯೇ ನೋಡಬೇಕಾದ ಜರೂರಿದೆ. ಗೌಳಿಗರು ತಮ್ಮ ಪಾರಂಪರಿಕ ವೃತ್ತಿಗಳನ್ನು ಕಳೆದುಕೊಂಡು ಸಂದಿಗ್ಧ ಸ್ಥಿತಿಯಲ್ಲಿ ಸಿಲುಕಿದ್ದಾರೆ. ವೃತ್ತಿಗೆ ಉಂಟಾಗಿರುವ ಸಮಸ್ಯೆ, ಮೇವಿನ ಸಮಸ್ಯೆ, ಸ್ಥಳಾಂತರದ ಸಮಸ್ಯೆ ಹಾಗೂ ಇತರ ಸಮುದಾಯಗಳೊಂದಿಗೆ ಹೊಂದಾಣಿಕೆ ಮತ್ತು ಬೇರೆ ವೃತ್ತಿಗೆ ಅಂಟಿಕೊಳ್ಳಲು ಆಗದಿರುವಿಕೆ ಮುಂತಾದ ಸಮಸ್ಯೆಗಳಿಗೆ ಇವರು ಮುಖಾಮುಖಿಯಾಗಿದ್ದಾರೆ.

ಗೌಳಿ ಸಮುದಾಯವು ತನ್ನ ಮೂಲ ಪಾರಂಪರಿಕ ಕಸುಬಿನಿಂದ ಮತ್ತೊಂದು ಕಸುಬಿಗೆ ಬದಲಾಗಬೇಕಾದ ಸಂದರ್ಭದಲ್ಲಿ ಒಂದು ಸಂಘರ್ಷವೇರ್ಪಾಡುತ್ತದೆ. ಅದೇ ರೀತಿ ಈ ಸಮುದಾಯಕ್ಕೆ ಬೇರೆ ವೃತ್ತಿ ಇವರಿಗೆ ಅನಿವಾರ್ಯದ ಆರ್ಥಿಕ ಮೂಲವಾಗಿ ಪರಿಣಮಿಸಿದೆ. ಅಲ್ಲದೆ ಸ್ವಾತಂತ್ರ್ಯ ಸಿಕ್ಕು ಹಲವು ದಶಕಗಳ ನಂತರ ಇವರಿಗೆ ಲಭಿಸಿದ್ದ ಸಂವಿಧಾನ ಬದ್ಧ ಅನುಕೂಲಗಳೂ ಸಹ ಇವರ ಬದುಕಿನಲ್ಲಿ ತೀವ್ರ ಬದಲಾವಣೆಗಳಾಗಲು ಕಾರಣಗಳಾಗಿವೆ. ಆದರೆ ಮಹಿಳೆಯರಿಗೆ ಸಂವಿಧಾನದ ಮೂಲಕ ಮೀಸಲಾತಿಯನ್ನು ನೀಡಿದಾಕ್ಷಣ ಈ ಸಮಾಜದಲ್ಲಿ ಫಲಾನುಭವಿ ಗೌಳಿಗ ಸಮುದಾಯಗಳು ಅಭಿವೃದ್ಧಿಯಾಗಿ ಬಿಟ್ಟಿವೆ. ಅವರಿಗಾಗಿ ಮೀಸಲಿಟ್ಟ ಹಣ ಯೋಜನೆಗಳಿಂದ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಮುಂತಾದ ರಂಗದಲ್ಲಿ ಈ ಸಮುದಾಯಗಳು ಸಬಲೀಕರಣಗೊಂಡಿವೆ ಎಂಬುದು ಕೇವಲ ಸಾಂದರ್ಭಿಕವಾದ, ಸತ್ಯಕ್ಕೆ ದೂರವಾದ ಮಾತಾಗುತ್ತದೆ. ಈ ಸಮುದಾಯಗಳು ಅನುಕೂಲಗಳನ್ನು ಪಡೆದುಕೊಳ್ಳುವ ಪ್ರಾಥಮಿಕ ಹಂತಕ್ಕೂ ಬಂದು ನಿಂತಿಲ್ಲ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯ ಮಾಡಿದ ಪ್ರದೇಶಗಳಲ್ಲಿ ಇಂದಿಗೂ ಗೌಳಿಗರು ವಾಸಿಸುತ್ತಿರುವ ವಿವಿಧ ಹಾಡಿಗಳಲ್ಲಿ ಮಹಿಳೆಯರು ಪಶುಪಾಲನೆ ಮತ್ತು ಕೃಷಿಯನ್ನು ಅವಲಂಬಿಸಿದ್ದಾರೆ. ಪ್ರಸ್ತುತ ಕ್ಷೇತ್ರಕಾರ್ಯ ಮಾಡಿದ ನೆಲೆಗಳಲ್ಲಿ ಗೌಳಿಗ ಮಹಿಳೆಯರು ಕೂಲಿಯನ್ನು ಆರ್ಥಿಕ ಮೂಲವನ್ನಾಗಿ ಕಂಡುಕೊಂಡಿದ್ದಾರೆ. ಆರ್ಥಿಕ ಪರಾವಲಂಬನೆ ಒಂದು ರೀತಿಯ ವಿಷವರ್ತುಲವಾಗಿರುವುದರಿಂದ ಗೌಳಿಗರು ಸಾಮಾಜಿಕ ಶ್ರೇಣಿಯಲ್ಲಿ ಮೇಲೆ ಚಲಿಸಲು ಸಾಧ್ಯವಾಗುತ್ತಿಲ್ಲ. ಹಾಡಿಗಳಲ್ಲಿ ಸರ್ಕಾರದ ಯಾವುದೇ ಸೌಲಭ್ಯ, ಸವಲತ್ತುಗಳು ನೀಡಿದರು ಅದು ಸಮುದಾಯದ ತನಕ ಬರುವಷ್ಟರಲ್ಲಿ ನಿಸ್ತೇಜಗೊಂಡಿರುತ್ತದೆ. ಇದರಿಂದಾಗಿ ಯೋಜನೆಗಳ ಪೂರ್ಣ ಲಾಭವನ್ನು ಸಮುದಾಯಗಳು ಪಡೆಯಲಾಗುವುದಿಲ್ಲ. ಇದರಿಂದ ಸಮಾಜದಲ್ಲಿ ಅಸಮಾನತೆಯೂ ಹೆಚ್ಚಾಗಿ ಅಂತರವನ್ನು ಸೃಷ್ಟಿಸುತ್ತಾ ಇದೆ.

ಗೌಳಿಗರ ಜೀವನ ವಿಧಾನದಲ್ಲಿ ಆರ್ಥಿಕ ಅಂಶವು ಪ್ರಗತಿ ಹೊಂದಿದಂತೆ ತನ್ನ ಬಾಹ್ಯ ರೂಪವನ್ನು ಬದಲಾಯಿಸಿದೆ. ಇವರು ಬದಲಾದ ಸಮಾಜದೊಂದಿಗೆ ತಮ್ಮ ಜೀವನವನ್ನು ಅದಕ್ಕೆ ತಕ್ಕ ಹಾಗೆ ಹೊಂದಿಸಿಕೊಂಡು ತಮ್ಮ ಸಾಂಸ್ಕೃತಿಕ ಚಹರೆಗಳನ್ನು ಉಳಿಸಿಕೊಂಡಿದ್ದಾರೆ. ಶತಮಾನ ಗಳಿಂದ ಕಾಲ ಚಕ್ರಕ್ಕೆ ಸಿಲುಕಿ ದಿನವು ಈ ಸಮುದಾಯದ ಸ್ವರೂಪ ಬದಲಾಗುತ್ತಲೇ ಇದೆ. ಆದರೆ ಕ್ರಾಂತಿಕಾರಿ ಬದಲಾವಣೆಗಳಾಗಿವೆ ಎಂದು ಹೇಳಲು ಸಾಧ್ಯವಿಲ್ಲ. ಕ್ಷೇತ್ರಕಾರ್ಯ ಮಾಡಿದ ಹಾಡಿಗಳಲ್ಲಿನ ಜನರ ಸ್ವ ಪ್ರಯತ್ನಗಳಿಂದ ಸರ್ಕಾರದ ಕೆಲವು ಸೌಲಭ್ಯಗಳನ್ನು ಬಳಸಿಕೊಂಡು ಕಿರುವತ್ತಿ, ಹೊಸಳ್ಳಿ, ಬದ್ದಿಗೇರಿ, ಮೈನಳ್ಳಿ ಕೆಲವೊಂದು ಮೂಲ ಸೌಲಭ್ಯಗಳನ್ನು ಹೊಂದಿ ಸ್ವಲ್ಪಮಟ್ಟಿನ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸುತ್ತಾ ಇವೆ. ಆದರೆ ವಿಟ್ನಾಳ ಮತ್ತು ಅಂಬಾವಾಡೆ ಹಾಡಿಗಳು ಈ ಮಟ್ಟಿನ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸುವಲ್ಲಿ ಹಿಂದುಳಿವೆ. ಪಟ್ಟಣದ ಜೊತೆ ಸಂಪರ್ಕ ಹೊಂದಿ ಒಂದಕ್ಕಿಂತ ಹೆಚ್ಚಿನ ಆರ್ಥಿಕ ಚಟುವಟಿಕೆಗಳನ್ನು ಅವಲಂಬಿಸಿರುವ ಕುಟುಂಬಗಳು ಸ್ವಲ್ಪ ಹೆಚ್ಚಿನ ಸಾಮಾಜಿಕ, ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಿವೆ. ನಿಶ್ಚಿತ ಆರ್ಥಿಕ ಮೂಲ ಮತ್ತು

ಹೊರಜಗತ್ತಿನ ಮುಕ್ತ ಆರ್ಥಿಕ ಚಟುವಟಿಕೆಗಳ ಬೆಂಬಲವಿಲ್ಲದೆ ಹಳಿಯಾಳದ ಹಾಡಿಗಳು ಆರ್ಥಿಕವಾಗಿ ಸೊರಗಿವೆ.

ಇತರ ಮುಂದುವರೆದ ಸಮುದಾಯಗಳ ಜೊತೆಗೆ ಅವಶ್ಯಕವಾಗಿ ಸಂಪರ್ಕವನ್ನು ಇಟ್ಟುಕೊಳ್ಳ ಬೇಕಾಗಿರುವುದರಿಂದ ಅಂದರೆ ಇಂದು ಇದರ ತೀವ್ರತೆ ಹೆಚ್ಚುತ್ತಿರುವುದನ್ನು ಕಾಣಬಹುದಾಗಿದೆ. ಅನೇಕ ಲಕ್ಷಣಗಳನ್ನು ಸ್ಥಳೀಯ ಪ್ರಬಲ ಜಾತಿ ಸಮಾಜದ ಮಹಿಳೆಯರಿಂದ ಗೌಳಗ ಮಹಿಳೆಯರು ಎರವಲಾಗಿ ಪಡೆದುಕೊಂಡು ಪ್ರಾದೇಶಿಕ ಐಕ್ಯತೆಯನ್ನು ಹೊಂದುತ್ತಿದ್ದಾರೆ. ಏಕೆಂದರೆ ಆರ್ಥಿಕ, ಸಾಮಾಜಿಕ, ರಾಜಕೀಯ, ಅಂತರ ಸಂಪರ್ಕ ಮತ್ತು ಅವಲಂಬನೆಯು ಇಂದು ಅವಶ್ಯಕವಾಗಿದೆ. ಇಂದು ಮುಖ್ಯಾಧಾರೆಗೆ ಒಳಪಡುವ ಸಮುದಾಯದ ಜೊತೆ ಬೆರೆಯುತ್ತಿದ್ದಾರೆ. ಹಾಗೆಯೇ ಸಮುದಾಯಗಳ ಒಳಗೆ ಕೂಡಾ ಸಾಂಪ್ರದಾಯಿಕ, ಸಾಮಾಜಿಕ ನಿಯಂತ್ರಣಗಳ ಮಹತ್ವ ಕಡಿಮೆ ಯಾಗುತ್ತಿದೆ. ಹಾಡಿಗಳಲ್ಲಿ ಮಹಿಳೆಯರು ಆದುನಿಕ ಮಾದರಿಯ ಉಡುಗೆಗಳನ್ನು ಅಳವಡಿಸಿ ಕೊಂಡಿದ್ದಾರೆ. ಪಟ್ಟಣ ಮತ್ತು ನಗರ ಸಂಪರ್ಕ ಹೊಂದಿದ್ದರಿಂದ ತಮ್ಮಲ್ಲಿ ದೊರಕುವ ಆರ್ಥಿಕ ಅಂಶಗಳಂದ ಬದಲಾವಣೆಯ ಮಹತ್ವಾಕಾಂಕ್ಷೆಯನ್ನು ಹೊಂದಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಜೀವನಕ್ಕಾಗಿ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡಿದ್ದರೂ ಬಡತನದಲ್ಲಿಯೇ ಬಹುಪಾಲು ಜನರು ಇದ್ದಾರೆ. ಸಾಕ್ಷರತೆಯ ಪ್ರಮಾಣವು ಇಳಿಮುಖವಾಗಿದೆ. ಇವತ್ತು ಮೂಲವೃತ್ತಿ ಈ ಪರಿಸ್ಥಿತಿ ಯಿಂದ ಹೊರಬರುವ ಅನಿವಾರ್ಯವಾಗಿ ದುಡಿಯಲು ಕೂಲಿ ದೊರೆಯುವ ಕಡೆ ತಾತ್ಕಾಲಿಕ ವಲಸೆ ಹೋಗಿ ಕಡಿಮೆ ಕೂಲಿ ಪಡೆದು ವಿಧಿ ಇಲ್ಲದೇ ಕೆಲಸ ಮಾಡುತ್ತಿದ್ದಾರೆ.

ಕಾಲ ಬದಲಾದಂತೆ ಇವರ ಹಲವಾರು ಆಚರಣೆಗಳು, ರೂಢಿ ಸಂಪ್ರದಾಯಗಳು, ಬದಲಾಗುತ್ತಾ ಹೊಸ ರೂಪವನ್ನು ಪಡೆದರೆ ಕೆಲವು ಮಾಯಾವಾಗುತ್ತಿವೆ. ಆಧುನಿಕ ಜೀವನಕ್ರಮವನ್ನು ಅಳವಡಿಸಿ ಕೊಂಡು ಶಿಕ್ಷಣ, ಉದ್ಯೋಗ ಪಡೆಯಲು ಹೆಚ್ಚು ಆಸಕ್ತರಾಗಿ ತಮ್ಮ ಸ್ಥಾನವನ್ನು ಉತ್ತಮಪಡಿಸಿ ಕೊಳ್ಳಬೇಕು. ತಾವು ಕೂಡಾ ಆಸ್ತಿ, ಅಂತಸ್ತು, ಉದ್ಯೋಗ ಪಡೆಯಬೇಕೆಂಬ ಮನೋಭಾವನೆ ತಾಳುತ್ತಿದ್ದಾರೆ. ಆದರೆ ಗೌಳಿ ಮಹಿಳೆಯರಲ್ಲಿ ಈ ಮನೋಭಾವನೆಯ ಬಗ್ಗೆ ಅಷ್ಟು ಆಸಕ್ತಿ ಇದ್ದಂತಿಲ್ಲ. ಪ್ರಾಥಮಿಕ ಶಾಲೆಯೊಂದೇ ಹಾಡಿಗಳಲ್ಲಿ ಇರುವುದರಿಂದ ಪ್ರಾಥಮಿಕ ಶಿಕ್ಷಣವನ್ನು ಹೆಚ್ಚು ಪಡೆಯುತ್ತಾರೆ. ಮುಂದಿನ ಶಿಕ್ಷಣವನ್ನು ಕಾರಣಗಳಗನುಗುಣವಾಗಿ ಅರ್ಧದಲ್ಲಿಯೇ ಬಿಟ್ಟು ಹೆಣ್ಣುಮಕ್ಕಳು ಮನೆಗೆಲಸ ದಲ್ಲಿ ತೊಡಗಿಸಿಕೊಳ್ಳುತ್ತಾರೆ. ಹಾಡಿಗಳಲ್ಲಿ ಇತ್ತೀಚೆಗೆ ಹೆಣ್ಣುಮಕ್ಕಳು ಕಾಲೇಜು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಅದು ಬೆರಳೆಣಿಕೆಯಷ್ಟು ಐದಾರು ಮಂದಿ ಬಿಟ್ಟರೆ ಯಾರು ಸ್ನಾತಕೋತ್ತರ ಪದವಿಧರರು ಕಂಡುಬಂದಿರುವುದಿಲ್ಲ. ಹೊಸ ಹೊಸ ಬದಲಾವಣೆಗಳು ಸಮಾಜದಲ್ಲಿ ಆಗುತ್ತಿದ್ದರೂ ಮಹಿಳೆಯರಲ್ಲಿ ಸ್ಥಿತ್ಯಂತರ ಎನ್ನುವುದು ಅವರ ಮಾಡುತ್ತಿದ್ದ ಮೂಲ ವೃತ್ತಿಗಳಲ್ಲಿ ಸಮಸ್ಯೆಗಳಿಗೆ ಅನುಗುಣವಾಗಿ ಬದಲಾವಣೆ ಕಾಣಬಹುದು. ಇದರ ಜೊತೆಗೆ ವೇಷಭೂಷಣಗಳಲ್ಲಿ ಮತ್ತು ಜನಪದ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿದ್ದ ಇವರು ಆಧುನಿಕ ವೈದ್ಯಕೀಯ ಪದ್ಧತಿ ಕಡೆಗೆ ಸಾಗುತ್ತಿದ್ದಾರೆ. ಹೀಗೆ ಬದಲಾವಣೆಯನ್ನು ಮೂರು ನಾಲ್ಕು ಕ್ಷೇತ್ರಗಳಲ್ಲಿ ಕಾಣಬಹುದು. ಆದರೆ ಈ ಸಮುದಾಯದ

ಸಾಮಾಜಿಕ ಚರಿತ್ರೆಯಲ್ಲಿ ಮಹಿಳೆಗೆ ಯಾವ ಅಧಿಕಾರ ವಲಯದಲ್ಲೂ ಸ್ಥಾನಮಾನಗಳು ಲಭ್ಯವಾಗಿಲ್ಲದಿರುವುದು ಕಂಡುಬರುತ್ತದೆ. ಗೌಳಿಗರ ನ್ಯಾಯ ಪಂಚಾಯಿತಿಯ ನಿರ್ಣಾಯಕ ಅಧಿಕಾರ ಸ್ಥಾನಗಳಗಾಗಲೀ ರಾಜಕೀಯ ಆಧಿಕಾರವಾಗಲಿ ಮಹಿಳೆಗೆ ದಕ್ಕದೆ ಹೋಗಿರುವುದು ಈ ಸಮುದಾಯದ ಮೌಖಿಕ ಚರಿತ್ರೆಯಲ್ಲಿ ಕಂಡುಬರುತ್ತದೆ.

**ಅಧ್ಯಯನದ ಆಶಯಗಳು**

೧. ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟಾಗಿರುವ ಬದಲಾವಣೆಯನ್ನು ಅಧ್ಯಯನಿಸಿವುದು.

೨. ಪುರುಷರಿಗಿದ್ದಷ್ಟು ಸ್ಥಾನ ಮಹಿಳೆಯರಿಗೆ ಇರದೇ ಇರುವುದಕ್ಕೆ ಕಾರಣವನ್ನು ಗುರುತಿಸುವುದು.

೩. ಲಿಂಗ ಅಸಮಾನತೆಯನ್ನು ಕಂಡುಕೊಳ್ಳುವುದು.

೪. ಕೆಲಸದ ಸ್ವರೂಪ ಯಾವ ರೀತಿಯಲ್ಲಿ ಕಂಡುಬರುತ್ತದೆ ಎನ್ನುವುದನ್ನು ನೋಡಿರುವುದು.

೫. ವರ್ತಮಾನದಲ್ಲಿ ಗೌಳಿಗ ಮಹಿಳೆಯರ ಸ್ಥಾನಮಾನವೇನು? ಎನ್ನುವುದನ್ನು ಗುರುತಿಸುವುದು.

೬. ಸ್ಥಿತ್ಯಂತರಗಳಗೆ ಈ ಸಮುದಾಯಗಳು ಹೇಗೆ ಸ್ಪಂದಿಸುತ್ತಿವೆ ಹಾಗೂ ಸ್ಥಿತ್ಯಂತರದ ಸ್ವರೂಪವೇನು? ಎನ್ನುವುದನ್ನು ಕಂಡುಕೊಂಡಿದ್ದು.

**ಅಧ್ಯಯನದ ಫಲಿತಗಳು**

೧. ಗೌಳಿಗರು ಹೆಚ್ಚಾಗಿ ಅರಣ್ಯವಿರುವ ಮಲೆನಾಡು ಪ್ರದೇಶದಲ್ಲಿ ವಾಸವಾಗಿದ್ದು ಉಳಿದ ಭಾಗಗಳಲ್ಲಿ ವಿರಳವಾಗಿ ವಾಸವಾಗಿರುವರು.

೨. ವಲಸೆ ಬಂದು ನೆಲೆನಿಂತ ಸಮುದಾಯದ ಮೇಲೆ ವೈಧಿಕ ಆಚರಣೆಗಳು ಪ್ರಭಾವವು ಆಗಿದೆ.

೩. ಹಚ್ಚೆ ಹಾಗೂ ಚಿತ್ತಾರದ ಕರಕುಶಲದಲ್ಲಿ ಗೌಳಿಗರು ನಿಷ್ಣತರಾಗಿದ್ದಾರೆ.

೪. ಪ್ರಕೃತಿಗೆ ಸಂಬಂಧಿಸಿದ ಆಚರಣೆಗಳು ಹಾಗೂ ವಿರೋಬನ ಸಂಬಂಧಿತ ಆಚರಣೆಗಳು ಹೆಚ್ಚಾಗಿ ಕಂಡುಬರುತ್ತವೆ.

೫. ಬೇಟೆ, ಪಶುಪಾಲನೆ ಸ್ಥಿತಿಯಲ್ಲಿ ಪರಿವರ್ತನೆ ಆಗಿದ್ದರಿಂದ ಇವರು ಇಂದು ಎಲ್ಲಾ ಕ್ಷೇತ್ರಗಳಲ್ಲೂ ಕಂಡುಬರುತ್ತಿದ್ದಾರೆ.

೬. ಆಧುನಿಕತೆ ಮತ್ತು ಜಾಗತೀಕರಣ ವ್ಯವಸ್ಥೆಯಲ್ಲಿಯೂ ಕೂಡ ತಮ್ಮ ಸಂಪ್ರದಾಯ, ಆಚರಣೆಗಳು ಮತ್ತು ಜನಪದವನ್ನು ಇಂದಿಗೂ ಉಳಿಸಿಕೊಂಡಿದ್ದಾರೆ.

೭. ಗೌಳಿಗರು ಕಣಿವೆ, ಅಗಮ್ಯ ಕಾಡುಗಳಲ್ಲಿ ವಾಸಿಸುತ್ತಿದ್ದರು ಸಹ ಮುಖ್ಯವಾಹಿನಿ ಎಂದು ಕರೆಯಲ್ಪಡುವ ಸಮಾಜದಿಂದ ದೂರ ಉಳಿದಿಲ್ಲ. ತಮ್ಮ ಪಾರಂಪರಿಕ ಉಡುಗೆ ತೊಡುಗೆ ಆಭರಣಗಳೊಂದಿಗೆ ಕಾಣಿಸಿಕೊಂಡರೂ ಸಹ ಗೌಳಿಗರಲ್ಲಿ ಮುಖ್ಯವಾಹಿನಿಯ ಸಾಮಾಜಿಕ ಮೌಲ್ಯಗಳು ಅಂತರ್ಗತವಾಗಿವೆ.

೮. ವೃತ್ತಿಗೆ ಉಂಟಾಗಿರುವ ಸಮಸ್ಯೆ, ಮೇವಿನ ಸಮಸ್ಯೆ, ಸ್ಥಳಾಂತರದ ಸಮಸ್ಯೆ ಹಾಗೂ ಇತರ ಸಮುದಾಯಗಳೊಂದಿಗೆ ಹೊಂದಾಣಿಕೆ ಮತ್ತು ಬೇರೆ ವೃತ್ತಿಗೆ ಅಂಟಿಕೊಳ್ಳಲು ಆಗದಿರುವಿಕೆ ಮುಂತಾದ ಸಮಸ್ಯೆಗಳಿಗೆ ಇವರು ಮುಖಾಮುಖಿಯಾಗಿದ್ದಾರೆ.

೯. ವಿವಿಧ ಹಾಡಿಗಳಲ್ಲಿ ಮಹಿಳೆಯರು ಪಶುಪಾಲನೆ ಮತ್ತು ಕೃಷಿಯನ್ನು ಅವಲಂಬಿಸಿದ್ದಾರೆ.

೧೦. ಗೌಳಿಗ ಮಹಿಳೆಯರು ಕೂಲಿಯನ್ನು ಆರ್ಥಿಕ ಮೂಲವನ್ನಾಗಿ ಕಂಡುಕೊಂಡಿದ್ದಾರೆ.

೧೧. ಆರ್ಥಿಕ ಪರಾವಲಂಬನೆ ಒಂದು ರೀತಿಯ ವಿಷವರ್ತುಲವಾಗಿರುವುದರಿಂದ ಗೌಳಿಗರು ಸಾಮಾಜಿಕ ಶ್ರೇಣಿಯಲ್ಲಿ ಮೇಲೆ ಚಲಿಸಲು ಸಾಧ್ಯವಾಗುತ್ತಿಲ್ಲ.

೧೨. ಹಾಡಿಗಳಲ್ಲಿ ಸರ್ಕಾರದ ಯಾವುದೇ ಸೌಲಭ್ಯ, ಸವಲತ್ತುಗಳು ನೀಡಿದರು ಅದು ಸಮುದಾಯದ ತನಕ ಬರುವಷ್ಟರಲ್ಲಿ ನಿಸ್ತೇಜಗೊಂಡಿರುತ್ತದೆ. ಇದರಿಂದಾಗಿ ಯೋಜನೆಗಳ ಪೂರ್ಣ ಲಾಭವನ್ನು ಸಮುದಾಯಗಲು ಪಡೆಯಲಾಗುವುದಿಲ್ಲ. ಇದರಿಂದ ಸಮಾಜದಲ್ಲಿ ಅಸಮಾನತೆಯೂ ಹೆಚ್ಚಾಗಿ ಅಂತರವನ್ನು ಸೃಷ್ಟಿಸುತ್ತಾ ಇದೆ.

**ಸಲಹೆಗಳು**

ಗೌಳಿಗ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ ಹಿನ್ನೆಲೆಯಲ್ಲಿ ಈ ಸಮುದಾಯ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಗುರುತಿಸಲಾಗಿದೆ. ಸಮಸ್ಯೆಗಳ ಪರಿಹಾರಕ್ಕಾಗಿ ಈ ಕೆಳಗಿನ ಸೂಕ್ತ ಸಲಹೆಗಳನ್ನು ನೀಡಲಾಗಿದೆ. ಸಮಾಜ, ಸರ್ಕಾರ, ಸಂಘ-ಸಂಸ್ಥೆಗಳು ಈ ಕುರಿತು ಗಂಭೀರವಾಗಿ ಚಿಂತಿಸಿ ಸಹಾಯ ಹಸ್ತ ನೀಡಬೇಕಾಗಿದೆ.

೧. ಅವಳ ಪ್ರಜನೋತ್ಪತ್ತಿ ಸಾಧ್ಯತೆ ಅಪರಿಮಿತ ದುಡಿಮೆ ಮತ್ತು ಸ್ವಹಿತರಹಿತ ದುಡಿಮೆಯ ಕಾರಣಕ್ಕಾಗಿ ಒಟ್ಟಾರೆಯಾಗಿ ಮಹಿಳೆ ಮಾನವ ಬದುಕಿನಲ್ಲಿ ತನ್ನದೇ ಆದ ಮಹೋನ್ನತಿಯನ್ನು ಹೊಂದಿದ್ದಾಳೆ. ಈ ಕಾರಣಕ್ಕಾಗಿ ಮಹಿಳೆಗೆ ಪುರುಷನಷ್ಟೇ ಸಾಮಾಜಿಕ ಸ್ಥಾನಮಾನಗಳು ಲಭ್ಯವಾಗಬೇಕು.

೨. ಕುಟುಂಬದ ಒಟ್ಟಾರೆಯ ನಿರ್ವಹಣೆ ಮತ್ತು ಜವಾಬ್ದಾರಿಗಳು ಮಹಿಳೆಯಿಂದ ಜಾರಿಯಲ್ಲಪಡುತ್ತವೆ. ಕುಟುಂಬದ ಶೇ. ೯೫ರಷ್ಟು ಭಾಗದ ನಿರ್ವಹಣೆ ಮಹಿಳೆಯಿಂದಲೇ ಸಾಧ್ಯವಾಗುತ್ತವೆ. ಈ ಕಾರಣದಿಂದ ಕುಟುಂಬದ ಒಟ್ಟಾರೆ ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಮಹಿಳೆಯ ನಿರ್ಣಯಕ ಪಾತ್ರ ವಹಿಸುವಂತಾಗಬೇಕು.

೩. ನ್ಯಾಯ ಪಂಚಾಯತಿ ಮತ್ತು ಸಾಂಸ್ಕೃತಿಕ ವಲಯದ ಮಹತ್ವದ ಸ್ಥಾನಮಾನಗಳಲ್ಲಿ ಮಹಿಳೆಯರು ಭಾಗವಹಿಸುವಂತಾಗಬೇಕು.

೪. ಧಾರ್ಮಿಕವಾಗಿ ಮೂಢನಂಬಿಕೆ ಎಂಬ ಚೌಕಟ್ಟಿನಲ್ಲಿ ಬರುವ ಅನೇಕ ವಿಧಿ-ನಿಷೇಧಗಳು ಮತ್ತು ಕಂದಾಚಾರಗಳು, ಮಹಿಳೆಯರನ್ನು ಗುರಿಯಾಗಿಸಿಕೊಂಡಿರುತ್ತದೆ. ಈ ಮೂಢನಂಬಿಕೆಗಳು

ಮತ್ತು ಕಂದಾಚಾರಗಳು ಇಲ್ಲವಾಗಬೇಕು. ಮಹಿಳೆಯರು ಈ ಬಗೆಯ ಶೋಷಣೆಗಳಿಂದ ಮುಕ್ತವಾಗಬೇಕು.

೫. ಮಹಿಳೆಯರಲ್ಲಿ ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಸ್ವಾವಲಂಬನೆಯಾಗಬೇಕು.

**ಮುಂದಿನ ಅಧ್ಯಯನದ ಸಾಧ್ಯತೆಗಳು**

ಗೌಳಿಗರ ಸಂಸ್ಕೃತಿ ಮರೆಮಾಚುವ ಸಂದರ್ಭದಲ್ಲಿ ರಾಜ್ಯದ ವಿಶ್ವವಿದ್ಯಾಲಯದ ಸಂಶೋಧಕರು, ಅಧ್ಯಯನಕಾರರು, ಗೌಳಿಗ ಸಮುದಾಯದ ಬಗ್ಗೆ, ಸಾಮಾಜಿಕ, ರಾಜಕೀಯ, ಆರ್ಥಿಕ, ಮಹಿಳಾ ಮತ್ತು ಮಾನವಶಾಸ್ತ್ರೀಯ ದೃಷ್ಟಿಕೋನಗಳಲ್ಲಿ ಅಧ್ಯಯನ ಮಾಡಬಹುದಾಗಿದೆ.
ಗೌಳಿಗರ ಮಹಿಳೆಯರ ಸ್ಥಿತ್ಯಂತರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಇಲ್ಲಿ ನೀಡಿರುವ ಹಲವು ಅನುಭವಗಳು ಮತ್ತು ಮಾಹಿತಿಗಳು ಪ್ರಬಂಧದ್ದುಕ್ಕೂ ಕಂಡುಬರುತ್ತದೆ. ಅವರ ಚಿತ್ರಣವನ್ನು ಕೊಡಲು ಪ್ರಯತ್ನಿಸಿದ್ದೇನೆ. ಅದರೆ ಈ ಅಧ್ಯಾಯದಲ್ಲಿ ನನ್ನ ಗಮನಕ್ಕೆ ಬಾರದ ಹಾಗೂ ವ್ಯಕ್ತಪಡಿಸಲಾಗದ ಎಷ್ಟೋ ವಿಷಯಗಳು ಉಳಿದಿರಬಹುದು. ಆದರೂ ಈ ಎಲ್ಲಾ ಮಾಹಿತಿಗಳು ಮುಂದೆ ಬೇರೆ ಬಗೆಯ ಅಧ್ಯಯನಗಳಿಗೆ ಹೆಚ್ಚು ಪೂರಕವಾಗಬಲ್ಲದು ಎಂಬುದು ನನ್ನ ನಂಬಿಕೆ.

# ಅನುಬಂಧಗಳು

* ಪರಾಮರ್ಶನ ಗ್ರಂಥಗಳು
* ಮಾಹಿತಿದಾರರ ವಿವರ
* ಪ್ರಶ್ನಾವಳಿ
* ವ್ಯಕ್ತಿ ಸಂದರ್ಶನ ಪ್ರಶ್ನಾವಳಿ
* ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು


ಅಂಬಳಿಕೆ ಹಿರಿಯಣ್ಣ, **ಕಚ್ಚೆಗೌಳಿಗರ ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ಆರಾಧ್ಯ ಬಿ.ಎಂ.ಎಂ., **ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ**, ಕರ್ನಾಟಕ ಸರ್ಕಾರ ವಿಧಾನಸೌಧ, ಬೆಂಗಳೂರು, ೧೯೮೫

ಅಮಾರ್ತ್ಯಸೇನ್ (ಅನು), ಚಂದ್ರಶೇಖರ ಟಿ.ಆರ್., **ಅಮರ್ತ್ಯಸೇನ್ ಅವರ ಅಭಿವೃದ್ಧಿ ಅಧ್ಯಯನಗಳು**, ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಕುವೆಂಪು ನಗರ, ಬೆಂಗಳೂರು, ೧೯೯೯

ಅಶ್ವಿನಿ ಧೋಂಗಡೆ, **ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಅಂಬಳಿಕೆ ಹಿರಿಯಣ್ಣ., ಮಲೆನಾಡು ಜಾನಪದ ಸಂಪ್ರದಾಯಗಳು, ಪುಸ್ತಕ ಚಿಲುಮೆ ಪ್ರಕಾಶನ ಮೈಸೂರು, ೧೯೭೮

ಅಂಜನಪ್ಪ ಬಿ.ಎಚ್., ಮಹಿಳೆ ಮತ್ತು ದುಡಿಮೆ, ಸೃಷ್ಟಿ ಪ್ರಕಾಶನ, ಬೆಂಗಳೂರು, ೨೦೦೬

ಅಂಬೇಡ್ಕರ್ ಬಿ.ಆರ್. (ಅನು), ಡಾ. ಮ.ನ.ಜವರಯ್ಯ, **ಜಾತಿಸೆಲೆ ಮತ್ತು ಮಹಿಳೆ**, ಶೃತಿ ಪ್ರಕಾಶನ, ಮೈಸೂರು, ೨೦೦೦

ಇಂದಿರಾ ಆರ್., **ಮಹಿಳೆ ಸಮಾಜ ಮತ್ತು ಸಂಸ್ಕೃತಿ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಇಂದಿರಾ ಆರ್., ಸ್ತ್ರೀವಾದ ದಿಕ್ಸೂಚಿ, ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೫

ಉಷಾ ಎಂ., **ಮಹಿಳೆ ಮತ್ತು ಜಾತಿ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಉಷಾ ಎಂ., **ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಉಷಾ ಎಂ., **ಮಹಿಳಾ ಚಳುವಳ ಮತ್ತು ಮಹಿಳಾ ವಿಷಯಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಒಡೆಯರ್ ಡಿ. ಹೆಗ್ಗಡೆ, ಎನ್, ಅನ್ನಪೂರ್ಣೇಶ್ವರಿ, **ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು**, ಪ್ರಕಾಶಕರು ಮಾನವಾಭಿವೃದ್ಧಿ ಅಧ್ಯಯನ ಕೇಂದ್ರ,ಮೈಸೂರು, ೨೦೦೩

ಕದರಮಂಡಲಗಿ ಎಸ್.ಜಿ., **ಭೂಬಳಕೆ ಯೋಜನೆ**, ೧೯೯೧

ಕಮಲಾ ಹಂಪನಾ, **ಬೊಗಸೆ** (ಮಹಿಳೆ ಸುತ್ತಮುತ್ತ), ಸಿವಿಜಿ ಪಬ್ಲಿಕೇಷನ್, ಬೆಂಗಳೂರು, ೨೦೦೩

ಕೈಂತಜೆ ವಿಷ್ಣುಭಟ್, **ಕೃಷಿಲೋಕ ಪ್ರವೇಶ**, ಕನ್ನಡ ಪ್ರಪಂಚ ಪ್ರಕಾಶನ, ದರ್ಬೆ, ೧೯೯೨

ಕಾಳೇಗೌಡ ನಾಗವಾರ, ನಟರಾಜ ಹುಳಿಯಾರ್ (ಸಂ) **ಸ್ವಾತಂತ್ರ್ಯದ ಅಂತರ್ಜಲ** (ರಾಮಮನೋಹರ ಲೋಹಿಯ ಲೇಖನಗಳು), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೪

ಕೃಷ್ಣ ಬಿ.ಆರ್., **ಆಧುನೀಕರಣ ಸಮಾಜಶಾಸ್ತ್ರ**, ಚೇತನ ಬುಕ್‌ಹೌಸ್, ಮೈಸೂರು.

ಕೃಷ್ಣಕುಮಾರ ಸಿ.ಪಿ., (ಅನು) **ಕಾಡಿನ ಹಾಡುಗಳು** (ವೆರಿಯರ್ ಎಲ್ವಿನ್ ಶಾಮರಾವ್ ಹಿವಾಲೆ) ಜನಪದ ಅಕಾಡೆಮಿ, ಬೆಂಗಳೂರು, ೧೯೮೮

ಖಂಡೋಬಾ ಪಿ.ಕೆ., (ಪ್ರ.ಸಂ) **ನಾಯಕ ಡಿ.ಬಿ. ಗಿರಿಜನ ಸಿರಿ,** ಪ್ರೊ. ಖಂಡೋಬಾ ಅಭಿನಂದನಾ ಸಮಿತಿ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೩

ಗಾಯಿತ್ರಿ ನಾವಡ., **ಮಹಿಳಾ ಸಂಕಥನ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

ಗಾಯಿತ್ರಿ ನಾವಡ., **ಭಾರತೀಯ ಸ್ತ್ರೀವಾದ ಒಂದು ಸಂಕಥನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಗಾಯಿತ್ರಿ ನಾವಡ., **ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು,** ರಾಷ್ಟ್ರಕವಿ ಗೋವಿಂದ ಪೈ. ಸಂಶೋಧನಾಕೇಂದ್ರ, ಉಡುಪಿ, ಸಿರಿ ಪ್ರಕಾಶನ, ಹೊಸಪೇಟೆ, ೧೯೯೯

ಗೀತಾ ಕೃಷ್ಣಮೂರ್ತಿ., **ಮಹಿಳೆ ಕಾನೂನು ಮತ್ತು** ರಾಜಕಾರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಗುರುಮೂರ್ತಿ ಕೆ.ಜಿ., ಜನಪದ ಸಮಾಜ ಮತ್ತು ಸಂಸ್ಕೃತಿ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೯

ಗೋಪಾಲಕೃಷ್ಣರಾವ್., **ಸಾಮಾಜಿಕ ರಾಜಕೀಯ ಜ್ಞಾನದ ಮೂಲ ಪಾಠಗಳು,** (ಅನು) ಪ್ರಗತಿ ಪ್ರಕಾಶನ, ಬೆಂಗಳೂರು, ೧೯೮೬

ಗಂಗಾಧರ ದೈವಜ್ಞ., **ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

ಚಿದಾನಂದಮೂರ್ತಿ ಎಂ., **ಸಂಶೋಧನಾ ತರಂಗ** ಸಂ-೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೦

ಚಂದ್ರಶೇಖರ ಬಿ. ದಾಮ್ಲೆ., **ಭಾರತೀಯ ಸಾಮಾಜಿಕ ಅಧ್ಯಯನ,** ನವೀನ ಪ್ರಕಾಶನ, ಬೆಂಗಳೂರು, ೧೯೫೨

ಚಂದ್ರಶೇಖರ ಟಿ.ಆರ್., **ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

ಚಂದ್ರಶೇಖರ ಟಿ.ಆರ್., **ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಜೋಗನ್ ಶಂಕರ., **ಗ್ರಾಮಸಮಾಜ,** ಜೀವ ಪ್ರಕಾಶನ, ಮೈಸೂರು, ೧೯೯೮

ಜ್ಯೋತಿ ಶಶಿಕುಮಾರ, **ಮಹಿಳಾ ಸಾಮಾಜಿಕತೆ,** ಪ್ರಕಾಶನ ಶ್ರೀಮತಿ ಎಚ್.ಎಸ್., ಕನ್ನಡ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಜ್ಯೋತ್ಸ್ನಾ ಕಾಮತ್, **ಮಹಿಳೆ ಒಂದು ಅಧ್ಯಯನ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯

ನಾಗರಾಜ ಸಿ.ವಿ., **ಜನಸಂಖ್ಯೆ ಮತ್ತು ಅಭಿವೃದ್ಧಿ ಶಿಕ್ಷಣ,** ಎಸ್‌ಬಿಎಸ್ ಪಬ್ಲಿಕೇಷನ್, ಬೆಂಗಳೂರು, ೧೯೯೯

ನಾಗಭೂಷಣ ಸ್ವಾಮಿ ಓ.ಎಲ್., **ಪುರಾಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩

ನಾಗೇಗೌಡ ಎಚ್.ಎಲ್., (ಅನು) **ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ**, ಸಾಹಿತ್ಯ ಸದನ ಪ್ರಕಾಶನ, ಬೆಂಗಳೂರು, ೧೯೬೭

ನಾಗೇಶ ಎಚ್.ವಿ., **ಗ್ರಾಮೀಣ ನ್ಯಾಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

ನಾಗಪ್ಪ ಜೆ.ಆರ್., **ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ**, ಚೇತನಬುಕ್ ಹೌಸ್, ಮೈಸೂರು, ೨೦೦೭

ನಾಯಕ ಎನ್.ಆರ್., (ಸಂ) **ಕಾರವಾರ ಜಿಲ್ಲೆಯ ಜನಪದ ಗೀತೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

ನಾಯಕ ಎನ್.ಆರ್., **ಉತ್ತರ ಕನ್ನಡದ ಸಂಸ್ಕೃತಿ**, ಜಾನಪದ ಪ್ರಕಾಶನ, ಹೊನ್ನಾವರ, ಉ.ಕ. ೧೯೮೯

ನಾಯಕ ಎನ್.ಆರ್., **ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ನಾಯಕ ಎನ್.ಆರ್., **ಜಾನಪದ ಮೆಲಕು**, ಜಾನಪದ ಪ್ರಕಾಶನ, ಹೊನ್ನಾವರ, ೧೯೮೯

ನಾಯಕ ಎನ್.ಆರ್., ಜಾನಪದ ಕವಳ ಕೇಳ, ಜಾನಪದ ಪ್ರಕಾಶನ, ಹೊನ್ನಾವರ, ೧೯೯೭

ನಾಯಕ ಎನ್.ಆರ್., **ಸುಗ್ಗಿಯ ಪದಗಳು**, ಜಾನಪದ ಪ್ರಕಾಶನ, ಹೊನ್ನಾವರ, ೧೯೮೯

ನಾರಾಯಣ ಕೆ.ವಿ., **ನಮ್ಮೊಡನೆ ನಮ್ಮ ನುಡಿ**, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫

ಪುರುಷೋತ್ತಮ ಬಿಳಿಮಲೆ, **ಕೂತುಕಟ್ಟು**, ಆನಂದ ಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೧೯೯೭

ಪ್ರಭಾಕರ ಎ.ಎಸ್., **ಬುಡಕಟ್ಟು ಅಭಿವೃದ್ಧಿ ಮೀಮಾಂಸೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಪ್ರಭಾಕರ ಎ.ಎಸ್., **ಬುಡಕಟ್ಟು ಬದುಕಿನ ಸ್ಥಿತ್ಯಂತರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಪ್ರಭಾಕರ ಎ.ಎಸ್., **ಆದಿವಾಸಿ ಅಜ್ಞಾನ**, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬

ಪ್ರಭಾವತಿ ಎಸ್.ವಿ., **ಮಹಿಳಾ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು**, ರವಿ ಪ್ರಿಂಟರ್ಸ್, ವಿಜಯನಗರ, ಬೆಂಗಳೂರು, ೨೦೦೨

ಪ್ರಮೋದ ಹೆಗಡೆ, **ಅಡವಿಯಲ್ಲಿ ಬಿಡದಿ ಮಾಡಿರುವ ಗೌಳಿಗರು**, ರಾಜೇಗೌಡ (ಸಂ) ಜನಪದ ಗಂಗೋತ್ರಿ ಕರ್ನಾಟಕ ಜನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೪

ಪ್ರೀತಿ ಶುಭಚಂದ್ರ., **ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಭಗವತ್ ಶರಣ ಉಪಾಧ್ಯಾಯ, **ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೧

ಬೀರಣ್ಣ ನಾಯಕ ಮೊಗಟಾ, **ಹಾಲಿನ ಹೊನಲ ಗೌಳಿಗಳು**, ಕನ್ನಡ ರಾಜ್ ಪ್ರಿಂಟರ್ಸ್ ಮತ್ತು ಪಬ್ಲಿಕೇಷನ್ಸ್, ಬೆಳಗಾವಿ ೧೯೯೭

ಬೋರಲಿಂಗಯ್ಯ ಹಿ.ಚಿ., (ಸಂ). **ಕರ್ನಾಟಕ ಅಭಿವೃದ್ಧಿ ಪಥ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೦೭

ಬೋರಲಿಂಗಯ್ಯ ಹಿ.ಚಿ., **ಬುಡಕಟ್ಟು ದೈವಾರಾಧನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಬೋರಲಿಂಗಯ್ಯ ಹಿ.ಚಿ., **ವಿಸ್ಮೃತಿ ಮತ್ತು ಸಂಸ್ಕೃತಿ**, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧

ಬೋರಲಿಂಗಯ್ಯ ಹಿ.ಚಿ., **ಗಿರಿಜನ ನಾಡಿಗೆ ಪಯಣ**, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧

ಬೋರಲಿಂಗಯ್ಯ ಹಿ.ಚಿ., **ಕಾಡುಕಾಂಕ್ರೀಟ್ ಮತ್ತು ಜಾನಪದ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫

ಬೋರಲಿಂಗಯ್ಯ ಹಿ.ಚಿ., **ಕರ್ನಾಟಕ ಜನಪದ ಕಲೆಗಳ ಕೋಶ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

ಬೋರಲಿಂಗಯ್ಯ ಹಿ.ಚಿ., ಸಿದ್ಧಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ಬೋರಲಿಂಗಯ್ಯ ಹಿ.ಚಿ., *ಒಂದು ಬುಡಕಟ್ಟಿನ ಲೋಕದೃಷ್ಟಿ* (ಪಿಎಚ್.ಡಿ. ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಬೈರಪ್ಪ ಕೆ., **ಸಮಾಜಶಾಸ್ತ್ರದ ಮೂಲತತ್ವಗಳು**, ೧೯೯೫-೯೭, ಸುರೇಶ ಪಬ್ಲಿಕೇಷನ್, ಗದಗ

ಮನುಚಕ್ರವರ್ತಿ., **ಭಾರತೀಯ ಸ್ತ್ರೀವಾದ**, ಅಕ್ಷರ ಚಿಂತನ ಹೆಗ್ಗೋಡು, ೧೯೯೩

ಮಧುಕೇಶ್ವರ., ಗಾಂಧೀಜಿ ಮತ್ತು ಮಹಿಳೆಯರು, ಪ್ರಕಾಶನ ವಿಭಾಗ ಜನಪದ ಸೇವಾ ಟ್ರಸ್ಟ್, ಮೇಲುಕೋಟೆ, ೧೯೯೩

ಮೂರ್ತಿಶ್ವರಯ್ಯ, **ಮಹಿಳೆ ಸಮಾಜ ಮತ್ತು ಕಾನೂನು**, ಕರ್ನಾಟಕ ಬುಕ್ ಏಜೆನ್ಸಿಸ್, ಬೆಂಗಳೂರು, ೨೦೦೦

ಮಂಗಳಾ ಪ್ರಿಯದರ್ಶಿನಿ ಡಿ., **ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ**, ಪ್ರಸಾರಾಂಗ ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಮಂಜುನಾಥ ಬೇವಿನಕಟ್ಟಿ., **ಜನಪದ ಸಂಸ್ಕೃತಿ**, ತೇಜಸ್ವಿ ಪ್ರಕಾಶನ, ಹ್ಯಾರಡ, ೧೯೯೮

ಮೈತ್ರಿ ಕೆ.ಎಂ., ಚೆಲುವರಾಜು (ಸಂ). **ಬುಡಕಟ್ಟು ಅಧ್ಯಯನ**, ಸಂಪುಟ-೨, ಸಂಚಿಕೆ-೧, ಜನವರಿ-ಜೂನ್, ೨೦೦೬ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೇತ್ರಿ ಕೆ.ಎಂ., **ಬುಡಕಟ್ಟು ಕುಲಕಸಬುಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ರಮೇಶ್ ಸ.ಚಿ., **ಅಲೆಮಾರಿಗಳ ಸ್ಥಿತಿಗತಿ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ರಾಮಚಂದ್ರಪ್ಪ ಬರಗೂರು, **ಸಂಸ್ಕೃತಿ ಉಪಸಂಸ್ಕೃತಿ**, ಭೂಮಿ ಬಳಗ, ಮಾನಸ ಗಂಗೋತ್ರಿ, ಮೈಸೂರು, ೧೯೯೮

ರಾಮಪ್ಪಗೌಡ ಕೆ.ಎಸ್., **ಮಲೆನಾಡಿನ ಅಂದಿನ ನೆನಪುಗಳು**, ಸಹ್ಯಾದ್ರಿ ಪ್ರಕಾಶನ, ಕಡಿದಾಳ್, ತೀರ್ಥಹಳ್ಳಿ, ೧೯೯೫

ರಂಗನಾಥ ಶರ್ಮ ಎನ್., **ಮಾನವಶಾಸ್ತ್ರ ಮತ್ತು ಮಹಿಳೆಯರು**, ಶ್ರೀ ಭಗವತದ ಪ್ರಕಾಶನ, ಬೆಂಗಳೂರು, ೨೦೦೪

ಲಕ್ಕಪ್ಪಗೌಡ, ಎಚ್.ಜೆ., **ಕರ್ನಾಟಕ ಬುಡಕಟ್ಟುಗಳು**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಸಂಪುಟ- ೧-೨, ೨೦೦೦

ಲೇನಿನ್ ವಿ.ಪಿ., **ಲೆನಿನ್ ಮಹಿಳೆಯರ ವಿಮೋಚನೆ ಕುರಿತು**, ಪ್ರಗತಿ ಪ್ರಕಾಶನ, ೧೯೮೦

ವಿಜಯಶ್ರೀ ಸಬರದ, **ಮಹಿಳೆ ಶೋಷಣೆ ಸವಾಲುಗಳು**, ಪ್ರಕಾಶಕರು, ನಿರ್ದೇಶಕರು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

ವಿವಿಧ ಲೇಖಕರು., **ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೬

ವೀವೇಕ ರೈ ಬಿ.ಎ., **ಕರ್ನಾಟಕ ಜನಪದ ನಂಬಿಕೆಗಳು**, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು. ೧೯೮೧

ಸರೋಜ ಕೆ., ಮಹಿಳೆ ಮತ್ತು ಸಮಾಜ ಮಾಧ್ಯಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಸಾರಾ ಅಬುಬಕ್ಕರ್, **ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಶಾರದಾ ರಾಮಣ್ಣ., **ಜಾನಪದ ನೆಲೆಯಲ್ಲಿ ಮಹಿಳೆ**, ಕಳಸ ಪ್ರಕಾಶನ, ಬೆಂಗಳೂರು, ೧೯೯೩

ಶಿವಣ್ಣ ಡಿ.ಕೆ., **ಭಾರತದ ಪ್ರಚಲಿತ ಸಾಮಾಜಿಕ ಸಮಸ್ಯೆಗಳು**, ಕಲಾಪ್ರಕಾಶನ, ಬೆಂಗಳೂರು.

ಶಿವರಾಮ ಕಾರಂತ ಕೆ., **ಕರ್ನಾಟಕದ ಕರಾವಳಿ**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೩

ಶಿವಾನಂದ ಕಳವೆ, **ಹಸಿರು ಪುಸ್ತಕದ ಹಳೆಯ ಪುಟಗಳು**, ಧಾತ್ರಿ ಪುಸ್ತಕ ಮಾಲೆ, ಬೆಂಗಳೂರು, ೨೦೦೮

ಶ್ರೀಮತಿ ಎಚ್.ಎಸ್., **ಹೆಣ್ಣು ಹೆಂಗಸು**, ಬ್ಯಾಲದಕೆರೆ ಪ್ರಕಾಶನ, ಬ್ಯಾಲದಕೆರೆ, ಮಂಡ್ಯ ಜಿಲ್ಲೆ, ೨೦೦೪

ಶ್ರೀಮತಿ ಎಚ್.ಎಸ್., ಶಿವಾನಂದ ಎಸ್. ವಿರಕ್ತಮಠ, ಜೆ.ಕೃಷ್ಣ, **ಮಹಿಳಾ ಆರ್ಥಿಕತೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಶ್ರೀಮತಿ ಎಚ್.ಎಸ್., **ಸ್ತ್ರೀವಾದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಶೈಲಜಾ ಹಿರೇಮಠ., **ಮಾತೃ ಪ್ರಧಾನ ಪರಿಕಲ್ಪನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಶಂಕರ ತೀ.ನಂ., **ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೨

ಶಂಕರರಾವ್ ಚ.ನ., **ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ವಿಘಟನೆ**, ಜೈಭಾರತ ಪ್ರಕಾಶನ, ಮಂಗಳೂರು, ೧೯೯೯

ಷೇಮಾಲಿಂಗ ಲಾನೂರ್., **ಯೋಜನೆ ಮತ್ತು ಬಡತನ ನಿವಾರಣೆ**, ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೧೯೯೯

ಸರೋಜ ಕೆ., **ಮಹಿಳೆ ಮತ್ತು ಆರೋಗ್ಯ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಹೆಗಡೆ ಎಲ್.ಆರ್., (ಸಂ) **ಗುಮ್ಮನ ಪದಗಳು**, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೩

ಹೆಗಡೆ ಎಲ್.ಆರ್., (ಸಂ) **ಹಾಲಕ್ಕಿ ಹೆಂಗಸರ ಮದುವೆಯ ಹಾಡುಗಳು**, ಕದಂಬ ಸಾಂಸ್ಕೃತಿಕ ಅಧ್ಯಯನ ಸಂಸ್ಥೆ ರಿ. ಶಿರಸಿ, ೧೯೮೮

ಹೇಮಲತಾ ಎಚ್.ಎಮ್., **ಮಹಿಳಾ ಅಧ್ಯಯನ**, ಭಾಗ-೧-೨ ಮತ್ತು ೩, ಡಿ.ವಿ.ಕೆ. ಮೂರ್ತಿ, ಮೈಸೂರು, ೨೦೦೪

## ನಿಘಂಟು ಮತ್ತು ಗ್ಯಾಸೆಟಿಯರ್

ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೧, ೧೯೮೪.

ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ೧೯೮೬.

ಭಾರತ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೨, ೧೯೯೮.

ಕನ್ನಡ ಜನಪದ ವಿಶ್ವಕೋಶ, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ೧೯೮೫

ಕನ್ನಡ ವಿಶ್ವಕೋಶ; ೧೯೭೦; ಸಂಪುಟ-೨, ೧೯೭೩; ಸಂಪುಟ-೬, ೧೯೭೪; ಸಂಪುಟ-೭, ೧೯೭೫; ಸಂಪುಟ-೮, ಪ್ರಕಟಣೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಸೂರ್ಯನಾಥ ಕಾಮತ್ ಯು., (ಪ್ರ.ಸಂ.) ೧೯೮೪, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಬೆಂಗಳೂರು, (ಕರ್ನಾಟಕ ಗ್ಯಾಸೆಟಿಯರ್ ಇಲಾಖೆ) ಪು. ४-೫.

ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ ವರದಿ ಸಂಪುಟ-೧, ಭಾಗ-೧ ಮುಖ್ಯ ವರದಿ, ೧೯೭೫, ಎಲ್.ಜಿ. ಹಾವನೂರು ಅಧ್ಯಕ್ಷರು (೧೯೫೨ರ ವಿವರಣಾ ಆಯೋಗಗಳ ಅಧಿನಿಯಮದ ಮೇರೆಗೆ ರಚಿತ ೧೯೫೨ರ ಕೇಂದ್ರ ಅಧಿನಿಯಮ)

## ಪತ್ರಿಕಾ ಲೇಖನಗಳು

ಕರ್ನಾಟಕದಲ್ಲಿ ಸಾಮಾಜಿಕ ಅರಣ್ಯ ವಿಕಾಸ, ಅರ್.ಎನ್. ಇಟಗಿ ಮತ್ತು ಡಾ.ಪಿ.ತಿಪ್ಪಯ್ಯ, ಯೋಜನಾ ಜುಲೈ, ೧೯೯೭

ಹೈನುಗಾರಿಕೆ ಕ್ಷೇತ್ರದಲ್ಲಿ ಮಹಿಳೆಯರ ಮುಂದಾಳತ್ವ, ರಿಮಾ ನಾನಾವತಿ, ಯೋಜನಾ ಡಿಸೆಂಬರ್ ೨೦೦೦

ಕರುಗಳಲ್ಲಿ ಜಂತುಬಾಧೆ ನಿಯಂತ್ರಣಕ್ಕೆ ಹೀಗೊಂದು ಮಾದರಿ ದನಗಾಹಿ ಗೌಳಿಗರು ಅನುಸರಿಸಲು ವಿಶಿಷ್ಟ ಪ್ರಯೋಗ, ಲೇಖನ. ಸಿರಿಸಮೃದ್ಧಿ, ಜಿ.ಎಂ. ಬೊಮ್ನಳ್ಳಿ, ಡಿಸೆಂಬರ್ ೨೦೦೮

ಕನ್ನಡ ಪ್ರಭ, ಅಪ್ಪಗೆರೆ ತಿಮ್ಮರಾಜು, ೧೭ ಮಾರ್ಚ್ ೨೦೦೮

## ಇಂಗ್ಲೀಷ್ ಗ್ರಂಥಗಳು


Abbe Dabois., **Hindu Mannerü Customs and Ceremonies**, Oxford Univerüity Press, New Delhi, 1990

Ananth Krishna Iyer., **The Mysore Tribes and Castes**, Mittal Publication, New Delhi, 1922

Anil Bhuimali Sampa podder, **Development of Rural Women Through Education and Empowerment,** Abhijeet Publication, New Delhi, 2005

Bandu K.P., **Caste Tribes and Culture of India**, New Delhi, 1978

Basava K.D., **Marketing Management**, Vidyavahini Prakashana, Hubli

Behara N.K., **Anthropological Thought and Theories**, Institute of Social Research and Applied Anthropology, 1988

Bombay Presidenency, Vol-XV, Part-I, 1883, Reprint 2003

Chinappa Reddy, Report of The Karnataka Backward Classes Commission, Vol-I, 1990

Crooke W., **The Tribes and Castes of the North Western India**, Vol-16 (i) (ii) (iiii) (iv) Cosmo Publication, 1987

David Arnold., Ramachandra Gulha (Ed), ***Nature Cultare imperialism***, Essays on the Envirnmental History of South India, Oxford Univerüity Press, 1995

Dharma Kumar., **Land and Caste in South India**, Manahar, 1992

Edgar Tharütan., K. Rangachar., **Caste and Tribes of Southern India**, Asian Educational Services, New Delhi, 1909

Edward W. Said., **Orientaism**, Vintage Books, Newyork, 1979

Edmand Leach., **Social Anthropology**, Oxford Univerüity Press, New Delhi, 1997

Elwin Verrier., **The Religion of an Indian Tribes**, 1981, Oxford Univerüity Press, Bombay

Enthoven R.E., **The Tribes and Castes of Bombay**, Cosmo Publication, 1987

Encyclopiedia, Indian Tribes and Castes, Vol-VI, CASMO Pub. New Delhi, 2004

Frith Raymond., **The Works of God**, London, 1967

Ghurye., **The Scheduled Tribes**, Popular Prakashan, Bombay, 1959

Hawanur L.G., **Karnataka Backward Classes**, Commission Report, Government press, Bangalore, 1975

Herütovits M.J., **Cultural Anthropology**, India Book House, New Delhi, 1974

Hayavadana Rao., **Indian Caste System A Study**, Asian Educational services, New Delhi, 1988

Hindu Tribes and Caste, Vol-II, CASMO Pub. New Delhi, 1987

Jaganath Pathy., **Anthropology of Development**, Demystifical and Relevance Gian Publishing house, New Delhi, 1987

Ketkar S.V., **History of Caste in India**, Rawat Publication, jaipur, 1979

Luiz A.D., **Tribes of Mysore**, G.S. Viswa and co. Bangalore, 1963

Matthew Arnold., **Culture and Anarchy**, Lakshmi Narain Agrwal, Agra

Nanjundiah H.V., Ananth Krishnna Iyer, **The Mysore Tribes and Castes**, Mittal Publications, New Delhi

Nirmalkumar Bose., **Tribal Life in India**, Nationla Book Trust, New Delhi, 1971

Nirmalkumar Bose., **Some Indian Tribes,** National Books Trust India, New Delhi, 1972

Neera Desai M., **Women and Society in India**, Krishnaraj Ajanta Publications, 1990

North Canara Gazetter (Ed) Jomes M. Combell

People of India Karnataka, Vol-XXVI, Part-II, Antropological Survey of India, Pub. 2003.

Sharma B.R., Shalahyam A.R., **People of India**, Vol-xxiv, Himachal Predesh

Sharma K.L., **Social Stratification in India**, Saqe Publications, New Delhi, 1997

Sharma K.L., **Caste Class and Social Movements**, Rawat Publication, Jaipur, 1986

Sheewing M.A., **Hindu Tribes and Castes**, Publications, New Delhi, 1974

Singh B.N., Manas Chatterjee., **Tribes in India**, Vol-II, R.b.s.a Publisherü.

Singh B.N., Rural Development of Education Vista Interntional Publisherü New Delhi, 2006

Singh K.S., **The Scheduled Casten**, Vol-II, Oxford Univerüity Press, New Delhi, 1993

Srinivas M.N., **Caste in Modern India**, Media Promoterü and Publication Pvt., Ltd., Bombay, 1992

Stephen Fuchs., **At the Bottom of India Society**, Manshiram Manoharlal Publisherü Pvt. Ltd., 1981

Suvira Jaiswal., **CASTE**, Origin functions and Demensions of change, Ajay kumar

Syed Siraj-Ul-Hasan., **The Castes and Tribes of H.E.H. Nizam's Dominions**, Asian Education Service, 1989

## ಮಾಹಿತಿದಾರರ ವಿವರ

| ಕ್ರ.ಸಂ. | ಮಾಹಿತಿದಾರರ ಹೆಸರು | ವಯಸ್ಸು | ಲಿಂಗ | ವೃತ್ತಿ | ಸ್ಥಳ |
|---|---|---|---|---|---|
| ೧. | ಗಂಗರಾಮ | ೫೮ | ಪು | ಕೂಲಿ | ದೇಶಪಾಂಡೆನಗರ |
| ೨. | ಭಾರತೀಕೊಕ್ರಿ | ೧೭ | ಸ್ತ್ರೀ | ಮನೆಗೆಲಸ | " |
| ೩. | ಜನ್ನಿ ಪಟ್ಟಾಲಿ | ೩೦ | ಸ್ತ್ರೀ | ಕೂಲಿ | " |
| ೪. | ಜಯಾ ಶಿಂಧೆ | ೩೧ | ಸ್ತ್ರೀ | ಕೂಲಿ | " |
| ೫. | ಸೋನಿಕೊಕ್ರಿ | ೩೦ | ಸ್ತ್ರೀ | ಕೂಲಿ | " |
| ೬. | ಚಿಮಣಿಭಾಯಿ ಕೊಕ್ರೆ | ೨೪ | ಸ್ತ್ರೀ | ಹೈನುಗಾರಿಕೆ | " |
| ೭. | ವಿಠು ಪಟ್ಕಾರಿ | ೨೫ | ಪು | ಕೂಲಿ | " |
| ೮. | ಗಂಗರಾಮ ಪಟ್ಟುಕೊಕ್ರೆ | ೩೨ | ಪು | ಕೃಷಿ | " |
| ೯. | ರೇಕುಸೋನು ಕೊಕ್ರೆ | ೩೬ | ಪು | ಬ್ಯಾಂಕ್ ಮ್ಯಾನೇಜರ್ | " |
| ೧೦ | ಭವಾನಿ ಮಾನುಕೊಕ್ರೆ | ೧೭ | ಸ್ತ್ರೀ | ಕಾಲೇಜು | " |
| ೧೧. | ಗಾಟುಲೋಕು ಕೊಕ್ರೆ | ೨೬ | ಪು | ಕೃಷಿ | " |
| ೧೨. | ದುಂಡಿಬಾಯಿ ಯಡಗಿ | ೩೮ | ಸ್ತ್ರೀ | ಪಶುಪಾಲನೆ | " |
| ೧೩. | ನಕನ್ ಕಾನೂಶೆಳಕೆ | ೭೫ | ಸ್ತ್ರೀ | ಪಶುಪಾಲನೆ | " |
| ೧೪. | ಕನ್ನಿಬಾಯಿ ಯಡಗಿ | ೪೦ | ಸ್ತ್ರೀ | ಕೂಲಿ | " |
| ೧೫. | ಬೊಮ್ಮಿದಾಕು ಶಿಛೆ | ೩೪ | ಸ್ತ್ರೀ | ಢೇರಿ | " |
| ೧೬. | ಸುನೀತಾ ಠಕ್ಕುಕೊಕ್ರೆ | ೩೩ | ಸ್ತ್ರೀ | ಹೈನುಗಾರಿಕೆ | " |
| ೧೭. | ಸವಿತಾ ಬಾನು ಖರಾತ್ | ೧೮ | ಸ್ತ್ರೀ | ಪಶುಪಾಲನೆ | " |
| ೧೮. | ಮಯಾಬಾಗು ಖರಾತ್ | ೪೫ | ಪು | ಕೃಷಿ | " |
| ೧೯. | ಜಯಾ ಗಾಟು ಶುಛೆ | ೨೨ | ಸ್ತ್ರೀ | ಕೂಲಿ | " |
| ೨೦. | ಸಾವಿತ್ರಿ ದಾಕು ಕೊಕ್ರೆ | ೨೨ | ಸ್ತ್ರೀ | ಮನೆಗೆಲಸ | " |
| ೨೧. | ಗೋವಿಂದ ಪಟ್ಟುಕೊಕ್ರೆ | ೨೨ | ಪು | ಕೃಷಿ | " |
| ೨೨. | ಬಾಕು.ನಾಗು ಯಟಗಿ | ೪೮ | ಪು | ಕೂಲಿ | " |
| ೨೩. | ಗಾಟುಲೋಕು ಕೊಕ್ರೆ | ೪೫ | ಪು | ಅಧ್ಯಕ್ಷ | " |

| ಕ್ರ.ಸಂ. | ಮಾಹಿತಿದಾರರ ಹೆಸರು | ವಯಸ್ಸು | ಲಿಂಗ | ವೃತ್ತಿ | ಸ್ಥಳ |
|---|---|---|---|---|---|
| ೨೪. | ಭಮಿಮಾಲು, ಟೂಯಿಪಟೆ | ೫೨ | ಸ್ತ್ರೀ | ಮನೆಗೆಲಸ | ಹೊಸಳ್ಳಿ |
| ೨೫. | ಜನಿವಿಠ್ಠು, ಟೂಯಿಪಟೆ | ೨೩ | ಸ್ತ್ರೀ | ಮನೆಗೆಲಸ | " |
| ೨೬. | ಬಿರುದುಂಟು, ಟೂಯಿಪಟೆ | ೪೦ | ಪು | ಕೃಷಿ | " |
| ೨೭. | ಕೊಯಾದುಂಟು, ಟೂಯಿಪಟೆ | ೩೫ | ಪು | ಕೃಷಿ | " |
| ೨೮. | ಸಗ್ಗಿಬಾಯಿ ಪಟಾರಿ | ೪೦ | ಸ್ತ್ರೀ | ಪಶುಪಾಲನೆ | " |
| ೨೯. | ಸಗ್ಗಿ ಗೊಂಡ್ರ್ಯ | ೪೨ | ಸ್ತ್ರೀ | ಮನೆಗೆಲಸ | " |
| ೩೦. | ಬಕ್ಕಿಬಾಯಿ ಕೊಯಾಯಮರ್ | ೪೨ | ಸ್ತ್ರೀ | ಢೇರಿ | " |
| ೩೧. | ವಿಠ್ಠು ಲಕ್ಕು, ಟೂಯಿಪಟೆ | ೫೨ | ಪು | ಕೃಷಿ | " |
| ೩೨. | ಬೊಮ್ಮಿ ರಾಮು ಯಟಿಗ | ೭೦ | ಸ್ತ್ರೀ | ಮನೆಗೆಲಸ | " |
| ೩೩. | ಬಮ್ಮಿ ವಿಠ್ಠು, ಟೂಯಿಪಟೆ | ೩೫ | ಸ್ತ್ರೀ | ಮನೆಗೆಲಸ | " |
| ೩೪. | ಬಾಬು, ದಾವು ಕುಲಾಪಟ್ಟೆ | ೪೦ | ಪು | ಕೃಷಿ | " |
| ೩೫. | ಶಾಮು ಲಾಂಬೋರ್ | ೬೫ | ಪು | ಕೂಲಿ | ವಿಟ್ನಾಳ |
| ೩೬. | ಸುನೀತಾ ಲಾಂಬೂರ್ | ೩೫ | ಸ್ತ್ರೀ | ಮನೆಗೆಲಸ | " |
| ೩೭. | ಧೂಳು ಜಂಗ್ಲೆ | ೪೮ | ಪು | ಕೂಲಿ | " |
| ೩೮. | ಲಕ್ಷ್ಮೂಬಾಯಿ ಜಂಗ್ಲೆ | ೩೫ | ಸ್ತ್ರೀ | ಪಶುಪಾಲನೆ | " |
| ೩೯. | ಭಾಗಿಭಾಯಿ ಜಂಗ್ಲೆ | ೪೦ | ಸ್ತ್ರೀ | ಕೂಲಿ | " |
| ೪೦. | ಧೂಳು ಶಿಂಧೆ | ೪೫ | ಪು | ಕೂಲಿ | " |
| ೪೧. | ಲಕ್ಕಿಬಾಯಿ ಶಿಂಧೆ | ೫೫ | ಸ್ತ್ರೀ | ಪಶುಪಾಲನೆ | " |
| ೪೨. | ದುಂಡು ಶಿಂಧೆ | ೨೫ | ಸ್ತ್ರೀ | ಮನೆಗೆಲಸ | " |
| ೪೩. | ಧೂಳೂ ಕೋರ್ಕೆ | ೩೩ | ಪು | ಕೃಷಿ | " |
| ೪೪. | ಸಾವಿತ್ರಿ ಕೋರ್ಕೆ | ೨೨ | ಸ್ತ್ರೀ | ಮನೆಗೆಲಸ | " |
| ೪೫. | ದೋಣಿ ಶಿಂಧೆ | ೫೧ | ಸ್ತ್ರೀ | ಕೂಲಿ | " |
| ೪೬. | ಚಿಮಣಿಬಾಯಿ ಕೋರ್ಕೆ | ೨೪ | ಸ್ತ್ರೀ | ಹೈನುಗಾರಿಕೆ | " |
| ೪೭. | ಜಿಲ್ಲು ಶಿಂಧೆ | ೩೮ | ಪು | ಕೂಲಿ | " |
| ೪೮. | ಶಾಮು ಪಟ್ನಾರ್ | ೬೫ | ಪು | ಕೃಷಿ | " |
| ೪೯. | ಬೈಯಬಾಯಿ ಕೋರ್ಕೆ | ೫೫ | ಸ್ತ್ರೀ | ಹೈನುಗಾರಿಕೆ | " |

| ಕ್ರ.ಸಂ. | ಮಾಹಿತಿದಾರರ ಹೆಸರು | ವಯಸ್ಸು | ಲಿಂಗ | ವೃತ್ತಿ | ಸ್ಥಳ |
|---|---|---|---|---|---|
| ೫೦. | ಗೋವಿಂದ ಖರಾತ್ | ೩೫ | ಪು | ಕೃಷಿ | " |
| ೫೧. | ಬೊಮ್ಮಿ ಯಡಿಗ | ೩೬ | ಸ್ತ್ರೀ | ಮನೆಗೆಲಸ | " |
| ೫೨. | ಜನ್ನಿಪಟ್ಟಾರಿ | ೩೦ | ಸ್ತ್ರೀ | ಕೂಲಿ | ಅಂಬಾವಡೆ |
| ೫೩. | ಗಾಟುಕೊಕ್ರೆ | ೨೬ | ಪು | ಕೂಲಿ | " |
| ೫೪. | ಚಿನ್ನಿಬಾಯಿ | ೩೭ | ಸ್ತ್ರೀ | ಹೈನುಗಾರಿಕೆ | " |
| ೫೫. | ವಿಟ್ಟುಶಿಂದೆ | ೪೫ | ಪು | ಕೂಲಿ | " |
| ೫೬. | ಬಮ್ಮಿಲಾಯರ್ | ೨೬ | ಸ್ತ್ರೀ | ಮನೆಗೆಲಸ | " |
| ೫೭. | ವಿಠ್ಠಲ ಕಾತ್ರೂಟ | ೩೦ | ಪು | ಕೂಲಿ | " |
| ೫೮. | ನಕಲಿಝೊರೆ | ೩೫ | ಸ್ತ್ರೀ | ಹೈನುಗಾರಿಕೆ | " |
| ೫೯. | ಲಕ್ಷ್ಮಣ್ ಕೋರ್ಕೆ | ೬೦ | ಪು | ಕೃಷಿ | " |
| ೬೦. | ಸಕರಾಮ್ ಗೊಂಡ್ರ್ಯೆ | ೩೫ | ಪು | ಕೂಲಿ | " |
| ೬೧. | ರೋಶನ್ ಗೊಂಡ್ರ್ಯೆ | ೧೮ | ಪು | ಖಷಿ | " |
| ೬೨. | ಕೋಯಾ ಯಮ್ಕರ್ | ೪೨ | ಪು | ಕೃಷಿ | ಮೈನಳ್ಳಿ |
| ೬೩. | ಬಕ್ಕಿಬಾಯಿ ಯಮ್ಕರ್ | ೩೫ | ಸ್ತ್ರೀ | ಪಶುಪಾಲನೆ | " |
| ೬೪. | ಬಾಬು ಗೊಂಡ್ರ್ಯ | ೫೦ | ಪು | ಕೃಷಿ | " |
| ೬೫. | ಜನ್ನಿಭಾಯಿ ಗೊಂಡ್ರ್ಯ | ೩೫ | ಸ್ತ್ರೀ | ಮನೆಗೆಲಸ | " |
| ೬೬. | ರಾಮು ಗೊಂಡ್ರ್ಯ | ೧೪ | ಪು | ಹೈಸ್ಕೂಲ್ | " |
| ೬೭. | ಬಮ್ಮಿ ಡೂಯಿಪಡೆ | ೫೨ | ಸ್ತ್ರೀ | ಮನೆಗೆಲಸ | " |
| ೬೮. | ಗಂಗಿ ಕುಲಾಪಟ್ಟಿ | ೩೦ | ಸ್ತ್ರೀ | ಪಶುಪಾಲನೆ | " |
| ೬೯. | ದಾವು ಕುಲಾಪಟ್ಟಿ | ೫೮ | ಪು | ಕೃಷಿ | " |
| ೭೦. | ಬಾಗಿ ಡೂಯಿಪಡೆ | ೩೬ | ಸ್ತ್ರೀ | ಪಶುಪಾಲನೆ | " |
| ೭೧. | ನಕಲಿ ಡೂಯಿಪಡೆ | ೨೫ | ಸ್ತ್ರೀ | ಮನೆಗೆಲಸ | " |
| ೭೨. | ಬಾಬು ಯಡಿಗ | ೩೮ | ಪು | ಕೂಲಿ | " |
| ೭೩. | ದೊಂಡು ಯಡಿಗ | ೩೪ | ಪು | ಕೂಲಿ | " |
| ೭೪. | ಕೊಯಾ ಡೂಯಿಪಡೆ | ೪೨ | ಪು | ಕೃಷಿ | " |
| ೭೫. | ಸಗ್ಗಿಬಾಯಿ | ೨೮ | ಸ್ತ್ರೀ | ಕೂಲಿ | " |

| ಕ್ರ.ಸಂ. | ಮಾಹಿತಿದಾರರ ಹೆಸರು | ವಯಸ್ಸು | ಲಿಂಗ | ವೃತ್ತಿ | ಸ್ಥಳ |
|---|---|---|---|---|---|
| ೭೬. | ಗಂಗಾಬಾಯಿ | ೩೦ | ಸ್ತ್ರೀ | ಕೂಲಿ | " |
| ೭೭. | ಪಾಂಡು ಡೂಯಿಪಡೆ | ೪೫ | ಪು | ಕೂಲಿ | " |
| ೭೮. | ಕೊಯಾ ಡೂಯಿಪಡೆ | ೩೫ | ಪು | ಕೂಲಿ | " |
| ೭೯. | ಸಗ್ಗಿ ಶಿಂಧೆ | ೫೮ | ಸ್ತ್ರೀ | ಪಶುಪಾಲನೆ | " |
| ೮೦. | ವಾಗು ಕೋಕರೆ | ೬೪ | ಪು | ಕೃಷಿ | ಬಡ್ಡಿಗೇರಿ |
| ೮೧. | ಜಾನು ಪಟ್ನಾರ್ | ೬೦ | ಸ್ತ್ರೀ | ಕೂಲಿ | " |
| ೮೨. | ಭಾಗಿಬಾಯಿ ಪಟ್ನಾರ್ | ೫೮ | ಸ್ತ್ರೀ | ಪಶುಪಾಲನೆ | " |
| ೮೩. | ನಾಗಿಭಾಯಿ ಕೋಕರೆ | ೩೫ | ಸ್ತ್ರೀ | ಕೂಲಿ | " |
| ೮೪. | ಗಂಗಾರಾಮ ಕೋಕರೆ | ೩೨ | ಪು | ಕೂಲಿ | " |
| ೮೫. | ಸಾವಿತ್ರಿ ಕೋಕರೆ | ೧೮ | ಸ್ತ್ರೀ | ಕಾಲೇಜು | " |
| ೮೬. | ನಾಗು ಉಡಗಿ | ೪೮ | ಪು | ಕೂಲಿ | " |
| ೮೭. | ಬೊಮ್ಮಿ ಶಿಂಧೆ | ೩೪ | ಸ್ತ್ರೀ | ಮನೆಗೆಲಸ | " |
| ೮೮. | ಧಾಕು ಶಿಂಧೆ | ೩೮ | ಪು | ಕೃಷಿ | " |
| ೮೯. | ಜಾನು ಖರಾತ್ | ೫೫ | ಪು | ಕೂಲಿ | " |
| ೯೦. | ವಿಠ್ಠು ಖರಾತ್ | ೪೦ | ಪು | ಕೂಲಿ | " |
| ೯೧. | ಜನ್ನಿ ಎಡಗಿ | ೩೫ | ಸ್ತ್ರೀ | ಹೈನುಗಾರಿಕೆ | " |
| ೯೨. | ಪಾಂಡು ಎಡಗಿ | ೩೭ | ಪು | ಕೂಲಿ | " |

ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ - ಹೊಸಪೇಟೆ, ಬಳ್ಳಾರಿಜಿಲ್ಲೆ

# ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು

## ವ್ಯಕ್ತಿ ಸಂದರ್ಶನ ಪ್ರಶ್ನಾವಳಿ

**೧ ಕೌಟುಂಬಿಕ :**

೧. ನಿಮ್ಮ ಕುಟುಂಬವನ್ನು ಯಾರು ಮುನ್ನೆಡುಸುತ್ತಾರೆ?
೨. ಮುಖ್ಯ ತೀರ್ಮಾನಗಳನ್ನು ಕುಟುಂಬದ ಎಲ್ಲ ಸದಸ್ಯರು ಸೇರಿ ತೆಗೆದುಕೊಳ್ಳುವಿರಾ? ಹೌದು / ಇಲ್ಲ
೩. ಈ ಹಿಂದೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ಯಾರು ತೆಗೆದುಕೊಳ್ಳುತ್ತಿದ್ದರು?
೪. ತೀರ್ಮಾನಗಳನ್ನು ತೆಗೆದುಕೊಳ್ಳುವ ವ್ಯಕ್ತಿ ಬದಲಾಗಿದ್ದಾರಾ ? ಹೌದು / ಇಲ್ಲ
೫. ಕಾರಣಗಳೇನು?

೬. ನಿಮ್ಮ ಕುಟುಂಬದ ಒಟ್ಟಾರೆಯ ಸ್ಥಿತಿ ಈ ಹಿಂದಿಗಿಂತ ಬದಲಾಗಿದೆ ಎಂದು ನಿಮಗೆ ಅನ್ನಿಸುತ್ತಿದೆಯೇ? ಹೌದು / ಇಲ್ಲ
೭. ಬದಲಾಗಿದ್ದರೆ, ಅದಕ್ಕೆ ಯಾವ ಕಾರಣಗಳನ್ನು ಕೊಡಬಯಸುತ್ತೀರಿ.
೮. ಕೂಡು ಕುಟುಂಬಗಳು ಇವೆಯೇ? ಹೌದು / ಇಲ್ಲ
೯. ನಿಮ್ಮ ಕುಟುಂಬದಲ್ಲಿ ಹೆಣ್ಣು ಪ್ರಮುಖ ತೀರ್ಮಾನಗಳನ್ನು ತೆಗೆದುಕೊಳ್ಳುವಳೇ? ಹೌದು / ಇಲ್ಲ
೧೦. ಹೌದು/ಇಲ್ಲಿ ಕಾರಣಗಳೇನು?
೧೧. ನಿಮ್ಮ ಸಮುದಾಯದ ಕುಟುಂಬಗಳ ಸ್ವರೂಪ ಬದಲಾಗುತ್ತಿದೆಯೇ? ಹೌದು / ಇಲ್ಲ
೧೨. ಅದಕ್ಕೆ ಕಾರಣಗಳೇನು?
೧೩. ವಿಧವಾ ವಿವಾಹ ಇದೆಯಾ? ಹೌದು / ಇಲ್ಲ
೧೪. ಬಹುಪತ್ನಿತ್ವ ಇದೆಯೆ? ಹೌದು / ಇಲ್ಲ
೧೫. ಕುಟುಂಬದ ವಿವಿಧ ಸ್ತರಗಳಲ್ಲಿ ಮಹಿಳೆಯ ಸ್ಥಾನ-ಮಾನವೇನು?
೧. ಅತ್ತೆ, ೨. ಸೊಸೆ, ೩. ನಾದಿನಿ, ೪. ಮಗಳು, ೫. ತಾಯಿ
೧೬. ಪುರುಷರು ಸ್ತ್ರೀಯರಿಗೆ ಯಾವ ಸ್ಥಾನ-ಮಾನ ನೀಡುತ್ತಾರೆ? ಹೆಚ್ಚು / ಸಮಾನ / ಕೆಳಗಿನ

**೨. ಸಾಮಾಜಿಕ :**

೧. ನಿಮ್ಮ ಸುತ್ತಲಿರುವ ಇತರ ಸಮುದಾಯ ಯಾವ ಬಗೆಯಲ್ಲಿ ನಡೆಸಿಕೊಳ್ಳುತ್ತಿವೆ? ಸಮಾನ / ಕೀಳಾಗಿ
೨. ಇತರೆ ಜಾತಿಗಳಿಗಿಂತ ನಿಮ್ಮ ಜಾತಿಯು ಹಿಂದುಳಿದಿದೆ ಎಂದು ತಾವು ಭಾವಿಸುವಿರಾ? ಹೌದು /ಇಲ್ಲ
೩. ಹಿಂದುಳಿದಿದ್ದರೆ ಅದಕ್ಕೆ ಯಾವ ಯಾವ ಕಾರಣಗಳನ್ನು ನೀಡಬಯಸುವಿರಿ?
೪. ಹೀಗೆ ನಿಮ್ಮನ್ನು ಹೀನಾಯವಾಗಿ ನೋಡುತ್ತಿದ್ದರೆ, ಅದು ಹಿಂದಿಗಿಂತ ಜಾಸ್ತಿ ಆಗುತ್ತಿದೆಯೋ ಅಥವಾ ಕಡಿಮೆ ಆಗಿದೆಯೇ?
೫. ಕಡಿಮೆ ಅಥವಾ ಹೆಚ್ಚಾಗುತ್ತಿರುವುದಕ್ಕೆ ಕಾರಣಗಳೇನು?
೬. ಇತ್ತೀಚೆಗೆ ನಿಮ್ಮ ಸಮುದಾಯದವರ ಮೇಲೆ ಯಾವುದಾದರೊಂದು ಕಾರಣಕ್ಕೆ ಹಲ್ಲೆ ನಡೆದಿದೆಯೇ? ಹೌದು / ಇಲ್ಲ
೭. ಕಾರಣಗಳೇನು?

೮. ಆಗ ನಿಮ್ಮ ನೆರವಿಗೆ ಬಂದವರಾರು? (ಪೋಲಿಸ್/ದಸಂಸಂ/ಇತರೆ ಸಂಘಟನೆಗಳು)
೯. ಮೊದಲಿಗಿಂತ ಈಗ ಒಗ್ಗಟ್ಟಾಗಿರಬೇಕು, ದೌರ್ಜನ್ಯಗಳನ್ನು ಎದುರಿಸಬೇಕು ಎನ್ನಿಸುತ್ತಿದೆಯೇ? ಹೌದು / ಇಲ್ಲ
೧೦. ಜಾತಿ ಸಂಘಟನೆ ಇದೆಯಾ? ಹೌದು / ಇಲ್ಲ

೧೧. ಅದರಿಂದ ಸಮುದಾಯ ಬಲಗೊಳ್ಳುತ್ತದೆ ಎಂದು ಅನ್ನಿಸುತ್ತಿದೆಯಾ? ಹೌದು / ಇಲ್ಲ
೧೨. ನಿಮ್ಮ ಸಮುದಾಯ ಉಚ್ಛ್ರಾಯ ಸ್ಥಿತಿಗೆ ಬರಲು ಯಾವ ಯಾವ ಕ್ರಮಗಳನ್ನು ಕೈಗೊಳ್ಳಬಹುದು?
೧೩. ಹಿಂದುಳಿದಿರುವುದಕ್ಕೆ ನಿಮ್ಮ ಸಮಾಜದ ಒಳಗೇ ಇರುವ ಮೂಢ ನಂಬಿಕೆಗಳು / ಸಣ್ಣತನ / ಆಂತರಿಕ ವಿಘಟನೆ ಕಾರಣ ಎನ್ನಿಸುವುದೇ? ಹೌದು / ಇಲ್ಲ
೧೪. ಮೊದಲಿಗಿಂತ ಈಗ ಗೌಳಿಗರು ಮುಂದುವರೆದಿದ್ದಾರೆ ಎಂದೆನ್ನಿಸುವುದೇ? ಹೌದು / ಇಲ್ಲ
೧೫. ಕಾರಣಗಳನ್ನು ಕೊಡಬಯಸುತ್ತೀರಿ?
೧೬. ವಿವಿಧ ಜಾತಿವರ್ಗಗಳು ಜೊತೆಗೆ ಗೌಳಿಗರನ್ನ ಹೇಗೆ ಗುರುತ್ತಿಸಲಾಗುತ್ತದೆ? ಸಮಾನ / ಕೀಳಾಗಿ
೧. ಬ್ರಾಹ್ಮಣ, ೨. ದಲಿತ, ೩. ಇತರೇ ಬೇರೆ ಜಾತಿಗಳು.
೧೭. ಅಂತರಜಾತಿ ವಿವಾಹಗಳು ನಿಮ್ಮಲ್ಲಿ ನಡೆಯುತ್ತಿದೆಯೋ? ಹೌದು/ಇಲ್ಲ.

**೩. ಆರ್ಥಿಕ :**

೧. ಈ ಹಿಂದೆ ನಿಮ್ಮ ತಂದೆ, ನೀವು ಮತ್ತು ನಿಮ್ಮ ತಾತ ಯಾವ ಯಾವ ದುಡಿಮೆಗಳಲ್ಲಿ ತೊಡಗಿಕೊಂಡಿದ್ದರು?
೨. ನಿಮ್ಮ ಕುಲ ಕಸಬು ಯಾವುದು?
೩. ಇಂದಿಗೂ ನಿಮ್ಮ ಕುಲ ಕಸಬು ಪ್ರಸ್ತುತ ಅನ್ನಿಸುತ್ತಿದೆಯೇ? ಹೌದು / ಇಲ್ಲ
೪. ಕಾರಣಗಳಾವವು?
೫. ಕುಲ ಕಸಬನ್ನು ಬಿಟ್ಟು ಬೇರೆ ದುಡಿಮೆಯಲ್ಲಿ ತೊಡಗಿಕೊಳ್ಳಬೇಕೆಂದು ಅನ್ನಿಸಿದಾಗ ನೀವು ನಿರೀಕ್ಷಿಸಿದ ನೆರವು ಸಿಕ್ಕಿತೇ? ಹೌದು / ಇಲ್ಲ
೬. ಕಾರಣಗಳೇನು?

೭. ಸರ್ಕಾರದ ಲಭ್ಯವಿರುವ ಅಭಿವೃದ್ಧಿ ಯೋಜನೆಗಳು ಯಾವವು?
೮. ಸಮುದಾಯಕ್ಕೆ ಅದರದ್ದೇ ಆದ ನ್ಯಾಯ ವ್ಯವಸ್ಥೆ ಕುಲಪಂಚಾಯ್ತಿ ವ್ಯವಸ್ಥೆ ಇದೆಯೇ? ಹೌದು / ಇಲ್ಲ
೯. ಈ ಹಿಂದೆ ಈ ವ್ಯವಸ್ಥೆ ಇತ್ತೇ? ಹೌದು / ಇಲ್ಲ
೧೦. ಈ ಕುಲ ಪಂಚಾಯ್ತಿ ಸ್ವರೂಪ ಬದಲಾಗಿದೆಯೇ? ಹೌದು / ಇಲ್ಲ
೧೧. ಬದಲಾಗಿದ್ದರೆ ಹೇಗೆ ಮತ್ತು ಏಕೆ ಬದಲಾಗಿದೆ?
೧೨. ಈಗ ಕುಲದ ನ್ಯಾಯ ಪಂಚಾಯ್ತಿಯನ್ನು ಯಾರು ನಿರ್ವಹಿಸುತ್ತಾರೆ?
೧೩. ಕುಲ ಪಂಚಾಯ್ತಿಯನ್ನು ಸಮುದಾಯದ ಎಲ್ಲರೂ ಗೌರವಿಸುವರೆ? ಹೌದು / ಇಲ್ಲ
೧೪. ಈಗ ಸಮುದಾಯದ ವ್ಯಾಜ್ಯಗಳು ಕುಲ ಪಂಚಾಯ್ತಿಯನ್ನು ಮೀರಿ ಕೋರ್ಟು ಕಛೇರಿಗಳಿಗೆ ಹೋಗಿವೆಯೇ? ಹೌದು / ಇಲ್ಲ
೧೫. ಕಾರಣಗಳೇನು?

೧೬. ಯಾವುದಾದರೂ ಸ್ತ್ರೀಶಕ್ತಿ ಸಂಘ / ಮಹಿಳಾ ಸಂಘಗಳಲ್ಲಿ ಭಾಗವಹಿಸಿದ್ದಾರಾ? ಹೌದು / ಇಲ್ಲ
೧೭. ಸರಕಾರ ತಮ್ಮನ್ನು ಅಭಿವೃದ್ಧಿ ಪಡಿಸಲು ಕೆಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಅವು ಗೊತ್ತಿವೆಯೆ? ಹೌದು / ಇಲ್ಲ
೧೮. ಸರಕಾರದ ಯೋಜನೆಗಳು ನಿಮ್ಮನ್ನು ಅಭಿವೃದ್ಧಿ ಪಡಿಸುತ್ತವೆ ಎಂದು ನಿಮಗನ್ನಿಸುತ್ತಿದೆಯೇ? ಹೌದು / ಇಲ್ಲ
೧೯. ಕಾರಣಗಳಾವವು?

೨೦. ನಿಮಗೆ ಕೃಷಿ ಭೂಮಿ ಇದೆಯೇ? ಹೌದು / ಇಲ್ಲ
೨೧. ನಿಮಗೆ ಕೃಷಿ ಭೂಮಿ ಇದ್ದರೆ ಅದನ್ನು ತಾವು ಹೇಗೆ ಪಡೆದುಕೊಂಡಿರಿ?
೨೨. ಕೃಷಿ ಇಂದು ನಿಮ್ಮ ಕುಟುಂಬವನ್ನು ಸಾಕಬಲ್ಲದು ಎಂದೆನ್ನಿಸುತ್ತಿದೆಯೇ? ಹೌದು / ಇಲ್ಲ
೨೩. ಕಾರಣಗಳಾವವು?

